ಶ್ರೀ

# ಕರ್ಣಾಟಕ ಭಕ್ತವಿಜಯ

(ಭಾಗ ೨)





ರು ಕೇಶವದಾಸರು

# ಶ್ರೀ ಕರ್ಣಾಟಕ ಭಕ್ತವಿಜಯ

## (ಭಾಗ ೨)

ಬೇಲೂರು ಕೇಶವದಾಸರು,

ಹರಿಕಥಾ ವಿದ್ವಾನ್.

೧೯೩೭

ಬೆಲೆ ೩—೮—೦ ಅಂಚೆವೆಚ್ಚ ಬೇರೆ.

# ವಿ ಷ ಯಾ ನು ಕ್ರ ಮ ಣಿ ಕೆ





## ಚಿತ್ರಪಟ

# ಮುನ್ನುಡಿ.

ಶ್ರೀ ಕರ್ಣಾಟಕ ಭಕ್ತವಿಜಯದ ಪ್ರಥಮ ಭಾಗದ ಮುದ್ರಣ ಮುಗಿದ ಕೂಡಲೆ, ಅದೇ ಸರಣಿಯಲ್ಲಿ ದ್ವಿತೀಯ ಭಾಗವನ್ನೂ ಪ್ರಾರಂಭಿಸ ಬೇಕೆಂಬ ಕುತೂಹಲವು ಸ್ವಾಭಾವಿಕವಾಗಿ ನನಗಾಯಿತು. ಆದರೆ ಲೋಕ ವನ್ನೇ ವ್ಯಾಪಿಸಿರುವ ಆರ್ಥಿಕ ಮುಗ್ಗಟ್ಟಿನ ಈ ದಿನದಲ್ಲಿ ವಿಶೇಷ ವ್ಯಯ ಸಾಧ್ಯವಾದ ಈ ಕಾರ್ಯವನ್ನು ಒಡನೆಯೇ ಪ್ರಾರಂಭಿಸಲು ಸಾಧ್ಯವಿಲ್ಲದಂತಾ ಯಿತು. ಈ ಮಧ್ಯಕಾಲದಲ್ಲಿ ಕನ್ಯಕಾಪುರಾಣವೆಂಬ ೨೦೦ ಪುಟಗಳ ಗ್ರಂಥವೊಂದರ ಮುದ್ರಣವಾಯಿತೆಂದು ಮಾತ್ರ ಸಂತೋಷಿಸಬೇಕಾಗಿದೆ. ಭಕ್ತವಿಜಯದ ಈ ದ್ವಿತೀಯ ಭಾಗದಲ್ಲಿ ವಿಜಯದಾಸರ ವೈಭವದಿಂದ ಪ್ರಾರಂಭವಾಗಿ ಮೊದಲಕೆಲ್ಲು ಶೇಷದಾಸರವರೆಗೆ ಮಧ್ಯಕಾಲದಲ್ಲಿ ಆಗಿ ಹೋದ ಹರಿದಾಸರ ಪವಿತ್ರ ಚರಿತ್ರೆಗಳು ಅಡಕವಾಗಿವೆ. ಇಷ್ಟುಮಾತ್ರ ದಿಂದ ಕರ್ನಾಟಕದ ಹರಿದಾಸರ ಚರಿತ್ರೆಯು ಪೂರ್ತಿಯಾಯಿತೆಂದು ಹೇಳ ಲಾಗುವದಿಲ್ಲ. ಬರೆದಿರುವ ಚರಿತ್ರೆಗಳಲ್ಲಿ ಬರೆದಿರುವದಕ್ಕಿಂತ ಅರಿಯಬೇ ಕಾದ ಅಂಶಗಳು ಬಹಳ ಉಳಿದಿವೆ. ಕನ್ನಡನಾಡಿನಲ್ಲವತರಿಸಿ ಎಷ್ಟೋ ಮಹತ್ಕಾರ್ಯಗಳನ್ನು ಮಾಡಿ, ಹಾಡಿ ಪಾಡಿ ಜನರನ್ನುದ್ಧರಿಸಿದ ಅನೇಕ ಪುಣ್ಯಪುರುಷರ ಚರಿತ್ರೆಗಳು ಗೊತ್ತಿಗೆ ಬರದಂತೆ ಅದೃಶ್ಯವಾಗಿ ಹೋಗಿವೆ. ಕರಗತವಾಗಿರುವ ಭಕ್ತವಿಜಯವನ್ನು ನೋಡಿ, ಏನೂ ಇರದಿರುವದಕ್ಕಿಂತ ಇಷ್ಟುಮಾತ್ರವಾದರೂ ಕಲ್ಪನೆಗಳಿಗವಕಾಶವಿಲ್ಲದೆ, ಇತಿಹಾಸ ಘಟಿತವಾಗಿ, ಪ್ರಕಟವಾಯಿತೆಂದು ವಾಚಕರು ಸಂತೋಷಿಸಬೇಕಾಗಿದೆ.

ಭಕ್ತವಿಜಯದ ಪ್ರಥಮಭಾಗವು ಮುದ್ರಣವಾದ ಕೂಡಲೇ ಅದನ್ನು ಆದರದಿಂದ ಬರಮಾಡಿಕೊಂಡು ಓದಿ ತಮ್ಮ ಅಮೋಘವಾದ ತೃಪ್ತಿಯನ್ನು ತೋರಿಸಿ ಬರೆದಿರುವ ದೊಡ್ಡ ಮನುಷ್ಯರನೇಕರ ಪತ್ರಗಳನ್ನು ನೋಡಿದರೆ,

ಅವರ ಮಾತಿನಂತೆ ಭಕ್ತವಿಜಯವು ಬಲುಕಾಲ ಬಾಳಬೇಕಾದ ಗ್ರಂಥ ವೆಂದು ನನಗಾದರೂ ಧೈರ್ಯವೂ ಉತ್ಸಾಹವೂ ಉಂಟಾಗಿದೆ. ಹೈತುಕರೆನಿಸಿದ ಕೆಲವರಾಡುವಂತೆ ಈ ತೆರದ ಗ್ರಂಥಗಳಕಾಲ ಮುಗಿಯಿತೆನ್ನುವದಕ್ಕಾಗಲಿ, ಸಮಾಜವು ಕೇವಲ ನಾಸ್ತಿಕ ಮಾರ್ಗಕ್ಕಿಳಿಯಿತೆನ್ನುವದಕ್ಕಾಗಲಿ, ಕುರುಹುಗಳು ಕಂಡುಬರುತ್ತಿಲ್ಲ. ಅತ್ಯಂತ ಸಮಾಜ ಸುಧಾರಕರೆನಿಸಿದ ದೇಶದ ಮುಂದಾಳುಗಳಾದರೂ ಇತರ ದೇಶೀಯರಂತೆ ಆಸ್ತಿಕತೆಗೆ ವಿರೋಧಿಗಳಾಗಿಲ್ಲ. ದೇವರಿಲ್ಲವೆಂಬ ಚಳವಳಿ (Anti God propaganda) ಮಾಡುವ ಜನರಿನ್ನೂ ಭರತಭೂಮಿಯಲ್ಲವತರಿಸಿಲ್ಲ. ಹಿಂದಿನದನ್ನು ಪುರಸ್ಕರಿಸಿ, ಮುಂದೆ ಕಾಲದೇಶವರ್ತಮಾನಗಳಿಗನುಕೂಲವಾಗುವಂತೆ ಸಮಾಜ ಸುಧಾರಣೆಮಾಡಬೇಕೆಂಬುವರೇ ದೇಶದ ಮುಖಂಡರೆನಿಸಿದ್ದಾರೆ. ಇವತ್ತಿಗೂ ಕನ್ನಡ ಭೂಮಿಯಲ್ಲಿ ಆಸ್ತಿಕತೆಗೂ ಭಕ್ತಿಮಾರ್ಗಕ್ಕೂ ದಾರಿದ್ರ್ಯವುಂಟಾಗಿಲ್ಲ. ಇಂದಲ್ಲ, ಎಂದಾದರೂ ಕನ್ನಡ ಜಾಣರ ಜ್ಞಾನಭಂಡಾರದಲ್ಲಿ ಭಕ್ತವಿಜಯಕ್ಕೊಂದು ಸ್ಥಳದೊರೆತೀತೆಂಬ ಭರವಸೆಯಿದೆ. ದೈವಿಕವಾದ ಅಂತಃಪ್ರೇರಣೆಯಿಂದಲೇ ಈ ಗ್ರಂಥಲೇಖನವೂ ಮುದ್ರಣವೂ ಕುಚೇಲನ ಗೋತ್ರದವನಾದ ದಾಮೋದರನಿಂದ ನಡೆದಿದೆ. 'ಊದುವ ಶಂಖ ಊದು, ಮಾಧವನ ಪೂಜೆ ಆದಾಗ ಆಗಲಿ' ಎಂಬ ಗಾದೆಯು ಲೇಖಕನ ಪಾಲಿಗೆ ವೇದದಂತಾಗವೆ. ಇಂತಹ ಗ್ರಂಥಗಳು ನಿರ್ವಿಘ್ನವಾಗಿ ಒಂದರ ಹಿಂದೊಂದು ತಲೆದೋರಲು ಬಲವಂತರ ಬಲವಿರಬೇಕೆಂಬುದೊಂದೇ ಅಂತರಾತ್ಮನ ಬಳಿಯಲ್ಲಿ ಲೇಖಕನ ಅಂತರಂಗದ ಬೇಡಿಕೆಯಾಗಿದೆ.

ರಾಜರೂ ರಾಷ್ಟ್ರದ ಶಿಕ್ಷಣಶಾಖೆಯವರೂ ಸಹಾಯಮಾಡಿ ಈ ಪರಿಯ ಗ್ರಂಥಗಳನ್ನು ಬರೆಯಿಸಿ, ಶಾಲೆಗಳಲ್ಲೂ ವಾಚನಮಂದಿರಗಳಲ್ಲೂ ಇಡಿಸಿ, ಜನರಿಗೆ ಉಪಕಾರಮಾಡಬೇಕೆಂದು ಜನರೇ ಆಡುವ ಮಾತು, ಬಲುಮಟ್ಟಿಗೂ ನಿಜ. ಆದರೆ ಆ ಕಾರ್ಯ ನಡೆಯುವ ಬಗೆಹೇಗೆ ? ಲೇಖಕನು ಕೇವಲ ಹರಿದಾಸ. ಮುದ್ರಣಮಾಡಿಸಿದ ಗ್ರಂಥಗಳನ್ನು ಗೌರವಾರ್ಥವಾಗಿ ಗೌರವಸ್ಥರೆನಿಸಿದವರಿಗೆ ಕಾಣಿಕೆಯೆಂದು ಕಳುಹಿಸಬಲ್ಲ. ನನ್ನ ಪುಸ್ತಕವನ್ನೂ ಓದಿರಿ, ನನಗೆ ಹಣವನ್ನೂ ಕೊಡಿರೆಂದು ಕೇಳುವದು ಹೇಗೆ ? ಸತ್ಪ್ರ

ರುಷರ ಚರಿತ್ರೆಗಳಲ್ಲಿರುವ ಅತಿಮಾನುಷಚರ್ಯೆಗಳು ಮಿತ ಮನುಷ್ಯರಿಗೆ ಅರ್ಥವಾಗದಿದ್ದರೆ ಮಾಡುವದೇನು? ನಡೆಯುವ ಕಾರ್ಯವು ನಡೆದಂತೆ ನಡೆ ಯಲೆಂದು ತಟಸ್ಥನಾಗಿರುವದುತ್ತಮವಲ್ಲವೆ? ಸಹಾಯ ಬರುವದಿದ್ದರೆ ಅದು ತಾನಾಗಿ ಬರಲೆಂದು ಕಾರ್ಯತತ್ಪರನಾಗಿರುವದುತ್ತಮವಲ್ಲವೆ?

ಲೋಕದಲ್ಲಿ ಯಾವದೇಶ ಯಾವ ಭಾಷೆಯಲ್ಲಾಗಲಿ, ಎಂತಹ ಗ್ರಂಥ ರಚನೆಯಾದರೂ ಅವನ್ನು ಓದುವರಲ್ಲಿ ವಿವಿಧ ತರಗತಿಗಳಿವೆ. ಕೆಲವರಿಗೆ ಜ್ಞಾನ (ವೇದಾಂತ) ವಿಚಾರಬೇಕು. ಕೆಲವರಿಗೆ ಬುದ್ಧಿವಿಕಾಸಗೊಳಿಸುವ ಚರ್ಚೆಗಳಿರಬೇಕು. ಕೆಲವರಿಗೆ ಸುಪಥವಾದ ಭಕ್ತಿಪರ ಮಾತುಗಳು ಬೇಕು. ಕೆಲವರಿಗೆ ವಿನೋದಕಥೆಗಳಾಗಬೇಕು. ಕೆಲವರಿಗೆ ಉದ್ವೇಗ ಗೊಳಿಸುವ ಶೃಂಗಾರಬೇಕು. ಕೆಲವರಿಗೆ ಅಲ್ಲಕಲ್ಲೋಲಗೊಳಿಸುವ ಅದ್ಭುತ ಬೇಕು. ಕೆಲವರಿಗೆ ಮಾತಿನ ಸವಿಬೇಕು. ಆದದನ್ನು ಬಯಸುವರು ಆಯಾ ಪುಸ್ತಕಗಳನ್ನೇ ಅರಿಸುವರಲ್ಲದೆ ಎಲ್ಲ ಪುಸ್ತಕಗಳೂ ಎಲ್ಲರಿಗೂ ಬೇಕಾಗುವದಿಲ್ಲ. ಹಾಗೆ ಬೇಕಾಗುವದಿದ್ದರೆ ಒಂದೊಂದು ಪುಸ್ತಕವೂ ಸಹಸ್ರ ಸಹಸ್ರ ಆವರ್ತಿಗಳಲ್ಲಿ ಕೋಟಿ ಕೋಟಿ ಪ್ರತಿಗಳಾಗುತ್ತಿದ್ದವು. ನಮ್ಮ ಭಕ್ತವಿಜಯಕ್ಕಾದರೂ ಓದುಗರ ಒಂದು ತರಗತಿಯ ಜನರು ದೊರೆ ತರೆ ಸಾಕು. ಆ ಜನರಿಂದ ಅದು ಕ್ರಮವರಿತು ಪ್ರಚಾರವಾದರೆ ಸಾಕು. ಇದರಂತೆ ಭಕ್ತವಿಜಯದ ಮೂರನೆಯ 'ಶಿವಶರಣರು' ಎಂಬ ಭಾಗದ ಮುದ್ರಣವಾದರೆ ಸಾಕು. ನೂರೈವತ್ತುಲಕ್ಷ ಪ್ರಜೆಗಳಿರುವ ಕರ್ನಾಟಕದಲ್ಲಿ ಒಂದು ಸಾವಿರ ಭಕ್ತವಿಜಯ ಪ್ರತಿಗಳನ್ನು ಸಾದರಿಸುವ ಜನರು ದೊರೆಯ ಲಾರರೆಂಬ ಭಯಬರಲು ಕಾರಣವಿಲ್ಲ. ಸಾವಿರ ಜನರಿಂದ ಲಕ್ಷಜನರಿಗೆ ಕನ್ನಡ ಸತ್ಪುರುಷರ ಸದ್ವಾರ್ತೆಗಳು ಹರಡಲಾರದೆಂಬ ಭಯಬರಲು ಕಾರ ಣವಿಲ್ಲ.

ಪ್ರಕೃತ ಕರಗತವಾಗಿರುವ ಭಕ್ತವಿಜಯದ ದ್ವಿತೀಯಭಾಗದ ಮುದ್ರ ಣವು ತಡವಾದುದನ್ನು ನೋಡಿ, ಪ್ರಥಮ ಭಾಗದ ಮುದ್ರಣಕ್ಕೆ ಸಹಾಯ ಮಾಡಿದ ಮ|| ರಾ|| ಗಳಾದ ಇಂಜಿನಿಯರ್, ಸಿ. ಶ್ರೀನಿವಾಸರಾಯರೂ, ಅಲ್ಲಂಪುರದ ಮಧ್ವರಾವ್ ವಕೀಲರೂ, ಮುಂದರಿದು ಮಾಡಿರುವ ಸಹಾಯ

ವನ್ನು ನೋಡಿದರೆ, ಇವರಂತೆ ಇನ್ನೂ ಸಹಾಯಕರು ನಮ್ಮ ಕರ್ನಾಟಕದಲ್ಲಿ ದೊರೆತಾರೆಂಬ ದೈವಿಕವಾದ ಅಂತರಂಗ ವಾಣಿಯು ಅಂತರಾತ್ಮನಿಂದ ಬರುತ್ತಲಿದೆ.

## ಸಾರಾಂಶವಿಷ್ಟು

ಮಾನವ ವರ್ಗದಲ್ಲಿ ಉತ್ತಮವಾದ ಜನ್ಮಾಂತರ ಸಂಸ್ಕಾರ ಬಲವುಳ್ಳವನಾಗಲಿ, ಸತ್ಸಹವಾಸ ಸದ್ವಿದ್ಯೆ ಸತ್ಕರ್ಮಪರನಾಗಲಿ ನಾಸ್ತಿಕನಾಗುವ ಸಂಭವವಿರುವದಿಲ್ಲ. ಒಂದುವೇಳೆ, ಜೀವಿತಕಾಲದಲ್ಲಿ ತನ್ನ ಇಷ್ಟಾರ್ಥಗಳು ಕೈಗೂಡಿ ಯಾವದೇಪರಿಯ ತಾಪಗಳಿಗೊಳಗಾಗದವನು ಮದಿಸಿ ನಾಸ್ತಿಕನಾದರಾಗಬಹುದು. ಅಥವ ಜನ್ಮಪ್ರಭೃತಿ ಪ್ರತಿಯೊಂದು ಕಾರ್ಯದಲ್ಲೂ ನಿರಾಶನಾದವನು ನಾಸ್ತಿಕನಾದರಾಗಬಹುದು. ಮೊದಲನೆಯವನು ಸ್ವಲ್ಪ ಮಾತ್ರ ತಾಪಗಳಿಗೀಡಾದೊಡನೆಯೇ ತನ್ನನ್ನಾಳುವ ಬಲವಂತ ಶಕ್ತಿ ಮತ್ತೊಂದಿರುವದೆಂದು ಭೀತನಾಗಿ ಆಸ್ತಿಕನಾಗಿಬಿಡುವನು. ಎರಡನೆಯವನು ತನ್ನ ದುಷ್ಕರ್ಮ ಪರಂಪರೆಯು ಬಲವತ್ತರವಾಗಿದ್ದು ತನಗೆ ಎಲ್ಲ ರೀತಿಯ ಆಶಾಭಂಗವಾಯಿತೆಂದರಿತು, ಮುಂದಾದರೂ ಸರ್ವಶಕ್ತನ ಕಾರುಣ್ಯದಿಂದ ತನ್ನ ದುಃಖಪರಂಪರೆಗಳು ಮಾಯವಾಗಿ ಶ್ರೇಯಃಪರಂಪರೆಗಳು ಬರಲೆಂದು ಆಸ್ತಿಕನಾಗಿಬಿಡುವನು. ಭರತಭೂಮಿಯ ವಾತಾವರಣದಲ್ಲೇ ನಾಸ್ತಿಕತೆಯ ಅಣುಗಳು ಬೆಳೆಯಲು ಶಕ್ಯವಿಲ್ಲ. ಮೇಲ್ಕಂಡ ಎರಡೂ ತರಗತಿಯ ಜನರಿಗೆ ಆದರ್ಶಜೀವನವನ್ನು ತೋರಿಸುವದು ಈ ಭಕ್ತವಿಜಯದ ಸತ್ಪುರುಷರ ಸಚ್ಚರಿತ್ರೆಯು. ಭಗವದ್ಭಕ್ತರ ಚರಿತ್ರೆಯೇ ಭಗವಂತನ ಚರಿತ್ರೆಯು. ಭಕ್ತರ ಚರಿತ್ರೆಯನ್ನು ಕಥನಮಾಡುವದರಿಂದ ಭಗವಂತನಿಗಾಗುವ ಆನಂದವು ಸ್ವಯಂ ಭಗವಂತನ ಗುಣಗಾನದಿಂದ ಆಗುವದಿಲ್ಲವು. ಏಕೆಂದರೆ ಭಗವಂತನು ಅನಂತನು, ಅಪ್ರಮೇಯನು. ಅವನನ್ನು ಸಾಕಲ್ಯವಾಗಿ ತಿಳಿಯಲು ಸರ್ವಶಕ್ತಳಾದ ರಮೆಯಿಂದಾಗಲಿ, ವೇದಗಳಿಂದಾಗಲಿ ಶಕ್ಯವಲ್ಲವು. ಪುರಾಣಗಳಲ್ಲಿ ಉಲ್ಲೇಖವಿರುವಂತೆ ಕರ್ನಾಟಕವು ಭಕ್ತಿಯ ನಾಡು; ಭಕ್ತರ ಬೀಡು. ಆರಿಸಿ ಬರೆಯಬಹುದಾದ ನೂರಾರು ಭಕ್ತರ ಚರಿತ್ರೆಯಲ್ಲಿ ಹತ್ತಾರು ಮಹಾತ್ಮರ ಚರಿತ್ರೆಯನ್ನು ಮಾತ್ರ ಸಂಕ್ಷೇಪವಾಗಿ

ಬರೆದಿರುವದೀ ಭಕ್ತವಿಜಯವು. ದೇಶಾಭಿಮಾನದಿಂದಾಗಲಿ, ವಾಙ್ಮಯ ಪ್ರೇಮದಿಂದಾಗಲಿ, ಭಕ್ತರ ಚರಿತ್ರೆಯೆಂಬ ಭಕ್ತಿಯಿಂದಾಗಲಿ, ಈ ಗ್ರಂಥ ವನ್ನು ಕನ್ನಡಿಗರು ಆದರಿಸಿ ಪಠಿಸಿದರೆ, ಲೇಖಕನ ಸೇವೆಯು ಸಫಲವೆನಿಸು ವದು. ಪಠಿಸುವರ ಪುಣ್ಯದಲ್ಲಿ ಭಾಗಪಡೆದು ಲೇಖಕನೂ ಪುಣ್ಯವಂತನೆನಿ ಸುವನು. ಪರಮಾತ್ಮನ ಪ್ರೀತಿಯಾಗುವದು. ಇಹಪರ ಸಾಧನೆಯಾಗು ವದು.

ಬೇಲೂರು ಕೇಶವದಾಸ.



ಸುಬೋಧ ಮುದ್ರಣಾಲಯ, ಬೆಂಗಳೂರು ನಗರ

ಶ್ರೀ

# ಕರ್ಣಾಟಕ ಭಕ್ತವಿಜಯ

ಭಾಗ ೨.

## ಶ್ರೀ ವಿಜಯದಾಸರ ಚರಿತ್ರೆ

ಶ್ಲೋ॥ ಅಜ್ಞಾನ ತಿಮಿರಾದಿತ್ಯಂ
ಅತ್ಮಾನಂದ ಪದಪ್ರದಂ ॥
ವಿಜ್ಞಾನವಿಮಲಂ ಶ್ರೇಷ್ಠಂ
ವಿಜಯಾರ್ಯಗುರುಂ ಭಜೇ ॥ ೧ ॥

ತುಂಗಭದ್ರಾತೀರದಲ್ಲಿ ಚೀಕಲಪರಿಯೆಂಬುವ ಗ್ರಾಮ. ಗ್ರಾಮವು ಬಲುಕಾಲ ಬೇರೆ ಬೇರೇ ಮುಸಲ್ಮಾನ ರಾಜರ ಆಳಿಕೆಯಲ್ಲಿದ್ದು, ಈಗ ಹೈದರಾಬಾದು ಸೀಮೆಯ ರಾಯಚೂರು ಜಿಲ್ಲಾ ಮಾನವೀ ತಾಲ್ಲೂಕಿಗೆ ಸೇರಿದೆ. ಮಾನವಿಗೆ ಎಂಟು ಮೈಲು ದೂರದಲ್ಲಿದೆ. ಬ್ರಹ್ಮಾಶ್ವತ್ಥ ವಿದುರಾಶ್ವತ್ಥಗಳಂತೆ ಚೀಕಲಪರಿಯು, ಶ್ರೀಪಾದರಾಜರಿಂದ ಸ್ಥಾಪಿತವಾದ ಅಶ್ವತ್ಥನರಸಿಂಹ ಕ್ಷೇತ್ರವೆನಿಸಿದೆ. ಶ್ರೀ ಕ್ಷೇತ್ರದಲ್ಲಿ ಅದ್ಯಾಪಿ ಜನರು ಭಕ್ತಿಯಿಂದ ಸೇವೆ ಮಾಡಿ ನಿಷ್ಟಾರ್ಥಗಳನ್ನು ಪಡೆಯುತ್ತಿದ್ದಾರೆ.

ಕ್ರಿ. ಹದಿನೆಂಟನೇ ಶತಮಾನದ ಆದಿಭಾಗದಲ್ಲಿ ಶ್ರೀನಿವಾಸಪ್ಪನೆಂಬ ಬ್ರಾಹ್ಮಣನು ಚೀಕಲಪರಿಯಲ್ಲಿ ವಾಸಮಾಡುತ್ತಿದ್ದನು. ಈತನ ಹೆಂಡತಿಯ ಹೆಸರು—ಕೂಸಮ್ಮ. ಈ ದಂಪತಿಗಳು ಅಶ್ವತ್ಥ ನರಸಿಂಹನನುಗ್ರಹದಿಂದ ಮೂವರು ಮಕ್ಕಳನ್ನು ಪಡೆದರು. ಇವರಲ್ಲಿ ಹಿರಿಯನ ಹೆಸರು—ದಾಸಪ್ಪ.

ಭರತಖಂಡ ಸಾಮಾನ್ಯದಲ್ಲಿ ಮಹಾಪುರುಷರೆನಿಸಿದವರು ವಿಶೇಷತಃ ಹಳ್ಳಿವಾಸಿಗಳು. ಬಡ ತಂದೆತಾಯಿಗಳಿಂದ ಜನಿಸಿದವರು.

ದಾಸಪ್ಪನಿಗೆ ಬಡತನದ ಕಾರಣದಿಂದಲೂ, ಹಳ್ಳಿವಾಸದಿಂದಲೂ, ಹೆಚ್ಚಿನ ವಿದ್ಯಾಭ್ಯಾಸವಾಗಲಿಲ್ಲ. ಪ್ರಖ್ಯಾತ ವಿಜಯದಾಸರೆನಿಸಿ ಸ್ವಾನುಭವವನ್ನು ಹೇಳಿಕೊಂಡಿರುವ ದೇವರನಾಮ ಸುಳಾದಿಗಳನ್ನು ನೋಡಿದರೆ, ಒಪ್ಪತ್ತಿನ ಊಟಕ್ಕೆ ಅವಮಾನಪಟ್ಟು ಅಂಡಲೆದ ಕಥೆಯು ಗೊತ್ತಾಗುತ್ತದೆ. ತಂದೆತಾಯಿಗಳಿಗೆ ತಿಳಿಸದೆ ದೇಶಾಂತರಗತಿಯಾದ ಕನಿಕರದ ದೈನ್ಯಸ್ಥಿತಿಯು ಹೊರಬೀಳುತ್ತದೆ.

ಆ ಕಾಲದಲ್ಲಿ ಆದವಾನಿಯಲ್ಲಿ ರಾಘವೇಂದ್ರರಾಯನೆಂಬ ತಹಸೀಲ್ದಾರನಿದ್ದನು. ಆದವಾನಿಯಂಥಾ ಬಸಾಲತ್ ಜಂಗನ ರಾಜಧಾನಿಯಲ್ಲೂ ತಹಸೀಲಿಯ ಬಿಟ್ಟಿ ಬೇಗಾರಿಗಳಿಗೆ ಮಿತಿಯಿರಲಿಲ್ಲ. ಅಧಿಕಾರದ ಅರ್ಹತೆಯು ವಿದ್ಯೆದಲ್ಲಿರಲಿಲ್ಲ; ದಯಾದಿ ಸದ್ಗುಣಗಳಲ್ಲಿರಲಿಲ್ಲ; ನಿಸ್ಪೃಹತೆಯಲ್ಲಿ ಮೊದಲೇ ಇರಲಿಲ್ಲ. ಹೆಚ್ಚು ಹೆಚ್ಚಾಗಿ ಜನರನ್ನು ಹಿಡಿದು ಹೊಡೆಸಿದವನೂ, ಸುಲಿಗೆ ಮಾಡಿ ನವಾಬನ ಬೊಕ್ಕಸವನ್ನು ತುಂಬಿದವನೂ, ರಾಜಾನುಗ್ರಹಕ್ಕೆ ಪಾತ್ರನಾಗುತ್ತಿದ್ದನು. ಇವತ್ತಿಗೂ ಸರ್ಕಾರದ ರಕ್ಷಣೆಯ ಇಲಾಖೆಗಳಲ್ಲಿ (Police and Military) ಹಿಂದುಗಳಿಗಿಂತ ಮುಸಲ್ಮಾನರು ದಕ್ಷರೆನಿಸಿಕೊಂಡಿರುವದರ ರಹಸ್ಯವಿದರಲ್ಲಿರುವದು.

ತಹಸೀಲ್ದಾರ ರಾಘವೇಂದ್ರರಾಯನಾದರೋ — ಯಾವ ರೀತಿಯಿಂದಲೂ ಮುಸಲ್ಮಾನ ಅಧಿಕಾರಿಗಳಿಂತ ಕಡಮೆಯಾಗಿರಲಿಲ್ಲ. ಅದ್ದರಿಂದಲೇ ರಾಜಾನುಗ್ರಹಕ್ಕೆ ಸಂಪೂರ್ಣ ಪಾತ್ರನಾಗಿ ಆದವಾನಿಯ ತಹಸೀಲಿಯಲ್ಲಿದ್ದನು. ಸಾಲದುದಕ್ಕೆ ರಾಘವೇಂದ್ರರಾಯನ ಮಗನ ಲಗ್ನ ಬೇರೇ ಒದಗಿತು. ತಾಲ್ಲೂಕಿನ ಪ್ರತಿಕುಲಕರಣಿಯೂ ಒಂದೊಂದು ಬುದ್ದಲಿ (ಕುದುರೆಯಮೇಲೆ ಹೇರುವ ಚರ್ಮದ ಹಸಿಬೆ) ತುಪ್ಪವನ್ನು ತಂದು ಕೊಡಬೇಕೆಂಬ ಕಟ್ಟಲೆಯಾಯಿತು. ಇಷ್ಟುಮಾತ್ರವಲ್ಲದೆ ಪ್ರತಿಕುಲಕರಣಿಯೂ ಲಗ್ನಕಾಲದಲ್ಲಿ ಹಾಜರಿರಬೇಕು. ವಧೂವರರಿಗೆ ಯೋಗ್ಯ ಉಡುಗೊರೆಗಳನ್ನು ಓದಿಸಬೇಕು.

ಹೆಚ್ಚು ಉಡುಗೊರೆಯನ್ನು ಓದಿಸಿದವನು ತಹಸೀಲ್ದಾರನ ಪರಮಾನುಗ್ರಹಕ್ಕೆ ಪಾತ್ರನಾಗುತ್ತಿದ್ದನು. ಅವನಿಗೆ ತಹಸೀಲ್ದಾರನ ಪಕ್ಕದಲ್ಲಿ ಕುಳಿತು ಭೋಜನಮಾಡುವ ಸನ್ಮಾನ ದೊರೆಯುತ್ತಿತ್ತು. ಬಹುಮಾನದ ಸಲುವಾಗಿ ಕುಲಕರಣಿಗಳಲ್ಲಿ ಪೈಪೋಟಿ ನಡೆದು ಶ್ರೀಮಂತನಾದವನು ಜಯಶೀಲನಾಗುತ್ತಿದ್ದನು.

ಆದವಾನಿಯಂಥಾ ರಾಜಧಾನಿ! ಬಸಾಲತ್ ಜಂಗನಂಥಾ ನವಾಬನನ್ನು ಮನೆಗೆ ಕರೆಯುವ ಲಗ್ನ ಸಮಾರಂಭ! ಅಗಾಧವಾದ ಕಲ್ಯಾಣಮಂಟಪ! ವಾದ್ಯವೈಭವಗಳು! ಸೂಳೆಯರ ಮೇಳಗಳು! ಸಡಗರದ ನೆಂಟರಿಷ್ಟರು! ಮೃಷ್ಟಾನ್ನಕ್ಕೆ ಇದೇ ಸಮಯವೆಂದು ಹಾತೊರೆದು ನೆರೆದಿರುವ ತಿರುಕ ಬ್ರಾಹ್ಮಣರ ಸಂದಣಿ! ಎಲ್ಲೆಲ್ಲೂ ಗಡಿಬಿಡಿ!

ದಾಸಪ್ಪನಿಗೆ ತಹಸೀಲ್ದಾರನ ಮಗನ ಲಗ್ನವಾರ್ತೆಯು ತಿಳಿಯಿತು. ಯಾರಿಗುಂಟು ಯಾರಿಗಿಲ್ಲ! ಎಂಟಾನೆಂಟು ದಿನಗಳ ಮೃಷ್ಟಾನ್ನ-ದಕ್ಷಿಣೆಗಳು! ಆದವಾನಿಗೆ ಬಂದಿಳಿದನು. ಲಗ್ನಮಂಟಪದಲ್ಲಿ ಸಾಲಾಗಿ ಕುಳಿತಿರುವ ಸಾವಿರಾರು ಬ್ರಾಹ್ಮಣರ ಗುಂಪಿನಲ್ಲಿ, ಇದ್ದವರಲ್ಲಿ ಉಚ್ಚಸ್ಥಾನದಲ್ಲಿ ಒಂದಗ್ರದೆಲೆಯ ಮುಂದೆ ಕುಳಿತನು. ದಾಸಪ್ಪನು ಬಡವನಾಗಿದ್ದರೂ ದೃಢಾಂಗನಾಗಿದ್ದನು. ಬಡತನ ದಢ್ಡತನಗಳ ಸೌಲಭ್ಯ ತೆಗೆದುಕೊಂಡು ಜನರು ಇವನನ್ನು '**ಕೂಸೀಮಗ ದಾಸ**' ನೆಂದು ಕರೆಯುತ್ತಿದ್ದರು.

ಇನ್ನೇನು ಭೋಜನಕ್ಕೆ ಕೂಡುವ ಸಮಯ! ರಾಘವೇಂದ್ರರಾಯನು ಪಜ್ತಿಯಮೇಲೆ ಬಂದನು. ಅವನುಟ್ಟ ಪೀತಾಂಬರ, ಅವನ ಕೈಯೊಳಗಿರುವ ಭಂಗಾರದ ಥಾಲಿ, ಅವನ ಬೊಜ್ಜುಹೊಟ್ಟೆ ಇವುಗಳನ್ನು ನೋಡಿ ಜನರು ಬೆರಗಾದರು. ಮಹರಾಯ ಮಹರಾಯ! ನಳಮಾಂಧಾತರಾಯನೆಂದು ರಾಯನನ್ನು ಹೊಗಳಿದರು. ರಾಯನು ಸಂತುಷ್ಟನಾಗಿ ಮೀಸೆಯ ಮೇಲೆ ಕೈಯಾಡಿಸಿದನು.

ರಾಯನು ಪಜ್ತಿಯಮೇಲೆ ಬಂದಕಾರಣವು ಬೇರೆಯಾಗಿತ್ತು. ಸಾವಿರಾರು ಜನರಿಗೆ ಗಂಧವನ್ನು ತೆಯ್ದು ಒದಗಿಸುವ ಬಿಟ್ಟಿಯನ್ನು ಕಂಡು

ಹಿಡಿಯುವದಾಗಿತ್ತು. ದುರ್ದೈವಕ್ಕೆ ತಕ್ಕಂತೆ ದಾಸಪ್ಪನಮೇಲೆ ತಹಸೀಲ್ದಾರನ ಕಟಾಕ್ಷವಾಯಿತು.—'ಏಳು ಏಳು! ಮರಗಟ್ಟೆಲೆ ತಿನ್ನುವದಕ್ಕೆ ಕುಳಿತೆಯಾ? ನಿನಗೇನು ಧಾಡಿ'? ಆ ಕೊರಡು ಮುಗಿಯುವ ತನಕ ಗಂಧವನ್ನು ತೆಯ್ಯಿನಡೆ! ನಿನ್ನ ಹೆಸರೇನು?' ಎಂದು ಜಬರಿಸಿದನು. ದಾಸಪ್ಪನಿಗೆ ಅವಮಾನವಾಯಿತು. ಉಪಾಯವಿಲ್ಲದೆ ಎದ್ದು ನಿಂತನು.

ತಹಸೀಲ್ದಾರ—ಸುಮ್ಮನೆ ನಿಂತೆಯಾ? ನಿನ್ನ ಹೆಸರೇನು?
ದಾಸಪ್ಪ—ದಾಸಪ್ಪ!
ತಹಸೀಲ್ದಾರ—ಯಾವೂರದಾಸಪ್ಪ! ದಾಸ! ಅಪ್ಪ!
ದಾಸಪ್ಪ—ಚೀಕಲಪರಿಯ ದಾಸಪ್ಪ!
ತಹಸೀಲ್ದಾರ—ನೀನೇನೋ ಆ 'ಕೂಸೀಮಗದಾಸ'! ನಡೆ ನಡೆ.

ದಾಸಪ್ಪನಿಗೆ ಈ ಮಾತಿನಿಂದ ಬಹಳ ವೇದನೆಯಾಯಿತು. ಮಾಡುವನೇನು? ಬಡತನ! ಹಾಳು ಹೊಟ್ಟೆ! ತುಲಸೀ ಕಟ್ಟೆಯಮೇಲೆ ಗಂಧವನ್ನು ತೆಯ್ಯುತ್ತಾ ಕುಳಿತನು. ಮೊದಲನೇ ಪಜ್ಕ್ತಿಯಾಯಿತು. ಎರಡನೇ ಪಜ್ಕ್ತಿಯಾಯಿತು. ಮೂರನೇ ಪಜ್ಕ್ತಿಗೂ ಊಟಕ್ಕೆ ಬಾರೆಂದು ಅವನನ್ನು ಯಾರೂ ಕರೆಯಲಿಲ್ಲ. ಸಂಜೆಯಾಯಿತು. ಉರುಟಣೆ ಆರತಿಗಳಾದವು. ರಾತ್ರಿ ಭೋಜನವೂ ಆಯಿತು. ಎಲ್ಲೆಲ್ಲಿದ್ದವರು ಅಲ್ಲಲ್ಲೇ ಮಲಗಿದರು. ದಾಸಪ್ಪನು ಅಪ್ಪುಗ್ಯೆ ಹಾಕಿಕೊಂಡು ಬೃಂದಾವನದ ಬಳಿಯಲ್ಲಿ ಕುಳಿತನು. ರಾಘವೇಂದ್ರರಾಯನಂಥಾ ತಹಸೀಲ್ದಾರನು ಬಡವನನ್ನು ಜ್ಞಾಪಿಸಿಕೊಳ್ಳುವದುಂಟೆ?

ಬಂದ ಬಂಧುಜನರ ಯೋಗಕ್ಷೇಮದಲ್ಲಿ ಮನೆಯ ಯಜಮಾನಗೇ ಮಲಗಲು ಸ್ಥಳ ದೊರೆಯಲಿಲ್ಲ. ಹಾಸಿಗೆಯನ್ನು ಹೊರಿಸಿಕೊಂಡು ಕೈದೀಪ ಹಿಡಿಸಿಕೊಂಡು, ತಹಸೀಲ್ದಾರನು ಅಂಗಳಕ್ಕೆ ಬಂದನು. ರಾಯನೆಂಬ ಭಯದಿಂದ ದಾಸಪ್ಪನು ಎದ್ದು ನಿಂತನು. ಅವನಮೇಲೆ ಮತ್ತೆ ರಾಯರ ಕಟಾಕ್ಷವಾಯಿತು.

ತಹಸೀಲ್ದಾರ—ಯಾರದು ನಿಂತಿರುವವರು?

ದಾಸಪ್ಪ—ನಾನು ದಾಸಪ್ಪ.

ತಹಸೀಲ್ದಾರ—ಥೂ ನಿನ್ನಮನೆ ಹಾಳಾಗ! ಇಲ್ಲೇಕೆ ನಿಂತೆ ದೆವ್ವದ ಹಾಗೆ! ಹೋಗು ಎಲ್ಲಾದರೂ.

ದಾಸಪ್ಪನಿಗೆ ಊಟದ ಮಾತಿರಲಿ, ಇರುವದಕ್ಕೂ ಸ್ಥಳವಿಲ್ಲದಂತಾಯಿತು. ಸೇವಕರು ಅವನನ್ನು ಮನೆಯಿಂದ ಹೊರಡಿಸಿ ಕವಾಟ ಬಂಧನ ಮಾಡಿದರು. ತುಲಸೀಕಟ್ಟೆಯಮೇಲೆ ತಹಸೀಲ್ದಾರನಿಗೆ ಶಯನವಾಯಿತು.

ದಾಸಪ್ಪನು, ಒಂದು ತುತ್ತನ್ನಕ್ಕಾಗಿ ಎಷ್ಟು ಅವಮಾನ ಶ್ರೀಹರೇ! ಇಂಥಾ ಬಾಳು ಹಾಳಾಗಲಿ! ಎಂದು ದುಃಖಿಸುತ್ತಾ, ಯಾರ ಮನೆಯಲ್ಲೂ ಸ್ಥಳಸಿಗದೆ, ಕಾಲು ಹೋದಕಡೆ ನಡೆದು, ಬೆಳಗಾಗುವ ಹೊತ್ತಿಗೆ ಭಾಗಿಗೆ ಬಂದನು.

ಭಾಗಿಯ ಕುಲಕರಣಿ ಕೇಶವರಾಯನು ತಲೆಗೆ ಲಪ್ಪಾಟಿಯನ್ನು ಸುತ್ತಿ, ಕೈಯಲ್ಲಿ ತಂಬಿಗೆಯನ್ನು ಹಿಡಿದು, - ಎದುರಿಗೆ ಬರುತ್ತಿದ್ದ ದಾಸಪ್ಪನನ್ನು ಕಂಡನು. ಅಚ್ಚಳಿಯದಂತಿದ್ದ ನಾಮಮುದ್ರೆಗಳನ್ನು ನೋಡಿ ಯಾರೋ ಆಚಾರ್ಯರೆಂದು—

ಕೇಶವರಾಯ—ಆಚಾರ್ಯಸ್ವಾಮಿ, ಬೇಗ ಮನೆಗೆ ನಡೆಯಿರಿ. ನಾನು ಆದವಾನಿಗೆ ಹೋಗಬೇಕು. ನನ್ನ ಪಙ್ಕ್ತಿಗೆ ಬರುವದಿದ್ದರೆ ಈಗಲೇ ನಿಮ್ಮ ಸ್ನಾನವಾಗಲಿ. ನಿಮ್ಮದೇ ನೈವೇದ್ಯವಾಗಲಿ.

ದಾಸಪ್ಪ—ಆಗಲಿ ರಾಯರೇ, ತಮ್ಮ ಪಙ್ಕ್ತಿಗೇ ಬರುತ್ತೇನೆ. ನನಗಾದರೂ ಹಸಿವೆಯಾಗಿದೆ. ಪ್ರಯಾಣದ ಅವಸರವಿದೆ.

ಕೇಶವರಾಯ—ಹಾಗಿದ್ದರೆ ನಡೆಯಿರಿ, ಈಗ ಬರುತ್ತೇನೆ.

ಕೇಶವರಾಯನು ಸಾಲದೇ ಬಂತೆಂದು ಮತ್ತೊಂದು ಬುದ್ದಲಿ ತುಪ್ಪವನ್ನು ಕುದುರೆಯಮೇಲೆ ಹೇರಿಸಿದ್ದನು. ಅವಸರದ ಊಟಕ್ಕೆ ಎರಡು ಸೇರು ಹುಗ್ಗಿ, ತಕ್ಕಷ್ಟು ಗೊಜ್ಜು ತಯಾರಾಗಿತ್ತು. ದಾಸಪ್ಪನ ಸ್ನಾನವಾಯಿತು. ಅವನೇ ನೈವೇದ್ಯ ಸಮರ್ಪಣೆಮಾಡಿದನು. ಇಬ್ಬರೂ ಭೋಜನಕ್ಕೆ ಕುಳಿತರು. ರಾಯನ ಉಪಚಾರೋಕ್ತಿಗಳಿಂದ ಮಕ್ಕಳಿಗೆ ಸಹ ಮಿಗ

ದಂತೆ ದಾಸಪ್ಪನೇ ಎಲ್ಲವನ್ನೂ ಭುಜಿಸಿದನು. ರಾಯನ ತಾಯಿಯು, ಬ್ರಾಹ್ಮಣರು ಭೋಕ್ತೃಪುರುಷರೆಂದು ಸಮೃದ್ಧಿಯಾಗಿ ಬೆಣ್ಣೆ ಮೊಸರುಗಳನ್ನು ಬಡಿಸಿದಳು. ರಾಯನು ಒಂದು ರೂಪಾಯಿ ದೇಶಾನಾರವನ್ನೂ ಕೊಟ್ಟು ಆದವಾನಿಗೆ ಪ್ರಯಾಣಮಾಡಿದನು.

ದಾಸಪ್ಪನು ತಹಸೀಲ್ದಾರನ ಮನೆಯಲ್ಲಾದ ಅವಮಾನವನ್ನು ಸ್ಮರಿಸಿಕೊಳ್ಳುತ್ತಾ, ಊರಿಗೆ ಹೋಗದೆ, ತಂದೆ ತಾಯಿಗಳಿಗೆ ವರ್ತಮಾನವನ್ನೂ ಕೊಡದೆ, ಉತ್ತರ ಯಾತ್ರೆಗೆ ತೆರಳಿದನು. ಬಡ ತಂದೆತಾಯಿಗಳೇನುಮಾಡುವರು? ಅವರಲ್ಲಿ ವಿತ್ತವಿಲ್ಲ. ನನ್ನಲ್ಲಿ ವಿದ್ಯವಿಲ್ಲ. ನನಗಾಗಿ ಅಳುವ ಹೆಂಡರು ಮಕ್ಕಳು ಮೊದಲೇ ಇಲ್ಲ. ಇಂತಹ ಬಾಳಿಕೆಯು ಹಾಳಾಗಲಿ. ನಾನಾಗಿ ಆತ್ಮಹತ್ಯಮಾಡಿಕೊಂಡರೆ ಪಾಪ! ಮೃಗಗಳಾದರೂ ನನ್ನನ್ನು ತಿನ್ನಲಿ! ರೋಗದಿಂದಾದರೂ ನನಗೆ ಮರಣವಾಗಲಿ! ಎನ್ನುತ್ತಾ ಗಂಗೆ ಮೊದಲಾದ ತೀರ್ಥಗಳಲ್ಲಿ ಮಿಂದು, ಕ್ಷೇತ್ರಮೂರ್ತಿಗಳ ದರ್ಶನಮಾಡಿ, ವಿರಾಗಿಯಾಗಿ ನಾಲ್ಕು ವರ್ಷಗಳ ಕಾಲ ಸಂಚರಿಸಿ, ಮರಳಿ ತನ್ನ ಇಪ್ಪತ್ತನೇ ವಯಸ್ಸಿಗೆ ಚೀಕಲಪರಿಗೆ ಬಂದನು. ಕೇಶವರಾಯನ ಹುಗ್ಗಿ ಇನ್ನೂ ನನ್ನುದರದಲ್ಲಿದೆಯೆಂದನು. ಅವನಿಗೆ ಪ್ರತ್ಯುಪಕಾರವೇನು ಮಾಡಲೆಂದನು.

ದೇಶಾಂತರಗತನಾಗಿದ್ದ ಮಗನನ್ನು ನೋಡಿ ತಂದೆ ತಾಯಿಗಳಿಗೆ ಪರಮಾನಂದವಾಯಿತು. ಹೀಗೇ ಇದ್ದರೆ ಮತ್ತೆಲ್ಲಾದರೂ ಹೋಗಿಬಿಡುವನೆಂದು ಚೀಕಲಪರಿಯಲ್ಲೇ ಇದ್ದ ಅರಳಮ್ಮ (ಅರಳಿಯಮ್ಮ=ಅಶ್ವತ್ಥನರಸಿಂಹದೇವರ ಹೆಸರು) ನೆಂಬ ಕನ್ನಿಕೆಯನ್ನು ತಂದು ವಿವಾಹಮಾಡಿದರು. ಹದಿನಾರು ವರ್ಷ ಸಂಸಾರಮಾಡಿ ತಂದೆ ತಾಯಿಗಳು ಮೃತರಾಗುತ್ತಲೇ ಮತ್ತೆ ಕಾಶೀಯಾತ್ರೆ ಮಾಡುವೆನೆಂದು ದಾಸಪ್ಪನು ಪ್ರಯಾಣಮಾಡಿದನು. ಮಾರ್ಗದಲ್ಲಿ ಕಳ್ಳರಿವನನ್ನು ಬಡಿದು ಇದ್ದ ಒಂದು ತಂಬಿಗೆಯನ್ನೂ ಅಪಹರಿಸಿದರು. ತಂಬಿಗೆಯಿದ್ದರೆ ಅದರ ಅಭಿಮಾನವಾದರೂ ಇರುತ್ತಿತ್ತು. ಅದೂ ಹೋಗಿ ಮತ್ತಷ್ಟು ನಿಶ್ಚಿಂತೆಯಾಯಿತು. ಭಗವದನುಗ್ರಹವಾದರೆ ಮನೆಗೆ ಹೋಗುವೆನು. ಇಲ್ಲದಿದ್ದರೆ ಮಣಿಕರ್ಣಿಕೆಯಲ್ಲಿ ದೇಹತ್ಯಾಗ ಮಾಡುವೆನು. ಮಣಿಕರ್ಣಿಕೆಯಲ್ಲಿ ದೇಹತ್ಯಾಗಮಾಡಿದರೆ ಆತ್ಮಹತ್ಯ ದೋ

ಷಬರುವದಿಲ್ಲವೆಂದು ಹಿರಿಯರು ಹೇಳುತ್ತಿದ್ದರು, ಎಂದು ಮೊದಲಾಗಿ ಯೋಚಿಸುತ್ತಾ ಕಾಶಿಗೆ ಬಂದನು. ಅಲ್ಲಿಂದ ಗಯೆಗೆ ಹೋಗಿ ವಿಷ್ಣುಪಾದದಲ್ಲಿ ಪಿಂಡದಾನಮಾಡಿ ಪಿತೃರುಣ ತೀರಿತೆಂದುಕೊಂಡನು. ಮತ್ತೆ ಕಾಶಿಗೆಬಂದು ಸಾಧುಗಳ ಗುಂಪಿನಲ್ಲಿ ಸೇರಿ, ಎಂದಾದರೂ ಯಾವದಾದರೂ ಛತ್ರದಲ್ಲಿ ಊಟಮಾಡಿ, ಶುದ್ಧ ಮನಸ್ಸಿನಿಂದ ಶ್ರೀಹರಿಯನ್ನು ಧ್ಯಾನಿಸುತ್ತಾ ಕಾಲಯಾಪನೆ ಮಾಡಿದನು.

ಇಷ್ಟು ಕಷ್ಟಗಳನ್ನೂ ಅನುಭವಿಸಿ ಅನನ್ಯಗತಿಕನಾಗಿ ಧ್ಯಾನಿಸುತ್ತಿರಲು, ಒಂದು ರಾತ್ರಿ ಸ್ವಪ್ನದಲ್ಲಿ ಮಲಗಿದ್ದ ಮಗನನ್ನು ತಂದೆಯು ಎಬ್ಬಿಸುವಂತೆ, ಶ್ರೀಹರಿಯು ಪುರಂದರದಾಸರ ರೂಪದಿಂದ ಬಂದು ದಾಸಪ್ಪನನ್ನೆಬ್ಬಿಸಿದನು. ಗಂಗೆಯಾಚೆಯ ದಡದಲ್ಲಿರುವ ವ್ಯಾಸಕಾಶಿಗೆ ಕರೆದೊಯ್ದನು. ವೇದವ್ಯಾಸರ ದರ್ಶನಮಾಡಿಸಿದನು. ಇಂದಿನಿಂದ ನೀನು ಹರಿದಾಸನಾದೆಯೆಂದು ನಾಲಿಗೆಯ ಮೇಲೆ ವಿ ಜ ಯ ಎಂಬ ಬೀಜಾಕ್ಷರಗಳನ್ನು ಬರೆದನು. ನೀನು ಮಹಾಕವಿಯೆನಿಸಿ ರಾಜಾಧಿರಾಜರಂತೆ ವಿಭವಶಾಲಿಯಾಗುವೆಯೆಂದು ಹರಸಿದನು. ಸ್ವಪ್ನದಲ್ಲೇ ದಾಸಪ್ಪನು ದಾಸರೂಪೀ ಭಗವಂತನಿಗೂ ವೇದವ್ಯಾಸರಿಗೂ ವಂದನೆಮಾಡಿದನು. ಉತ್ತರ ಕ್ಷಣದಲ್ಲಿ ಎದ್ದುಕುಳಿತನು.

ಆನಿಮಿಷದಿಂದ ದಾಸಪ್ಪನ ದೃಷ್ಟಿಯು ಬದಲಾಯಿತು. ಆಡಿದ ಮಾತು ಹಾಡಾಯಿತು. ಮಣಿಕರ್ಣಿಕೆಯ ಘಟ್ಟದಲ್ಲಿ ಜಪಮಾಡುತ್ತಾ ಕುಳಿತರೆ ಬಂದು ಬಂದು ವಂದಿಸುವ ಜನರೇನು, ವಸ್ತ್ರಗಳನ್ನೂ ದಕ್ಷಿಣೆಯನ್ನೂ ಮುಂದಿಡುವರೇನು, ನಾನು ತಾನೆಂದು ಸೇವಿಸುವ ಜನರೇನು, ಎಂಟು ಹತ್ತು ದಿನಗಳೊಳಗೆ ದಾಸಪ್ಪನ ಬಿಡಾರವು ವಿಜಯದಾಸರ ಮಠವಾಗಿ ಹೋಯಿತು. ದಕ್ಷಿಣದೇಶದ ಯಾತ್ರಿಕರೆಲ್ಲಾ ದಾಸರನ್ನಾಶ್ರಯಿಸಿದರು. ಸ್ವಪ್ನವು ಅಕ್ಷರಶಃ ಸತ್ಯವಾಯಿತು. ಅಷ್ಟರಲ್ಲೇ ಅನೇಕ ದೇವರ ನಾಮಗಳನ್ನು ಹಾಡಿ ವಿಜಯವಿಠಲನಿಗರ್ಪಿಸಿದನು. ದಾಸಪ್ಪನೆಂದು ಕರೆಯುವ ಜನರೇ ಇಲ್ಲವಾಯಿತು. ವಿಜಯದಾಸರೆಂಬ ಖ್ಯಾತಿಯುಂಟಾ

ಯಿತು. ದಾಸರ ಬಾಯಿಂದ ಬಂದ ಮಾತುಗಳು ವೇದವಾಕ್ಯಗಳಾದವು. ದಾಸರ ಸಿದ್ಧಿಯು ಪ್ರಸಿದ್ಧಿಯಾಗಿ ಕಾಶೀ ಮಹಾರಾಜನ ಕಿವಿಗೆ ಮುಟ್ಟಿತು. ಅವನು ಮೇನೆ ಪಲ್ಲಕ್ಕಿಗಳನ್ನೂ ವಸ್ತ್ರ ಬಹುಮಾನಗಳನ್ನೂ ತಂದೊಪ್ಪಿಸಿದನು.

'ಕಿಮಲಭ್ಯಂ ಭಗವತಿ ಪ್ರಸನ್ನೇ ಶ್ರೀನಿಕೇತನೆ' ಎಂಬಂತೆ ಭಗವದನುಗ್ರಹವಾದಮೇಲೆ ಕೇಳುವದೇನು ?

ಲೋಕದಲ್ಲಿ ಐದು ಪ್ರಕಾರದ ಸಿದ್ಧಪುರುಷರಿರುವರು. ಇವರಲ್ಲಿ **ನಿತ್ಯಸಿದ್ಧರು ಕೆಲವರು. ಮಂತ್ರಸಿದ್ಧರು ಕೆಲವರು. ಕೃಪಾಸಿದ್ಧರು ಕೆಲವರು. ಹಠಸಿದ್ಧರು ಕೆಲವರು. ಸ್ವಪ್ನಸಿದ್ಧರು ಕೆಲವರು.** ಪರಶೂಶಿಲೆ ಸೋಕಿದ ಕಬ್ಬಿಣವು ಭಂಗಾರವಾಗುವಂತೆ ಸಿದ್ಧಪುರುಷರು ಪರಮ ಪಾವನರಾಗುವರು. ಅವರು ಮರಳಿ ಸಂಸಾರಕ್ಕೆ ಬಾರರು. ಕದಾಚಿತ್ ಬಲವತ್ತರ ಕಾರಣಗಳಿಂದ ಜನ್ಮತಾಳಿದರೂ ಅಂಥವರಿಂದ ಪಾಪಕರ್ಮಗಳಾಗುವದಿಲ್ಲ.

ಭಗವದನುಗ್ರಹವಾದರೆ ಮನೆ, ಇಲ್ಲದಿದ್ದರೆ ಮರಣವೆಂದು ಜೀವದ ಹಂಗು ತೊರೆದು ಬಂದ ದಾಸಪ್ಪನು ಇಂದು ಮಹಾ ಸಿದ್ಧಪುರುಷನೆನಿಸಿದನು. ಕೂಸೀಮಗ ದಾಸನು ವಿಜಯದಾಸರು ಎಂಬ ಪಾವನ ನಾಮದಿಂದ ಕರೆಸಿಕೊಂಡನು.

ಕಾಶಿಯಿಂದ ಪ್ರಯಾಣ ಹೊರಟರೆ ಜೊತೆಯಲ್ಲಿ ಮೇನೆಪಲ್ಲಕ್ಕಿಗಳೂ ಹೊರಟವು. ನೂರಾರು ಜನ ಶಿಷ್ಯರಾದರು. ಊರಿಂದೂರಿಗೆ ದಾಸರ ಆಗಮನವನ್ನು ತಿಳಿಸುವ ವಾರ್ತಾವಾಹಿಗಳಾದರು. ಸಾಮಾನುಗಳನ್ನು ಹೊರುವದಕ್ಕೆ ಎತ್ತು ಕುದುರೆಗಳಾದವು. ರಾಜಧಾನಿಗಳಲ್ಲಿ ರಾಜಾಧಿರಾಜರಿಂದ ಸನ್ಮಾನ! ಊರೂರುಗಳಲ್ಲಿ ಜನಮಂಡಲಿಯ ಸ್ವಾಗತ! ಹೋದಕಡೆಯೆಲ್ಲಾ ಮೃಷ್ಟಾನ್ನಭೋಜನ! ಬೇಡ ಬೇಡೆಂದರೂ ಬರುವ ಶಾಲು ಸಕಲಾತಿಗಳು ! ಹೀಗೆಲ್ಲಾ ದಾಸರ ವೈಭವ ಹೆಚ್ಚಿತು. ವಿಜಯನಗರದ ಜಮೀನ್ದಾರನು (Godavari Dt.) ವಿಜಯದಾಸರ ಖ್ಯಾತಿಯನ್ನು ಕೇಳಿ ಚಕ್ರವರ್ತಿಗಳಿ

ಗಾಗಲಿ ಜಗದ್ಗುರುಗಳಿಗಾಗಲಿ ಮಾಡುವಂತೆ ಮಹಾ ಸನ್ಮಾನಮಾಡಿದನು. ದಾಸರಿಂದ ಕಥಾಶ್ರವಣಮಾಡಿ ಕೃತಾರ್ಥನಾದೆನೆಂದನು.

ಎಲ್ಲವನ್ನೂ ಒಂದೊಂದಾಗಿ ಧೇನಿಸಿಕೊಂಡು ತಮ್ಮಲ್ಲಿ ತಾವೇ ನಗುತ್ತಾ, ಆಶ್ಚರ್ಯಪಡುತ್ತಾ, ಪರಮಾತ್ಮನನ್ನು ವಂದಿಸುತ್ತಾ, ಅದವಾನಿಯ ತಹಸೀಲ್ದಾರನನ್ನು ಜ್ಞಾಪಿಸಿಕೊಳ್ಳುತ್ತಾ, ಭಾಗೀ ಕೇಶವರಾಯನ ಮನೆಯ ಹುಗ್ಗಿಯನ್ನೂ ಆತನ ಉಪಕಾರವನ್ನೂ ಸ್ಮರಿಸಿಕೊಂಡು ಮಹಾನುಭಾವರಾದ ವಿಜಯದಾಸರು—

### ಸೌರಾಷ್ಟ್ರ — ಅಟ್ಟತಾಳ

ನಿನ್ನ ಒಲುಮೆಯಿಂದ । ನಿಖಿಳ ಜನರು ಬಂದು । ಮನ್ನಿಸುವರೊ ಮಹಾರಾಯ । ಎನ್ನಪುಣ್ಯಗಳಿಂದ । ಈಪರಿಯುಂಟೇನೋ ।
ನಿನ್ನದೆ ಸಕಲ ಸಂಪತ್ತು ॥ ಪ ॥

ಸಂಚಿತನಕ ಇದ್ದು ಸಣ್ಣ ಸೌಟು ತುಂಬ ।
ಗಂಜಿಗಾಣದೆ ಬಳಲಿದೆನೋ । ಹಿಂದೆ ॥
ವ್ಯಂಜನ ನಾನಾಸುಭಕ್ಷ್ಯಭೋಜ್ಯಂಗಳ ।
ಭುಂಜಿಸುವದು ಮತ್ತೇನೋ ॥ ೧ ॥

ಒಬ್ಬ ಹೆಂಗಸಿಗೆ ಅನ್ನವನಿಕ್ಕುವದಕೆ ನಾ
ತಬ್ಬಿಬ್ಬುಗೊಂಡೆನೊ ಹಿಂದೆ ॥
ನಿರ್ಭರದಿಂದಲಿ ಸರ್ಬರ ಕೂಡಿನ್ನು
ಹಬ್ಬವನುಂಬೆ ಶ್ರೀಹರಿಯೆ ॥ ೨ ॥

ನೀಚತ್ವ ತಿಳಿಯದೆ ಸರ್ವರ ಚರಣಕ್ಕೆ
*ಚಾಚಿದೆನೋ ಸಲೆ ಹಸ್ತಗಳ ॥
ಯೋಚಿಸಿ ನೋಡಲು ಸೋಜಿಗವಾಗಿದೆ
ವಾಚಕ್ಕೆ ನಿಲುಕದು ಹರಿಯೆ ॥ ೩ ॥

---

*ಚಾಚಿದೆನೊಸಲ ಹಸ್ತಗಳ (ಪಾ.)

ಮಧ್ಯಾಹ್ನ ಕಾಲಕ್ಕೆ ಅತಿಥಿಗಳಿಗೆ ಅನ್ನ
ಮೆದ್ದೆನೆಂದರೆ ಈಯಗಾಣೆ ||
ಇದ್ಧರೆಯೊಳು ಸತ್ಪಾತ್ರರಿಗುಣಿಸುವ
ಪದ್ಧತಿಯೇನೋ ಧರ್ಮಾತ್ಮ || ೪ ||

ಜೀರ್ಣ ಮಲಿನವಸ್ತ್ರ ಕಾಣದಮನುಜಗೆ |
ಊರ್ಣ ವಿಚಿತ್ರದ ವಸನಾ ||
ವರ್ಣವರ್ಣಗಳಿಂದ ಬಾಹುವದೇನೊ ಸಂ |
ಪೂರ್ಣ ಗುಣಾರ್ಣವ ದೇವ || ೫ ||

ವೈದಿಕವೃತ್ತಿಯ ಕೊಡುವಗೆ ಲೌಕೀಕ
ವೈದಿಸುವದು ಬಲು ಖ್ಯಾತೀ ||
ವೈದುನಗೊಲಿದ ಶ್ರೀ ವಿಜಯ ವಿಠಲ ನಿನ್ನ
ಪಾದಸಾಕ್ಷಿ ಅನುಭವವೋ || ೬ ||

ಎಂಬದಾಗಿ ಪರಮಾತ್ಮನನ್ನು ಸ್ತೋತ್ರಮಾಡಿದರು.

ವಿಜಯದಾಸರು ಕಾಶಿಯಿಂದ ಕರ್ಣಾಟಕಕ್ಕೆ ಬರುವದಕ್ಕೆ ವರ್ಷಾಂತರಗಳಾದವು. ಊರೂರಲ್ಲಿ ಜನರ ಸ್ವಾಗತ! ಆ ಜನರಿಗೆ ಭಾಗವತ ಧರ್ಮೋಪದೇಶ! ಒಂದೊಂದು ವೇಳೆಯಲ್ಲಿ ನೀರು ನೆರಳಿಗಭಾವವಾದ ಗೊಂಡಾರಣ್ಯದಲ್ಲಿ ಬಿಡಾರ! ಈ ರೀತಿ ಪ್ರಯಾಣಸಾಗಿತು. ಒಂದು ಅರಣ್ಯ ಮಧ್ಯದಲ್ಲಿ ಯುಗಾದಿಯಂಥಾ ಹಬ್ಬದದಿನ ನಿಲ್ಲಬೇಕಾಯಿತು. ಜನರು ವರ್ಷಾದಿಯಲ್ಲಿ ಅರಣ್ಯದಲ್ಲಿರಬೇಕಾಯಿತೆಂದು ಮಿಡುಕಿದರು. ಎಡಬಲ ಎಲ್ಲಿ ನೋಡಿದರೂ ವಾಸಾರ್ಹವಾದ ಗ್ರಾಮ ದೊರೆಯಲಿಲ್ಲ. ಗ್ರಾಮವಿದ್ದರೆ ನೀರಿಗಭಾವ! ತೀಕ್ಷ್ಣವಾದ ಬಿಸಿಲ ಬಾಧೆ! ಮಾಡುವದೇನು ?

ಇಂಥಾ ಪರಿಸ್ಥಿತಿಯಲ್ಲಿ ಜೊತೆಯಲ್ಲಿದ್ದ ಜನರಿಗೆ ಹಬ್ಬವಾಗಬೇಕಾಯಿತು. ಜನರಿಗೆ ಮಂಗಳಸ್ನಾನವಾಗಬೇಕಾಯಿತು. ಮೃಷ್ಟಾನ್ನಭೋಜನವಾಗಬೇಕಾಯಿತು. ದಾಸರು ತಮ್ಮ ಬಳಿಯಲ್ಲಿ ಉಡುಗೊರೆಗಳಾಗಿ

ಬಂದ ನೂತನ ವಸ್ತ್ರಗಳನ್ನು ಎಲ್ಲರಿಗೂ ದಾನಮಾಡಿದರು. ರಾತ್ರಿ ಕೀರ್ತನ ಕಾಲದಲ್ಲಿ ಹಬ್ಬವೆಂದರೇನು? ಹಬ್ಬವನ್ನು ಮಾಡುವ ಬಗೆ ಹೇಗೆ? ಜನ ರನ್ನು ಕಾಡಿಬೇಡಿ ಹಬ್ಬಮಾಡಿದರೆ ಹಬ್ಬವಾಗುವದೆ ? ಸಾಲವಾದರೂ ತಂದು ಮೃಷ್ಟಾನ್ನವುಂಡರೆ ಹಬ್ಬವಾಗುವದೆ ? ಎಂಬ ವಿಚಾರಗಳ ಮೇಲೆ ಭಾಷಣಮಾಡತೊಡಗಿದರು. ಬರೇ ಹಬ್ಬದ ಪ್ರಸ್ತಾವನೆಯೇ ಆ ದಿನದ ಕೀರ್ತನವಾಯಿತು. ಹಬ್ಬದ ವಿವರವನ್ನು ವರ್ಣಿಸಿ ಕೆಳಕಂಡ ಸುಳಾದಿ ಯನ್ನು ಹಾಡಿದರು:—

## ಹಬ್ಬ ಸುಳಾದಿ

### ಧ್ರುವತಾಳ

ಹಬ್ಬಗಳಿವೆ ಕೇಳಿ ಊರ್ಬಿಯೊಳಗೆ ವೈ
ದರ್ಭಿರಮಣ ಕರುಣಾಬ್ಧಿಯೊಲಿದ ಬಳಿಕ
ಒಬ್ಬರ ಕಾಡಿಬೇಡಿ ಹಬ್ಬಮಾಡಿದರಿಂದ
ಉಬ್ಬುತೀರದು ಕಣೋ ಬುಬ್ಬುಧ ಜನರಿಗೆ
ಲಭ್ಯವಾದ ಧ್ಯಾನರುಬ್ಬಿ ಗಂಜಿಯು ಕಾಸಿ
ಒಬ್ಬ ಸತಿಪತಿ ಇಬ್ಬರಾನಂದದಿಂದ
ಹೆಬ್ಬೆಟ್ಟಿನಿಂದ ಸವಿದು ಸಭ್ಯರಾಗಿಪ್ಪುದೆ
ಹಬ್ಬವು ಬಲು ಹಬ್ಬ ಹಬ್ಬವು ಕಾಣಿರೋ
ನಿರ್ಭಯವಾದ ರತ್ನಗರ್ಭದಲ್ಲಿ ಕುಟೀರ
ಗುಬ್ಬಿಯ ಗೂಡಿನಷ್ಟು ಗರ್ಭವಾಸವ ರಚಿಸಿ
ನಿರ್ಬಂಧವಿಲ್ಲದೆ ಲಭ್ಯವಾಗಿಪ್ಪದೆ
ಹಬ್ಬವು ಬಲುಹಬ್ಬಹಬ್ಬವು ಕಾಣಿರೋ
ಕರ್ಬೂರನಂತೆ ತಿಂದು ಕೊಬ್ಬಿ ತಿರುಗುವಂಗೆ
ದುರ್ಭಾಗ್ಯವಲ್ಲದೆ ಹಬ್ಬವೆನಿಸುವದೆ
ಕರ್ಬುಬಿಲ್ಲನಯ್ಯ ವಿಜಯ ವಿಠಲನಿಗೆ
ದರ್ಭೆಯೇರಿಸಿದರೆ ಸರ್ಬರ ಕರಪಿಡಿವ ॥ ೧ ॥

## ಮಟ್ಟತಾಳ

ಕಾಮಕ್ರೋಧಂಗಳ ಬಿಡುವದೆ ಬಲು ಹಬ್ಬ
ನೇಮನಿಷ್ಠೆ ನಿತ್ಯಮಾಳ್ಪದೆ ಬಲು ಹಬ್ಬ
ಕಾಮನ ಉಪಹತಿಗೆ ಅಂಜುವದೇ ಹಬ್ಬ (?)
ಕಾಮುಕ ಜನರುಗಳ ಬಿಡುತಿಪ್ಪದೇ ಹಬ್ಬ
ಭೂಮಿಯೊಳಗೆ ಜ್ಞಾನಿಯಾಗುವದೇ ಹಬ್ಬ
ಸ್ವಾಮಿ ಭೃತ್ಯನ್ಯಾಯ ತಿಳಿವದೆ ಬಲು ಹಬ್ಬ
ವ್ಯೋಮಗಂಗಾಜನಕ ವಿಜಯ ವಿಠಲನ
ಧಾಮದೊಳಗೆ ಪೂಜೆಮಾಡುವುದೇ ಹಬ್ಬ ॥ ೨ ॥

## ತ್ರಿಪುಟತಾಳ

ಬಂದ ಅತಿಥಿಗಳ ಪೂಜಿಸುವದೆ ಹಬ್ಬ
ಮಂದಾಕಿನಿಯಲ್ಲಿ ಮಜ್ಜನವೇ ಹಬ್ಬ
ನಿಂದಕ ಜನರಲ್ಲಿ ಬೆರೆಯದಿಪ್ಪದೆ ಹಬ್ಬ
ವಂದಿಸಿ ಗುರುಗಳಿಗೆ ಎರಗುವದೇ ಹಬ್ಬ
ಕುಂದು ಸಜ್ಜನರನ್ನ ನುಡಿಯದಿಪ್ಪದೆ ಹಬ್ಬ
ತಂದೆ ತಾಯಿಗಳಿಗೆ ಅನುಕೂಲವೇ ಹಬ್ಬ
ಅಂದರೆ ನಗುತ ಸಂತೋಷಬಡುವದೆ ಹಬ್ಬ
ಇಂದು ನಾಳೆಗೆ ಎಂಬ ಚಿಂತೆ ಬಿಡುವದೆ ಹಬ್ಬ
ಇಂದ್ರವರ್ಗವುಳ್ಳನಕ ವಿಜಯ ವಿಠಲನ
ಒಂದೇ ಭಕುತಿಯಿಂದ ಭಜಿಸುವದೇ ಹಬ್ಬ ॥ ೩ ॥

## ಅಟ್ಟತಾಳ

ಋಣ ರೂಪವಾಗದ ಸಂಸಾರವೆ ಹಬ್ಬ
ಗುಣವಂತನಾಗಿ ಸಂಚರಿಸುವದೇ ಹಬ್ಬ
ಕನಸಿಲಿ ಹಣ ಹೆಣ್ಣು ಬಯಸದಿಪ್ಪದೆ ಹಬ್ಬ

ಮನವಾಚಾಕಾಯಕ್ಕೆ ಬಡತನವೇ ಹಬ್ಬ
ಮನ ನೆರೆಹೊರೆ ನೋಡಿ ಬಳಲದಿಪ್ಪದೆ ಹಬ್ಬ
ಅನಿಮಿಷ ಜಾಗರ ಹರಿವಾಸರವೆ ಹಬ್ಬ
ದಿನ ಪ್ರತಿದಿನ ಸತ್ಕರ್ಮಾಚರಣೆ ಹಬ್ಬ
ಮಣಿಕರ್ಣಿಕೆಯಲ್ಲಿ ದೇಹತ್ಯಾಗವೆ ಹಬ್ಬ
ತನುವಿಗೆ ವ್ಯಾಧಿ ಬಾರದಿಪ್ಪುದೆ ಹಬ್ಬ
ಚಿನುಮಯ ಮೂರುತಿ ವಿಜಯವಿಠಲನ
ಮನಸಿನೊಳನುದಿನ ಈಕ್ಷಿಸುವದೆ ಹಬ್ಬ ॥ ೪ ॥

ಆದಿತಾಳ

ಕಾಲನ ಬಾಧೆಗೆ ಸಿಲುಕದಿಪ್ಪದೆ ಹಬ್ಬ
ಕಾಲಕಾಲಕೆ ಯಾತ್ರೆ ತೀರ್ಥಮಾಳ್ಪದೆ ಹಬ್ಬ
ಪೇಳುವ ಹರಿಕಥಾಶ್ರವಣವೆ ದೊಡ್ಡ ಹಬ್ಬ
ನಾಲಿಗೆಯಿಂದ ಹರಿಸ್ತೋತ್ರವೇ ಹಬ್ಬ
ಹಾಳು ಹರಟೆ ಬಿಟ್ಟು ಹೊತ್ತು ಕಳೆವುದು ಹಬ್ಬ
ಶ್ರೀ ಲೋಲಪರನೆಂದು ಕೂಗಾಡುವುದು ಹಬ್ಬ
ವಾಲಯ ಗಯಾದಲ್ಲಿ ಕುಲಪವಿತ್ರವೆ ಹಬ್ಬ
ಫಾಲಲಿಪಿಗೆ ಮನನೋಯದಿಪ್ಪುದೆ ಹಬ್ಬ
ವ್ಯಾಳೆಗೆ ದೊರೆತದ್ದು ಭುಂಜಿಸುವದೆ ಹಬ್ಬ
ಬೀಳು ನುಡಿವರ ಬಿಟ್ಟುಕೊಡುವದು ಹಬ್ಬ
ಪಾಲಾಬ್ಧಿಶಯನ ವಿಜಯ ವಿಠಲನ್ನ
ಊಳಿಗದವನಾಗಿ ಬಾಳ್ಗೈಸುವದೆ ಹಬ್ಬ ॥ ೫ ॥

ಜತೆ

ದಂಪತಿಗಳು ಏಕವಾಗಿಪ್ಪುದೆ ಹಬ್ಬ
*ಶಂಪದಂತೆ ವಿಜಯ ವಿಠಲ ಪೊಳೆವದೆ ಹಬ್ಬ ॥ ೧ ॥

---

*ಮಿಂಚು

ಈ ಪ್ರಕಾರ ವಿಜಯದಾಸರು ಪರಿವಾರ ಸಹಿತರಾಗಿ ಚೀಕಲಪರಿಗೆ ಮರಳಿ ಬಂದರು. ತುಂಗಭದ್ರೆಯಲ್ಲಿ ಮಿಂದು ಅಶ್ವತ್ಥನರಸಿಂಹನಿಗೆರಗಿದರು. ದಾಸಪ್ಪನು ವಿಜಯದಾಸರಾಗಿ ಬಂದುದನ್ನು ನೋಡಿ ಬಂಧುಜನರು ಪರಮಾನಂದಭರಿತರಾದರು. ಯಾರ ಸಂತೋಷ ಹೇಗಾದರಿರಲಿ! ಪಾಣಿಗೃಹೀತಿಯಾದ ಅರಳಮ್ಮನಿಗೆ ಕಾಮಧೇನು ಕಲ್ಪವೃಕ್ಷ ಚಿಂತಾಮಣಿಗಳನ್ನು ಕಂಡಂತಾಯಿತು. ಕಾಲಾಂತರದಲ್ಲಿ ದಾಸರಿಗೀರ್ವರು ಮಕ್ಕಳಾದರು. ಒಬ್ಬನ ಹೆಸರು ಶೇಷಗಿರಿದಾಸನೆಂದು. ಆ ಕಾಲದಲ್ಲಿ ವಿಜಯದಾಸರಿಂದ ಅಂಕಿತವನ್ನು ಪಡೆದ ಶಿಷ್ಯರ ಸಂಖ್ಯೆ ಅರವತ್ತಕ್ಕಿಂತ ಹೆಚ್ಚಾಗಿತ್ತು.* ಒಬ್ಬೊಬ್ಬರೂ ಅಪರೋಕ್ಷಜ್ಞಾನಿಗಳೆನಿಸಿದರು. ವಿಜಯದಾಸರಂತೆ ಸಾವಿರಾರು ದೇವರನಾಮ ಸುಳಾದಿಗಳನ್ನು ರಚಿಸಿದರು. ಆ ಮಹನೀಯರಲ್ಲಿ ಕೆಲವರ ಹೆಸರು ಉಪಲಬ್ಧವಾದರೂ ಐತಿಹಾಸಿಕ ದೃಷ್ಟಿಯಿಂದ ಬರೆದಿಡಲು ಸರಿಯಾದ ಚರಿತ್ರೆ ದೊರೆತಿಲ್ಲ.

'ಭಕ್ತಿಯಲಿ ಭಾಗಣ್ಣ | ಯುಕ್ತಿಯಲಿ ಮೋಹನ್ನ
ಶಕ್ತಿಯಲಿ ತಿಮ್ಮಣ್ಣ |'

ಎಂಬಂತೆ ಈ ಮೂವರ ಹೆಸರು ಇತರರಿಗಿಂತ ಹೆಚ್ಚು ಪ್ರಖ್ಯಾತಿಗೆ ಬಂದಿರುವದು. ಇವರ ಸಂಕ್ಷೇಪ ಚರಿತ್ರೆಗಳು ಮುಂದಿನ ಅಧ್ಯಾಯಗಳಲ್ಲಿ ಕ್ರಮವರಿತು ಬರುವವು.

---

## ೨

ವಿಜಯದಾಸರು ಭೃಗು ಮಹಾಮುನಿಗಳ ಅವತಾರವೆಂದು ಅನೇಕ ಹರಿದಾಸರುಗಳ ಆಪ್ತ ವಾಕ್ಯಗಳಿವೆ. ಆ ಮುನಿವರೇಣ್ಯರೇ ತ್ರೇತೆಯಲ್ಲಿ ಸುರಲೀಲನೆಂಬ ಕಪಿನಾಯಕನಾಗಿ ಶ್ರೀರಾಮಚಂದ್ರನ ಸೇವೆಮಾಡಿದರಂತೆ! ದ್ವಾಪರದಲ್ಲಿ ನಿಕಂಪನೆಂಬ ಯಾದವನಾಗಿ ಶ್ರೀಕೃಷ್ಣ ಪರಮಾತ್ಮನ

---

*ಲೇಖಕನಿಂದ ಹಿಂದಿನ ಐದನೇ ತಲೆಯವರಾದ ವೆಂಕಟದಾಸರೆಂಬುವರು ಶ್ರೀದಾಸಾರ್ಯರ ಅರವತ್ತು ಶಿಷ್ಯರ ಪೈಕಿ ಒಬ್ಬರು.

ಸೇವೆಮಾಡಿದರಂತೆ ! ಕಲಿಯುಗದಲ್ಲಿ ಪುರಂದರದಾಸರ ಮನೆಯಲ್ಲಿ ಆಕಳ ಕರುವಾಗಿದ್ದು, ಅನಂತರ ಅವರ ಕಡೆಯ ಮಗ ಮಧ್ವಪತಿಯಾಗಿ ಅವತರಿಸಿದರಂತೆ !

ಪಂಚ - ಲಕ್ಷ ನಾಮಗಳನ್ನು ಮಾಡಬೇಕೆಂದು ಸಂಕಲ್ಪಿಸಿ ಒಂದು ಪಾದ ನ್ಯೂನವಾಗಿರಲು, ಮಧ್ವಪತಿಯನ್ನು ಕುರಿತು ಆಪಾದ ಪೂರ್ತಿಮಾಡೆಂದು ಪುರಂದರದಾಸರು ಹೇಳಿದ ಹಾಗೂ, ಈ ಜನ್ಮದಲ್ಲಿ ನನ್ನಿಂದ ಸಾಧ್ಯವೇ ಎಂದವನು ಕೇಳಿದ ಹಾಗೂ, ಈ ಜನ್ಮವಿಲ್ಲದಿದ್ದರೆ ಮುಂದಿನ ಜನ್ಮದಲ್ಲಿ ಮಾಡೆಂದು ದಾಸರು ಹೇಳಿದ ಹಾಗೂ, ಹಿಂದೆ ಪುರಂದರದಾಸರ ಚರಿತ್ರೆಯಲ್ಲಿ ಓದಿದ ಜ್ಞಾಪಕವು ವಾಚಕರಿಗಿರುವದಷ್ಟೆ ! ಆ ಕಾರ್ಯ ಪೂರ್ತಿಗಾಗಿ ಮಧ್ವಪತಿಯೇ ವಿಜಯದಾಸರಾಗಿ ಈ ಸಮಯದಲ್ಲವತರಿಸಿದನು. ವಿಸ್ತಾರವಾದ ಕಾಲದೇಶಗಳಲ್ಲಿ ಜನ್ಮ ಕರ್ಮಗಳ ಚರಿತ್ರೆಯನ್ನು ತಿಳಿಯಬಲ್ಲವರಾರು ? ಭಗವಾನ್ ಶ್ರೀಕೃಷ್ಣನು ಶ್ರೀಮದ್ಭಗವದ್ಗೀತೆಯಲ್ಲಿ—

ಬಹೂನಿ ಮೇ ವ್ಯತೀತಾನಿ
ಜನ್ಮಾನಿ ತವಚಾರ್ಜುನ
ತಾನ್ಯಹಂ ವೇದ ಸರ್ವಾಣಿ
ನತ್ವಂ ವೇತ್ಥ ಪರಂತಪ ॥ ೫ ॥ iv

ತಾ॥ ನನಗೂ ನಿನಗೂ ಎಷ್ಟೋ ಜನ್ಮಗಳಾದವು. ಅವುಗಳನ್ನು ನಾನು ಬಲ್ಲೆ ; ನೀನು ತಿಳಿಯೆ.

ಎಂಬುದಾಗಿ ಉಪದೇಶಮಾಡಿರುತ್ತಾನೆ.

ಧರ್ಮ ಸಂಸ್ಥಾಪನೆಗಾಗಿ ಭಗವದವತಾರಗಳಾದ ಸಮಯಗಳನ್ನು ಕಾಯುತ್ತಿದ್ದು ದೇವತೆಗಳೂ ಮಹರ್ಷಿಗಳೂ ಭೂಲೋಕದಲ್ಲಿ ಜನ್ಮತಾಳುವರು. ಶ್ರೀರಾಮಾವತಾರದಲ್ಲಿ ದೇವತೆಗಳು *ವಾನರರಾದರು. ಕೃಷ್ಣಾವತಾರದಲ್ಲಿ ಯಾದವ ಪಾಂಡವ ವಂಶಗಳಲ್ಲೂ, ದೀನ ದನಗಾವರ ಕುಲದಲ್ಲೂ

*(ವಾ+ನರ) ವಾಪಕ್ಷನರ, ನರರನ್ನುನರರೆಂದು ಕರೆಯುವ ಸಹನೆಯಿಲ್ಲದ ರಾಕ್ಷಸರು. ಕರ್ಣಾಟಕದ ಪೂರ್ವನಿವಾಸಿಗಳನ್ನು ವಾನರರೆಂದು ಕರೆದರು.

ಜನ್ಮತಾಳಿದರು. ಲೋಕಸೇವಾಪರಾಯಣರಿಗೆ ಕುಲದ ಗೊಂದಲವೆಲ್ಲಿ ಬರಬೇಕು? ರತ್ನವು ತಿಪ್ಪೆಯಲ್ಲಿದ್ದರೂ ಅದರ ಕಾಂತಿಗೆ ಕೊರತೆ ಬರುವದಿಲ್ಲವಷ್ಟೆ!

ದೇವತೆಗಳಾದರೂ ಭೂಲೋಕದಲ್ಲವತರಿಸಿ ತಮ್ಮ ಸಾಧನೆಗಳನ್ನು ಪೂರ್ತಿಮಾಡಿಕೊಳ್ಳಬೇಕು. ವಾಸನಾ ವಿಶೇಷಗಳನ್ನು ಕಳೆದುಕೊಳ್ಳಬೇಕು. ಜ್ಞಾನಿಗೂ ವಾಸನೆ ತಪ್ಪುವದಿಲ್ಲ. ವಿಶ್ವಾಮಿತ್ರ ಪರಾಶರ ಪ್ರಭೃತಿಗಳು ವಾಸನಾ ವಿಶೇಷದಿಂದ ಮೋಹವಶರಾದರು. ಭರತ ಚಕ್ರವರ್ತಿ ಯಂಥಾ ತಪೋಧನನು ಒಂದು ಮೃಗದಲ್ಲಿ ಮಮತೆಯಿಟ್ಟು ಮೃಗ ಜನ್ಮ ತಾಳಿದನು. ವಿಷಯಗಳನ್ನು ಧ್ಯಾನಿಸಿದಕೂಡಲೆ ಅವುಗಳ ಪರಿಚರ್ಯವಾಗುವದು. ಪರಿಚರ್ಯ (ಸಂಗ) ದಿಂದ ಕಾಮನೆಯುಂಟಾಗುವದು. ಲಭಿಸದಿದ್ದರೆ ಕ್ರೋಧಹುಟ್ಟುವದು. ಕ್ರೋಧದಿಂದ ಲೋಭ ಮೋಹಗಳುಂಟಾಗುವವು. ಲೋಭ ಮೋಹಗಳಿಂದ ಸ್ಮೃತಿಭ್ರಂಶ ಬುದ್ಧಿನಾಶಗಳಾಗುವವು. ಅವುಗಳಿಂದಲೇ ಕಡೆಗೆ ಸರ್ವನಾಶವಾಗುವದು.

ವಾಸನೆಗಳನ್ನು ಗೆಲಿಯುವುದಕ್ಕೆ ಬಲವಾದ ಮನಶ್ಶಕ್ತಿ ಬೇಕು. ಮನಶ್ಶಕ್ತಿಯನ್ನು ಪಡೆಯುವದೇ ದೊಡ್ಡ ತಪಸ್ಸು.

ಮನಸ್ಸಿಗೆ ವಿಷಯಸ್ಪರ್ಶವಾದ ಕೂಡಲೆ ಅದು ಜೀವನಕಾರಣ ಶರೀರದಲ್ಲಿ ವಜ್ರಲೇಪದಂತಾಗಿಬಿಡುವದು. ಜೀವನನ್ನು ಜನ್ಮಬಂಧನಕ್ಕೆ ಸಿಕ್ಕಿಸಿಬಿಡುವದು. ಕಾರಣ ಶರೀರವನ್ನು ಲಿಂಗ ಶರೀರವೆಂದು ಶಾಸ್ತ್ರಜ್ಞರು ಕರೆಯುವರು. ಲಿಂಗಶರೀರವು ಧಾನ್ಯದಮೇಲಿನ ಹೊಟ್ಟಿನಂತೆ ಉತ್ಪತ್ತಿಗೆ ಕಾರಣವಾಗಿ ಜೀವನನ್ನಾವರಿಸಿರುವದು. ವಿದ್ಯುದಣುವಿನಷ್ಟು (Electron) ಸೂಕ್ಷ್ಮ ಪರಿಮಾಣದ ಸಚ್ಚಿದಾನಂದರೂಪೀ ಜೀವನನ್ನು ಆವರಿಸಿರುವ ಲಿಂಗದೇಹದ ನಾಶದಿಂದ ಸಕಲ ವಾಸನಾ ನಾಶವಾಗಿ ಭಗವದಪರೋಕ್ಷವಾಗುವದು. ಅಪರೋಕ್ಷಿಯಾದವನ ಲಿಂಗದೇಹವು ಹುರಿದ ಬೀಜದಂತೆ ದಗ್ಧಪಟನ್ಯಾಯವಾಗಿರುವದು. ಸಿದ್ಧಾಂತವಾದಿಗಳು ಆ ದಗ್ಧಪಟದ ನಾಶವಾದರೂ ವಿರಜಾಸ್ನಾನದಿಂದಾಗುವದೆಂದು ಹೇಳುವರು. ಆ ಮಹಾ ಸಾಧನೆಗೋಸ್ಕರ ಸಕಲ ದೇವತೆಗಳೂ ಮುನಿಗಳೂ ಭೂಲೋಕದಲ್ಲಿ ಜನ್ಮ

ವೆತ್ತುವರು. ತಾವು ಉದ್ಧಾರವಾಗುವದರ ಜೊತೆಗೆ ಲೋಕವನ್ನೇ ಉದ್ಧರಿಸುವರು. ಒಮ್ಮೆ ರಾಜರಾಗುವರು. ಒಮ್ಮೆ ಭಿಕ್ಷುಕರಾಗುವರು. ಒಮ್ಮೆ ಉತ್ತಮಃಕುಲದಲ್ಲವತರಿಸುವರು. ಮತ್ತೊಮ್ಮೆ ನೀಚಕುಲದಲ್ಲವತರಿಸುವರು. ಎಲ್ಲ ಜನ್ಮಗಳ ಎಲ್ಲ ಅನುಭವವನ್ನೂ ಪಡೆಯುವರು.

ಆದುದರಿಂದ ಭೃಗು ಋಷಿಗಳಂಥವರು ವಿವಿಧ ಜನ್ಮಗಳೆತ್ತಿ ಕಡೆಗೆ ವಿಜಯದಾಸರಾದರು. ಪುರಂದರದಾಸರ ಪರಮಾನುಗ್ರಹಬಲದಿಂದ ಭಗವದಪರೋಕ್ಷಿಗಳಾದರು.

ವಿಜಯದಾಸರ ತಮ್ಮ ಆನಂದದಾಸರು(ಹಯವದನ ವಿಠಲಾಂಕಿತರು) ದಾಸವರ್ಯರ ಸಂಕ್ಷೇಪ ಚರಿತ್ರೆಯನ್ನು ಉದಯರಾಗದಲ್ಲಿ ಕೆಳಕಂಡಂತೆ ಹಾಡಿರುವರು:—

ಭೂಪಾಳಿ — ಜಂಪೆತಾಳ

ನೆನೆಸಿದವರಘನಾಶನ| ದಾಸರ| ನೆನೆಸಿದವರಘನಾಶನ ||ಪ||

ನೆನೆಸಿದವರಘನಾಶ| ಅನುಮಾನವಿಲ್ಲಿದಕೆ|
ವನಜನಾಭನು ಒಲಿದು| ಘನವಾಗಿ ಪಾಲಿಸುವ
ದಿನದಿನದಿ ವಿಜಯರಾಯರ| ದಿವ್ಯತರವಾದ|
ಗುಣಕರ್ಮಗಳ ಬಿಡದೆ| ನೆನೆದು ಕೊಂಡಾಡಿರೊ || ಅ ||

ಆದಿಯಲಿ ಸುರಮುನಿಯ ಪಾದಸೇವೆಯಮಾಡಿ|
ಮೋದದಲಿ ಸುರಲೀಲ| ಎಂಬ ಕಪಿ ತ್ರೇತೆಯಲಿ|
ಆ ದ್ವಾಪರದಿ ನಿಕಂಪನನೆಂಬ ನಾಮದಲಿ|
ಶ್ರೀಧರನ ಸೇವಿಸುತಲಿ||

ಕಾದಿದ್ದು ಕಲಿಯುಗದಿ ಪುರಂದರ ದಾಸರ|
ಸ್ವಾದುವಚನವ ಕೇಳಿ ತುರುಕರುವಾಗಿದ್ದು|
ಖೇದವಿಲ್ಲದೆ ಜನಿಸಿ ಬರುತ ಬರುತಾ ಮತ್ತೆ
ಮೇದಿನೀ ಸುರಜನ್ಮದೀ ||೧||

ವರತುಂಗಭದ್ರ ತೀರದಗ್ರಾಮ ಅಶ್ವತ್ಥ ।
ನರಸಿಂಹ ಚೀಕಲಪರಿಯೆಂಬ ಗ್ರಾಮದಲಿ ।
ಇರುತಿಪ್ಪ ಶ್ರೀನಿವಾಸಪ್ಪ ದ್ವಿಜ ಕೂಸಮ್ಮ ।
ಗುರುಸೇವೆ ಮಾಡಿ ಮಾಡೀ ॥

ವರಪಡೆದು ಪಡೆದಳ್ಳೆ ಎರಡೊಂದು ಪುತ್ರರನು
ಹಿರಿಯಮಗ ದಾಸಪ್ಪನೆಂದು ಇವರ ನಾಮ ।
ಕರೆದು ಮುದ್ದಿಸಿ ಸಾಕಿ ಮುಂಜಿಮದುವೆಯ ಮಾಡಿ ।
ಇರುತಿರಲು ಕೆಲವು ಕಾಲ ॥ ೨ ॥

ಲೋಕಜನರಂತೆ ಲೌಕೀಕದೊಳು ಸಂಚರಿಸಿ
ಈ ಕಾಯಕೋಸುಗಾನೇಕ ಜನರ ಸೇವೆ ।
ಕಾಕಪ್ಪೆಯಾಗೆ ವಸ್ತ್ರಾನ್ನ ಕಾಣದೆ ಮರುಗಿ
ಸಾಕುವರಿಲ್ಲವೆನುತ ॥

ಬೇಕಾದ ದೇಶವನು ಚರಿಸುತಿರೆ ಒಂದು ಕಡೆ
ತಾಕಿ ಚೋರರು ಬಂದು ವಸ್ತ್ರಗಳನಪಹರಿಸೆ
ಯಾಕೆ ಬಂಧುಬಳಗವೆಂದೆನುತ ಅಲ್ಲಿಂದ
ನಾಕನದಿ ಮಿಾವೆನೆಂದು ॥ ೩ ॥

ಹಿರಿಯರಿಗೆ ಪೇಳದಲೆ ತೆರಳಿಯಾತ್ರೆಗೆ ಪೋಗಿ
ಎರಡೆಂಟುವತ್ಸರದ ತರಳ ಪ್ರಾಯದಲಿಂದ
ಸರುವ ತೀರ್ಥಕ್ಷೇತ್ರದಲಿ ಮಿಂದು ವಿಂಶತಿ। ವ
ತ್ಸರಕೆ ತಿರುಗಿ ಬಂದು ॥

ವರಮಾತೃಪಿತರು ಸಹೋದರರಿಂದ ಸಹವಾಗಿ
ಬೆರೆದು ಮಾನವರಂತೆ ಸಂಸಾರ ವೃತ್ತಿಯಲಿ
ಎರಡೆಂಟು ವರುಷವಿರುತಿದ್ದು ಮೆಲ್ಲನೆ ಹರಿಯ
ವರಕೃಪೆಯ ಪಡೆವೆನೆಂದು ॥ ೪ ॥

ಮತ್ತೆ ಪೊರಟರು ಶಿರಿ ಉತ್ತಮ ಶ್ಲೋಕ ಹರಿ ।
ಪೆತ್ತಗಂಗೆಯ ಸ್ನಾನಗಯದಲ್ಲಿ ಪಿಂಡವ ।
ನಿತ್ತು ಮರಳಿ ಬಂದು ವಾರಣಾಸಿಯಲ್ಲಿ
ಉತ್ತಮರ ಸಂಗದಿಂದ ॥

ನಿತ್ಯ ಸ್ನಾನಸಂಧ್ಯ ಶುಚಿಯಾಗಿ ಮಲಗಿರಲು
ಸತ್ಯವಾಗೀ ಸ್ವಪ್ನದಲಿ ನರಹರಿಯು ಪಡೆದ
ಪುತ್ರನೆಬ್ಬಿಸಿದಂತೆ ದಾಸರ ರೂಪಿನಲಿ
ಹತ್ತಿಗರೆದು ಕರುಣದಿ ॥ ೫ ॥

ಸುರನದಿಯ ದಾಟಿಸಿ ಕರೆತಂದು ಆಚೆಯ
ಲ್ಲಿರುತಿಪ್ಪ ವ್ಯಾಸ ಕಾಶಿಯಪುರದ ಧೊರೆಯಾದ
ಶಿರಿ ವಾಸುದೇವ ಬಲು ಸುರರ ಸಂದಣಿಯೊಳಗೆ
ಪರನಾಗಿ ಕುಳಿತಿರಲು ॥

ಭರದಿಂದ ತೋರಿ ಸುಸ್ಥಿರವಾಗಿ ಸ್ತುತಿಸೆನುತ
ಕರೆದುಪೇಳಿ ಅವರ ಪರಿಯಿಂದಲಾದರಿಸಿ
ಹರುಷದಿಂದಲಿ ನೀನು ಹರಿ ಚರಿತೆ ಪೇಳೆನುತ
ಕರುಣದಿಂದರುಹಲು ॥ ೬ ॥

ಎಚ್ಚೆತ್ತು ನೋಡಿ ಶಿರಿ ಅಚ್ಯುತನ ಮಹಿಮೆಯನು
ಬೆಚ್ಚಿ ಬೆದರಿದೆನೆನುತ ಹೆಚ್ಚಿ ಸಂತೋಷದಲಿ
ಕೊಚ್ಚಿಪೋದವು ಮನದ ಹೆಚ್ಚಿದ ಪಾಪಗಳು
ತಚ್ಚಿತ್ತದಲ್ಲಿ ಹರಿಯ ॥

ನಿಚ್ಚ ಮನಬಂದಂತೆ ಅಚ್ಚ ಸುಖತೀರ್ಥಮತ
ನೆಚ್ಚಿ ಕವನವಪೇಳಿ ಸುಚ್ಚುಮನವುಳ್ಳವರ
ನಿಚ್ಚಟದಲಿ ತಿದ್ದಿ ಅಚ್ಚ ಜ್ಞಾನಭಕ್ತಿ
ಮೆಚ್ಚುಗಾಣಿಕೆಯಿತ್ತರು ॥ ೭ ॥

ತೃತಿಯ ಕಾಶೀಯಾತ್ರೆ ಮಾಡಿ ಬಂದಾಗ ಉ
ನ್ನತವಾಗಿ ನಭಗಂಗೆ ಉಕ್ಕೇರಿ ಗಗನಕ್ಕೆ
ಅತಿಶಯದಿ ಬಂದು ಮತ್ಸ್ಯೋದರಿಯ ನಾಮದಲಿ
ಪ್ರತಿಯಿಲ್ಲದಂತೆ ತೋರೆ ॥

ತುತಿಸಿ ಅಲ್ಲಿಂದ ಸೇತುಸ್ನಾನಕಂಬಂದು
ರತಿಯಿಂದಲೇ ಮಾಡಿ ಸರ್ವರನು ಉದ್ಧರಿಸಿ
ಮಿತಿಯಿಲ್ಲದಲೆ ಸೇತುಕಾಶಿ ಪರಿಯಂತರ
ಕಥೆಯಿಂದ ಕೀರ್ತಿಪಡೆದ ॥ ೮ ॥

ಲೋಕೋಪಕಾರಕ್ಕೆ ಹದಿನೆಂಟುವತ್ಸರಾ
ನೇಕ ತೀರ್ಥಕ್ಷೇತ್ರ ತಿರುಗಿ ವೈರಾಗ್ಯದಲಿ
ಶ್ರೀಕಾಂತಹರಿಯ ಮನದೊಳಗೆ ಧ್ಯಾನಿಸಿಕೊಳುತ
ಪ್ರಾಕೃತರಸಂಗ ತೊರೆದು ॥

---

ಈ ಪದದ ಕಡೆಯ ನುಡಿಯು ಸಂವತ್ಸರ ಸ್ಥಾನವನ್ನು ಚರ್ಚಾಸ್ಪದವಾಗಿರುವುದ ರಿಂದ ಹಾಗೇ ಬಿಟ್ಟಿದೆ. ಈ ಪದದಲ್ಲೂ ಮತ್ತು ಜಗನ್ನಾಥದಾಸರ ಪದದಲ್ಲೂ ಜನರು ಯುವ ಸಂವತ್ಸರವೆಂದು ಹಾಡುವ ಪರಿಪಾಠವಿದೆ. ಮೂಲಸ್ಥಳದ ಪ್ರತಿಯಿಂದ ಉದ್ಧರಿಸಿ ಹಾಡುವೆವೆಂದು ಯಾರಾದರೂ ಹೇಳಿದರೆ, ಮೂಲಸ್ಥಳದ ಪ್ರತಿಯಾದರೂ ಯಾರೋ ಬರೆ ದಿಟ್ಟ ಪ್ರತಿಯಾಗಿರುವುದರಿಂದಲೂ, ಅಲ್ಲೇ ಲೇಖಕರ ದೋಷವಿರಬಹುದಾದ್ದರಿಂದಲೂ ಅದರಮೇಲೆ ಭರವಸೆಯಿಡುವಂತಿಲ್ಲ. ಏಕೆಂದರೆ ವಿಜಯದಾಸರಿಗಿಂತ ಬಹಳ ಚಿಕ್ಕವರು ಜಗನ್ನಾಥದಾಸರು. ಜಗನ್ನಾಥದಾಸರೇ ವಿಜಯರಾಯರ ನಿರ್ಯಾಣದ ಪದಮಾಡಿರುವರೆಂದು ಜನರು ಹಾಡುವುದರಲ್ಲಿ ಯುವ ಸಂವತ್ಸರವಿದ್ದರೆ ಶುಕ್ಲ ಸಂವತ್ಸರದಲ್ಲಿ ನಿರ್ಯಾಣಮಾಡಿದ ಜಗನ್ನಾಥದಾಸರು ಆ ಪದವನ್ನು ಹಾಡಿರಲು ಶಕ್ಯವಿಲ್ಲ. ಶುಕ್ಲವಾದ ನಂತರ ಅರನೆಯ ದಾಗಿ ಯುವ ಸಂವತ್ಸರ ಬರುತ್ತದೆ. ಅರವತ್ತು ವರುಷಗಳ ಹಿಂದಿನ ಯುವವೆನ್ನುವುದಾ ದರೆ ವಿಜಯದಾಸರು ಗೋಪಾಲದಾಸರಿಂದ ಜಗನ್ನಾಥದಾಸರಿಗೆ ಅಯುರ್ದಾನ ಮಾಡಿಸಿದ ಕಾಲಕ್ಕೆ ವ್ಯತ್ಯಾಸ ಬರುತ್ತದೆ. ಆದ್ದರಿಂದ ವಿಜಯದಾಸರ ನಿರ್ಯಾಣವು ಯುವ ಸಂವತ್ಸ ರವೆಂದು ಹೇಳುವದು ಬಲು ಬಾಧಕವಾಗುತ್ತದೆ.

ವೈಕುಂಠ ಯಾತ್ರೆಯನು . . . ಸಂವತ್ಸರದ ಕಾ
ರ್ತಿಕ ಶುದ್ಧ ದಶಮಿ ಗುರುವಾರ ಪ್ರಹರದಲಿ
ರಾಕೇಂದು ಬಿಂಬ ಹಯವದನ ವಿಠಲನಂಘ್ರಿ
ಜೋಕೆಯಲಿ ಸೇರಿದರು ॥ ೯ ॥

## ಕಲ್ಲೂರು ಸುಬ್ಬಣ್ಣಾಚಾರ್ಯರು

ಆ ಕಾಲದಲ್ಲಿ ಕಲ್ಲೂರಿನಲ್ಲಿ ಸುಬ್ಬಣ್ಣಾಚಾರ್ಯರೆಂಬ ಸುಧಾಪಾಠಕರಿದ್ದರು. **'ಸುಧಾಯಾಮದ್ವಿತೀಯೋಸ್ಮಿ ಯಾದಪತ್ಯೇ ವಿಶೇಷತಃ'** ಎಂಬ ಪ್ರತಿಜ್ಞಾಪಾಲಕ ಪಂಡಿತರನೇಕರಲ್ಲಿ ಆಚಾರ್ಯರೊಬ್ಬರಾಗಿದ್ದರು. **'ಸುಧಾವಾ ಪಠನೀಯಾ ವಸುಧಾವಾ ಪಾಲನೀಯಾ'** ಎಂಬುವದು ಆ ಕಾಲದ ಗಾದೆಯಾಗಿತ್ತು. ವಿದ್ವಾಂಸರಿಗೆ ಪುಣೆಯ ಪೇಷ್ವಾಯಿಗಳು ಆಶ್ರಯದಾತರಾಗಿದ್ದರು. ಆಚಾರ್ಯರಿಗೆ ವಿಜಯದಾಸರ ಪ್ರಾಬಲ್ಯ ಸಹನೆಯಾಗಿರಲಿಲ್ಲ. ಕೂಸೀಮುಗ ದಾಸನ ಪ್ರಾಬಲ್ಯವೇತರದೆಂದು ದಾಸರನ್ನು ಮನಬಂದಂತೆ ನಿಂದಿಸುತ್ತಿದ್ದರು. ದಾಸರಿಗೀ ಸಂಗತಿ ತಿಳಿದರೂ ಪ್ರತಿ ಮಾತಾಡದೆ ಸುಮ್ಮನಿರುತ್ತಿದ್ದರು. ಸುಧಾಮಂಗಳಕ್ಕೆ ಸಾವಿರಾರು ಜನರು ಸೇರಿದರು. ಮಂಗಳಭಕ್ಷ್ಯವು ಮಂಡಿಗೆಯಾಗಬೇಕೆಂಬ ವ್ಯವಸ್ಥೆಯಾಯಿತು. ಮೂರುಸಾವಿರ ಮಂಡಿಗೆಗಳನ್ನು ಮಾಡಿಸಬೇಕೆಂದು ಪ್ರಸಿದ್ಧನಾದೊಬ್ಬ ಪಾಚಕನನ್ನು ಗೊತ್ತುಮಾಡಿದರು. ಮಂಗಳಕ್ಕೆ ಪೂರ್ವದಿನವೇ ಬಂದಿರಬೇಕಾಗಿದ್ದ ಪಾಚಕನು ದೇಹಾಲಸ್ಯ ಕಾರಣದಿಂದ ಮಂಗಳದ ದಿನ ಪ್ರಾತಃಕಾಲ ಎಂಟು ಗಂಟೆಯಾದರೂ ಬರಲಿಲ್ಲ. ಆಚಾರ್ಯರೂ ವ್ಯವಸ್ಥಾಪಕರೂ ಗತಿಯೇನೆಂದು ಚಿಂತಾಕ್ರಾಂತರಾದರು. ಈ ಸಂಗತಿಯನ್ನು ಜ್ಞಾನದೃಷ್ಟಿಯಿಂದ ತಿಳಿದ ವಿಜಯರಾಯರು ಉತ್ಸವ ಭಂಗವಾಗಬಾರದೆಂದು ಪಾಚಕನ ವೇಷತಾಳಿ ಕಲ್ಲೂರಿಗೆ ಬಂದರು. ವ್ಯವಸ್ಥಾಪಕರನ್ನು ಕಂಡು—'ನೀವು ಚಿಂತಿಸಬೇಡಿ, ಸಕಾಲದಲ್ಲಿ ಮೂರಲ್ಲ ನಾಲ್ಕು ಸಾವಿರ ಮಂಡಿಗೆಗಳನ್ನು ಮಾಡುವೆ'ನೆಂದು ಭರವಸೆಕೊಟ್ಟರು. ವೇಷಧಾರಿಯು ವಿಜಯದಾಸರೆಂದು ಯಾರಿಗೂ ತಿಳಿಯಲಿಲ್ಲ. ದಾಸರು ತಮ್ಮ ರೂಪವನ್ನು ಆಚ್ಛಾದನೆಮಾಡಿಕೊಂಡು, ಕ್ಲುಪ್ತ ಸಂಖೆಯ ಮಂಡಿಗೆಗಳನ್ನು ಮಾಡಿ, ಆಚಾರ್ಯರ ಸುಧಾ

ನುವಾದ ಸಭೆಯಲ್ಲಿ ಬಂದು ಕುಳಿತರು. ತುಂಡುಪಂಜೆಯನ್ನುಟ್ಟು, ಹರಕು ಚೌಕವನ್ನು ಹೆಗಲಮೇಲೆ ಹಾಕಿಕೊಂಡಿರುವ ಪಾಚಕನು ವಿಜಯದಾಸ ರೆಂದು ಕೆಲಕೆಲ ಜನರಿಗೆ ಗೊತ್ತಾಯಿತು. ಜನರಲ್ಲಿ 'ವಿಜಯದಾಸರು ವಿಜಯದಾಸರು' ಎಂಬ ಗುಜು ಗುಜು ಬಲವಾಯಿತು. ಪ್ರಕಟವಾಗಿ ಎಲ್ಲರ ಕಣ್ಣಿಗೂ ಪಾಚಕನು ವಿಜಯದಾಸರಾಗಿ ಕಾಣಿಸಿದನು.

ವ್ಯವಸ್ಥಾಪಕ—(ದಾಸರ ಪಾದಗಳಿಗೆರೆಗಿ) ಇದೇನು! ಈ ವೇಷದಿಂದ ನಮ್ಮನ್ನು ಋಣಿಗಳನ್ನಾಗಿ ಮಾಡೋಣವಾಯಿತು! ನಮ್ಮ ಅಪರಾಧವನ್ನು ಕ್ಷಮಿಸಬೇಕು. ತಮ್ಮ ಗುರ್ತು ಮೊದಲು ನಮಗೆ ತಿಳಿಯಲಿಲ್ಲ.

ವಿಜದಾಸರು—ನಮ್ಮ ಗುರ್ತಿನಿಂದೇನಾಗಬೇಕು? ನಾನು ,ಕೂಸೀಮಗ ದಾಸನೆಂಬುವದು ಆಚಾರ್ಯರು ಮೊದಲಾಗಿ ಎಲ್ಲರೂ ಬಲ್ಲರು. ಉತ್ಸವಭಂಗವಾಗಬಾರದೆಂದು ಬಂದೆ! ಮಾಡಬೇಕಾದ ಸೇವಾ ಮಾಡಿದೆ! ನಾನು ನಿಮ್ಮನ್ನು ಕ್ಷಮಿಸಲು ಅಪರಾಧವೇನು ಮಾಡಿರುವಿರಿ?

ವ್ಯವಸ್ಥಾಪಕ—ಮಹಾಸ್ವಾಮಿ, ನಾನು ತಮ್ಮನ್ನು ಎಂದಿಗೂ ಕೂಸೀಮಗ ದಾಸನೆಂದವನಲ್ಲ. ಮಂದಮತಿಗಳಾರಾದರೂ ಬಿಡಿಮಾತನಾಡಿದ್ದರೆ ಅಂಥವರ ಪರವಾಗಿ ನಾನು ಕ್ಷಮೆ ಬೇಡುವೆನು.

ವಿಜಯದಾಸರು—ಹಾಗಾಡಿದರೆ ಅಪರಾಧವೆಂದು ನಾನೆಣಿಸಿಲ್ಲ. ಪ್ರಕೃತ ಸುಧಾನುವಾದ ಶ್ರವಣಮಾಡೋಣ!

ಅಷ್ಟರಲ್ಲಿ ಸುಬ್ಬಣ್ಣಾಚಾರ್ಯರಿಗೆ ಪಾಚಕ ವೇಷಧಾರಿಯು ವಿಜಯದಾಸರೆಂದು ಗೊತ್ತಾಯಿತು. ದಾಸರು ಆಚಾರ್ಯರ ವ್ಯಾಸಪೀಠದ ಬಳಿಗೆ ಬಂದು ವಂದನೆಮಾಡಿದರು. ಆಚಾರ್ಯರ ನೀವೋ ಆ ವಿಜಯದಾಸರೆಂಬುವರು? ಎಂದು ಕುಶಲ ಪ್ರಶ್ನೆ ಮಾಡಿದರು. ದಾಸರು,-'ಅಹುದು, ನಾನೇ ಆ ವಿಜಯದಾಸ!'

ವಿಜಯದಾಸರು—ಆಚಾರ್ಯರು ಪರಮಾನುಗ್ರಹಮಾಡಿ ನ್ಯಾಯಸುಧೆಯ ಒಂದು ವಾಕ್ಯವನ್ನುಪದೇಶಮಾಡಬೇಕು.

ಆಚಾರ್ಯರು— ನಿಮಗೆ! ನ್ಯಾಯ ಸು ಧೆ ಯ ವಾ ಕ್ಯ! ನ್ಯಾಯ ಸುಧೆಯೆಂದರೇನೆಂದು ತಿಳಿದಿರಿ ? ನಿಮಗೆ ಗ್ರಂಥಗಳೇನೇನಾಗಿವೆ ?

ವಿಜಯದಾಸರು—ನನಗೇನಾಗಿದೆ ಸ್ವಾಮಿಾ, ದಾಸಗೆ?

ಆಚಾರ್ಯರು—ಕಾವ್ಯವಾಗಿದೆಯೆ ?

ವಿಜಯದಾಸರು—ಇಲ್ಲ.

ಆಚಾರ್ಯರು—ಆಚಾರ್ಯರ ಭಾಷ್ಯ ಶ್ರವಣವಾದರೂ ಮಾಡಿದ್ದೀರಾ ?

ವಿಜಯದಾಸರು—ಇಲ್ಲ.

ಆಚಾರ್ಯರು—ಸುಧಾವಾಕ್ಯವನ್ನು ಉಚ್ಚಾರಮಾಡಲು ನಿಮಗೇನಧಿಕಾರ ? ನಿಮ್ಮಂಥವರಿಗೆ ಅರ್ಥವಾಗುವದೆ ? ನಿಮ್ಮ ಕನ್ನಡ ಪದವೆಂದು ತಿಳಿದಿರಾ ?

ವಿಜಯದಾಸರು—ಅರ್ಥ ಅನರ್ಥಗಳೊಂದೂ ಬೇಡ. ಗುರೂಪದೇಶವೆಂದು ಒಂದು ವಾಕ್ಯವನ್ನನುಗ್ರಹಿಸಿದರೆ ಪಠಿಸಿಕೊಂಡಿರುವೆನು.

ಆಚಾರ್ಯರು—ಹಾಗೆ ಪಠಿಸುವದಕ್ಕೆ ಹೆಂಗಸರ ಹಾಡಲ್ಲ. ಕಾಲಿಗೆ ಗೆಜ್ಜೆಯನ್ನು ಕಟ್ಟಿಕೊಂಡು ಕುಣಿಯುವದಕ್ಕೆ ದಾಸರಪದವಲ್ಲ.

ನೆರೆದಿದ್ದ ಜನರಿಗೆ ಆಚಾರ್ಯರ ಪರುಷವಾಣಿಯು ವಿಷಾದಜನಕವಾಯಿತು. ಅವರು–'ಆಚಾರ್ಯ ಸ್ವಾಮಿಾ, ದಾಸರು ದೊಡ್ಡವರು. ದಾಸರಲ್ಲಿ ವಿಶ್ವಾಸಮಾಡುವ ಜನರು ಈ ಸಭೆಯಲ್ಲಿ ಬಹಳ ಜನರಿದ್ದಾರೆ. ಅವರಿಗೆಲ್ಲಾ ಅಸಮಾಧಾನವಾಗುತ್ತದೆ. ಪ್ರಕೃತ ಪ್ರಸ್ತಾವನೆಯನ್ನು ಸಂಕ್ಷೇಪ ಮಾಡಿ ತಮ್ಮ ಸುಧಾನುವಾದ ಮಾಡಬೇಕು. ಮಹೋತ್ಸವವನ್ನು ಸಾಂಗಗೊಳಿಸಬೇಕು' ಎಂದು ಬೇಡಿಕೊಂಡರು.

ಆಚಾರ್ಯರು—'ನಾವಾಡಿದ ಮಾತಿನಲ್ಲಿ ತಪ್ಪೇನು ? ದಾಸರು ದೊಡ್ಡವರಾದರೆ—ದಾಸರಲ್ಲಿ ಜನರ ವಿಶ್ವಾಸವಿದ್ದರೆ—ನಮಗದರಿಂದ ಅಸೂಯೆಯಿಲ್ಲ. ಶಾಸ್ತ್ರದ ಮಾತಿಗೆ ಬಂದರೆ ನಾವಾಡಬೇಕಾದ ಮಾತನ್ನು ಆಡಬೇಕಾಗುವದು. ಸುಧೆಯೆಂದರೆ ಸಾಮಾನ್ಯ ಗ್ರಂಥವಲ್ಲ. ಸುಧಾವಾಕ್ಯವು ಅಸಂಸ್ಕಾರಿಗಳಿಗೆ ಅರ್ಥವಾಗುವದಲ್ಲ. ಅದೇನು ಪಾಮರ ಜನರ ಕನ್ನಡ

ಪದವಲ್ಲ. ನಿಮ್ಮ ದಾಸರು ಸುಧಾವಾಕ್ಯವನ್ನುಪದೇಶಮಾಡೆಂದು ಏಕೆ ಕೇಳಬೇಕು ? ಅದರ ಅರ್ಥ ಅವರಿಗಾಗುವದಿದ್ದರೆ ಈಗಲೇ ನಮ್ಮಲ್ಲಿ ಶಾಂತಿ ಹಾಕಲಿ!' ಎಂದು ನುಡಿದರು.

ವಿಜಯದಾಸರು—'ಆಚಾರ್ಯರ ಕೋಪಕ್ಕೆ ನಾನು ಅರ್ಹನಲ್ಲ. ನಾನು ಬಂದದ್ದು ಮಹಾಪ್ರಸಾದಕ್ಕೆ ! ಏನೋ ಒಂದು ವಾಕ್ಯ ಉಪದೇಶವಾದರೆ ಆಗಲೆಂದು ಭಕ್ತಿಯಿಂದ ಬೇಡಿದೆ. ಆಚಾರ್ಯರ ಚಿತ್ತಕ್ಕೆ ಬರಲಿಲ್ಲ. ಉತ್ಸವಭಂಗವಾಗದಂತೆ ಮುಂದೆ ಸಾಗಲಿ, ಆಚಾರ್ಯರ ಅನುವಾದ' ವೆಂಧರು.

ಆಚಾರ್ಯರು ಅಷ್ಟಕ್ಕೇ ಸುಮ್ಮನಾಗಲಿಲ್ಲ.

ಆಚಾರ್ಯರು—ದಾಸರೇ ! ಸುಧಾವಾಕ್ಯವನ್ನು ಬೇಡುವದಕ್ಕೆ ನಿಮಗೇನಧಿಕಾರ ? ನಿಮ್ಮ ವ್ಯಾಸಂಗವೇನು ? ನಿಮ್ಮ ಗುರುಗಳಾರು ?

ವಿಜಯದಾಸರು—ಆಚಾರ್ಯರೇ ! ಸಿಟ್ಟಾಗಬಾರದು. ನಾನು ಅಧಿಕಾರಿಯಲ್ಲ. ನನ್ನ ಗುರುಗಳೆಂದರೆ ದಾಸರೊಬ್ಬರು ವ್ಯಾಸರೊಬ್ಬರು. ಅವರ ಮಾತಿನಿಂದ ದಾಸನಾದವನು ನಾನು. ನನ್ನನ್ನು ಕ್ಷಮಿಸಬೇಕು.

ಆಚಾರ್ಯರು—ದಾಸರ ಜೊತೆಗೆ ವ್ಯಾಸರನ್ನೂ ಕರೆತಂದಿರಾ ? ನಟವಿಟಗಾಯಕರಂತೆ ನರ್ತನರಂಗಕ್ಕೆ ?

ವಿಜಯದಾಸರು—ಆಚಾರ್ಯರಿಗಷ್ಟೇಕೆ ಅನುಮಾನ ? ವ್ಯಾಸರೂ ನಟರು. ಶ್ರೀಕೃಷ್ಣನೊಬ್ಬ ನಟ. ಶ್ರೀಮದಾಚಾರ್ಯರ್ಯರೊಬ್ಬ ನಟರು. ಸುಧಾ ಗ್ರಂಥಕರ್ತರಾದ ಟೀಕಾ ಕೃತ್ಪಾದರು ನಟರು. ನರಹರಿತೀರ್ಥರೂ ಶ್ರೀಪಾದರಾಯರೂ ವ್ಯಾಸರಾಯರೂ ರಾಘವೇಂದ್ರಸ್ವಾಮಿಗಳೂ ಎಲ್ಲ ನಟರೆ !

ಆಚಾರ್ಯರು—ನಾರಾಯಣ ! ನಾರಾಯಣ ! ಒಳ್ಳೇ ಯೋಚನೆ ಮಾಡಿದಿರಿ ! ಎಲ್ಲರನ್ನೂ ದಾಸಕೂಟಕ್ಕೆ ಸೇರಿಸಿದಿರಿ ! ನಿಮ್ಮ ಸಾಹಸ ದೊಡ್ಡದು ! ಚಿಂತೆಯಿಲ್ಲ ! ಸುಧಾವಾಕ್ಯ ನಿಮಗೆ ಅರ್ಥವಾದೀತೆ ?

ವಿಜಯದಾಸರು— ಉಪದೇಶಕರು ಅರ್ಥಮಾಡಕೊಂಡಿದ್ದರೆ ಶಿಷ್ಯರಿಗೆ ಅರ್ಥವಾಗದೆ ಏನು ?

ಆಚಾರ್ಯರು—(ಸಿಟ್ಟಿನಿಂದ) ನಮಗೇ ಅರ್ಥವಾಗಿಲ್ಲವೆನ್ನುವಿರೋ?

ವಿಜಯದಾಸರು—ನಾನು ಹಾಗೆ ಹೇಳುವದಿಲ್ಲ. ಸರ್ವಜ್ಞಶಾಸ್ತ್ರವು 'ಬಾಲ ಸಂಘಮಪಿಬೋಧಯತಿಭೃಶಂ, ದುರ್ನಿರೂಪವಚನಂಚ ಪಂಡಿತೈಃ' ಎಂದು ಕೇಳಿರುವೆನು.

ಆಚಾರ್ಯರ ಕೋಪ ಬಲವಾಯಿತು. ದಾಸರುಗಳಿಂದ ಶಾಸ್ತ್ರ ಮರ್‍ಯಾದೆ ಕೆಟ್ಟಿತೆಂದರು. ಈಗ ಅನುವಾದಮಾಡಿ ಫಲವಿಲ್ಲವೆಂದು ತಟಸ್ಥ ರಾಗಿ ಕುಳಿತರು. ಮುಂದೇನು ಮಾಡಬೇಕೆಂದು ಜನರು ತಿಳಿಯದಾದರು.

ವಿಜಯದಾಸರು ಸಭೆಯಿಂದೆದ್ದು ಪಾಕಶಾಲೆಗೆ ನಡೆದರು. ನೀರು ತರುತ್ತಿದ್ದ ಪರಿಚಾರಕನ ಕೈಹಿಡಿದು ಮತ್ತೆ ಸಭೆಗೆ ಬಂದರು. ಎಲ್ಲರೂ ಕೇಳುವಂತೆ—'ಎಲಪ್ಪಾ ನಿನ್ನ ಶಾಖೆಯಾವುದೆಂದು ಕೇಳಿದರು. ಪರಿಚಾರ ಕನು ಕಣ್ವಶಾಖೆಯೆಂದನು. 'ನಿನಗೆ ಸಂಧ್ಯಾವಂದನೆ ಬರುವದೇ? ನಿನ್ನ ಪ್ರವರವೇನು ಹೇಳುವೆಯಾ' ಎಂದು ಮತ್ತೆ ಕೇಳಿದರು. ಅವನು-'ಸ್ವಾಮಿಾ ನನಗೊಂದೂ ತಿಳಿಯದೆಂದನು. ಸ್ವಲ್ಪ ಹೊತ್ತು ಮಾತಾಡಿಸಿದುದರಲ್ಲಿ ಅವನು ಏನೂ ತಿಳಿಯದ ಶುಂಠನೆಂದು ಜನರಿಗೆ ಗೊತ್ತಾಯಿತು. ವಿಜಯ ದಾಸರು ಅವನ ತಲೆಯಮೇಲೆ ಅಕ್ಷತೆಯ ಕಾಳನ್ನು ಹಾಕಿ ಅವನ ಕೈಯನ್ನು ತಮ್ಮ ಕೈಯಿಂದ ಹಿಡಿದು— 'ಎಲವೊ ! ನೀನು ಸುಧಾನುವಾದಮಾಡು. ಯಾದವಾರ್ಯರಂಥಾ ಟಿಪ್ಪಣಿಕಾರರಿಗೆ ಗಹನವೆನಿಸಿರುವ ಸ್ಥಳಗಳಾವವು ? ಆಚಾರ್ಯರಿಗೆ ಅರ್ಥವಾಗದ ಸ್ಥಳಗಳಾವವು? ಎಲ್ಲವನ್ನೂ ವಿಶದೀಕರಿಸು' ಎಂದು ನುಡಿದರು.

ವಿಜಯದಾಸರ ಪರಮಾನುಗ್ರಹದಿಂದ ಪರಿಚಾರಕನು—'ಶ್ರೀಯಃ ಪತ್ಯೇ' ಎಂಬ ಮಂಗಳಾಚರಣ ಶ್ಲೋಕದಿಂದಾರಂಭಿಸಿ, ಜಯತೀರ್ಥರು ಎಷ್ಟು ನೈಚ್ಯಾನುಸಂಧಾನಪೂರ್ವಕ—

ನಶಬ್ದಾಬ್ಧೌ ಗಾಢಾ, ನಚನಿಗಮ ಚರ್ಚಾಸುಚತುರಾ,
ನಚನ್ಯಾಯೇ ಪ್ರೌಢಾ, ನಚವಿದಿತವೇದ್ಯಾ ಅಪಿವಯಂ ||
ಪರಂ ಶ್ರೀಮತ್ಪೂರ್ಣಪ್ರಮತಿ ಗುರುಕಾರುಣ್ಯಸರಣಿಂ,
ಪ್ರಪನ್ನಾಮಾನ್ಯಾಸ್ಮಃ, ಕಿಮುಪಿಚವದಂತೋಽಪಿ ಮಹತಾಂ || ೮ ||

ಎಂಬ ಶ್ಲೋಕವನ್ನು ಬರೆದು ಸುಧಾರಂಭಮಾಡಿರುವರೋ ಅದನ್ನು ವಿವರಿಸಿ, ಪರಿಮಳಕಾರರು, ಯಾದಪತ್ಯಕಾರರು ಮೊದಲಾದ ಟಿಪ್ಪಣಿಕಾರರ ಟಿಪ್ಪಣಿಗಳಲ್ಲಿ ಆಚಾರ್ಯರಿಗೆ ಮನಗಾಣದಿದ್ದ ಸಂಗತಿಗಳನ್ನೆಲ್ಲಾ ಪಟಪಟನೆ ಅನುವಾದಮಾಡಿದನು.

ವಿಜಯದಾಸರು ಕೈಬಿಟ್ಟಕೂಡಲೆ ಪರಿಚಾರಕನು ಮೊದಲಿನಂತೆ ಶುಂಠನಾಗಿ ಕಾಣಿಸಿದನು. ಜನರಿಗೆ ಪರಮಾಶ್ಚರ್ಯವಾಯಿತು. ಆಚಾರ್ಯರೂ ಪರಿಚಾರಕನ ಅನುವಾದಕ್ಕೆ ತಲೆದೂಗಬೇಕಾಯಿತು. ದಾಸರಲ್ಲಿ ಭಗವದನುಗ್ರಹವಿದೆಯೆಂದು ಒಪ್ಪಬೇಕಾಯಿತು. ಮಂಗಳಾನಂತರ ಆಚಾರ್ಯರು ಏಕಾಂತದಲ್ಲಿ ದಾಸರನ್ನು ಕಂಡು ಶರಣಾಗತರಾದರು. ನನ್ನನ್ನು ಶಿಷ್ಯನನ್ನಾಗಿ ಮಾಡಿಕೊಂಡು ಅಪರೋಕ್ಷ ಕೊಡಬೇಕೆಂದು ಪ್ರಾರ್ಥಿಸಿದರು. ವಿಜಯರಾಯರು ಆಚಾರ್ಯರಲ್ಲಿ ಚೆನ್ನಾಗಿ ವೈರಾಗ್ಯೋದಯವಾಗಿರುವದನ್ನು ಕಂಡು, ತಮ್ಮ ಜೊತೆಯಲ್ಲಿ ಕೆಲವುಕಾಲ ನಿಲ್ಲಿಸಿಕೊಂಡು, ಕಂಕಣಾಕಾರ ಸುಳಾದಿಯನ್ನು ಉಪದೇಶಮಾಡಿದರು. ಆಚಾರ್ಯರು ಭಗವದುಪಾಸನೆಯಿಂದ ಭಗವದಪರೋಕ್ಷಿಗಳಾದರು. ಹರಿದಾಸನಾಗಿರಬೇಕೆಂಬ ಅಭಿಲಾಷೆ ಆಚಾರ್ಯರಿಗೆ ಬಹಳವಾದುದರಿಂದ ವಿಜಯರಾಯರು ಅವರಲ್ಲಿ ಕೃಪೆ ಮಾಡಿ ಸಂಪ್ರದಾಯಾನುಸಾರ ಹರಿದಾಸ ಪೀಠದಲ್ಲಿ ಅಭಿಷೇಕಮಾಡಿ, 'ವ್ಯಾಸವಿಠಲ' ಎಂಬ ಅಂಕಿತವನ್ನು ಕರುಣಿಸಿದರು. ಪ್ರಖ್ಯಾತ ಸುಬ್ಬಣ್ಣಾಚಾರ್ಯರು ಹರಿದಾಸರಾಗಿ ವಿಜಯದಾಸರನ್ನು—

## ಗೀತೆಯ ಮಟ್ಟು, ರೂಪಕತಾಳ

ಸ್ಮರಿಸಿ ಬದುಕಿರೋ ದಿವ್ಯಚರಣಕೆರಗಿರೋ
ದುರಿತ ತರಿದು ಪೊರೆವ ವಿಜಯ ಗುರುಗಳೆಂಬರ || ಪ ||

ದಾಸರಾಯನಾ ದಯವ । ಸೂಸಿಪಡೆದನಾ ।
ದೋಷರಹಿತನಾ ಸಂ । ತೋಷ ಭರಿತನಾ ॥ ೧ ॥

ಜ್ಞಾನವಂತನಾ ಬಲುನಿದಾನಿ ಶಾಂತನಾ
ಮಾನವಂತನಾ ಮಹಪದಾನ್ಯದಾಂತನಾ ॥ ೨ ॥

ಹರಿಯ ಭಜಿಸುವಾ । ನರ ಹರಿಯ ಯಜಿಸುವ
ದುರಿತ ತ್ಯಜಿಸುವಾ ಜನಕೆ । ಹರುಷ ಸುರಿಸುವ ॥ ೩ ॥

ಮೋದಭರಿತನಾ ಪಂಚ । ಭೇದವರಿತನಾ
ಸಾಧು ಚರಿತನಾ ಮನ ವಿ । ಷಾದ ಮರೆತನಾ ॥ ೪ ॥

ಇವರ ನಂಬಿದಾ ಜನಕೆ ಭಯವದೆಂಬುದೂ
ಹವಣವಾಗದೋ ನಮ್ಮವರ ಮತವಿದೂ ॥ ೫ ॥

ಪಾಪಕೋಟಿಯಾ ರಾಶಿ ಲೇಪವಾಗದೋ
ತಾಪ ಕಳೆವನೋ ಬಲು ದಯಾಪಯೋನಿಧೀ ॥ ೬ ॥

ಕವನರೂಪದೀ ಹರಿಯ ಸ್ತವನಮಾಡಿದಾ
ಭುವನ ಬೇಡಿದಾ ಮಾ । ಧವನ ನೋಡಿದಾ ॥ ೭ ॥

ರಂಗನೆಂದನಾ ಭವವು ಹಿಂಗಿತೆಂದನಾ
ಮಂಗಳಾಂಗನಾ ಅಂತ । ರಂಗವರಿದನಾ ॥ ೮ ॥

ಕಾಶಿನಗರದಲ್ಲಿದ್ದ ವ್ಯಾಸದೇವನಾ । ದಯವ ।
ಸೂಸಿ ಪಡೆದನಾ ಉಲ್ಲಾಸತನದಲೀ ॥ ೯ ॥

ಚಿಂತೆ ಬೇಡಿರೋ ನಿಶ್ಚಿಂತರಾಗಿರೋ
ಶಾಂತಗುರುಗಳಾ ಪಾದವಿಂತು ನಂಬಿರೋ ॥ ೧೦ ॥

ಖೇದವಾಗದೋ ನಿಮಗೆ ಮೋದವಾಹುದೋ
ಆದಿದೇವನಾ ಸುಪ್ರಸಾದವಾಹುದೋ ॥ ೧೧ ॥

ಪಾಪ ತಡೆವನೂ ಬಂದ । ಪಾಪ ಕಡಿವನೂ ।
ಶ್ರೀಪತಿಯ ಪಾದಾಸ । ಮೀಪವಿಡುವನೂ ॥ ೧೨ ॥

ಗಂಗೆ ಮಿಂದರೇ ಮಲವು ಹಿಂಗಿತಲ್ಲದೇ
ರಂಗನೊಲಿಯನೋ ಭಕ್ತರಸಂಗ ದೊರಕದೇ || ೧೩ ||

ವೇದವೋದಲೂ ಬರಿದೆ ವಾದಮಾಡಲೂ
ಹಾದಿಯಾಗದೋ ಬುಧರ ಪಾದ ನಂಬದೇ || ೧೪ ||

ಲೆಕ್ಕವಿಲ್ಲದಾದೇಶ ತುಕ್ಕಿಬಂದರೂ
ದುಃಖವಲ್ಲದೇ ಲೇಶಭಕ್ತಿ ದೊರಕದೂ || ೧೫ ||

ದಾನಮಾಡಲೂ ದಿವ್ಯ ಗಾನಪಾಡಲೂ
ಜ್ಞಾನ ದೊರೆಯದೋ ಇವರಧೀನವಾಗದೇ || ೧೬ ||

ಇಷ್ಟುಯಾತಕೇ ಕಂಡ ಕಷ್ಟವ್ಯಾತಕೇ
ದಿಟ್ಟಗುರುಗಳಾ ಪಾದಮುಟ್ಟಿ ಭಜಿಸಿರೋ || ೧೭ ||

ಪೂಜೆಮಾಡಲೂ ಕಂಡ ಗೋಜುಬೀಳಲೂ
ಬೀಜಮಾತಿದೂ ಫಲಸಹಾಜ ದೊರಕದೂ || ೧೮ ||

ಸುರರು ಎಲ್ಲರೂ ಇವರ ಕರವ ಪಿಡಿವರೋ
ತರಳರಂದದೀ ಹಿಂದೆ ತಿರುಗುತಿಪ್ಪರೋ || ೧೯ ||

ಗ್ರಹಗಳೆಲ್ಲವೂ ಇವರ್ಗೆ ಸಹಯಮಾಡುತಾ
ಅಹೋರಾತ್ರಿಲೀ ಸುಖದನಿವಹ ಕೊಡುವವೊ || ೨೦ ||

ವ್ಯಾಧಿಬಾರದೋ ದೇಹಬಾಧೆ ತಟ್ಟದೋ
ಆದಿದೇವನಾ ಸುಪ್ರಸಾದವಾಹದೋ || ೨೧ ||

ಪತಿತ ಪಾಮರಾ ಮಂದಮತಿಯು ನಾ ಬಲೂ
ತುತಿಸಲಾಪನೇ ಇವರ ಅತಿಶಯಂಗಳಾ || ೨೨ ||

ಕರುಣದಿಂದಲೀ ಎಮ್ಮ ಪೊರೆವನಲ್ಲದೇ
ದುರಿತಕೋಟಿಯಾ ಬೇಗತರಿವ ದಯದಲೀ || ೨೩ ||

ಮಂದಮತಿಗಳೂ ಇವರ ಚೆಂದವರಿಯದೇ
ನಿಂದಿಸೂವರೋ ಭವದ ಬಂಧ ತಪ್ಪದೋ || ೨೪ ||

ಇಂದಿರಾಪತೀ ಇವರ ಮುಂದೆ ಕುಣಿವನೋ
ಅಂದವಚನವಾ ಜನಕೆ ತಂದುಕೊಡುವನೋ || ೨೫ ||

ಉದಯಕಾಲದೀ ಈ ಪದವ ಪಠಿಸಲೂ
ಮುದಡನಾದರೂ ಜ್ಞಾನ ಉದಯವಾಹದೂ || ೨೬ ||

ಸಟೆಯಿದಲ್ಲವೋ ವ್ಯಾಸವಿಠಲ ಬಲ್ಲನೋ
ಪಠಿಸಬಹುದಿದೂ ಕೇಳಿ ಕುಟಿಲ ರಹಿತರೂ || ೨೭ ||

ಹೀಗೆ ಸ್ತೋತ್ರಮಾಡಿರುವರು. ಈ ಪದವನ್ನು 'ವಿಜಯ ಕವಚ'ವೆಂದು ಇಂದಿಗೂ ಪಠಿಸುವ ಜನರನೇಕರಿರುವರು. ಚಿಪ್ಪಗಿರಿಯಲ್ಲಿ ದಾಸರಕಟ್ಟೆಯಲ್ಲಿ ಸೇವೆಮಾಡುವವರು ಈ ಪದವನ್ನು ಪಠನೆಮಾಡುವರು. ಶುದ್ಧಮನಸ್ಸಿನಿಂದ ಸೇಹೆಮಾಡಿದವರ ಇಷ್ಟಾರ್ಥಗಳು ಒಂದು ಸಪ್ತಕದಲ್ಲಿ ಸಿದ್ಧಿಯಾಗಿರುವ ದೃಷ್ಟಾಂತಗಳು ಹೇರಳವಾಗಿರುವವು.

ಭಕ್ತರ ಚರಿತ್ರೆಗಳಲ್ಲಿ ಎಲ್ಲಿ ನೋಡಿದರೂ ಕರ್ಮಕಾಂಡದವರಮೇಲೂ ಪಂಡಿತರುಗಳಮೇಲೂ ಹರಿದುಬೀಳುವಂತೆ ವಾಚಕರಿಗೆ ಕಂಡುಬರಬಹುದು. ವಸ್ತುಸ್ಥಿತಿಯು ಹಾಗಿರುವದಿಲ್ಲ. ಕರ್ಮಠರಾಗಿರಬಾರದೆಂದೂ ಪಾಂಡಿತ್ಯವನ್ನು ಸಂಪಾದಿಸಬಾರದೆಂದೂ ಯಾವ ಹರಿದಾಸರೂ ಹೇಳುವದಿಲ್ಲ. ಕೆಸರಿನಿಂದ ಕೆಸರನ್ನು ತೊಳೆದಂತೆ ಕರ್ಮವೆಂದಿಗೂ ಕಡೆಗಾಣಿಸುವದಲ್ಲವಾದ ಕಾರಣ ಜ್ಞಾನವನ್ನು ಸಂಪಾದಿಸಬೇಕೆಂದು ಹೇಳುವವರು ಹರಿದಾಸರು. ಜ್ಞಾನವು ಕೇವಲ ಶಬ್ದಾರ್ಥವಾಗಿರದೆ ಅದು ಭಕ್ತಿಯಾಗಿ ರೂಪಾಂತರವಾಗಬೇಕೆಂದು ಉಪದೇಶಿಸುವರು ಹರಿದಾಸರು. ಭಾಗವತ ಧರ್ಮದ ಭಕ್ತಿಯು ಮೂಢಭಕ್ತಿಯಲ್ಲ. ಅಥವಾ ಬೇರೇ ಮಾತಿನಿಂದ ಕರೆಯುವ ಅಂಧ ಶ್ರದ್ಧೆಯಲ್ಲ. ಶ್ರುತಿಯಾದರೂ 'ನಾಯಮಾತ್ಮಾಪ್ರವಚನೇನ ಲಭ್ಯಃ ನಮೇಧಯಾ ನ ಬಹುನಾ ಶ್ರುತೇನ' ಎಂಬದಾಗಿ ಉದ್ಘೋಷಿಸುವದು. ದಾಸರ ಮತವು ಉಪನಿಷತ್ತುಗಳ ಮತ. ದಾಸರ ಮತವು ಗೀತೆಯ ಮತ. ಗೀತೆಯನ್ನೂ ಉಪನಿಷತ್ತುಗಳನ್ನೂ ಬಿಟ್ಟು ವೇದಮತದಲ್ಲಿ ವೇದಾಂತವಿರುವದಿಲ್ಲ. ಅರ್ಥವರಿತು ಕರ್ಮಮಾಡುವವರು ಹರಿದಾಸರು. ಪಾಂಡಿತ್ಯದ

ಪ್ರಯೋಜನವನ್ನನುಭವಿಸುವವರು ಹರಿದಾಸರು. ಪಡೆದ ಪಾಂಡಿತ್ಯವನ್ನು ಪಾಮರರಿಗೆ ಸುಲಭವಾಗಿ ಉಪದೇಶಮಾಡಬೇಕೆನ್ನುವವರು ಹರಿದಾಸರು. ತಾನು ಕಲಿತ ವಿದ್ಯದ ಫಲವನ್ನು ಪರರಿಗೆ ಕೊಡದಿದ್ದರೆ ಅದೊಂದು ಪ್ರಕಾರದ ಬದ್ಧತೆಯೆನ್ನುವವರು ಹರಿದಾಸರು. ಈ ವಿಧದ ವ್ಯಾಧಿಗೆ ಇಂಗ್ಲೀಷಿನಲ್ಲಿ (Spiritual Constipation) ಎನ್ನುವರು.

ನಿಜವಾಗಿ ನೋಡಿದರೆ ವಿಜಯದಾಸರು ನಿರಕ್ಷರ ಕುಕ್ಷಿಗಳು. ಪಡಬಾರದ ದಾರಿದ್ರ್ಯ ದುಃಖವನ್ನನುಭವಿಸಿದವರು. ಮಾತೆತ್ತಿದರೆ-'ಇವನೋ 'ಕೂಸೀಮುಗ ದಾಸ'ನೆಂದು ಹೀಯಾಳಿಸಿಕೊಂಡವರು. ಅಂಥವರಿಗೆ ಗುರು ಕಟಾಕ್ಷವಾಯಿತು. ಪರಮಾತ್ಮನ ಪ್ರಸಾದವಾಯಿತು. ಅವರು ಅನುಗ್ರಹಿಸಿದ ಮಾತ್ರಕ್ಕೇ ವಜ್ರಶುಂಠನ ಬಾಯಿಂದ ಶಾಸ್ತ್ರಾರ್ಥಗಳ ಅನುವಾದವಾಯಿತು. ಯಾವ ಸಾಧನೆಗೆ ಯಾವದು ಗುರಿಯೋ ಆ ಗುರಿಯನ್ನೇ ಕಂಡವರಿಗೆ ತಿಳಿಯದ ಶಾಸ್ತ್ರಗಳಾವವು ? ಬರದ ಭಾಷೆಗಳಾವವು ? ಕುದುರೆಯ ರಾಹುತನಾಗಿದ್ದ ಧೊಂಡೋ ರಘುನಾಥನಲ್ಲವೇ ಅಕ್ಷೋಭ್ಯ ಮುನಿಗಳ ಕಾರುಣ್ಯದಿಂದ ಪ್ರಸಿದ್ಧ ಟೀಕಾಚಾರ್ಯರಾದುದು ? ಶ್ರೀಮದ್ಭಾಗವತದಲ್ಲಿ ರಹೂಗಣನಂಥಾ ಮಹಾರಾಜನಿಗೆ ತತ್ತ್ವೋಪದೇಶಮಾಡಿದ ಜಡಭರತ ಯೋಗಿಯು ಯಾವ ಪಾಂಡಿತ್ಯವನ್ನು ಸಂಪಾದಿಸಿದ್ದನು ?

ರಹೂಗಣೈತತ್ತಪಸಾನಯಾತಿ
ನವಿದ್ಯಯಾನಿರ್ವಸನಾದ್ಗೃಹಾದ್ವಾ
ನಛಂದಸಾನೋತ ಜಲಾಗ್ನಿ ಸೂರ್ಯೈಃ
ವಿನಾಮಹತ್ಪಾದರಜೋಭಿಷೇಕಂ ||

ಎಂಬ ಅಮೃತವಾಣಿಯು ಆ ಜಡಭರತ ಯೋಗಿಯದಲ್ಲವೆ ?

ವ್ಯಾಧಸ್ಯಾಚರಣಂ, ಧ್ರುವಸ್ಯಚ ವಯಃ, ವಿದ್ಯಾಗಜೇಂದ್ರಸ್ಯಕಾ |
ಕಾ ಜಾತಿರ್ವಿದುರಸ್ಯ, ಯಾದವಪತೇರುಗ್ರಸ್ಯ ಕಿಂಪೌರುಷಂ ||
ಕುಬ್ಜಾಯಾಃ ಕಮನೀಯರೂಪಮಧಿಕಂ, ಕಿಂತತ್ ಸುಧಾಮ್ನೋ ಧನಂ |
ಭಕ್ತ್ಯಾತುಷ್ಯತಿ ಕೇಶವಃ, ನತುಧನೈಃ, ಭಕ್ತಪ್ರಿಯಃ ಶ್ರೀಪತಿಃ ||

ಎಂಬಂತೆ ಸದಾಚರಣೆಗಾಗಲಿ, ವಯಸ್ಸಿಗಾಗಲಿ, ವಿದ್ಯಕ್ಕಾಗಲಿ, ಜಾತಿಗಾಗಲಿ, ಪರಾಕ್ರಮಕ್ಕಾಗಲಿ, ರೂಪಕ್ಕಾಗಲಿ, ಧನಕ್ಕಾಗಲಿ ಒಲಿಯೆಂದರೆ ಒಲಿಯುವವನು ದೇವರಲ್ಲ. ಅವನು ಒಲಿಯುವದು ಭಕ್ತಿಯೊಂದಕ್ಕೇ! ಸದಾಚರಣೆ ಮೊದಲಾದವುಗಳು ಭಕ್ತಿಗೆ ಸಹಕಾರಿಗಳಾಗಿರಬೇಕು. ಅಂಥಾ ಭಕ್ತಿಪಂಥದ ಅನುಯಾಯಿಗಳು ಹರಿದಾಸರು. ಅಂಥಾ ಭಕ್ತಿಪಂಥದ ಪ್ರಚಾರಕರು ಹರಿದಾಸರು.

ಅನನ್ಯಾಶ್ಚಿಂತಯಂತೋ ಮಾಂ
ಯೇಜನಾಃ ಪರ್ಯುಪಾಸತೇ
ತೇಷಾಂ ನಿತ್ಯಾಭಿಯುಕ್ತಾನಾಂ
ಯೋಗಕ್ಷೇಮಂ ವಹಾಮ್ಯಹಂ ||೨೨|| IX

ಎಂಬ ಗೀತೋಕ್ತಿಯ ಆದರ್ಶಜೀವಿಗಳು ಹರಿದಾಸರು.

ಸರ್ವಧರ್ಮಾನ್ ಪರಿತ್ಯಜ್ಯಮಾಮೇಕಂ ಶರಣಂ ವ್ರಜ ||
ಅಹಂತ್ವಾ ಸರ್ವಪಾಪೇಭ್ಯೋ ಮೋಕ್ಷಯಿಷ್ಯಾಮಿ ಮಾಶುಚಃ ||೬೬|| XIII
ಎಂಬ ಭಗವದ್ವಾಕ್ಯವನ್ನು ಅಕ್ಷರಶಃ ಪಾಲಿಸಿದವರು ಹರಿದಾಸರು.



## ೩
# ಸತ್ರಯಾಗ



ವಿಜಯದಾಸರು ಪುರಂದರದಾಸರು ವಾಸವಾಗಿದ್ದ ಚಕ್ರತೀರ್ಥದ ಬಳಿಯಲ್ಲಿ ತಾವೂ ವಾಸಮಾಡಿ, ದಾಸರ ಆರಾಧನಾಂಗವಾಗಿ ಸತ್ರಯಾಗವನ್ನಾರಂಭಿಸಿದರು. ಅವಧಿಯಿಲ್ಲದೆ, ಸಹಸ್ರಾರು ಜನರಿಗೆ ಮೃಷ್ಟಾನ್ನ ದೊರೆಯುವದೆಂದು ದೂರದೇಶಗಳಿಂದ ಅಗಣಿತ ಜನರು ಮಹಾಕ್ಷೇತ್ರಕ್ಕೆ

ಬಂದರು. ದೇಹರಕ್ಷಣೆಗೆ ಆಹಾರ ಹೇಗೋ, ಆತ್ಮರಕ್ಷಣೆಗೆ ಹಾಗೆ ಧರ್ಮೋಪದೇಶಮಾಡುತ್ತಿದ್ದುದರಿಂದ, ಜನರು ಭುಕ್ತಿಮುಕ್ತಿಗಳೆರಡಕ್ಕೂ ವಿಜಯದಾಸರೇ ಮಾರ್ಗದರ್ಶಿಗಳೆಂದು ಅವರನ್ನಾಶ್ರಯಿಸಿದರು.

ಆ ಕಾಲದಲ್ಲಿ ಆನೇಗೊಂದಿಯಲ್ಲಿ ಭೀಮಪ್ಪನಾಯಕನೆಂಬ ಶ್ರೀಮಂತ ಚಿನವಾರನು (ಬೆಳ್ಳಿ ಭಂಗಾರಗಳ ವ್ಯಾಪಾರಿ) ವ್ಯಾಪಾರದಿಂದ ಬಹು ಧನವನ್ನಾರ್ಜಿಸಿ ಗರ್ಭಿಣಿಯಾದ ತನ್ನ ಹೆಂಡತಿಗೆ ಜೀವನೋಪಾಯವನ್ನು ಕಲ್ಪಿಸದೆ ತಮ್ಮಂದಿರ ವಶಕ್ಕೆ ಐಶ್ವರ್ಯವನ್ನೊಪ್ಪಿಸಿ ಮೃತನಾಗಿದ್ದನು. ಕೃತಘ್ನರಾದ ತಮ್ಮಂದಿರು ಅಣ್ಣನ ಮರಣಾನಂತರ ಅತ್ತಿಗೆಯನ್ನು ಮನೆಯಿಂದ ಹೊರಗೆ ಹಾಕಿ ಅವಳ ಆಸ್ತಿಯನ್ನು ತಾವೇ ಆಕ್ರಮಿಸಿದರು. ಆ ದೀನ ಹೆಂಗಳೆಯು ಬಡ ತಾಯಿಯ ಮನೆಯನ್ನು ಸೇರಿ ಮಗನನ್ನು ಹಡೆದಳು. ದುರ್ದೈವಕ್ಕೆ ತಾಯಿಯೂ ಮೃತಳಾಗಲು, ಆಶ್ರಯದಾತರಿಲ್ಲದೆ ಅವಳು ಆನೇಗೊಂದಿಗೇ ಬಂದಳು. ದಾಯಾದರು ಶಿಶುವಿನಲ್ಲಾದರೂ ಕನಿಕರ ತಾಳಿ ಆಕೆಯನ್ನು ಮನೆಗೆ ಕರೆದು ರಕ್ಷಿಸಲಿಲ್ಲ. ಕೂಲಿಯ ಹೆಂಗಸಿನಂತೆ ಮನೆಯಲ್ಲಿರುವೆನೆಂದರೆ ಅವಕಾಶ ಕೊಡಲಿಲ್ಲ. ಸಾಲದುದಕ್ಕೆ ಶಿಶುವು ನಮ್ಮಣ್ಣನದಲ್ಲವೆಂದು ಸುದ್ದಿಯನ್ನು ಹುಟ್ಟಿಸಿದರು. ಭೀಮಪ್ಪನಾಯಕನಿಂದ ಉಪಕೃತರಾಗಿದ್ದ ಬಡಜನರು ಮಾತ್ರ ಆಕೆಗೆ ಆಗಾಗ ಅನ್ನೋದಕಗಳನ್ನು ಕೊಟ್ಟು ದಯೆ ತೋರಿಸುತ್ತಿದ್ದರು. ಎಣ್ಣೆ ನೀರಿಲ್ಲದ ಕಾರಣದಿಂದಲೂ, ಸರಿಯಾದ ಆಹಾರದ ಅಭಾವದಿಂದಲೂ ಶಿಶುವಿಗೆ ಮೈಯೆಲ್ಲಾ ಕಜ್ಜಿಯಾಗಿ ದುರ್ಗಂಧಮಯವಾಗಿತ್ತು. ಶಿಶುವಿನ ಸಂಪರ್ಕದಿಂದ ತಾಯಿಗಾದರೂ ಅದೇ ದುರ್ಗತಿಯಾಗಿತ್ತು. ವಿಜಯದಾಸರ ಸತ್ರಯಾಗವು ಈ ಬಡ ಪ್ರಾಣಿಗೆ ಬಲು ಅನುಕೂಲವಾಯಿತು. ನಿರಾಪೇಕ್ಷವಾಗಿ ಯಾರನ್ನೂ ಕೇಳದೆ ಎರಡು ಹೊತ್ತೂ ಬಿಸಿಬಿಸಿಯಾಗಿ ಮಗುವಿಗೆ ಉಣಿಸಿ ತಾನೂ ಉಣ್ಣುವ ಸೌಭಾಗ್ಯ ದೊರೆತಂತಾಯಿತು. ಆದರೂ ಕಜ್ಜಿಬುರುಕಳೆಂದು ಯಾರೂ ಈಕೆಯ ಬಳಿ ಕೂಡುತ್ತಿರಲಿಲ್ಲ. ಇವಳಾದರೂ ಜನರ ಗುಂಪಿನಲ್ಲಿ ಸೇರುತ್ತಿರಲಿಲ್ಲ. ಒಂದು ದಿನ ಮಧ್ಯಾಹ್ನ ಹೀಗಾಯಿತು ! ಒಂದು ಪಙ್ಕ್ತಿಯ ಕಡೆಯಲ್ಲಿ ಪ್ರತ್ಯೇಕವಾಗಿ ಶಿಶುವನ್ನು ಕೂಡಿಸಿಕೊಂಡು ಎಲೆಯಮುಂದೆ

ಕುಳಿತಳು ! ಜನರು ಹೆಚ್ಚಾಗಿ ಬಂದುದರಿಂದ ಈಕೆಯನ್ನನುಸರಿಸಿ ಸಾಲಾಗಿ ಮತ್ತೆ ಎಲೆಗಳನ್ನು ಹಾಕಿದರು ! ಭೋಜನದ ಮಧ್ಯ ಸಮಯ ! ಭಕ್ಷ್ಯಗಳನ್ನು ಬಡಿಸುತ್ತಿದಾರೆ ! ಶಿಶುವು ಮಿ ತಿ ಮೀ ರಿ ತಿಂದು ಹೇಸಿಕೆಮಾಡಿಬಿಟ್ಟಿತು ! ಪಕ್ಕದಲ್ಲಿದ್ದವರು ತಾಯಿಯನ್ನು ವಾಚಾಮಗೋಚರ ಬೈದು ಪಜ್‌ತ್ತಯಿಂದೆದ್ದುಬಿಟ್ಟರು ! ಈಕೆಯೂ ಹಾಳು ಮಗುವಿನಿಂದ ಎಲ್ಲಿ ಹೋದರೂ ಬಾಳಿಲ್ಲವೆಂದು ಅಳುತ್ತಾ ಎದ್ದುಬಿಟ್ಟಳು.

ಇರುವದಕ್ಕೆ ಮನೆಯಿಲ್ಲ. ತಿನ್ನುವದಕ್ಕೆ ಅನ್ನವಿಲ್ಲ. ಯಾರಾದರೂ ಆಶ್ರಯ ಕೊಟ್ಟಾರೆಂದರೆ ಕಜ್ಜಿಬುರುಕ ಮಗು. ಸಾಲದುದಕ್ಕೆ ಬಂಧು ಜನರ ಅಪವಾದ. ಈ ದುಃಖಗಳಿಂದ ಬಲುನೊಂದು ಏನು ಮಾಡುವದಕ್ಕೂ ದಿಕ್ಕುತೋರದೆ, ಬೆಳಗಿನ ಝಾವದಲ್ಲಿ ಮಗುವನ್ನು ಉಡಿಯಲ್ಲಿ ಕಟ್ಟಿಕೊಂಡು ತುಂಗಭದ್ರೆಯ ಮಡುವಿನಲ್ಲಿ ಪ್ರವೇಶಿಸುವೆನೆಂದು ನಿರ್ಜನವಾದ ನವ ಬೃಂದಾವನದ ನಡುಗಡ್ಡೆಗೆ ಬಂದಳು. 'ಇನ್ನೇಕೆ ಅಳುವೆ, ಇಬ್ಬರಿಗೂ ಕಾಲಸಮೀಪಿಸಿತ್ತೆ'ಂದು ಮಗುವನ್ನು ದಬ್ಬನೆ ಕೆಳಗೆ ಕೂಡಿಸಿ ಗಂಡುಗಚ್ಚೆಯನ್ನು ಕಟ್ಟಿದಳು. ಯಾರಾದರೂ ಅತ್ತಿತ್ತ ಇದ್ದಾರೆಂದು ಸುತ್ತಲೂ ನೋಡಿದಳು. ಆ ಸಮಯದಲ್ಲಿ ವಿಜಯರಾಯರು ನವ ಬೃಂದಾವನದ ಸಮೀಪದಲ್ಲಿ ಪ್ರದಕ್ಷಿಣೆಗಾಗಿ ಬಂದಿದ್ದವರು—

ವಿಜಯರಾಯರು—ಯಾರಮ್ಮಾ ಅದು ! ಈ ಕತ್ತಲೆಯಲ್ಲಿ ?

ಹೆಂಗಸು—(ಗಾಬರಿಯಿಂದ) ಯಾರಾದರೇನು ?

ವಿಜಯರಾಯರು—ಇಲ್ಲ ತಾಯಿ, ಹೆದರಬೇಡ; ಇಲ್ಲೇಕೆ ಬಂದೆ ಹೇಳು !

ಹೆಂಗಸು—ಯಾಕೋ ಬಂದೆ ! ಸಾಯುವದಕ್ಕೆ ! ನೀವೊಬ್ಬರು ಬಂದಿರಾ ಮೃತ್ಯುವಾಗಿ ?

ವಿಜಯರಾಯರು—(ಓಡಿಬಂದು) ಯಾಕೆ ತಾಯಿ ! ಇಷ್ಟು ಬೇಸರಗೊಂಡಿರುವೆ ? ಸಾಯುವದೆಂದರೇನು ?

ಹೆಂಗಸು—(ದುಃಖವನ್ನು ತಾಳಲಾರದೆ) ಅಪ್ಪಾ ನನ್ನ ಕಥೆಯೇನೆಂದು ಹೇಳಲಿ ? ಈ ಹಾಳು ಮಗುವಿನಿಂದ ಸಾಕಾಗಿದೆ ನನ್ನಬಾಳು ! ಈ ಮಗುವನ್ನೂ ಹಾಕಿ ನಾನೂ ನದಿಯಲ್ಲಿ ಬಿದ್ದು ಸಾಯುತ್ತೇನೆ.

ದಯಾಮಯರಾದ ದಾಸರು ಹೆಂಗಳೆಯನ್ನು ಬಲು ರೀತಿಯಿಂದ ಸಮಾಧಾನಗೊಳಿಸಿದರು. ಆಕೆಯ ಪೂರ್ವವೃತ್ತಾಂತವನ್ನು ಕೇಳಿ ಕನಿಕರಪಟ್ಟರು. ನಿನಗೆ ಮಗುವಿನಿಂದ ಇಷ್ಟು ದುಃಖವಾಗಿದ್ದರೆ ಅವನನ್ನು ನನಗೆ ಕೊಟ್ಟು ಬಿಡೆಂದರು. ನೀನು ನನ್ನ ತಂಗಿಯಾಗಿ ನನ್ನ ಮನೆಯಲ್ಲಿ ಸುಖದಿಂದಿರೆಂದು ಅಭಯಕೊಟ್ಟರು. ಆ ದೀನಳು—'ಅಪ್ಪಾ! ನನ್ನ ಜನ್ಮದಲ್ಲಿ ಇಂಥಾ ಮಾತಾಡಿದವರನ್ನು ನೋಡಲಿಲ್ಲ! ನೀವೇ ನಮ್ಮ ತಂದೆ ತಾಯಿ! ಈ ಮಗನನ್ನು ಕೊಂದು ನಾನೂ ಸತ್ತು ಯಾವ ನರಕಕ್ಕೆ ಹೋಗಲಿ? ಕೃಷ್ಣಾರ್ಪಣ! ಈ ಮಗನನ್ನು ನಿಮ್ಮ ಪಾದಕ್ಕೊಪ್ಪಿಸಿದೆ'ನೆಂದಳು. ವಿಜಯರಾಯರು ಸಾಧ್ವಿಯನ್ನು ಪಕ್ಕದಲ್ಲಿ ಕುಳ್ಳಿರಿಸಿಕೊಂಡರು. ಮಗುವನ್ನು ತೊಡೆಯಮೇಲೆ ಮಲಗಿಸಿಕೊಂಡರು. ಆಗಲೇ ಆಶೀರ್ವಾದ ರೂಪವಾಗಿ:—

**ಕಾಂಬೋಧಿ— ಜಂಪೆತಾಳ**

ಚಿರಂಜೀವಿಯಾಗೆಲವೊ ಚಿಣ್ಣ ನೀನು ।
ಹರಿದಾಸ ದಾಸ ದಾಸರ ಪಾದ ಧೂಳಾಗಿ ॥ ಪ ॥

ಬರೆಯಬೇಡ ಮರೆಯಬೇಡ ಎಂದೆಂದಿಗೂ ।
ತಿರಿಯಬೇಡ ಖಳರ ಮನೆಗೆ ಪೋಗಿ ॥
ಮರೆಯಬೇಡ ತತ್ವ ಉಪದೇಶಮಾಡಿದ್ದು ।
ಬೆರೆಯಬೇಡನ್ಯಸತಿಯರ ಸ್ವಪ್ನದಲ್ಲೂ ॥ ೧ ॥

ಸಾಲಮಾಡಲಿಬೇಡ ಸಾಲದೆಂದೆನಬೇಡ ।
ನಾಳಿಗೇ ಹೇಗೆಂಬ ಚಿಂತೆ ಬೇಡ ॥
ಖೂಳ ಜನರೊಡನೆ ಮಿತ್ರತ್ವ ಮಾಡಲಿಬೇಡ ।
ಬಾಳುವರ ಸಂಗಡಲೆ ಬಾಳೆಲವೊ ಬಾಳಾ ॥ ೨ ॥

ಲೋಕವಾರ್ತೆಯು ನಿನ್ನ ಕಿವಿಗೆ ಕೇಳಿಸಬೇಡ ।
ಶ್ರೀಕಾಂತನಾ ವಾರ್ತೆ ಕೇಳದಿರಬೇಡ ॥
ಪಾಕಮಾಡಿದ್ದು ಏಕಾಂತದಲಿ ಉಣಬೇಡ ।
ಲೌಕಿಕವನುಸರಿಸಿ ದಣುಕೊಳಲಿ ಬೇಡ ॥ ೩ ॥

ಪಂಡಿತರು ಪಾಮರರು ಯಾರಾದರೂ ನಿನ್ನ ।
ಕಂಡವರಿಗೆಲ್ಲ ಕೌತುಕ ತೋರಲೀ ॥
ಹೆಂಡತಿಯು ಸೊಸೆಯು ಮೊಮ್ಮಕ್ಕಳು ಅಳಿಯಂದಿ ।
ರುಂಡುಟ್ಟು ದ್ವಿಜರಸಹ ಗಂಡುಗಲಿಯಾಗಿರೆಲೊ ॥ ೪ ॥

ಮಂದಮತಿಗಳ ಕೂಡ ಮಾತಾಡದಿರು ಹರಿ ।
ನಿಂದಕರ ಕಣ್ಣೆತ್ತಿ ನೋಡಬೇಡ ॥
ಇಂದಿರಾರಮಣ ಶಿರಿ ವಿಜಯ ವಿಠಲನ ಪದ ।
ದ್ವಂದ ಮಸ್ತಕ ತನಕ ನೋಡದಿರಬೇಡಾ ॥ ೫ ॥

ಎಂಬದಾಗಿ ಹಾಡಿ ಮಗುವಿನ ಕಿವಿಯಲ್ಲಿ ಮಂತ್ರೋಪದೇಶಮಾಡಿದರು. ಮಗುವು ಅಳುವದನ್ನು ನಿಲ್ಲಿಸಿ ದಾಸರ ಮುಖವನ್ನು ನೋಡಿ ನಗುವದಕ್ಕಾರಂಭಿಸಿತು. ತಾಯಿಗೆ ಪರಮಾನಂದವಾಯಿತು. ಮಗುವನ್ನೆತ್ತಿಕೊಂಡು ಸಾಧ್ವಿಯನ್ನು ಕರೆದುಕೊಂಡು ವಿಜಯದಾಸರು ಚಕ್ರತೀರ್ಥದ ಬಳಿಯ ಪುರಂದರದಾಸರ ಮಂಟಪಕ್ಕೆ ಬಂದರು. ದಾಸರಪತ್ನಿ ಅರಳಮ್ಮನು ತುಂಗಭದ್ರೆಯಲ್ಲಿ ಮಿಂದು ಗೌರೀಪೂಜೆ ಮಾಡುತ್ತಿದ್ದಳು. ಇದೋ ಈ ಬಾಲಚಂದ್ರನು ನಿನ್ನ ಮಗನೆಂದು ಪತ್ನಿಯ ಮುಂದೆ ದಾಸರು ಮಲಗಿಸಿದರು. ಇವನ ಹೆಸರು ಮೋಹನನೆಂದು ಕರೆಯಬೇಕೆಂದರು. ಅಷ್ಟರಲ್ಲಿ ಅರಳಮ್ಮನಿಗೆ ಶೇಷಗಿರಿಯೆಂಬ ಮೃತಪುತ್ರನ ನೆನಪಾಗಿ ಕಣ್ಣಿನಲ್ಲಿ ನೀರು ದುರಿತು. ದಾಸರು—'ಸತ್ತವರಿಗಳಬಾರದು; ಇದ್ದವರೇ ನಮ್ಮ ಮಕ್ಕಳೆಂದು ತಿಳಿಯಬೇಕು. ತಿಳಿಯಿತೇ ನಾವಾಡಿದ ಮಾತು?' ಎಂದರು. ಅರಳಮ್ಮನು ದುಃಖವನ್ನಡಗಿಸಿಕೊಂಡು ಅನಾಥ ಬಾಲಕನಿಗೆ ಹಾಲನ್ನು ತಂದು ಕುಡಿಸಿ, ಎಣ್ಣೆಯೊತ್ತಿ ಬಿಸಿ ನೀರೆರೆದು ಮಲಗಿಸಿದಳು. ಅನ್ನಾಷ್ಟಗೆಹೋಗಸನ್ನು ಬಾರೆಂದು ಕರೆದುಪಚರಿಸಿ ಸ್ನಾನಮಾಡಿಸಿ, ಉಡುವದಕ್ಕೆ ವಸ್ತ್ರವನ್ನು ತಂದುಕೊಟ್ಟಳು. ಹದಿನೈದು ದಿವಸಗಳೊಳಗೆ ತಾಯಿಮಕ್ಕಳ ರೋಗ ವಾಸಿಯಾಯಿತು. ಮೋಹನನು ಸುಂದರಾಂಗನಾಗಿ ಹೆಸರಿಗೆ ತಕ್ಕಂತೆ ಕಂಗೊಳಿಸಿದನು. ವಿಜಯದಾಸರ ಮೋಹದ ಪುತ್ರನಾದ ಮೋಹನನು ಕಾಲಾಂತರದಲ್ಲಿ ಪ್ರಸಿದ್ಧ ಮೋಹನದಾಸರಾದರು. ಕೃಷ್ಣಾಯಾದರು

ನಿಸ್ಸಂತಾನರಾಗಿ ಮೃತರಾಗಲು ಪಿತ್ರಾರ್ಜಿತವಾದ ಸಕಲೈಶ್ವರ್ಯವೂ ಮೋಹನದಾಸರದಾಯಿತು. ದ್ರೋಹಚಿಂತನೆಯಿಂದ ಪ್ರಾಪ್ತವಾದ ಐಶ್ವರ್ಯವು ಪಾಪಮಯವಾದುದೆಂದು ಮೋಹನದಾಸರು ಸರ್ವಸ್ವವನ್ನೂ ಸತ್ಕಾರ್ಯದಲ್ಲಿ ವಿನಿಯೋಗಿಸಿದರು.

ವಿಜಯದಾಸರು ಕಾಶಿಯಲ್ಲಿ ದೈವಾನುಗ್ರಹಕ್ಕೆ ಪಾತ್ರರಾಗಿ ಮಹಾ ವಿಭವದಿಂದ ಚೀಕಲಪರಿಗೆ ಬರುವ ಮಾರ್ಗದಲ್ಲಿ, ಆದವಾನಿಯ ದಿವಾನರ ಮನೆಯಲ್ಲಿ ಬಂದಿಳಿದಿದ್ದಾಗ ದಿವಾನರ ಮಗನನ್ನು ನೋಡಿ,—'ಏನೋ ಪಂಗನಾಮದ ತಿಮ್ಮಣ್ಣ !' ಎಂದು ಮಾತನಾಡಿಸಿದ್ದರು. ದಾಸರ ಬಾಯಿಂದ ಬಂದ ಮಾತೇ ಜನರ ರೂಢಿಗೆ ಬಂದು, ತಿಮ್ಮಣ್ಣನನ್ನು ಪಂಗ ನಾಮದ ಎಂಬ ಹೆಸರಿನಿಂದ ಸಹಿತವಾಗಿ ಕರೆಯಲಾರಂಭಿಸಿದರು. ಅಂದಿ ನಿಂದವನಿಗೆ ಒಂದು ಪ್ರಕಾರದ ವೈರಾಗ್ಯ ಹುಟ್ಟಿ ದೇವೋನ್ಮಾದಿಯಂತಾ ದನು. ವಂಶಗೌರವದಿಂದ ತಿಮ್ಮಣ್ಣನು ಬಸಾಲತ್ ಜಂಗನ ದಿವಾನನಾ ದನು. ಆಗಲೂ ಅವನ ವೈರಾಗ್ಯ ಕಡಮೆಯಾಗಲಿಲ್ಲ. ವಿಜಯರಾಯರು ಆ ಮಾತಿನಿಂದ ಕರೆಯಲು ಕಾರಣವು ಪ್ರತ್ಯೇಕವಾಗಿತ್ತು. ಶ್ರೀ ಪುರಂದರ ದಾಸರ ಸಮಕಾಲಿಕರಾಗಿದ್ದ ವೈಕುಂಠದಾಸರು ಮತ್ತೆ ತಿಮ್ಮಣ್ಣನಾಗಿ ಅವ ತರಿಸಿದ್ದರು. ಅವರ ಪೂರ್ವ ವೃತ್ತಾಂತವನ್ನು ತಿಳಿದೇ ವಿಜಯದಾಸರು ಹಾಗೆ ಕರೆದರು. ಅಷ್ಟುಮಾತ್ರದಿಂದವನಿಗೆ ಪೂರ್ವಜನ್ಮದ ಜ್ಞಾನವುಂಟಾ ಯಿತು. ಪಂಗನಾಮದ ಎಂಬ ಮಾತಿನ ರಹಸ್ಯವು ವೈಕುಂಠದಾಸರು ದಪ್ಪ ವಾಗಿ ಮೂರು ನಾಮಗಳನ್ನು ಹಚ್ಚಿಕೊಳ್ಳುತ್ತಿದ್ದುದರ ಜ್ಞಾಪಕವನ್ನುಂ ಟುಮಾಡುವದಾಗಿತ್ತು. ತಿಮ್ಮಣ್ಣಯ್ಯನಿಗೆ ಇದ್ದ ಒಬ್ಬ ಮಗನನ್ನು ಬಸಾ ಲತ್ ಜಂಗನು ಇಸ್ಲಾಂ ಧರ್ಮಕ್ಕೆ ಸೇರಿಸಿಕೊಂಡದ್ದರಿಂದ ಬಹು ಸಂತಾಪ ವಾಗಿತ್ತು. ವಿಜಯದಾಸರ ಶಿಷ್ಯನಾಗಿ ವೇಣುಗೋಪಾಲ ವಿಠಲಾಂಕಿತ ವನ್ನು ಪಡೆದು ಅಧಿಕಾರವನ್ನು ಬಿಡಬೇಕೆಂದು ಯೋಚಿಸಿದರೂ ವಿಜಯ ದಾಸರು ಅವಕಾಶ ಕೊಡಲಿಲ್ಲ. ಆಗ ಅಧಿಕಾರದ ಬೇಸರದಿಂದ:—

ಕಲ್ಯಾಣಿ — ಜಂಪೆತಾಳ

ನಿನ್ನ ನಂಬಿದ ನರಗೆ । ಅನ್ಯರಾಶ್ರಯವೇಕೊ ।<br>
ಚನ್ನ ಗುರು ವಿಜಯರಾಯ ॥ ಪ ॥

ಬನ್ನ ಬಡುವೆನು ಜೀಯ । ಘನ್ನ ಭವದೊಳು ಸಿಲುಕಿ ।
ಇನ್ನು ಕಡೆಹಾಯ್ಸೊ ಬೇಗ । ಈಗ ॥ ಅ ॥

ಸಪ್ತ ದ್ವೀಪಾಧಿಪನ ಪುತ್ರನೊಬ್ಬನು ಪರರ
ಭೃತ್ಯನಾಗುವದುಚಿತವೇ ?
ಪುತ್ತೆ ಸುರಧೇನುವಿನ ಹತ್ತಿಲಿರುವನಿಗಿನ್ನು
ಹಸ್ತು ಬಳಲುವದುಚಿತವೆ ? ॥
ಒತ್ತಿ ಸುರನದಿನರನ ಸುತ್ತ ಪರಿಯಲು ಸೀರಿ
ಗಾರ್ತನಾಗುವದುಚಿತವೆ ? ॥
ನಿತ್ಯ ಸುಖದಾರಿ ವಿಚಿತ್ರದಲಿ ತೋರೆನಾ ।
ಹಸ್ತ ನರಗೊಡ್ಡುವದು ಎತ್ತಲುಚಿತವೊ ಗುರುವೆ ॥೧॥

ಕ್ಷೀರವಾರಿಧಿ ಸೇರಿ ನೀರು ಮಜ್ಜಿಗೆಗಾಗಿ
ಚೀರಿ ಒದರುವುದುಚಿತವೆ ?
ದಾರಿಯಲಿ ಸುಧೆರಸ ಸೂರೆಯಾಗಲು ಜಲದ
ಮಾರ ಹುಡುಕುವದುಚಿತವೆ ?
ನೂರಾರು ವಸನದ ಹೇರುಮನೆಯೊಳಗಿರಲು
ಕೋರಿಯುಡುವದು ಉಚಿತವೆ ? ॥
ವಾರವಾರಕೆ ಹರಿಯ ತೋರುವ ನರನಬಿಟ್ಟು
ಕ್ರೂರರನು ಸೇವಿಸುವದಾರಿಗುಚಿತವೊ ಗುರುವೆ ॥ ೨ ॥

ಸಾಕಿ ಸಲಹೆಂದು ಅತಿ ವ್ಯಾಕುಲದಿ ಬಂದವನ
ನೂಕಿಬಿಡುವದು ಉಚಿತವೆ ?
ಏಕಬುದ್ಧಿಯನಿತ್ತು ಜೋಕೆಮಾಡೆನೆ ಮನವ
ನೇಕಮಾಡುವದುಚಿತವೆ ?
ಬೇಕಾದವರ ಕೊಡುವೆ ಲೋಕದವರಿಗೆ ಎನ್ನ
ಕಾಕುಮಾದುವದೇಚಿತವೆ ?
ಶ್ರೀಕಾಂತ ವೇಣುಗೋಪಾಲ ವಿಠಲ ನಿನ್ನ
ವಾಕು ಮನ್ನಿಸುತಿರಲು ನಾ ಕೆಡುವದುಚಿತವೆ ॥ ೩ ॥

ಎಂಬದಾಗಿ ಪ್ರಾರ್ಥಿಸಿದರು. ದಾಸರು ಮಾತ್ರ ನೀನು ಅಧಿಕಾರದಲ್ಲಿದ್ದು ಮಾಡುವ ಸೇವೆಯು ಬಹಳವಾಗಿರುವದೆಂದು ತಿಮ್ಮಣ್ಣನವರನ್ನು ಹತ್ತಿರ ಸೇರಿಸಿಕೊಳ್ಳಲಿಲ್ಲ.

ಬಸಾಲತ್ ಜಂಗನು ಎಷ್ಟು ಕ್ರೂರನಾಗಿದ್ದರೂ ಅವನ ಅತ್ಯಾಚಾರಗಳಿಗೆ ದಿವಾನರು ಅಂಕುಶದಂತಿದ್ದರು. ನವಾಬನು ಅಫೀಮು ಸೇವನೆಮಾಡುವದು ಮದ್ಯಪಾನ ಮಾಡುವದು ನಿರಂತರ ರಾಣಿವಾಸದಲ್ಲಿರುವದೇ ಮೊದಲಾದ ಕಾರಣಗಳಿಂದ ರಾಜ್ಯನಿರ್ವಾಹದ ಹೆಚ್ಚಿನ ಜವಾಬ್ದಾರಿಯನ್ನು ದಿವಾನರ ಮೇಲೆ ಬಿಟ್ಟಿದ್ದನು. ಯದ್ಯಪಿ ಮಹಾರಾಷ್ಟ್ರದ ಪೇಷ್ವಾಯಿಗಳು ನವಾಬನ ದ್ವೇಷಿಗಳಾಗಿದ್ದರೂ ತಿಮ್ಮಣ್ಣಯ್ಯನವರ ದಕ್ಷತೆಗಂಜಿ ಆದವಾನಿಯಮೇಲೆ ಧಾಳಿಮಾಡಲಿಲ್ಲ. ತಿಮ್ಮಣ್ಣಯ್ಯನವರು ಮಾತ್ರ ತಮ್ಮ ಮಗನನ್ನೇ ಜಾತಿಗೆಡಿಸಿದರೆಂಬ ದ್ವೇಷವನ್ನು ವಹಿಸಿದ್ದರೆ ಮಹಾರಾಷ್ಟ್ರರು ಸಂಚುಮಾಡಿ ಆದವಾನಿಯನ್ನು ಸ್ವಾಧೀನಮಾಡಿಕೊಳ್ಳದೆ ಬಿಡುತ್ತಿರಲಿಲ್ಲ. ಅವನ ಅಪರಾಧ ಸಹಸ್ರವಿದ್ದರೂ ಅವನ ಉಪ್ಪುತಿಂದು ಅವನಿಗೆ ದ್ರೋಹ ಮಾಡಬಾರದೆಂದು ಆಯ್ಯನವರು ನವಾಬನ ಹಿತಚಿಂತಕರಾಗಿದ್ದರು. ಹಿಂದೂಜನರ ಮನಸ್ಸಿನ ರಚನೆಯೇ ಹಾಗಿರುವಾಗ ತಿಮ್ಮಣ್ಣಯ್ಯನವರೊಬ್ಬರು ಹೊರತಾಗುವ ಬಗೆ ಹೇಗೆ ?

ವಿಜಯದಾಸರು ಭಾಗವತ ಧರ್ಮಪ್ರಚಾರವನ್ನು ಮನಸ್ಸಿನಲ್ಲಿಟ್ಟುಕೊಂಡು ಮೋಹನದಾಸರಾದಿಯಾದ ಶಿಷ್ಯ ಪರಿವಾರ ಸಮೇತರಾಗಿ ಸಂಚಾರ ಹೊರಟರು. ದಾಸರಾಯರ ಉಪದೇಶದಿಂದ ಸಾವಿರಾರು ಜನರು ಶಿಷ್ಯರಾಗುತ್ತ ಬಂದರು. ಅಂಕಿತ ಪಡೆದು ಶಿಷ್ಯರಾದವರಿಗೆ ಹರಿದಾಸ ಲಕ್ಷಣ ಹೀಗಿರಬೇಕೆಂದು—

### ಹರಿದಾಸಲಕ್ಷಣ ಸುಳಾದಿ

#### ಧ್ರುವತಾಳ

ಹರಿದಾಸ ಲಕ್ಷಣವಿರಬೇಕು ಈಪರಿ
ಗರುವ ಕೋಪ ಮದಮತ್ಸರ ಬಿಡಬೇಕು.

ಮಾರುತ ಮತಕ್ಕೆ ಎಲ್ಲಿ ಸರಿಗಾಣೆನೆನುತಲಿ
ಧರೆಯೊಳು ಕೂಗಿ ಡಂಗುರ ಹೊಡೆಯಬೇಕು.
ಎರಡಾರುಪುಂಡ್ರ ವಿರಚಿಸಿ ಪಂಚ ಮುದ್ರೆ
ಧರರಾಗಿ ತಪ್ತಾಂಕಿತ ಧರಿಸಬೇಕು ಭುಜದಿ
ಶಿರಿಬೊಮ್ಮ ಭವಾದ್ಯರಿಗೆ ತರತಮ ಭೇದದಿಂದ
ಎರಗಿ ಎನ್ನೊಳಗಿದ್ದು ಪೊರೆಯೆಂದಾಡಲಿಬೇಕು.
ಗುರುಹಿರಿಯರಿಗಾದರ ಪೂರ್ವಕದಿಂದ
ಕರವ ಮುಗಿದು ನಮಸ್ಕರಿಸುತಲಿರಬೇಕು.
ನೆರೆಹೊರೆಯವರಿಗೆ ನಿರುತದಲ್ಲಿದ್ದರು ಬೇ
ಸರಗೊಳಿಸದೆ ಸಂಚರಿಸುತಲಿರಬೇಕು.
ಹರಣ ಹರಿಯಾಧೀನ, ನೆರೆದ ಸತಿಸುತರು
ನಿರುತ ಹರಿಗೆ ದಾಸರೆಂದು ಗಣಿಸಬೇಕು.
ಹರಿದಿವಸ ಹರಿಚರಿತೆ ಹರಿಸ್ಮರಣೆ ಹರಿಪೂಜೆ
ಹರಿಶ್ರವಣ ಅಂತರಶುದ್ಧಿಯಿರಲಿಬೇಕು.
ಹರಿ ಪರದೇವತೆ ವಿಜಯ ವಿಠಲಗತಿ
ಸುರರಾದ್ಯರಿಗೆ ಎಂದು ಉರವಣಿಸಿ ನುಡಿಯಬೇಕು ||೧||

ಮಟ್ಟತಾಳ

ಪರಧನ ಪರಸತಿ ಪರನಿಂದ್ಯದವರ
ಸರಸದಲ್ಲಿರದೆ ಚರಿಸಬೇಕು ದೂರ.
ನರರು ಬೈದರೆ ಆದರವೆಂದು ತಿಳಿದು
ಹರುಷ ಬಡಲಿಬೇಕು ನಿರುತದಲಿ.
ಸುರತರು ದೊರೆತಂತೆ ಕರೆದು ಮನ್ನಿಸಿದರು
ಹಿರಿಹಿರಿ ಹಿಗ್ಗದೆ ಬರಡು ತಾನಿರಬೇಕು.
ನೆರೆದ ಸಂದಣಿಯೊಳು ಚರಿಸಬಾರದು ಪೋಗಿ
ಬರಿದೆ ಕುಳಿತು ಹಾಳುಹರಟೆಯನಾಡದಲೆ
ಮರಿಯಾದೆಯ ಸೊಲ್ಲು ಇರಬೇಕು ತನ್ನೊಳು.

ಪರಮ ತತ್ವವ ತಿಳಿದು ದುರುಳರಿಗರುಹದೆ
ಸುರಿಯಬೇಕು ಸುಖ ಮರಳಿ ಮರಳಿ ನೆನೆದು.
ಪರಮಗುಪ್ತನಾದ ವಿಜಯವಿಠಲನ
ನೆರೆನಂಬಲಿಬೇಕು ಕುರುಹು ಕಾಣಿಸುವಂತೆ ॥ ೨ ॥

ತ್ರಿಪುಟತಾಳ

ಲೇಸಾದರು ಹರಿಯ ಕಾರುಣ್ಯವೆನಬೇಕು
ಲೇಸಾಗದೆ ಬಲು ಕ್ಲೇಶ ಬಂದೊದಗಲು
ಏಸು ಜನ್ಮದ ಪಾಪ ರಾಶಿ ಬಂದೊದಗಿತೋ
ಈ ಶರೀರಕೆ ಬಂದು ಪ್ರಾಪ್ತವಾದದ್ದು ಅನುಭ
ವೀಸದೆ ಬಿಡದೆಂದು ಸತ್ಯದಿಂದಿರಬೇಕು.
ಲೇಶವಾದರು ದುಃಖ ಹಚ್ಚಿಕೊಳ್ಳದೆ ಮಹಾ
ತೋಷದಲ್ಲಿರಬೇಕು ನೋಯದಲೆ.
ಶ್ರೀಶನೆ ಗತಿಯೆಂದು ಬೇಸರದಲೆ ಬಂದ
ಕ್ಲೇಶಗಳುಣಬೇಕು ಬಂದಾಗಲೂ.
ದೇಶಕಾಲಗುಣ ಪರಿಪೂರ್ಣ ಹರಿಯಿರೆ
ಘಾಸಿ ಎಲ್ಲಿಯದೆಂದು ನಲಿಯಬೇಕು.
ಶ್ರೀ ಸತಿ ಕಾಲವೇದ ಜೀವ ಪ್ರಳಯದಲ್ಲಿ
ನಾಶವಾಗದು ಭೇದ ಸಿದ್ಧವೆಂದೆನಬೇಕು.
ವಾಸುದೇವ ನಮ್ಮ ವಿಜಯವಿಠಲನ
ದಾಸಾನುದಾಸರ ದಾಸನಾಗಲಿಬೇಕು. ॥ ೩ ॥

ಅಟ್ಟತಾಳ

ಬಡತನ ಬಂದರೆ ಹಿಗ್ಗುತಲಿರಬೇಕು.
ಜಡನಾಗಿ ಬಾಹಿರದಲ್ಲಿ ತೋರಬೇಕು.
ಅಡಿಗಡಿಗೆ ಲಜ್ಜೆಗೆಡಬೇಕು ಸರ್ವದಾ.
ಒಡಲಿಗೆ ಚಿಂತೆಮಾಡದೆ ದೃಢವಿರಬೇಕು.

ಒಡವೆವಸ್ತು ತಾಯಿತಂದೆ ಈ ಲೋಕದ
ಒಡೆಯ ಕೃಷ್ಣನೆಂದು ಬಿಡದೆ ನಂಬಲಿಬೇಕು.
ಎಡೆಗೆ ಪರಿಮಿತ ಧಾನ್ಯತರಲಿಬೇಕು.
ಕೊಡಬೇಕು ಕೊಡಬೇಕು ಒಬ್ಬರಿಗದರೊಳು.
ಕಡುಗಲಿ ವಿಜಯ ವಿಠಲನಪಾದ
ಪಿಡಿದು ಭಜಿಸಬೇಕು ನಲಿನಲಿದಾಡುತ. ॥ ೪ ॥

ಆದಿತಾಳ

ಉಟ್ಟದಕಿಂತಮೇಲು ಇಟ್ಟದಕಿಂತಮೇಲು
ಕೊಟ್ಟದಕಿಂತಮೇಲು ವಿಠಲನ ಸ್ಮರಣೆ ಮನ
ಮುಟ್ಟಿ ಬಹಿರದಲ್ಲಿ ಆಟ್ಟಹಾಸದಿಂದ
ಚಿಟ್ಟಕ್ಕಿ ಕೂಗುವದು ಇಷ್ಟು ಸುಖಕೆಮೇಲು
ದಟ್ಟಡಿಯಿಂದ ತಿಳಿದು ನಿಷ್ಠೆಯಿಂದಲಿರಲು
ಇಷ್ಟಪ್ರಾಪುತ ಆವಗಾರಿಷ್ಟವು ಪರಿಹರ
ಹುಟ್ಟುಸಾವಿಲ್ಲದ ವಿಜಯವಿಠಲ ತಾನು
ಕೊಟ್ಟು ಸಾಕುವ ದಯವಿಟ್ಟು ದಾಸನವಮಾಡಿ ॥ ೫ ॥

ಜತೆ

ಈ ಪರಿಯಿದ್ದವಗೆ । ಅನಂತ ಜನುಮುಕ್ಕು
ತಾಪತ್ರಯಗಳಿಲ್ಲ । ವಿಜಯ ವಿಠಲ ಬಲ್ಲ ॥ ೧ ॥

ಎಂದು ಉಪದೇಶಮಾಡಿದರು.

ಪುರಂದರದಾಸರ ನಂತರ ಹೆಚ್ಚು ಸುಳಾದಿಗಳನ್ನು ಬರೆದವರೆಂದರೆ ವಿಜಯದಾಸರು. ಅನಂತರ ಗೋಪಾಲದಾಸರು. ದಾಸರ ಒಂದೊಂದು ಸುಳಾದಿಗಳೂ ಬಲು ಅರ್ಥವತ್ತಾಗಿವೆ. ನೀತಿಬೋಧಕವಾಗಿವೆ. ತತ್ತ್ವ ಪುಂಜಗಳಾಗಿವೆ. ಒಂದೊಂದು ಸುಳಾದಿಯ ಕಾಲ ಕಾರಣಗಳನ್ನು ಬರೆಯ ಬೇಕೆಂದರೆ ಸಾವಿರ ಪುಟಗಳಾದರೂ ಮುಗಿಯುವಂತಿಲ್ಲ. ಸುಳಾದಿಗಳನ್ನೇ

ಪ್ರತ್ಯೇಕ ಮುದ್ರಿಸುವ ಅನುಕೂಲ ದೊರೆತಾಗ ವಾಚಕರು ಓದಬೇಕೆಂದು ಪ್ರಾರ್ಥನೆಯಿದೆ.

## ತಿರುಪತಿ

ದಾಸರು ತಿರುಪತಿಗೆ ಬಂದು ಪುರಂದರದಾಸರ ಮಂಟಪದಲ್ಲಿಳಿದರು. ಶ್ರೀನಿವಾಸನ ಸ್ತೋತ್ರರೂಪವಾದ ಅನೇಕ ಪದಸುಳಾದಿಗಳನ್ನು ಹಾಡಿದರು. ಬ್ರಹ್ಮೋತ್ಸವ ಕಾಲವಾಗಿದ್ದು ಗರ್ಭಾಂಕಣಕ್ಕೆ ಪ್ರವೇಶಿಸಿ ದೇವರ ದರ್ಶನ ಮಾಡುವ ಅವಕಾಶ ದೊರೆಯದ ಜನರನ್ನು ನೋಡಿ—

### ಮುಖಾರಿ— ಜಂಪೆತಾಳ

ನಿನ್ನ ದರುಶನಕೆ ಬಂದವನಲ್ಲವೋ । ದೇವ ।
ಪುಣ್ಯವಂತರ ಚರಣ ನೋಡಲು ನಾ ಬಂದೆ ॥ ಪ ॥

ಎಲ್ಲೆಲ್ಲಿಯೂ ನಿನ್ನ ವ್ಯಾಪ್ತಿ ತಾನಾಗಿರಲು
ಇಲ್ಲಿಗೇ ಬರುವ ಕಾರಣದಾವದೋ ॥
ಸೊಲ್ಲಿಗೇ ಸ್ತಂಭದಲಿ ತೋರಿದ ಮಹಮಹಿಮ
ಎಲ್ಲಿಲ್ಲವೋ ನೀನು ಬಲ್ಲಭಕುತರಿಗೆ ॥ ೧ ॥

ಕರದಾಗಲೇ ಓಡಿ ಬಂದೊದಗುವಸ್ವಾಮಿ
ಮುರಳಿ ಗಾವುದವೆಣಿಸಿ ಬರಲೇತಕೆ ॥
ನೆರೆನಂಬಿದವರಿಗಾವಲ್ಲಿಗಾಡರೆ ಏನು
ಅರಿದವರ ಮನದೊಳಗೆ ನಲಿದಾಡುವ ಚೆಲುವ ॥ ೨ ॥

ಕಠಿಣವೋ ನಿನ್ನ ಭಕುತರ ನೋಡುವ ಲಾಭ
ಸಟಿಯಲ್ಲ ವೇದಗಳು ಸಾರುತಿಹವೋ ॥
ವಟು ಮೊದಲಾದ ಸದ್ವೈಷ್ಣವರ ದಿವ್ಯಾಂಘ್ರಿ
ತೃಟಿಯಾದರೆನಗೆ ಸೋಂಕಲು ಗತಿಗೆ ದಾರಿ ॥ ೩ ॥

ನೀನಿದ್ದ ಸ್ಥಾನದಲಿ ಸಕಲ ಪುಣ್ಯಕ್ಷೇತ್ರ
ನೀನಿದ್ದ ಸ್ಥಾನದಲಿ ಸಕಲ ತೀರ್ಥ
ನೀನಿದ್ದ ಸ್ಥಾನದಲಿ ಸರ್ವ ತಾತ್ವಿಕರುಂಟು
ನಾನೆಂತು ಬರುವದು ನಿನಗೆ ತಿಳಿಯದೆ ಸ್ವಾಮಿ ॥ ೪ ॥

ಧ್ಯಾನಕೆ ನಿಲುಕುವೊಡೆ ನಿನ್ನ ಕಾಣಲಿಬಹುದು
ಜ್ಞಾನಿಗಳು ಬರುವರೆಂತೋ ಅಲ್ಲೀ ॥
ಅನಂತಜನ್ಮದಲಿ ಜಪಹೋಮ ಮಾಡಲು
ಈ ನಳಿನ ಜಾಂಡದೊಳು ಇಷ್ಟುಜನ ಕೂಡುವರೆ ॥ ೫ ॥

*ಭಳಿರೆ ತಿರುಮಲರಾಯ ನಿನ್ನ ಕರುಣಾರಸಕೆ
ನೆಲೆಗಾಣೆ ನೆಲೆಗಾಣೆ ಈ ಧರೆಯೊಳು ॥
ಒಲಿದು ಭಕತರಿಗಾಗಿ ಮದುವೆ ಹಬ್ಬಿಸಿಕೊಂಡೆ
ಸುಲಭ ದೇವರದೇವ ವಿಜಯವಿಠಲರಾಯ ॥ ೬ ॥

ಎಂಬ ಪದವನ್ನು ಹಾಡಿ ಮತ್ತೆ ಸ್ವಾಮಿಯನ್ನು ಮೂದಲಿಸಿದಂತೆ

ಭೈರವಿ ಜಂಪೆತಾಳ

ಜಯಮಂಗಳಂ ನಿತ್ಯ ಶುಭಮಂಗಳಂ ॥ ಪ ॥

ತೊಳಸದಕ್ಕಿಯ ತಿಂಬ ಕಿಲುಬು ತಳಿಗೆಯೊಳುಂಬ ।
ಕೊಳಗದಲಿ ಹಣಗಳನು ಅಳೆಸಿಕೊಂಬ ॥
ಇಲ್ಲ ತನಗೆಂದು ಸುಳ್ಳು ಮಾತಾಡಿದರೆ
ಎಲ್ಲವನು ಕಸುಕೊಂಬ ಕಳ್ಳ ಧೊರೆಗೆ ॥ ೧ ॥

ತನ್ನ ನೋಡುವೆವೆಂದು ಮುನ್ನೂರ್ಗಾವುದ ಬಂದು ।
ತನ್ನ ಗುಡಿಯ ವೊಕ್ಕ ಜನರಿಗೆಲ್ಲಾ ॥
ಹೊನ್ನುಹಣ ಕಸುಕೊಂಡು । ತನ್ನ ದರುಶನ ಕೊಡದೆ ।
ಬೆನ್ನೊಡೆಯ ಹೊಡೆಸುವ । ಅನ್ಯಾಯಕಾರಿಗೆ ॥ ೨ ॥

* ಈ ಪದದ ಆರನೇ ನುಡಿಯು ಸಂಶಯಗ್ರಸ್ತವಾಗಿದೆ.

ಗಿಡ್ಡ ಹಾರುವನಾಗಿ ಶರಗೊಡ್ಡಿ ದಾನವ ಬೇಡಿ ।
ದುಡ್ಡು ಕಾಸುಗಳಿಗೆ ಕಯ್ಯನೀಡೀ ॥
ಅಡ್ಡಬಿದ್ದ ದಾಸರಿಗೆ ವಿಡ್ಡೂರಗಳ ಕಳೆದು
ದೊಡ್ಡವರ ಮಾಳ್ಪ ಶಿರಿ ವಿಜಯವಿಠಲಗೇ ॥ ೪ ॥

ಎಂಬದಾಗಿ ಮಂಗಳವನ್ನು ಹಾಡಿ ತಮ್ಮ ಮಂಟಪಕ್ಕೆ ಬಂದರು. ಆ ದಿನ ದಾಸರಿಗೆ ಇತರರಂತೆ ದೇವರ ದರ್ಶನವಾಗಲಿಲ್ಲ. ಆದ್ದರಿಂದ ಅವರಿಗೆ ಭೋಜನವೂ ಆಗಲಿಲ್ಲ.

ಮಾರನೆಯ ದಿನ ವಿಜಯದಶಮಿ. ಸ್ವಾಮಿಯ ಬ್ರಹ್ಮರಥಾರೋಹಣ ವಾಯಿತು. ಲಕ್ಷಾಂತರ ಜನರು ಸೇರಿದ ಉತ್ಸವದಲ್ಲಿ ರಥವು ಮುಂದರಿಯಿತು. ದಾಸರ ಶಿಷ್ಯರು ನಿನ್ನೆಯೂ ದರ್ಶನವಾಗಲಿಲ್ಲ. ಇವತ್ತೂ ದರ್ಶನವಿಲ್ಲ. ಉತ್ಸವ ಮೂರ್ತಿಯನ್ನಾದರೂ ನೋಡಿ ಪಾರಣೆ ಮಾಡೋಣವೆಂದು ದಾಸರನ್ನು ಅವಸರಿಸಿದರು. ದಾಸರು ಯಾರ ಮಾತನ್ನೂ ಕಿವಿಗೆ ಹಾಕಿಕೊಳ್ಳದೆ ಧ್ಯಾನದಲ್ಲಿ ಕುಳಿತಿದ್ದರು. ಮತ್ತೆ ಮತ್ತೆ ಶಿಷ್ಯರು ಜ್ಞಾಪಿಸಲು—'ಶ್ರೀನಿವಾಸನ ರಥವು ಸಾಗಿತೇ' ಎಂದು ಕೇಳಿದರು. ಶಿಷ್ಯರು, ಹೌದು, ಸಾಗಿತೆಂದರು. 'ಹಾಗಿದ್ದರೆ ನಾನೊಂದು ಚೀಟಿಯನ್ನು ಬರೆದು ಕೊಡುವೆನು; ಅದನ್ನು ರಥದ ಬಳಿಯಲ್ಲಿ ಹಾಕಿ ಬನ್ನಿ'ರೆಂದು ಶಿಷ್ಯರಿಗೆ ಹೇಳಿದರು. ಚೀಟಿಯಲ್ಲಿ—

ಐಶ್ವರ್ಯ ಮದಮತ್ತಸ್ಸನ್ನ ಜಾನೀಷೇ ಮದಾಗಮಂ
ಪರವಾದಿಭಯೇ ಪ್ರಾಪ್ತೇ ಮದಧೀನಾ ತವಸ್ಥಿತಿಃ ॥ ೧ ॥

ಎಂಬದಾಗಿ ಬರೆದರು. ಶಿಷ್ಯರು ರಥದ ಬಳಿಗೆ ಹೋಗಿ ಚೀಟಿಯನ್ನು ಹಾಕಿ ಬಂದರು. ರಥವು ನಿಂತು ಬಿಟ್ಟಿತು. ಎಷ್ಟು ಪ್ರಯತ್ನ ಮಾಡಿದರೂ ಕದಲಲಿಲ್ಲ. ಯಾರಾದರೂ ಹರಕೆ ಬಾಕಿಯಿದ್ದರೆ ಒಪ್ಪಿಸಬೇಕೆಂದು ಮಹಂತನೇ ಮೊದಲಾದ ಅಧಿಕಾರಿಗಳು ಜನರನ್ನು ಎಚ್ಚರಿಸಿದರು. ಏನು ಮಾಡಿದರೂ ರಥವು ಮುಂದೆ ಬರಲಿಲ್ಲ. ಯಾರ ಸೇವೆಯೂ ಬಾಕಿಯಿರಲಿಲ್ಲ. ಮಹಂತರು ಪರಮಾತ್ಮನನ್ನು ಪರಿಪರಿಯಾಗಿ ಪ್ರಾರ್ಥಿಸಿದರು. ಕಾಲ

ನಿಲ್ಲುತ್ತಾ ಬಂತು. ಜನರು ನಿಂತ ಬಳಿಯಲ್ಲೇ ತಟಸ್ಥರಾಗಿ ಕುಳಿತರು. ಆಗ ಬಾಲಕನೊರ್ಬ್ಬನಮೇಲೆ ದೇವರ ಆವೇಶ ಬಂದು 'ನನ್ನ ದಾಸರನ್ನು ಕರೆತಂದರೆ ನಾನು ಬರುವೆನೆಂ'ದು ಶ್ರೀನಿವಾಸನ ಆಜ್ಞೆಯಾಯಿತು. ಮಹಂತರು ದಾಸರಾರೆಂದು ಕಂಡುಹಿಡಿದು ದೇವಸ್ಥಾನದ ಸಕಲ ಬಿರುದಾವಳಿಗಳಿಂದ ವಿಜಯದಾಸರನ್ನು ಪ್ರಾರ್ಥಿಸಿ ರಥದ ಬಳಿಗೆ ಕರೆತಂದರು. ದಾಸರು ಶ್ರೀಹರಿಯು ತಮ್ಮ ಮಾತಿಗೆ ಮಾನವಿತ್ತನೆಂದು—

**ಸಾವೇರಿ — ಆದಿತಾಳ**

ಸಾಗೀ ಬಾರಯ್ಯ ಭವ । ರೋಗದ ವೈದ್ಯನೆ ॥ ಪ ॥
ಬಾಗುವೆ ನಿನಗೆ ಚೆನ್ನಾಗಿ ತುತಿಸಿ ಇಂದು ॥
ಭಾಗೀರಥಿಪಿತ । ಭಾಗವತರ ಸಂ ।
ಯೋಗ ರಂಗ ಉರ । ಗಾಗಿರಿ ವೆಂಕಟ ॥ ಅ ॥

ರಥದ ಮಧ್ಯದೊಳಪ್ಪ । ರಥಾಂಗಧರ ಜವಾಹನ
ರಥಾಂಗಪಾಣಿಯೆ ದಶ । ರಥ ನೃಪತಿ ಪಾಲಿಸಾ ।
ರಥಗೆ ಸಾರಥಿಯಾಗಿ । ರಥವ ನಡೆಸಿ ಅತಿ
ರಥ ಮಹಾರಥರ ವಿ । ರಥರ ಮಾಡಿಸಿ ಗೆಲಿದೆ ॥
ಪ್ರಥಮದೈವ । ಮನ್ಮಥಪಿತ ದೈತ್ಯರ ।
ಮಥನ ಭಕ್ತರ ಮನೋ । ರಥ ಪರಿಪೂರ್ಣನೆ ।
ಸತತ ಸುವರ್ಣನೆ । ಕಥಾಶ್ರವಣದಿ ಸ
ತ್ಪಥವ ಪಾಲಿಸುತಿಪ್ಪ । ಪ್ರಥಮಾಂಗದೊಡೆಯನೆ ॥೧॥

ನಿಲ್ಲದೆ ಬರುವದು । ಫುಲ್ಲಲೋಚನ ಶಿರಿ ।
ವಲ್ಲಭ ಸರ್ವರಿಗು । ಬಲ್ಲಿದನಪ್ರತಿ ।
ಮಲ್ಲ ವಿರೋಧಿಯೆ । ಮೆಲ್ಲಮೆಲ್ಲನೆ ಪಾದ ।
ಪಲ್ಲವ ಪಾಲಿಸುತ್ತ । ಸುಲಲ್ಲಿತವಾಗಿ ॥
ಎಲ್ಲಕಾಲದಿ ನಮ್ಮ । ನೆಲ್ಲರ ಸಲಹುವ ।

ಗಿಡ್ಡ ಹಾರುವನಾಗಿ ಶರಗೊಡ್ಡಿ ದಾನವ ಬೇಡಿ ।
ದುಡ್ಡುಕಾಸುಗಳಿಗೆ ಕಯ್ಯನೀಡೀ ॥
ಅಡ್ಡಬಿದ್ದ ದಾಸರಿಗೆ ವಿಡ್ಡೂರಗಳ ಕಳೆದು
ದೊಡ್ಡವರ ಮಾಳ್ಪ ಶಿರಿ ವಿಜಯವಿಠಲಗೇ ॥ ೪ ॥

ಎಂಬದಾಗಿ ಮಂಗಳವನ್ನು ಹಾಡಿ ತಮ್ಮ ಮಂಟಪಕ್ಕೆ ಬಂದರು. ಆ ದಿನ ದಾಸರಿಗೆ ಇತರರಂತೆ ದೇವರ ದರ್ಶನವಾಗಲಿಲ್ಲ. ಆದ್ದರಿಂದ ಅವರಿಗೆ ಭೋಜನವೂ ಆಗಲಿಲ್ಲ.

ಮಾರನೆಯ ದಿನ ವಿಜಯದಶಮಿ. ಸ್ವಾಮಿಯ ಬ್ರಹ್ಮರಥಾರೋಹಣ ವಾಯಿತು. ಲಕ್ಷಾಂತರ ಜನರು ಸೇರಿದ ಉತ್ಸವದಲ್ಲಿ ರಥವು ಮುಂದರಿಯಿತು. ದಾಸರ ಶಿಷ್ಯರು ನಿನ್ನೆಯೂ ದರ್ಶನವಾಗಲಿಲ್ಲ. ಇವತ್ತೂ ದರ್ಶನವಿಲ್ಲ. ಉತ್ಸವ ಮೂರ್ತಿಯನ್ನಾದರೂ ನೋಡಿ ಪಾರಣೆ ಮಾಡೋಣವೆಂದು ದಾಸರನ್ನು ಅವಸರಿಸಿದರು. ದಾಸರು ಯಾರ ಮಾತನ್ನೂ ಕಿವಿಗೆ ಹಾಕಿಕೊಳ್ಳದೆ ಧ್ಯಾನದಲ್ಲಿ ಕುಳಿತಿದ್ದರು. ಮತ್ತೆ ಮತ್ತೆ ಶಿಷ್ಯರು ಜ್ಞಾಪಿಸಲು—'ಶ್ರೀನಿವಾಸನ ರಥವು ಸಾಗಿತೇ' ಎಂದು ಕೇಳಿದರು. ಶಿಷ್ಯರು, ಹೌದು, ಸಾಗಿತೆಂದರು. 'ಹಾಗಿದ್ದರೆ ನಾನೊಂದು ಚೀಟಿಯನ್ನು ಬರೆದು ಕೊಡುವೆನು; ಅದನ್ನು ರಥದ ಬಳಿಯಲ್ಲಿ ಹಾಕಿ ಬನ್ನಿ'ರೆಂದು ಶಿಷ್ಯರಿಗೆ ಹೇಳಿದರು. ಚೀಟಿಯಲ್ಲಿ—

ಐಶ್ವರ್ಯ ಮದಮತ್ತಸ್ಸನ್ನ ಜಾನೀಷೇ ಮದಾಗಮಂ
ಪರವಾದಿಭಯೇ ಪ್ರಾಪ್ತೇ ಮದಧೀನಾ ತವಸ್ಥಿತಿಃ ॥ ೧ ॥

ಎಂಬದಾಗಿ ಬರೆದರು. ಶಿಷ್ಯರು ರಥದ ಬಳಿಗೆ ಹೋಗಿ ಚೀಟಿಯನ್ನು ಹಾಕಿ ಬಂದರು. ರಥವು ನಿಂತು ಬಿಟ್ಟಿತು. ಎಷ್ಟು ಪ್ರಯತ್ನಮಾಡಿದರೂ ಕದಲಲಿಲ್ಲ. ಯಾರಾದರೂ ಹರಕೆ ಬಾಕಿಯಿದ್ದರೆ ಒಪ್ಪಿಸಬೇಕೆಂದು ಮಹಂತನೇ ಮೊದಲಾದ ಅಧಿಕಾರಿಗಳು ಜನರನ್ನು ಎಚ್ಚರಿಸಿದರು. ಏನು ಮಾಡಿದರೂ ರಥವು ಮುಂದೆ ಬರಲಿಲ್ಲ. ಯಾರ ಸೇವೆಯೂ ಬಾಕಿಯಿರಲಿಲ್ಲ. ಮಹಂತರು ಪರಮಾತ್ಮನನ್ನು ಪರಿಪರಿಯಾಗಿ ಪ್ರಾರ್ಥಿಸಿದರು. ಕಾಲ

ಮಿಾರುತ್ತಾ ಬಂತು. ಜನರು ನಿಂತ ಬಳಿಯಲ್ಲೇ ತಟಸ್ಥರಾಗಿ ಕುಳಿತರು. ಆಗ ಬಾಲಕನೊರ್ವನಮೇಲೆ ದೇವರ ಆವೇಶ ಬಂದು 'ನನ್ನ ದಾಸರನ್ನು ಕರೆತಂದರೆ ನಾನು ಬರುವೆನೆಂ'ದು ಶ್ರೀನಿವಾಸನ ಆಜ್ಞೆಯಾಯಿತು. ಮಹಂತರು ದಾಸರಾರೆಂದು ಕಂಡುಹಿಡಿದು ದೇವಸ್ಥಾನದ ಸಕಲ ಬಿರುದಾವಳಿಗಳಿಂದ ವಿಜಯದಾಸರನ್ನು ಪ್ರಾರ್ಥಿಸಿ ರಥದ ಬಳಿಗೆ ಕರೆತಂದರು. ದಾಸರು ಶ್ರೀಹರಿಯು ತಮ್ಮ ಮಾತಿಗೆ ಮಾನವಿತ್ತನೆಂದು—

### ಸಾವೇರಿ — ಆದಿತಾಳ

ಸಾಗೀ ಬಾರಯ್ಯ ಭವ । ರೋಗದ ವೈದ್ಯನೆ ॥ ಪ ॥
ಬಾಗುವೆ ನಿನಗೆ ಚೆನ್ನಾಗಿ ತುತಿಸಿ ಇಂದು ॥
ಭಾಗೀರಥಿಪಿತ । ಭಾಗವತರ ಸಂ ।
ಯೋಗ ರಂಗ ಉರ । ಗಾಗಿರಿ ವೆಂಕಟ ॥ ಅ ॥

ರಥದ ಮಧ್ಯದೊಳಪ್ಪ । ರಥಾಂಗರಾಜವಾಹನ
ರಥಾಂಗಪಾಣಿಯೆ ದಶ । ರಥ ನೃಪತಿ ಪಾಲಿಸಾ ।
ರಥಗೆ ಸಾರಥಿಯಾಗಿ । ರಥವ ನಡೆಸಿ ಅತಿ
ರಥ ಮಹಾರಥರ ವಿ । ರಥರ ಮಾಡಿಸಿ ಗೆಲಿದೆ ॥
ಪ್ರಥಮದೈವ । ಮನ್ಮಥಪಿತ ದೈತ್ಯರ ।
ಮಥನ ಭಕ್ತರ ಮನೋ । ರಥ ಪರಿಪೂರ್ಣನೆ ।
ಸತತ ಸುವರ್ಣನೆ । ಕಥಾಶ್ರವಣದಿ ಸ
ತ್ಪಥವ ಪಾಲಿಸುತಿಪ್ಪ । ಪ್ರಥಮಾಂಗದೊಡೆಯನೆ ॥೧॥

ನಿಲ್ಲದೆ ಬರುವದು । ಫುಲ್ಲಲೋಚನ ಶಿರಿ ।
ವಲ್ಲಭ ಸರ್ವರಿಗು । ಬಲ್ಲಿದನಪ್ರತಿ ।
ಮಲ್ಲ ವಿರೋಧಿಯೆ । ಮೆಲ್ಲಮೆಲ್ಲನೆ ಪಾದ ।
ಪಲ್ಲವ ಪಾಲಿಸುತ್ತ । ಸುಲಲ್ಲಿತವಾಗಿ ॥
ಎಲ್ಲಕಾಲದಿ ನಮ್ಮ । ನೆಲ್ಲರ ಸಲಹುವ ।

ಎಲ್ಲಿ ನಿನಗೆ ಸರಿ । ಯಿಲ್ಲವೊ ನೋಡಲು ।
ಸಲ್ಲುವದೋ ಬಿರು । ದಲ್ಲಿಗಲ್ಲಿಗೆ ಗುಣ ।
ಬಲ್ಲವರಾರಯ್ಯ । ಕಲ್ಲು ಕೊನೆಯೊಳಿಪ್ಪ ॥ ೨ ॥

ಬೊಮ್ಮ ಮೊದಲು ಮನುಜೊತ್ತುಮ್ಮರು ಕಡೆಯಾಗಿ
ನಿಮ್ಮ ದಾಸರುಗಳ ಸಂಬಂಧಿಯರ ಪಾದ
ನಮ್ಮಿಕೊಂಡಿಪ್ಪಂಥಾ । ಧಮ್ಮ ನಾನು ಸರ್‍ವೋ ।
ತ್ತುವ್ಮನೆ ಅನೇಕ ಮ । ಹಿಮ್ಮಾ ಸರ್ವಭೂಷಿತ ॥
ರಮ್ಮೆ ಧರಣಿದೇವಿ । ಇಮ್ಮಹಿಷೇರಗೂಡಿ ।
ಸಮ್ಮುಖವಾಗುತ । ಗಮ್ಮನೆ ಬಾಬಾ ।
ಹಿಮ್ಮೆಟ್ಟದೆ ಶಿರಿ ವಿಜಯ ವಿಠಲ ಅನು
ಪಮ್ಮ ಮಹಿಮ ಪರ । ಬೊಮ್ಮ ತಿರುಮಲೇಶ ॥ ೩ ॥

ಎಂಬದಾಗಿ ಶ್ರೀನಿವಾಸನನ್ನು ಪ್ರಾರ್ಥಿಸಿದರು. ರಥವು ವಿಶೇಷ ಪ್ರಯತ್ನ ವಿಲ್ಲದೆ ದಡದಡನೆ ನೆಲೆಗೆ ನಿಂತಿತು. ದಾಸರ ಮೇಲಿನ ಪರಮಾತ್ಮನನುಗ್ರಹವನ್ನು ಜನರು ಕೊಂಡಾಡಿದರು. ವಿಜಯದಾಸರು ತಿರುಪತಿಯಲ್ಲಿದ್ದಾಗ ಅನೇಕ ಮಹಿಮೆಗಳು ನಡೆದವು. ಗ್ರಂಥವಿಸ್ತಾರ ಭಯದಿಂದ ಅವುಗಳನ್ನು ಸಂಕ್ಷೇಪಿಸಬೇಕಾಗಿದೆ.

ವಿಜಯದಾಸರು ದಕ್ಷಿಣ ದೇಶದ ಎಲ್ಲ ಕ್ಷೇತ್ರಮೂರ್ತಿಗಳ ಮೇಲೂ ಹಾಡಿರುವ ದೇವರ ನಾಮಗಳನ್ನು ನೋಡಿದರೆ, ಪುರಂದರದಾಸರಂತೆ ಅವರು ಎಲ್ಲೆಡೆಗಳನ್ನೂ ಸಂದರ್ಶಿಸಿದಂತೆ ಗೊತ್ತಾಗುತ್ತದೆ. ಮೈಸೂರು ಸೀಮೆಯ ನಂಜನಗೂಡು ಶ್ವೇತಾದ್ರಿ ಬೇಲೂರು ಮೇಲುಕೋಟೆಗಳ ದೇವರ ಮೇಲೆ ಅವರು ಹಾಡಿದ ಬಹಳ ಹಾಡುಗಳು ಈಗಲೂ ಜನರ ರೂಢಿಯಲ್ಲಿವೆ. ಹೊಲೆಯರೆಂದು ಕರೆಸಿಕೊಳ್ಳುವ ಹರಿಜನಾಭಿದ ನಿಮ್ನ ಜಾತಿಯ ಜನರಲ್ಲಿ ದಾಸರಿಗಿದ್ದ ಕನಿಕರವು ಹೊಲೆಯ ಸುಳಾದಿ ಹೊಲತೀ ಸುಳಾದಿಗಳಿಂದ ಗೊತ್ತಾಗುತ್ತದೆ. ಈ ಕಾಲಕ್ಕೆ ಅವು ಮುಖ್ಯವೆಂದು ಕಂಡುಬರುವದರಿಂದ ಕೆಳಗೆ ಉದಹರಿಸಲಾಗಿದೆ:—

## ಹೊಲೆಯ ಸುಳಾದಿ

### ಧ್ರುವತಾಳ

ಹೊಲೆಯನಾವನೊ ಈ ಕಲಿಯುಗದೊಳಗೆ ನಿ
ಶ್ಚಲವಾಗಿ ತಿಳಿವುದು ಸುಲಭ ಮಾನವರು
ನಲಿದು ಕೇಳುವದು ಚಂಚಲ ಮಾಡದಲೆ
ಫಲಿತಾರ್ಥವಿದು ಹಂಬಲಿಸದು ಸತತದಲಿ
ಹಲವು ಮಾತೇನು ನಿರ್ಮಲನಾಗಿ ಕೋಪವ
ಕಳೆಯಲರಿಯದವ ಹೊಲೆಯ ಶುದ್ಧ ಹೊಲೆಯ.
ಕಳವು ಮತ್ತೊಂದು ವಾರ್ತೆಘಳಿಕೆಯಾಗದ ಪುಶಿ
ಕಲಕಲವಾಗಿ ಬಿಡದಲಾಡುವನೆ ಹೊಲೆಯ.
ಘಳಿಗೆ ತೊಲಗದವರ ಬಳಿಯಲ್ಲಿ ನಿರಂತರ
ಸುಳಿದಾಡುವನು ಅನಾಚಾರಿ ಹೊಲೆಯ.
ಬಳಗೆ ಬರಲು ಬಿಟ್ಟು ಒಳಗೆ ಉಂಬುವ ಹೊಲೆಯ
ಕುಲಗೇಡಿಯಾಗಿ ವಂಶಾವಳಿಯ ಕೆಡಿಸುವ ಹೊಲೆಯ.
ಮಲಗಿದ್ದವರ ಮೋಸಗೊಳಿಸಿ ಮನೆಯ ಬದುಕ
ಶೆಳೆದು ಕೊಂಡೆಯ್ವ ಖಳ ಎಂದಿಗು ಹೊಲೆಯ.
ಇಳೆಯ ವಲ್ಲಭ ನಮ್ಮ ವಿಜಯ ವಿಠಲನ
ತಿಳಿದು ಪೂಜಿಸದವ ಮಲಿನ ಹೊಲೆಯ. ||೧||

### ಮಟ್ಟತಾಳ

ಅನ್ನದಾನವನ್ನು ಮಾಡದಿದ್ದವ ಹೊಲೆಯ
ಹೊನ್ನು ಹಣಗಳಿಸಿ ಕೂಡಿಡುವನೆ ಹೊಲೆಯ
ಕನ್ನಿಕೆಯನ್ನು ಮಾರಿಕೊಂಬುವ ಹೊಲೆಯ
ಹೆಣ್ಣಿನ ಬಣ್ಣಕ್ಕೆ ಸೋಲುವನೇ ಹೊಲೆಯ
ತನ್ನ ಪರಾಕ್ರಮ ಪೇಳಿಕೊಂಬುವ ಹೊಲೆಯ
ಮನ್ನಣೆ ಮಾಡಲು ಹಿಗ್ಗುವನೇ ಹೊಲೆಯ

ಅನ್ನದಗೋಸುಗ ಹೊತ್ತುಗಳೆಯುವ ಹೊಲೆಯ
ಅನ್ಯಜನರ ನೋಡಿ ಬಳಲುವನೇ ಹೊಲೆಯ
ಉಣ್ಣಲಿಕ್ಕಿ ಹಿಂದೆ ಹಂಗಿಸುವನೆ ಹೊಲೆಯ
ಬೆನ್ನಬಿದ್ದನ್ನ ಒಪ್ಪಿಸಿಕೊಡುವನೆ ಹೊಲೆಯ
ಮಣ್ಣುಕೂಡಿಸಿ ಧಾನ್ಯ ಮಾರುವನೇ ಹೊಲೆಯ
ಎನ್ನದು ಎಂದೆಂಬ ಸೊಲ್ಲು ಪೇಳುವ ಹೊಲೆಯ
ಪನ್ನಂಗಶಯನ ಶ್ರೀ ವಿಜಯ ವಿಠಲನ
ಸನ್ನುತಿಸಿ ಜ್ಞಾನ ಪಡೆಯದಿದ್ದವ ಹೊಲೆಯ ‖ ೨ ‖

ತ್ರಿಪುಟತಾಳ

ಶ್ರವಣ ಕೇಳುತಲೆದ್ದು ಪೋಗುವವ ಹೊಲೆಯ
ಅವಸರದೊಳಗೆ ಕಯ್ಯಬಿಡುವವ ಹೊಲೆಯ
ನವನೀತ ವಿಕ್ರಯಕ್ಕೆ ಕೊಡುವ ಭೂಸುರ ಹೊಲೆಯ
ಯವನರಲ್ಲಿ ಸೇವೆಮಾಡುವನೇ ಹೊಲೆಯ
ಕವಿಗಳ ಆವಾಗ ನಿಂದಿಸುವನೆ ಹೊಲೆಯ
ದಿವಸದಲಿ ಸಂಭೋಗ ಮಾಡುವನೇ ಹೊಲೆಯ
ಸವಿಯೆಂದು ನೀರುಳ್ಳಿ ತಿಂಬುವನೇ ಹೊಲೆಯ
ರವಿಯು ಮೂಡಲು ಮಲಗಿ ಹೊರಳುವನೆ ಹೊಲೆಯ
ಶವ ಕೇರಿಯೊಳಗಿರಲು ಉಂಬುವನೇ ಹೊಲೆಯ
ಕಿವಿಗೊಟ್ಟು ಕೊಂಡೆಯ ಕೇಳುವನೇ ಹೊಲೆಯ
ಅವನಿಯೊಳಗೆ ಕ್ಷಮೆಯಿಲ್ಲದವನೆ ಹೊಲೆಯ
ಜನರ ಭೀತಿಗೆ ಎಚ್ಚರಿಯದವ ಹೊಲೆಯ
ಸವತಿಯಮೇಲೆ ಮಗಳ ಕೊಡುವನೆ ಹೊಲೆಯ
ಬವರದಲ್ಲಿ ನೃಪನ ಒಪ್ಪಿಸುವನೆ ಹೊಲೆಯ
ಗವಹೂಡಿ ಬದುಕುಮಾಡಿಸುವನೆ ಹೊಲೆಯ
ಪವಮಾನನುತ ನಮ್ಮ ವಿಜಯ ವಿಠಲನಂಘ್ರಿ
ನವಭಕುತಿಯಲ್ಲಿ ಅರ್ಚಿಸದವ ಹೊಲೆಯ. ‖ ೩ ‖

ಅಟ್ಟತಾಳ

ಕ್ರತು ಮಾಡುವಲ್ಲಿಗೆ ಪೋಗದಿದ್ದವ ಹೊಲೆಯ
ಸತಿಪತಿಗೆ ಭೇದವಿಕ್ಕುವನೇ ಹೊಲೆಯ
ಋತುಕಾಲದಲ್ಲಿ ಬೇರೆ ಇಪ್ಪನೆ ಹೊಲೆಯ
ಪಿತ ಮಾತಾ ಗುರುಗಳ ಬೈಯುವನೇ ಹೊಲೆಯ
ಯತಿಗಳ ನಿಂದಿಸುವನು ಹೇಡಿ ಹೊಲೆಯ
ಹಿತಮಾಡಿದವರಿಗೆ ಪ್ರತಿಕೂಲನು ಹೊಲೆಯ
ಮತಿಯಿಂದ ಸಾಲ ತಂದು ತಿಂದವನೆ ಹೊಲೆಯ
ಕ್ಷಿತಿಯೊಳು ಅಪಕೀರ್ತಿ ಹೊತ್ತವನೇ ಹೊಲೆಯ
ರತಿಪತಿಪಿತ ವಿಜಯ ವಿಠಲನ ಬಿಟ್ಟು
ಸತತ ಸಂಸಾರದಿ ಆಸಕ್ತನೇ ಹೊಲೆಯ || ೪ ||

ಆದಿತಾಳ

ಬಿಸಜನಾಭನ ದಿವಸ ಮಾಡದಿದ್ದವ ಹೊಲೆಯ
ನೊಸಲಲ್ಲಿ ಪುಂಡ್ರವ ಹಚ್ಚದವ ಹೊಲೆಯ
ಅಶನ ಘಾತಕನಾಗಿ ತಿರುಗುವನೇ ಹೊಲೆಯ
ಪಶು ಶಿಶುಗಳ ಒದ್ದು ನೂಕುವನೇ ಹೊಲೆಯ
ಹಸಿದು ಬಂದವರನ್ನು ಕಳುಹುವನೇ ಹೊಲೆಯ
ಸೊಸೆಯ ಮಕ್ಕಳಂತೆ ಅರಿಯದಿದ್ದವ ಹೊಲೆಯ
ಹಸನಾದ ಹರಿಪಾದ ತೀರ್ಥಕೊಳದವ ಹೊಲೆಯ
ಪಸರಿಸಿ ಅನರ್ಪಿತ ಅನ್ನ ವುಂಬುವ ಹೊಲೆಯ
ಅಸುರಾರಿ ವಿಜಯ ವಿಠಲನ ದೈವವೆಂದು
ಕುಶಲದಿ ಹಾಡಿ ಪಾಡದವನೆ ಹೊಲೆಯ || ೫ ||

ಜತೆ

ಇದರೊಳು ಕ್ರಮವುಂಟು | ವಿಜಯ ವಿಠಲನ
ಪದಗಳರ್ಚಿಸದವ | ಎಂದಿಗು ಹೊಲೆಯ || ೧ ||

## ಹೊಲತಿ ಸುಳಾದಿ

### ಧ್ರುವತಾಳ

ಹೊಲತಿ ಮತ್ತಾವಳೊ ಹೊಲೆಗೇರಿಯೊಳಗಿಲ್ಲ
ಹೊಲೆಗೇರಿಯೊಳಗಿದ್ದ ಹೊಲತಿ ಹೊಲತಿಯಲ್ಲ
ಕುಲವೆ ಆವಳಾದರು ಹೇಳುವದಿಲ್ಯಾಕವಳು
ಒಳಗೆ ಬರಳು ನಮ್ಮೊಳು ತಿರುಗಬಲ್ಲಳೆ
ಕಲಕಲವಾಗಿ ನಮ್ಮ ಬಳಿಯಲ್ಲಿ ಒಂದರ
ಘಳಿಗೆ ಬಿಡದಲಿದ್ದು ಹೊಲೆಗಲಸುವಳು
ಕುಲಕೋಟಿಗಳ ಕೇವಲವಾಗಿ ನಿತ್ಯ ಸತ್ಯ
ಸುಲಭವಾಗಿಪ್ಪ ಕರತಳದೊಳಗಿನ ಮುಕ್ತಿ
ಗಳ ದೂರಮಾಡಿ ನರಕಕ್ಕೆಳೆವಂತೆ ಮಾಡುವಳು
ಇಳೆಯೊಳಗುಂಟಾದ ಹೊಲತಿಯ ನಡತೆಯ
ನೆಲೆಯ ತಿಳಿದು ಸ್ನೇಹ ಬಳಸಿರೊ ಜನರೆಲ್ಲ
ಬಲದೇವ ವಿಜಯ ವಿಠಲನ ಚರಣಕ್ಕೆ
ಒಲಿಯದವಳು ಶುದ್ಧ ಹೊಲತಿ ಕಾಣಿರೊ ನಿತ್ಯ ॥ ೧ ॥

### ಮಟ್ಟತಾಳ

ಮಕ್ಕಳ ಬಲುಮೆಯಲಿ ಗಂಡನ ಪಾಪದಲಿ
ಭಕ್ತಿಯ ಮಾಡದಲೆ ಇಪ್ಪವಳೇ ಹೊಲತಿ.
ರೊಕ್ಕ ಕದ್ದು ಕೊಟ್ಟು ವ್ಯಾಪಾರವಮಾಡಿ
ನಿಕ್ಕರುಣಿಯಾಗಿ ತಿರುಗುವಳೇ ಹೊಲತಿ.
ನಕ್ಕು ನಾಚಿಕೆಗೆಟ್ಟು ಕಂಡಲ್ಲಿ ಚರಿಸಿ
ಕಕ್ಕಸ ಮನದಲ್ಲಿ ಇಪ್ಪವಳೇ ಹೊಲತಿ.
ರಕ್ಕಸಾಂತಕ ವಿಜಯವಿಠಲ ಶ್ರೀಹರಿಯ
ಭಕ್ತರಲಿ ದ್ವೇಷಮಾಡುವಳೇ ಹೊಲತಿ ॥ ೨ ॥

ತ್ರಿಪುಟತಾಳ

ಪಂಚ_ಯೊಳಗೆ ಪ್ರಾಪಂಚದವಳೆ ಹೊಲತಿ
ಪಂಥವಾಳಿಗಳನಿಕ್ಕುವಳೇ ಹೊಲತಿ
ನಿಂತಲ್ಲಿ ಮನೆವಾರ್ತೆ ಪೇಳುವಳೇ ಹೊಲತಿ
ಸಂತತ ಶುಚಿಯಿಲ್ಲದವಳೆ ಹೊಲತಿ
ಶಾಂತಗುಣದಿ ನಿತ್ಯನಡೆಯದವಳೆ ಹೊಲತಿ
ಕಂತುಗೇಡಿಪತಿಗೆಂತೆನಿಪಳೆ ಹೊಲತಿ
ಮಂತ್ರೋಪದೇಶವಮಾಡುವಳೇ ಹೊಲತಿ
ಚಿಂತಿಸಿ ಪರರಿಗೆ ಕದ್ದೊಯ್ವಳೇ ಹೊಲತಿ
ಶಾಂತಮೂರುತಿ ನಮ್ಮ ವಿಜಯವಿಠಲನಂಘ್ರಿ
ಸಂತತ ಪತಿಯಲ್ಲಿ ನೆನೆಯದವಳೆ ಹೊಲತಿ ॥೩॥

ಅಟ್ಟತಾಳ

ಮುದ್ದಿಕ್ಕಿ ಜನರನ್ನು ಕೆಡಿಸುವಳೇ ಹೊಲತಿ
ಇದ್ದದ್ದ ಇಲ್ಲವೆಂದಾಡುವಳೇ ಹೊಲತಿ
ಶುದ್ಧಿಗೈಯದೆಪಾಕ ಕೆಡಿಸುವಳೇ ಹೊಲತಿ
ಸುದ್ದಿಗೆ ಕಿವಿಜೋತು ಪೋಗುವಳೇ ಹೊಲತಿ
ನಿದ್ರೆಯಲ್ಲೇ ಆಸಕ್ತಳು ಹೊಲತಿ
ಶುದ್ಧರಂಕೆಯಮಿೂರಿ ನಡೆಯುವಳೇ ಹೊಲತಿ
ಕದ್ದು ಬಾಯುಸವಿಯ ಸವಿಯುವಳೇ ಹೊಲತಿ
ಬುದ್ಧಿಸ್ತ್ರಿಮಿತಿವಿಲ್ಲದವಳೆ ಶುದ್ಧ ಹೊಲತಿ
ಸಿದ್ಧ ಮಹಿಮಸ್ವಾಮಿ ವಿಜಯವಿಠಲನಲ್ಲಿ
ಸದ್ಭಕ್ತಿಯರಿಯದವಳು ಹೀನ ಹೊಲತಿ ॥



ಆದಿತಾಳ

ವೈಷ್ಣವಜ್ಞಾನವ ನಂಬದವಳು ಹೊಲತಿ
ಶಿಷ್ಟಾಚಾರವಬಿಟ್ಟು ನಡೆಯುವಳೇ ಹೊಲತಿ

ಕೆಟ್ಟಿರುವರ ಸಂಗಡಾಡುವಳೇ ಹೊಲತಿ
ಗುಟ್ಟಾಗಿ ಸಂಸಾರಮಾಡದವಳೆ ಹೊಲತಿ
ಹೊಟ್ಟೆಗೋಸುಗ ಕೃತ್ಯಬಿಟ್ಟುಂಬುವಳೆ ಹೊಲತಿ
ಅಟ್ಟುಹಾಕುವನೆಂಬ ಸೊಲ್ಲಿನವಳು ಹೊಲತಿ
ನಿಷ್ಠುರವಚನಗಳಾಡುವಳೇ ಹೊಲತಿ
ಪುಟ್ಟಿದ ಮನೆಗಪಕೀರ್ತಿತರುವಳೆ ಹೊಲತಿ
ಥಿಟ್ಟಮೂರುತಿ ನಮ್ಮ ವಿಜಯವಿಠಲನ್ನ
ಪಟ್ಟಣಸೇರದ ನಾರಿಯೆ ಹೊಲತಿ ||೫||

ಜತೆ

ಸಂತತೆಸಗಿದಕರ್ಮ ತನ್ನನಾಳುವ ಪತಿಯು
ಶಾಂತ ವಿಜಯವಿಠಲಗೆನ್ನದವಳೆ ಹೊಲತಿ ||೧||

---

- ೪ -

ವಿಜಯದಾಸರು ದಕ್ಷಿಣಯಾತ್ರೆಯಾದ ನಂತರ ಕೆಲವು ಕಾಲ ಚೀಕಲಪರಿಯಲ್ಲಿ ವಾಸಮಾಡಿದರು. ಇವರು ರಚಿಸಿದ ೨೫ ಸಾವಿರ ನಾಮಗಳಲ್ಲಿ ಈಗ ಒಂದು ಸಾವಿರದಷ್ಟೂ ದೊರೆಯದಿರುವದು ಕನ್ನಡಿಗರ ದುರ್ದೈವವಾಗಿದೆ. ಭಗವದುಪಾಸನಾಕ್ರಮವನ್ನು ದಾಸರು ವಿವಿಧ ಸುಳಾದಿಗಳಾಗಿ ಬರೆದರು. ಆ ಸುಳಾದಿಗಳಲ್ಲಿ ಹೇಳಿರುವಂತೆ ಚಕ್ರಗಳನ್ನು ರೇಖಿಸಿ, ಬೀಜಾಕ್ಷರಗಳನ್ನು ಕ್ಲಪ್ತಸ್ಥಾನಗಳಲ್ಲಿ ಗುರ್ತಿಸಿ, ಉಪಾಸಕರಿಗೆ ನಕ್ಷೆಗಳಂತೆ ಬರೆದುಕೊಡಲು ಅವಕಾಶವಿದೆ. ಯೋಗಶಾಸ್ತ್ರ ಮಂತ್ರಶಾಸ್ತ್ರ ತಂತ್ರಶಾಸ್ತ್ರಗಳಿಂದ ಯಾವದು ತಿಳಿಯಲು ಗಹನವೋ ಅದು ವಿಜಯದಾಸರ ಸುಳಾದಿಗಳಿಂದ ಸುಲಭವಾಗಿ ಗೊತ್ತಾಗುತ್ತದೆ.

ಈ ಕಾಲದಲ್ಲಿ ಅಂಥಾ ಗುಪ್ತವಿದ್ಯೆಗಳನ್ನು ಅಭ್ಯಸಿಸುವರಾರು? ಉಪಾಸಕರನ್ನು ಕಾಣುವದೆಲ್ಲಿ?

ಹೀಗಿರಲು ಕೆಲವು ಕಾಲಾನಂತರ ತೃತೀಯ ಕಾಶೀಯಾತ್ರೆಮಾಡ ಬೇಕೆಂಬ ಯೋಚನೆ ದಾಸರಿಗಾಯಿತು. ಶಿಷ್ಯಪರಿವಾರವೆಲ್ಲವೂ ಹೊರ ಟಿತು. ಮೋಹನದಾಸರಿಗೆ ಮಾತ್ರ ಜೊತೆಯಲ್ಲಿ ಪ್ರಯಾಣಮಾಡಲು ಅಪ್ಪಣೆಯಾಗಲಿಲ್ಲ. ದಾಸರು ಹೊರಡುವಾಗ ಮೋಹನದಾಸರ ಹೆಂಡತಿ ಯನ್ನು ಕರೆದು 'ಮೋಹನನಿಗೆ ಅಪಮೃತ್ಯು ಬರುವದು. ಮೃತನಾದನೆಂದು ದೇಹವನ್ನು ಸಂಸ್ಕಾರಕ್ಕೆ ಕೊಡಬೇಡ. ಅವನು ಮತ್ತೆ ಬದುಕುತ್ತಾನೆ. ಈ ಸಂಗತಿಯನ್ನು ಅವನಿಗೆ ಹೇಳಬೇಡ' ಎಂಬದಾಗಿ ತಿಳಿಸಿದರು. ದಾಸರು ಪ್ರಯಾಣ ಬೆಳೆಸಿದಮೇಲೆ ಮೋಹನದಾಸರು ಅನೇ ಗೊಂದಿಗೆ ಬಂದುಬಿಟ್ಟರು. ಕೆಲವು ಕಾಲಾನಂತರ ಮೋಹನದಾಸರಿಗೆ ದೇಹಾಲಸ್ಯವಾಯಿತು. ನಾಲ್ಕಾರು ದಿವಸಗಳ ಜ್ವರದಿಂದವರು ಮೃತರಾ ದರು. ದೇಹವನ್ನು ಸಂಸ್ಕಾರಮಾಡಬೇಕೆಂಬ ಜನರಿಗೆ ಗೃಹಿಣಿಯು ಅವ ಕಾಶಕೊಡಲಿಲ್ಲ. ವಿಜಯರಾಯರನ್ನು ಸ್ಮರಿಸುತ್ತಾ ದುಃಖಿಸುತ್ತಾ ಕುಳಿ ತಳು. ಜನರಾದರೂ ದಾಸರ ಅಭಯವಾಗಿರುವ ಸಂಗತಿಯನ್ನು ತಿಳಿದು ಆಕೆಯೊಡನೆ ತಾವೂ ಉಪವಾಸ ಕುಳಿತರು. ಈ ರೀತಿ ಮುವತ್ತಾರು ಘಂಟೆಗಳು ಕಳೆದವು.

ಅತ್ತಕಡೆ ಮೋಹನದಾಸರ ಆತ್ಮವನ್ನು ಯಮದೂತರು ಧರ್ಮ ರಾಜನ ಬಳಿಯಲ್ಲಿ ನಿಲ್ಲಿಸಿದರು. ಧರ್ಮರಾಜನು ಈತನ ಧರ್ಮಾಧರ್ಮಗ ಳೇನೆಂದು ವಿಚಾರಿಸಿದನು. ವಿಜಯದಾಸರಂಥಾ ಅಪರೋಕ್ಷ ಜ್ಞಾನಿಗಳ ಶಿಷ್ಯನು ತಾನೆಂಬ ಗರ್ವದಿಂದ ಬ್ರಹ್ಮಜ್ಞಾನಿಗಳನ್ನು ಕಂಡರೆ ವಂದನೆಮಾ ಡುತ್ತಿರಲಿಲ್ಲವೆಂಬುದರ ವಿನಾ ಮತ್ತಾವ ಅಪರಾಧವೂ ಈತನಲ್ಲಿಲ್ಲವೆಂದು ನಿರ್ಣಯವಾಯಿತು.

ಧರ್ಮರಾಜನು--'ವಿಜಯದಾಸರಂಥಾ ಬ್ರಹ್ಮಜ್ಞಾನಿಗಳ ಶಿಷ್ಯನಿ ವನು. ಸ್ವಯಂ ವೇದವೇತ್ತನಿವನು. ಇಂಥವನು ವೇದದ ಆಜ್ಞೆಯನ್ನು ಪಾಲಿಸದಿದ್ದರೆ ಅಜ್ಞಾನಿಗಳನ್ನು ದೂರುವದೇಕೆ? ತಿಳಿಯದೆ ಮಾಡಿದ ಪಾಪಕ್ಕಿಂತ ತಿಳಿದೂ ಮಾಡಿದ ಪಾಪವು ಬಲವತ್ತರವಾದುದು. ಈತನು ದಂಡಾರ್ಹನು. ಈತನ ಶಿರಸ್ಸನ್ನು ಗರಗಸದಿಂದ ಕೊಯ್ಯಿರಿ' ಎಂದು ಆಜ್ಞೆಮಾಡಿದನು.

ಮೋಹನದಾಸರು—ವಿಜಯರಾಯಾ! ನಿನ್ನನ್ನು ನಂಬಿಯೂ ನನಗೀ ದಂಡನೆಯೇ ? ಎಂದು ಗುರುಗಳಿಗೆ ಮೊರೆಯಿಟ್ಟರು.

ಆ ಕಾಲಕ್ಕೆ ಸರಿಯಾಗಿ ದಾಸರು ತಮ್ಮ ನಿಜರೂಪದಿಂದ (ಭೃಗು ಋಷಿ) ಧರ್ಮರಾಜನ ಸಭೆಗೆ ಬಂದರು. ಬಂದ ಮುನಿಗಳನ್ನು ಅರ್ಘ್ಯಾದಿಗಳಿಂದ ಧರ್ಮರಾಜನು ಸತ್ಕರಿಸಿದನು. ಭೃಗುಮುನಿಗಳು—ಧರ್ಮರಾಜ! ನಿನ್ನ ಸತ್ಕಾರ ಹಾಗಿರಲಿ! ನಿರಪರಾಧಿಯನ್ನು ದಂಡನೆಗೇಕೆ ಗುರಿಮಾಡಿದೆ ಯೆಂದರು. ಧರ್ಮರಾಜನು ಚಕಿತನಾಗಿ ಹಾಗೇನೂ ಮಾಡಿಲ್ಲವಲ್ಲಾ ! ಅನ್ಯಾಯವಿದ್ದರೆ ತಿಳಿಸಿರೆಂದನು. ಮುನಿಗಳು—'ಈ ಮೋಹನನು ನಮ್ಮ ಶಿಷ್ಯನು. ಈತನ ಭೂಲೋಕದ ಅವಧಿ ಇನ್ನೂ ಮುಗಿದಿಲ್ಲ. ಯಾರನ್ನೋ ಕರೆತರುವುದಕ್ಕೆ ಬದಲಾಗಿ ನಿನ್ನ ದೂತರು ಈತನನ್ನು ಕರೆತಂದಿದ್ದಾರೆ. ಆದ್ದರಿಂದ ಈತನನ್ನು ಬಿಟ್ಟುಬಿಡು' ಎಂಬದಾಗಿ ನುಡಿದರು. ಋಷಿವಾಕ್ಯವು ವಿಚಾರಮಾಡಿ ನೋಡಿದ್ದರಲ್ಲಿ ಸತ್ಯವೆಂದು ಗೊತ್ತಾಯಿತು, ಮೋಹನದಾಸರ ಬಿಡುಗಡೆಯಾಯಿತು.

ಆನೇಗೊಂದಿಯಲ್ಲಿ ಮೋಹನದಾಸರ ಬಂಧುಜನರು ಎಷ್ಟುಕಾಲ ಹೆಣವನ್ನು ಮನೆಯಲ್ಲಿಟ್ಟುಕೊಂಡಿರಬೇಕು ? ಸತ್ತವರು ಬದುಕುವುದೆಂದರೇನು? ವಿಜಯದಾಸರೇನಾಡಿದರೋ, ಈಕೆಯೇನು ತಿಳಿದಳೋ ಎಂದು ನುಡಿಯಲಾರಂಭಿಸಿದರು. ಅವರಲ್ಲಿ ಅಧಿಕಪ್ರಸಂಗಿಯೊಬ್ಬನು—ಈ ಹೆಂಗಸನ್ನು ಕೇಳುವದೇನು? ಎಲ್ಲವನ್ನೂ ಸಿದ್ಧಮಾಡಿದ್ದೇನೆ. ನಾವೇ ಹೆಣವನ್ನು ಮುಟ್ಟೋಣವೆಂದು ಹೊರಟನು. ಹೆಂಗಳೆಯು ದಿಕ್ಕಿಲ್ಲದೆ ಗೋಳಾಡಿದಳು. ಇನ್ನು ಸ್ವಲ್ಪ ಕಾಲವಾದರೂ ತಡೆಯಿರಪ್ಪಾ-ಎಂದು ಮೊರೆಯಿಟ್ಟಳು. ಆ ಉದ್ಧಟನು ಈಕೆಯ ಮಾತನ್ನು ಲಕ್ಷಿಸದೆ ಶವದ ಬಳಿಗೆ ಬಂದನು. ಅಷ್ಟರಲ್ಲಿ ಮೋಹನದಾಸರ ಆತ್ಮವು ಮೃತಶರೀರವನ್ನು ಪ್ರವೇಶಿಸಿತು. ನನಗೆ ಸಿದ್ಧಮಾಡುವೆಯಾ ! ನಡೆ ನಿನಗೆಲ್ಲಾ ಸಿದ್ಧವಾಗಿದೆಯೆಂದು ಮೋಹನದಾಸರು ಜಗ್ಗನೆದ್ದು ಕುಳಿತರು. ಉದ್ಧಟನು ಗರಹೊಡೆದಂತಾಗಿ ಹಿಂದುಮುಂದಾಗಿ ಅವಸರದಿಂದ ನಡೆದನು. ಗಿಡ್ಡಾಗಿದ್ದ ಕಲ್ಲು ಬಾಗಿಲುವಾಡವು ಅವನ ತಲೆಗೆ ಬಡಿದು ಅವನಲ್ಲೇ ಮೃತನಾದನು.

ಮೋಹನದಾಸರು ಸುತ್ತಮುತ್ತ ನೋಡಿ—ಇದೇನು ಜನರಕೂಟ! ಬಾಗಿಲಲ್ಲಿ ಬೆಂಕಿಯೇನು? ನೀನೇಕೆ ಅಳುತ್ತಿರುವೆಯೆಂದು ಹೆಂಡತಿಯನ್ನು ಪ್ರಶ್ನೆಮಾಡಿದರು. ಆ ಸಾಧ್ವಿಯ ದುಃಖಾಶ್ರುಗಳು ಆನಂದಾಶ್ರುಗಳಾಗಿ ಪರಿಣಮಿಸಿದವು. ನಡೆದ ಸಂಗತಿಯನ್ನೂ ವಿಜಯರಾಯರು ಕೊಟ್ಟಿದ್ದ ಅಭಯವನ್ನೂ ಪತಿಗೆ ತಿಳಿಸಿದಳು. ಅಷ್ಟರಲ್ಲಿ ವಿಜಯದಾಸರೇ ಮೋಹನ ದಾಸರೆದುರಿಗೆ ಬಂದು ನಿಂತರು. ಆನಂದಾತಿಶಯದಿಂದ—

**ಸುರಟಿ — ಆದಿತಾಳ**

ತಂದೆ ವಿಜಯರಾಯ| ಈ ವೇಳೆಗೆ| ಬಂದೆ ವಿಜಯರಾಯ ||ಪ||

ಹಿಂದೇಸುಜನುಮವೊ ಮುಂದೇಸುಜನುಮವೊ
ಒಂದು ತಿಳಿಯದಾದೆಂದೆಂದಿಗು ಎನ್ನ ||ಅ||

ಸೂರ್ಯನ ಸುತನಂತೆ| ಅಲ್ಲಿ ಮಹಾ|
ಶೂರದೂತರಂತೇ||
ಕಾರ್ಯಅಕಾರ್ಯವನರಿಯದೆ ನಿನ್ನ ಪರಿ|
ಚಾರ್‍ಯನ ಎಳೆಯಲು| ಭಾರ್ಯಳು ಮೊರೆಯಿಡೆ ||೧||

ಅದು ಧೈರ್ಯವ ನೋಡೀ| ಸುದತಿ ತನ್ನ|
ಹೃದಯ ಬದ್ಧಮಾಡಿ||
ಮಧುಸೂದನನೇ ಮುದಶೀರಥರೆಂದು
ಒದರಿದಳ್ವದರಿದಳ್ವಿಜಯರಾಯರೆಂದು ||೨||

ಕರಗಳನೇ ಕಟ್ಟಿ| ಎಳೆಯುತಿರೆ|
ಶಿರವನ್ನೇ ಮೆಟ್ಟಿ|
ಶಿರಿ ಮೋಹನವಿಠಲನ ಪದವನೆ ತೋರೀ
ಧರೆಗೆತಂದುಬಿಟ್ಟೆ ಕರುಣಾಳುವೆ ಎನ್ನ ||೩||

ಎಂಬದಾಗಿ ಮೋಹನದಾಸರು ಗುರುಸ್ತೋತ್ರಮಾಡಿದರು. ಸಾಂಶರಾದ ದೇವತೆಗಳ ಶಕ್ತಿಯನ್ನು ತಿಳಿಯುವಬಗೆ ಹೇಗೆ? ಮರ್ತ್ಯದೇಹದಲ್ಲಿ ಬಂದರೂ ಅವರು ತಮ್ಮ ಮಹಿಮೆಯನ್ನು ಅಡಗಿಸಿಟ್ಟುಕೊಳ್ಳುವಬಗೆ ಹೇಗೆ? ಉತ್ತರಕ್ಷಣದಲ್ಲಿ ವಿಜಯರಾಯರು,—ಮೋಹನ! ನನಗೆ ಸ್ನಾನಕ್ಕೆ ವೇಳೆಯಾಯಿತೆಂದು ಅದೃಶ್ಯರಾದರು. ಆ ದಿನದಲ್ಲಿ ಪರಿವಾರಸಹಿತರಾಗಿ ದಾಸವರ್ಯರು ವಾರಾಣಸಿಯಲ್ಲಿದ್ದರು.

ಮೋಹನದಾಸರು ಚೇತರಿಸಿಕೊಂಡು ತಮ್ಮ ಜನ್ಮವೃತ್ತಾಂತವನ್ನು ಧ್ಯಾನಿಸುತ್ತ ಕುಳಿತರು. ತಮ್ಮ ತಾಯಿ ಪಟ್ಟಕಷ್ಟಗಳೊಂದೊಂದನ್ನೂ ಸ್ಮರಿಸಿ ಕಂಬನಿಗರೆದರು. ನದಿಯಲ್ಲಿ ಬಿಸುಟು ತಾನೂ ಸಾಯ್ವೆನೆಂದು ಹೊರಟಿದ್ದ ತಾಯಿ ಮಕ್ಕಳನ್ನು ಸಲಹಿದ ವಿಜಯದಾಸರ ಕಾರುಣ್ಯವನ್ನು ಕೊಂಡಾಡಿದರು. ತತ್ಕಾಲದಲ್ಲಿ ಬಂದ ಪ್ರಾಣಾಪತ್ತಿನಿಂದ ಪಾರುಮಾಡಿ ದಿವ್ಯದರ್ಶನವಿತ್ತು!? ಅದೃಶ್ಯರಾದ ಗುರುರಾಯರ ಮೂರ್ತಿಯನ್ನೇ ಧ್ಯಾನಿಸುತ್ತ ಎದ್ದು ನಿಂತುಕೊಂಡರು. ದೈವೀಪ್ರೇರಣೆಯಿಂದಲೋ ಎಂಬಂತೆ—

**ಯದುಕುಲಕಾಂಬೋದಿ — ಜಂಪೆತಾಳ**

ನಿನ್ನಪಾದವನಂಬಿ ಅನ್ಯರಾಶ್ರಯವೇಕೋ
ಚನ್ನಗುರು ವಿಜಯರಾಯ ||ಪ||

ಇನ್ನೇನು ಇನ್ನೇನು ಎನ್ನ ಕುಲಕೋಟಿ ಪಾ|
ವನ್ನವಾದುದು ನಿಶ್ಚಯಾ| ಸ್ವಾಮಿಾ ||ಅ||

ಪಂಚಮಹಾಪಾತಕದೊಳಗೆ ಮೂರನೆ ಕಕ್ಷಿ
ಕಾಂಚನದ್ರೋಹಿ ನಾನು| ಎನ್ನ|
ಮುಂಚೆಬಂದಾಗ ಕೈಪಿಡಿದೆ| ಪ್ರ|
ಪಂಚವಬಿಡು ಎಂದು ನುಡಿದೆ| ಒಲಿದು
ಸಂಚಿತಾಗಾಮಿ ತೊಡೆದೆ|| ಎನ್ನ|
ಕಂಚುಕಟ್ಟಳೆ ಮೇಣಕಲ್ಲುಗಳ ಕಾಸಿಗೆ
ಪಂಥೇರುಮಾಡಿ ನಡೆದೆ| ಬಿಡದೆ ||೧||

ವ್ಯಾಸರಾಯರ ಗುಹೆಯೊಳಗೆ ಕುಳಿತು ನವಸ
ನ್ಯಾಸಿಗಳ ಸಮಕ್ಷದಲ್ಲಿ| ಎನ್ನ|
ದಾಸನಾಗೆನುತನೀ ಪೇಳ್ದಿ| ಒಲಿದು|
ದೋಷಾಂಕುರವನೆಲ್ಲ ಸೀಳ್ದಿ| ಎನ್ನ|
ವಾಸಿಪಂಥವನೆಲ್ಲ ಕಳೆದೆ| ನಮ್ಮ ||
ಶ್ರೀಶ ಸರ್ವೋತ್ತಮನಹುದೆಂದು ಒರೆದು ಸಂ
ತೋಷದಿಂದೆನ್ನ ಪೊರೆದೇ| ಸ್ವಾಮಿ ||೨||

ರಾಜಾಧಿರಾಜರು ಬಂದು ಪ್ರಾರ್ಥಿಸೆ ಗುರು
ರಾಜ ನೀನವರಲ್ಲಿ ಬರುವೆ| ದಿವ್ಯ|
ಭೋಜನವಮಾಡಿ ಫಲಗರೆವೆ| ಇನ್ನು|
ರಾಜಧಾನಿಗೆ ಪೋಗಿಬರುವೆ| ಉಡು|
ರಾಜನಂದದಿ ನಿತ್ಯಮೆರೆವೆ| ಎನ್ನ||
ಪೂಜೆಫಲವೆಂದು ಆವಾಗ ನಿನ್ನ ಪದ
ರಾಜೀವ ಥೇನಿಸುವೆನೋ| ಸ್ವಾಮಿ ||೩||

ಎನ್ನನೊಬ್ಬನ ಪಾಲಿಸಿದುದು ಘನತೆಯಲ್ಲ
ಚಿನ್ನವರದನ ಸಂತತಿಯೆಲ್ಲಾ| ಇನ್ನು|
ನಿನ್ನಪಾದಕೆ ಬಿಟ್ಟುದಲ್ಲ| ವಾಕು|
ಅನ್ಯಥಾವಾಳ್ಪುದು ಸಲ್ಲ| ಮೋ
ಹನ್ನವಿಠಲ ಇದನು ಬಲ್ಲ| ಅಯ್ಯ||
ಪನ್ನಂಗಶಯನ ಪ್ರಸನ್ನನಾದುದಕಿದು
ಎನ್ನ ಮನೋರಥಸಿದ್ಧಿಯೋ| ಸ್ವಾಮಿ ||೪||

ಎಂಬದಾಗಿ ಹಾಡಿದರು.

ಈ ಪದದಲ್ಲಿ ಮೋಹನದಾಸರು ತಾವು ಚಿನವಾರ ವಂಶದವರೆಂಬು ದನ್ನೂ, ಕಾಂಚನದ್ರೋಹಿಯೆಂಬ ಮಾತಿನಿಂದ ಭಂಗಾರದ ವ್ಯಾಪಾರಿಕ ರೆಂಬುದನ್ನೂ, ವ್ಯಾಸರಾಯರ ಗುಹೆಯಲ್ಲಿ ಹರಿದಾಸನಾಗೆಂದು ಮೊದಲಾಗಿ

ಆಶೀರ್ವಾದಮಾಡಿದ 'ಚಿರಂಜೀವಿಯಾಗೆಲವೊ ಚಿಣ್ಣ ನೀನು' ಎಂಬ ಪದದ ಸಾರಾಂಶವನ್ನೂ ಸಂಕ್ಷೇಪವಾಗಿ ಹೇಳಿರುತ್ತಾರೆ. ಅಲ್ಲದೆ ತಮ್ಮ ವಂಶದ ಮೇಲೇ ನಿಮ್ಮ ಕೃಪೆಯಿರಬೇಕೆಂದು ಪ್ರಾರ್ಥಿಸಿದ್ದಾರೆ. ಈ ಪ್ರಾರ್ಥನೆಗನುಸಾರವಾಗಿ ಯಾವ ಪ್ರಖ್ಯಾತ ಹರಿದಾಸರ ಕ್ರಮವಾದ ವಂಶವೂ ಇರದೆ ಮೋಹನದಾಸರ ವಂಶಮಾತ್ರ ಚಿಪ್ಪಗಿರಿಯಲ್ಲಿ ನಡೆದು ಬಂದಿರುವದು ದೃಷ್ಟಾಂತವಾಗಿದೆ.

ಅತ್ತ ವಿಜಯದಾಸರು ಕಾಶಿಯಲ್ಲಿ ಕೆಲವು ಕಾಲ ವಾಸಮಾಡಿದರು. ಒಂದುದಿನ ಹನುಮಾನ್‌ಘಾಟಿನಲ್ಲಿ ಒಂದು ವಿಶೇಷ ಪರ್ವಕಾಲದಲ್ಲಿ ಘಟ್ಟದ ಮೇಲ್ಗಡೆಯಲ್ಲಿ ಆಹ್ನಿಕಮಾಡುತ್ತಾ ಗಂಗಾದೇವಿಯನ್ನು ಪ್ರಾರ್ಥಿಸಿದರು. ಪರ್ವಕಾಲಕ್ಕೆ ಸರಿಯಾಗಿ ಜಾಹ್ನವಿಯು ಮೆಟ್ಟಲು ಮೆಟ್ಟಲಾಗಿ ಏರುತ್ತಾ ದಾಸರಿಗೆ ಅಭಿಷೇಕಮಾಡುವಳೋ ಎಂಬಂತೆ ಮೇಲೆ ಹರಿದು ಕ್ರಮವಾಗಿ ಒಂದು ಮುಹೂರ್ತದೊಳಗೆ ಮೊದಲಿದ್ದ ಬಳಿ ಹರಿಯಲಾರಂಭಿಸಿದಳು. ದಾಸರಮೇಲೆ ಹರಿದರೂ ಅವರ ವಸ್ತ್ರ ತೋದಿರಲಿಲ್ಲ. ನಾಮ ಮುದ್ರೆಗಳು ಅಳಿಸಿರಲಿಲ್ಲ. ಈ ಅಭಿಪ್ರಾಯವನ್ನು ವಿಜಯರಾಯರ ತಮ್ಮಂದಿರು ಜೊತೆಯಲ್ಲಿದ್ದು ಕಂಡದ್ದು ಕಂಡಂತೆ 'ನೆನಿಸಿದವರಘನಾಶನ' ಎಂಬ ಉದಯ ರಾಗದ ಎಂಟನೇ ನುಡಿಯಲ್ಲಿ ಸೂಕ್ಷ್ಮವಾಗಿ ತಿಳಿಸಿರುತ್ತಾರೆ.

ಕಾಶಿಯಿಂದ ಮರಳಿ ಬರುತ್ತಾ, ಧರ್ಮೋಪದೇಶದಿಂದ ಜನರನ್ನು ಉದ್ಧರಿಸಿ ಮಹಾಮಹಿಮೆಗಳನ್ನು ತೋರಿಸುತ್ತಾ, ಕರ್ನಾಟಕದ ಯಾವದೋ ಗ್ರಾಮದ ಬಳಿಗೆ ಬಂದರು. ಆ ಸ್ಥಳಕ್ಕೆ ಸಮೀಪದ ಗ್ರಾಮದಲ್ಲಿ ಶ್ರೀ ಉತ್ತರಾದಿ ಮಠಾಧಿಪತಿಗಳಾದ ಸತ್ಯಬೋಧತೀರ್ಥರು ಶಿಷ್ಯಾನುಗ್ರಹಕ್ಕಾಗಿ ದಯಮಾಡಿಸಿದ್ದರು. ದಾಸರು ಬಂದಿಳಿಯಬೇಕಾಗಿದ್ದ ಗ್ರಾಮಸ್ಥರು ಅವರಿಗೆ ಯೋಗ್ಯರೀತಿಯಿಂದ ಸ್ವಾಗತಮಾಡುವ ವ್ಯವಸ್ಥೆ ಮಾಡಿದ್ದರು. ಸತ್ಯಬೋಧರ ಮಠದ ವೈಭವ ಹೇಗೋ ಹಾಗೆ ದಾಸರ ವೈಭವವೂ ಪರಿಪೂರ್ಣವಾಗಿದ್ದುದರಿಂದ ಒಂದು ಸನ್ಯಾಸಿಗಳಮಠ, ಮತ್ತೊಂದು ಗೃಹಸ್ಥರಮಠವೆಂದು ಜನರಾಡಿಕೊಳ್ಳುವಂತಿದ್ದಿತು.

ದಾಸರು ಬಂದಿಳಿಯುವ ಗ್ರಾಮದಲ್ಲಿ ಬಾಲವಿಧವೆಯೊಬ್ಬಳು ಜನ

ರಿಂದ ದೂಷಿತಳಾಗಿ ತಿರಸ್ಕೃತಳಾಗಿದ್ದಳು. ಆಕೆಯು ಪಾಪಕೃತ್ಯಕ್ಕಿಂತ ಜನರ ತಿರಸ್ಕಾರವು ನೂರುಮಡಿಯಾಗಿತ್ತು. ಆಕೆಯು ತನ್ನ ಪಾಪಕ್ಕೆ ಪಶ್ಚಾತ್ತಾಪಪಟ್ಟು, ಸ್ವಾಮಿಗಳು ಬೇರೆ ತನ್ನೂರಿಗೆ ಬಂದು ತನ್ನನ್ನೇನು ಮಾಡುವರೋ ಎಂಬ ಭೀತಿಯಿಂದ ಪರಿತಪಿಸುತ್ತಿದ್ದಳು. ವಿಜಯದಾಸರು ಊರಿಗೆ ಬರುವ ಸಮಾಚಾರವಾಕೆಗೆ ತಿಳಿಯಿತು. ದಾಸರೆಂದರೆ ಕರುಣಾಳು ಗಳೆಂಬುವದೂ ಆಕೆಗೆ ಗೊತ್ತಿತ್ತು. ಈ ಸಮಯದಲ್ಲಿ ಅವರ ಪದರಿಗೆ ಬಿದ್ದು ಅವರ ಅನುಗ್ರಹಕ್ಕೆ ಪಾತ್ರಳಾಗಬೇಕೆಂದು ನಿರ್ಧರಿಸಿದಳು. ಊರಿನ ಪ್ರಮುಖ ಜನರು ಗ್ರಾಮಗಡಿಯಲ್ಲಿ ವಾದ್ಯವೈಭವದಿಂದ ದಾಸರ ಆಗಮನವನ್ನು ಎದುರುನೋಡುತ್ತಿದ್ದರು. ಅವರಿಗಿಂತ ಮುಂಚಿತವಾಗಿ ಆ ದೀನಳು ಗ್ರಾಮಗಡಿಯನ್ನೂ ಮೀರಿ ಒಂದು ಮೈಲಿಯಾಚೆಗೆ ಹೋಗಿ ದಾಸ ರನ್ನು ನಿರೀಕ್ಷಿಸುತ್ತಿದ್ದಳು. ಊರಜನರು-'ಏನೇ ಮಂಗಳೆ! ನೀನೂ ದಾಸ ರನ್ನು ಎದುರುಗೊಳ್ಳುವೆಯಾ?' ಎಂದು ಪರಿಹಾಸ್ಯಮಾಡಿದರು. ದಾಸರು ದೇವರ ಹಸಿಬೆಯನ್ನು ಹೆಗಲಿಗೆ ಹಾಕಿಕೊಂಡು ನಾಗರಹೆಡೆಯ ತಂಬೂರಿ ಯನ್ನು ಮೀಟುತ್ತಾ ಹಾಡಿಕೊಂಡು ಬರುವದು ಅನಾಥೆಯ ಕಣ್ಣಿಗೆ ಕಾಣಿ ಸಿತು. ಓಡಿಹೋಗಿ ಆ ಮಹಾನುಭಾವರ ಪಾದಗಳಿಗೆರಗಿ,-'ಉದ್ಧರಿಸುವಿ ರಾದರೆ ಪಾದಗಳನ್ನು ಬಿಡುವೆನು; ಇಲ್ಲವಾದರೆ ಪ್ರಾಣಬಿಡುವೆ'ನೆಂದು ರೋದನಮಾಡಿದಳು.

ದಾಸರು—ತಂಗಿ! ನೀನಾರಮ್ಮಾ?
ಅನಾಥೆ—ನಾನೊಬ್ಬ ಅನಾಥಳು.
ದಾಸರು—ಪಾದವನ್ನು ಬಿಟ್ಟೇಳು.
ಅನಾಥೆ—ವಾಗ್ದಾನಮಾಡಿರಿ, ಬಿಡುವೆನು.
ದಾಸರು—ಏಕಮ್ಮಾ ಹಠಮಾಡುವಿ?

ಅನಾಥೆ—ಸ್ವಾಮಿ, ನಾನು ದೂಷಿತಳು ನಿಜ. ತಾವು ನನ್ನನ್ನುದ್ಧರಿಸ ಬೇಕು. ನನ್ನ ಮನೆಯಲ್ಲಿ ಆತಿಥ್ಯ ಸ್ವೀಕರಿಸಬೇಕು. ಊರಿ ನವರ ಬಾಧೆಯನ್ನು ತಾಳಲಾರೆ. ಸ್ವಾಮಿಗಳು ಬೇರೆ ಊರಿಗೆ ಬರುವರಂತೆ!

ದಾಸರು—(ಆಕೆಯ ಪಶ್ಚಾತ್ತಾಪಕ್ಕೆ ಮರುಗಿ) ಒಳ್ಳೇದು ಪಾದವನ್ನು ಬಿಡು. ನಿನ್ನ ಆತಿಥ್ಯವನ್ನೇ ಮೊದಲು ಸ್ವೀಕರಿಸುವೆವು.

ಅನಾಥೆ—ಊರಿನವರು ಗಡಿಯಲ್ಲಿ ಕಾದಿದ್ದಾರೆ. ನನ್ನ ಮನೆಗೆ ಬಂದರೆ ನಿಮ್ಮನ್ನೂ ನಿಂದಿಸುತ್ತಾರೆ. ಲೋಕಾಪವಾದಕ್ಕಂಜದೆ ಮತ್ತೊಮ್ಮೆ ಅಭಯವಿತ್ತರೆ ಪಾದವನ್ನು ಬಿಡುವೆನು.

ದಾಸರು: ಬೇಕಾದವರು ಬೇಕಾದ ಮಾತಾಡಲಿ! ನಾವು ನಿನ್ನ ಮನೆಗೇ ಬರುವೆವು. ನೀನೂ ನಮ್ಮ ಜೊತೆಯಲ್ಲಿ ಬಾರೆಂದು ಆಕೆಯನ್ನು ಕರೆದುಕೊಂಡೇ ಗಡಿಯ ಬಳಿಗೆ ಬಂದರು. ಗ್ರಾಮಸ್ಥರು ದಾಸರಿಗೆ ವಂದನೆಮಾಡಿ ಗ್ರಾಮಪ್ರವೇಶಮಾಡಿಸಿದರು. ದಾಸರು—'ಅಪ್ಪಾ ನಾವು ಇವತ್ತು ಈ ತಂಗಿಯ ಮನೆಗೆ ಹೋಗುವೆವು. ನಾಳೆನಿಂದಾಗಲಿ ನಿಮ್ಮ ಆತಿಥ್ಯ'ವೆಂದರು. ಜನರು,-'ಸ್ವಾಮಿ, ಇವಳು ದೂಷಿತಳು. ಇವಳ ಮನೆಗೆ ಹೋಗಬಾರದು. ತಾವು ಮೀರಿಹೋಗುವಿರಾದರೆ ತಮ್ಮನ್ನೂ ಜನರು ಬಹಿಷ್ಕರಿಸುವರು' ಎಂದರು. ದಾಸರು - 'ನಾವಲ್ಲೇ ಹೋಗುವರು' ಎಂದು ಆಕೆಯ ಮನೆಗೇ ನಡೆದರು. ದಾಸರನ್ನು ವಂದಿಸಿದ ಜನರು ನಿಂದಿಸಲಾರಂಭಿಸಿದರು.

ಆ ದೀನಳ ಸಂತೋಷವು ಅವರ್ಣನೀಯವಾಯಿತು. ಶ್ರೀಮಂತಳಾಗಿದ್ದುದರಿಂದ ಆತಿಥ್ಯಕ್ಕೆ ಬೇಕಾದ ಸಾಮಗ್ರಿಗಳನ್ನು ಧಾರಾಳವಾಗಿ ತಂದಿರಿಸಿದಳು. ನೂರಾರು ಜನರಿಗೆ ಮಂಡಿಗೆಯ ಪ್ರಸ್ಥವಾಯಿತು. ಹಾಲು ಸಕ್ಕರೆ ತುಪ್ಪಗಳನ್ನು ಬಡಿಸಲು ದೀನಳು ತಾನೇ ನಿಂತುಕೊಂಡಳು. ಭಕ್ಷ್ಯಭೋಜ್ಯಗಳೆಲ್ಲವೂ ಆದನಂತರ ಪರಿಚಾರಕನು ದಾಸರ ಎಡೆಗೆ ಅನ್ನವನ್ನು ಬಡಿಸಿದನು. ದೀನಳು ಕೆನೆಮೊಸರನ್ನು ಬಡಿಸಿ ದಾಸರೆದುರಿಗಿದ್ದ ಸ್ತಂಭಕ್ಕೆ ಬೆನ್ನುಕೊಟ್ಟು ನಿಂತಳು. ಇಂದಿಗೆ ನಾನು ಧನ್ಯಳಾದೆನೆಂದಳು. ದಾಸರ ಕಾರುಣ್ಯದಿಂದ ಪಾವನಳಾದೆನೆಂದು ಕಂಬನಿಗರೆದಳು. ತಟಸ್ಥಳಾದಳು. ದಾಸರು ಉತ್ತರಾಪೋಶನ ತೆಗೆದುಕೊಂಡರು. ಅದೇ ನಿಮಿಷದಲ್ಲಿ ಆ ದೀನಳ ಪ್ರಾಣಶಕ್ತಿಯ ಉತ್ತರಾಪೋಶನವಾಯಿತು. ದಾಸರು ತಂಗೀ ತಂಗೀ ಎಂದು ಆಕೆಯನ್ನು ಕೂಗಿದರು. ನಿಂತಿದ್ದ ದೇಹದಲ್ಲಿ ಶ್ವಾಸವಿರಲಿಲ್ಲ. ಕಣ್ದೆರೆದ ನಗೆಮುಖವು ಅಂದಗೆಟ್ಟಿರಲಿಲ್ಲ.

ದಾಸರು ಶಿಷ್ಯರನ್ನು ಕರೆದು, ಅನ್ನದಾತಳು ತಾಯಿಯು. ಆಕೆಯ ಉತ್ತರಕ್ರಿಯೆಗೆ ಸಿದ್ಧಪಡಿಸಿರೆಂದರು. ದಾಸರೇ ಅಗ್ನಿಯನ್ನು ತೆಗೆದು ಕೊಂಡು ಹೊರಟರು. ಸ್ವಯಂ ಆಕೆಯೌರ್ಧ್ವದೈಹಿಕ ಕ್ರಿಯೆಯನ್ನೆಸ ಗಿದರು. ಊರಿನವರು ಸುತ್ತುಮುತ್ತ ಹೊಂಚುಹಾಕುತ್ತಿದ್ದು ನಾನು ಮುಂದು ತಾನು ಮುಂದೆಂದು ಅವಳ ಆಸ್ತಿಯ ಭಾಗಕ್ಕೆ ಬಂದುನಿಂತರು. ಸ್ವಾಮಿಗಳಿಗೀ ಸಂಗತಿಯನ್ನು ತಿಳಿಸಿ ದಾಸರಿಗೆ ಬಹಿಷ್ಕಾರ ಪತ್ರವನ್ನು ತರಿಸಿ ಶುಭಸ್ವೀಕಾರದ ದಿವಸ ಓದಿಸಿದರು. ದಾಸರು ಪತ್ರಿಕೆಯ ಸಾರಾಂಶ ವನ್ನು ಕೇಳಿ ನಕ್ಕರು. ಓದಿದವನಿಗೆ ಶಹಲು ಜೋಡಿಯನ್ನು ಹೊದಿಸಿದರು. ಸ್ವಾಮಿಗಳು ಯಾರಿಗೆ ಬಹಿಷ್ಕಾರ ಹಾಕಿದರು ? ದಾಸಗೋ, ರಾಮನಿಗೋ ಎಂದು ಕೇಳಿದರು.

ಮಾರನೆಯ ದಿನ ಸ್ವಾಮಿಗಳ ಪೂಜೆಗಾರಂಭವಾಯಿತು. ರಾಮ ಚಂದ್ರದೇವರ ಮೂರ್ತಿಯನ್ನು ತೆಗೆದು ನೋಡಿದರೆ ಕಳಾಹೀನವಾಗಿ ಕಾಣಿ ಸಿತು. ಆವಾಹನಾದಿ ತಾಂತ್ರಿಕನ್ಯಾಸಗಳನ್ನು ಮಾಡತೊಡಗಿದರೆ ಎಲ್ಲವೂ ವಿಮುಖವಾಗಿ ವಮನವಾಗುವಂತೆ ಸಂಕಟವಾಯಿತು. ಹೀಗೇಕಾಯಿತೆಂದು ತಮ್ಮಲ್ಲಿ ತಾವೇ ವಿಚಾರಮಾಡಿ ಕಾರಣ ತಿಳಿಯದೆ, ಸೇವಕರನ್ನು ಏನಾ ದರೂ ಮಡಿಮೈಲಿಗೆಗಳ ವ್ಯತ್ಯಾಸವಾಗಿದೆಯೇ ಎಂದು ಪ್ರಶ್ನೆಮಾಡಿದರು. ತೇಜೋಮಯ ಮೂರ್ತಿಯು ನೀಲವರ್ಣವಾಗಿ ಉಗ್ರಾಕಾರವಾಗಿ ಕಾಣಲು ಏನು ಅಪರಾಧ ನಡೆದಿದೆಯೆಂದು ವಿಚಾರಿಸಿದರು. ಯಾರೂ ಏನೂ ಹೇಳ ಲಿಲ್ಲ. ಸ್ವಾಮಿಗಳಿಗಾದರೂ ಗೊತ್ತಾಗಲಿಲ್ಲ. – 'ರಾಮಚಂದ್ರಾ ! ನನ್ನ ಸೇವೆ ನಿನಗೆ ಸಾಕಾಯಿತೆ ? ನನ್ನನ್ನು ಕೈಬಿಟ್ಟೆಯಾ' ಎಂದು ಘಟ್ಟಿಯಾಗಿ ಉಸು ರ್ಗರೆದರು. ವ್ಯಸನದಿಂದ ಸ್ಮೃತಿತಪ್ಪಿದವರೋಪಾದಿಯಲ್ಲಿ ಕುಳಿತರು. ಆಗ-'ನನ್ನ ದಾಸನಿಗೆ ಬಹಿಷ್ಕಾರ ಹಾಕಿದರೆ ನಿನ್ನ ಬಳಿ ನಾನಿರುವೆನೆ ?' ಎಂದ ಹಾಗಾಯಿತು.

ಸತ್ಯಬೋಧರು ಒಡನೆಯೇ ದುರ್ವಾರ್ತೆಯನ್ನು ಹೇಳಿ ಬಹಿಷ್ಕಾರ ಪತ್ರ ಬರೆಸಿದವರಮೇಲೆ ಸಿಟ್ಟುಮಾಡಿ, ದಾಸರನ್ನು ಕರೆತರುವಂತೆ ಕುದು ತೆಯಮೇಲೆ ಪತ್ರ ಕಳುಹಿಸಿದರು.

ಆ ದಿವಸ ದಾಸರು ರಾಮಚಂದ್ರದೇವರ ಪ್ರಸಾದಕ್ಕೆ ಹೋಗಬೇಕಾಗುವದು ; ಇವತ್ತು ಅಡಿಗೆಮಾಡಬೇಡಿರೆಂದು ಶಿಷ್ಯರಿಗೆ ಹೇಳಿದ್ದರು.

ಬಹಿಷ್ಕಾರ ಬಂದಮೇಲೆ ಪ್ರಸಾದ ಹೇಗೆ ಸಿಗಬೇಕೆಂದು ಶಿಷ್ಯರು ಕೇಳಿದರು. ದಾಸರು ನಗುತ್ತಾ ಆಗ್ರಹಮಾಡಿದ ಗುರುಗಳ ಅನುಗ್ರಹವೂ ತಡೆವಿಲ್ಲವೆಂದುಸುರಿದರು.

ಕುದುರೆಯ ಸವಾರನು ಪತ್ರವನ್ನು ತಂದೊಪ್ಪಿಸಿದನು. ದಾಸರು, ಇದೋ ಶುದ್ಧಪತ್ರಿಕೆ ಬಂತೆಂದರು. ಎಲ್ಲರೂ ಕೂಡಲೇ ಹೊರಡಿರೆಂದರು. ಎಂದೂ ಇಲ್ಲದವರು ಶ್ರೀಗಳವರಿಗೆ ಹೊತ್ತಾಗುವದೆಂದು ಮೇನೆಯಲ್ಲಿ ಕುಳಿತು ವೇಗವಾಗಿ ಪ್ರಯಾಣಮಾಡಿದರು. ರತ್ನಮಂಟಪದ ಮುಂದೆ ಕುಳಿತಿದ್ದ ಶ್ರೀಗಳವರಿಗೆ ಸಾಷ್ಟಾಂಗಪ್ರಣಾಮಮಾಡಿ ಕೈಜೋಡಿಸಿ ನಿಂತುಕೊಂಡರು. ಸತ್ಯಬೋಧರು---ದಾಸರೆ, ನಿಮ್ಮಲ್ಲಿ ರಾಮಚಂದ್ರದೇವರ ಅನುಗ್ರಹವು ಪೂರ್ಣವಾಗಿರುವದು ; ನಮ್ಮ ದೇವರನ್ನು ನಮಗೆ ಕೊಡಿರೆಂದರು. ದಾಸರು ವಿನಯದಿಂದ - ಮಹಾಸ್ವಾಮಿ, ತಮ್ಮ ದೇವರು ತಮ್ಮಲ್ಲೇ ಇರುವರು ; ಪೂಜೆಯಾಗಬಹುದೆಂದರು. ಸನ್ನಿಧಿಗೆ ಬರಲು ತಾಮಸವಾದುದಕ್ಕೆ ಕ್ಷಮಿಸಬೇಕೆಂದು ಮತ್ತೆ ನಮಸ್ಕಾರಮಾಡಿದರು. ಎಂದಿನಂತೆ ಪೂಜೆಯಾಯಿತು. ಸಮುಖದಲ್ಲಿ ದಾಸರನ್ನು ಕೂಡಿಸಿಕೊಂಡು ಶ್ರೀಗಳವರು ಭಿಕ್ಷಸ್ವೀಕಾರಮಾಡಿದರು. ಸ್ವಲ್ಪವೂ ವಿಶ್ರಮಿಸಿಕೊಳ್ಳದೆ ಏಕಾಂತಸ್ಥಳಕ್ಕೆ ದಾಸರನ್ನು ಕರೆಸಿಕೊಂಡರು.

ಸತ್ಯಬೋಧರು—ದಾಸರೆ! ನಿಮ್ಮಲ್ಲಿ ರಾಮಚಂದ್ರದೇವರ ಅನುಗ್ರಹ ಸಂಪೂರ್ಣವಾಗಿದೆ. ನಿಮ್ಮಂಥಾ ಶಿಷ್ಯರಿರುವದು ಶ್ರೀ ಮಠಕ್ಕೆ ಭೂಷಣವಲ್ಲವೆ ?

ವಿಜಯರಾಯರು—ಎಲ್ಲವೂ ಶ್ರೀಪಾದಾನುಗ್ರಹ.

ಸತ್ಯಬೋಧರು—ದೂಷಿತಳ ಮನೆಯಲ್ಲಿ ನೀವೇಕೆ ಭೋಜನಮಾಡಿದಿರಿ?

ವಿಜಯರಾಯರು—ಮಾಡದಿದ್ದರೆ ಸ್ತ್ರೀಹತ್ಯಕ್ಕೆ ಗುರಿಯಾಗುತ್ತಿದ್ದೆ.

ಸತ್ಯಬೋಧರು—ದೂಷಿತಳೆಂಬುವದು ಗೊತ್ತಾಗಲಿಲ್ಲವೆ ?

ವಿಜಯರಾಯರು—ಗೊತ್ತಾಗದಿದ್ದರೆ ಭೋಜನವೆಲ್ಲಿ ಮಾಡುತ್ತಿದ್ದೆ ?

ಸತ್ಯಬೋಧರು—ಹಾಗೆ ಮಾಡುವದು ಲೋಕವಿರೋಧವಲ್ಲವೆ?

ವಿಜಯರಾಯರು—ಹೌದು! ಪಾಪಿಯ ಉದ್ಧಾರದ ಬಗೆ ಹೇಗೆ? ಆಕೆ ಅಡಿಗೆ ಮಾಡಲಿಲ್ಲ. ಆಕೆ ಬಡಿಸಲಿಲ್ಲ. ಮನೆ ಏನು ಮಾಡಿತು?

ಸತ್ಯಬೋಧರು—ಪೂರ್ವಾಶ್ರಮದಲ್ಲಿ ನಮ್ಮ ನಿಮ್ಮ ಪರಿಚರ್ಯವಾಗಲಿಲ್ಲ. ಉಪಾಯವಿಲ್ಲ.

ವಿಜಯರಾಯರು—ಮಹಾಪೀಠದಲ್ಲಿರುವದು ಮತ್ತೂ ವಿಶೇಷ. ಸೇವೆಗೆ ದಾಸನು ಸಿದ್ಧನಾಗಿರುವನು.

ಸತ್ಯಬೋಧರು ಅಷ್ಟರಿಂದಲೇ ತೃಪ್ತರಾಗಲಿಲ್ಲ. ನೀವು ಅಪರೋಕ್ಷಿಗಳು; ನಿಜಸಂಗತಿಯೇನೆಂಬುದನ್ನು ನಮಗಾಗಿ ತಿಳಿಸಿರೆಂದರು. ವಿಜಯರಾಯರು, ಸ್ವಾಮಿ, ಆಕೆಯೂ ನಾನೂ ಒಟ್ಟಿಗೆ ಭೂಲೋಕದಲ್ಲಿ ಜನ್ಮನೆತ್ತಬೇಕೆಂದು ಹೊರಟೆವು. ಆಕೆಯು ಭೂಲೋಕದ ಮಾಯೆಯಲ್ಲಿ ಸಿಕ್ಕಿ ಪಾಪಿಯಾದಾಗ ಮಾತ್ರ ನನ್ನನ್ನು ಕೈಬಿಡಬೇಡಿರೆಂದು ಕೇಳಿಕೊಂಡಳು. ನಾನು ಆಗಬಹುದೆಂದು ವಚನವಿತ್ತೆನು. ಇಷ್ಟೇ ಪೂರ್ವ ವೃತ್ತಾಂತ; ಆಕೆಯು ದೇವತಾಸ್ತ್ರೀಯೆಂದರು. ಬಹುದಿವಸಗಳು ಉಭಯರ ಏಕತ್ರ ವಾಸವಾಯಿತು.

ವಿಜಯದಾಸರು ಮತ್ತೆ ರಾಮೇಶ್ವರಾದಿ ಮಹಾಕ್ಷೇತ್ರಗಳನ್ನೂ ಉಡುಪಿಯನ್ನೂ ಸಂದರ್ಶಿಸಿ ಉಡುಪಿಯ ಶ್ರೀಕೃಷ್ಣ ಮಹಿಮೆಗಳನ್ನು ಅನೇಕ ಪದ ಸುಳಾದಿಗಳಿಂದ ಕೊಂಡಾಡಿ ಆದವಾನಿಯ ಸಮೀಪದಲ್ಲಿರುವ ಭಾಗಿಗೆ ಬಂದರು. ಊರಾಚೆಯಿರುವ ಮಾರುತಿಯ ದೇವಾಲಯದಲ್ಲಿ ದಾಸರ ವಸತಿಯಾಯಿತು.

ಭಾಗೀ ಕೇಶವರಾಯನ ಮಗನ ನಿಷೇಕ ಮುಹೂರ್ತವು ಅದೇ ಸಮಯದಲ್ಲಿದ್ದು, ರಾಯನ ಮನೆಯಲ್ಲಿ ಮಹೋತ್ಸವ ನಡೆದಿತ್ತು. ಈ ಕಾಲದಲ್ಲಿ ಗೋಪಾಲದಾಸರೂ ವಿಜಯರಾಯರನ್ನು ಹಿಂಬಾಲಿಸಿದ್ದರು. ನೀರಿಗೆ ಬಲು ಶ್ರಮವಾಗಿದ್ದುದರಿಂದ ಭಾವಿಗಳಲ್ಲಿ ಚಿಪ್ಪಿನಿಂದ ಕೆರೆದು ಸ್ನಾನಪಾನ

ಗಳಿಗೆ ತಕ್ಕಷ್ಟನ್ನು ಒದಗಿಸಿಕೊಳ್ಳಲು ಬಲು ಪ್ರೊತ್ಸಾಹಗುತ್ತಿತ್ತು. ಸ್ನಾನಕ್ಕೆ ಸಿದ್ಧವಾಗಿದ್ದ ನೀರನ್ನು ಸಾಲದುದಕ್ಕೆ ವಿಜಯರಾಯರು ನೀರಿಗಾಗಿ ಹುಡಾಯಿಸುತ್ತಿದ್ದ ಒಂದು ಕತ್ತೆಗೆ ಕುಡಿಸಿಬಿಟ್ಟರು. ಮತ್ತೆ ನೀರು ಸಿದ್ಧವಾಗಲು ಕಾಲ ನಿರೀಕ್ಷಣೆಮಾಡಬೇಕಾಯಿತು.

ಅಷ್ಟರಲ್ಲಿ ದುರ್ದೈವಕ್ಕೆ ತಕ್ಕಂತೆ ಮದವಣಿಗನು ಹಸೆಮಣೆಯಮೇಲೆ ಬರುವ ಸಡಗರದಲ್ಲಿ ಬಾಗಿಲಿಗೆ ತಲೆ ತಗಲಿ ಬಿದ್ದು ಮೂರ್ಛಾಕ್ರಾಂತನಾದನು. ತಲೆಯಿಂದ ಧಾರಾಳವಾಗಿ ರಕ್ತ ಹರಿಯಲಾರಂಭಿಸಿತು. ಶೈತ್ಯೋಪಚಾರ ಮಾಡುವಷ್ಟರಲ್ಲಿ ತರುಣನು ಮೃತನಾದನು. ಜನರಲ್ಲಿ ಹಾಹಾಕಾರವೆದ್ದಿತು. ಮದವಣಿಗಿತ್ತಿಯ ರೋದನವು ಮುಗಿಲು ಮುಟ್ಟಿತು.

ವಿಜಯದಾಸರು—ಭಾಗಣ್ಣ ! ನೋಡಿದೆಯಾ, ಕತ್ತೆಗೆ ನೀರು ಕುಡಿಸಿದುದರಿಂದ ಊಟಕ್ಕೆ ಹೊತ್ತಾಯಿತೆಂದೆಯಲ್ಲ! ಕುಡಿಸದಿದ್ದರೂ ಇಷ್ಟು ಹೊತ್ತಿಗೆ ಊಟವಾಗುತ್ತಿತ್ತೇನು? ಊರೊಳಗಿನ ಗದ್ದಲ ಕೇಳಿದೆಯಾ ?

ಗೋಪಾಲ (ಭಾಗಣ್ಣ) ದಾಸರು—ಭಾಗೀ ಕೇಶವರಾಯನ ಮಗ ಸತ್ತನೆಂಬ ಸುದ್ದಿ ಬಂದಿದೆ. ಮೂರುಜನ್ಮಗಳ ಗಣಿತ ಮಾಡಿದರೂ ಅವನಿಗೆ ಮರಣ ಬರಲು ಕಾರಣವಿಲ್ಲ. ಮರಣ ಹೇಗೆ ಬಂತು ?

ವಿಜಯದಾಸರು—ನಿನಗೆ ಮೂರಕ್ಕಿಂತ ಹೆಚ್ಚು ಎಣಿಸುವುದಕ್ಕೇ ಬರುವದಿಲ್ಲ. ಅವನ ಏಳನೇ ಜನ್ಮದ ಪಾತಕವಿದು, ಗೊತ್ತಾಯಿತೆ ?

ಗೋಪಾಲದಾಸರು—ಉತ್ಸವಭಂಗ ! ಆ ಹುಡುಗಿ ಮಾಡಿದ ಪಾಪವೇನು? ದಾಸಾರ್ಯರು ಬಂದಾಗಲೇ ಈ ದುಃಖ ಬರಬೇಕೆ ?

ವಿಜಯದಾಸರು—ಮಾಡುವದೇನು ? ಕೇಶವರಾಯ ಸಜ್ಜನ ! ಒಂದು ಕಾಶೀ ಯಾತ್ರೆಯ ಪುಣ್ಯವನ್ನು ಧಾರೆಯೆರೆದು ಮದವಣಿಗನನ್ನು ಬದುಕಿಸೋಣವೆ ?

ಗೋಪಾಲದಾಸರು—ಕಾಶೀ ಯಾತ್ರಾಫಲ ಬಲು ದೊಡ್ಡದು. ಕಳೆದು ಕೊಳ್ಳುವ ಬಗೆ ಹೇಗೆ? ಬೇಕಾದರೆ ಕತ್ತೆಗೆ ನೀರು ಕುಡಿಸಿದ ಪುಣ್ಯವನ್ನು ಧಾರೆಯೆರೆದು ಬದುಕಿಸಬಹುದು!

ವಿಜಯದಾಸರು—ಛೇ, ಛೇ! ಕಾಶೀ ಯಾತ್ರೆಗಿಂತ ಕತ್ತೆಗೆ ಪ್ರಾಣದಾನ ಮಾಡಿದ ಪುಣ್ಯ ದೊಡ್ಡದೋ ಭಾಗಣ್ಣ! ಮತ್ತೆ ಬೇಕಾದರೆ ಕಾಶೀ ಯಾತ್ರೆ ಮಾಡಬಹುದು.

ಹೀಗೆ ಗುರು ಶಿಷ್ಯರ ವಿನೋದ ವಾರ್ತೆಗಳಾದವು. ಅತ್ತ ಕುಲಕರ ಣಿಯು ತಲೆಯಮೇಲೆ ಕೈಯಿಟ್ಟುಕೊಂಡು ಕುಳಿತನು. ನಿಷೇಕ ಮಹೋ ತ್ಸವಕ್ಕೆ ಹೆಣ್ಣಿನವರ ಜೊತೆಯಲ್ಲಿ ಬಂದಿದ್ದ ಆನೇಗೊಂದಿಯ ನೆಂಟಳೊ ಬ್ಬಳು ಮೋಹನ ದಾಸರನ್ನು ವಿಜಯದಾಸರು ಬದುಕಿಸಿದ ಸಮಾಚಾರ ವನ್ನು ಅಲ್ಲಿದ್ದವರಿಗೆ ತಿಳಿಸಿದಳು. ಮದವಣಿಗಳನ್ನೇ ದಾಸರ ಪಾದದಲ್ಲಿ ಕೆಡವಿದರೆ ಅವಳ ಮಾಂಗಲ್ಯ ಭಾಗ್ಯವುಂಟಾಗುವದೆಂದು ಉಪಾಯವನ್ನು ಸೂಚಿಸಿದಳು. ಹೆಂಗಸರೆಲ್ಲಾ ದೇವರೇ ಗತಿಯೆಂದು ಏನೂ ತಿಳಿಯದ ಹುಡುಗಿಯನ್ನು ಹುರಿದುಂಬಿಸಿ ದಾಸರ ಬಳಿಗೆ ಕಳುಹಿಸಿದರು. ದಾಸರೆತ್ತ ಕಡೆಯೋ ಗೋಪಾಲದಾಸರೊಡನೆ ಮಾತಾಡುತ್ತಿರಲು, ಬಾಲೆಯು ದಾಸರ ಪಾದಗಳಿಗೆ ನಮಸ್ಕರಿಸಿದಳು. ತಟಕ್ಕನೆ ದಾಸರು **ದೀರ್ಘಸುಮಂಗಲೀ ಭವ** ಎಂದುಬಿಟ್ಟರು. ಬಾಲಕಿಯು ತಮ್ಮ ಮಾತು ಸತ್ಯವಾಗಬೇಕೆಂದು ಗಟ್ಟಿಯಾಗಿ ಕುಳಿತಳು. ನಡೆದ ಸಂಗತಿಯನ್ನು ತಿಳಿಸಿದಳು. ದಾಸರು, -'ನೋಡಿದೆಯಾ ಭಾಗಣ್ಣ! ಈಗೇನು ಮಾಡಬೇಕು? ನನ್ನ ಬಾಯಿಂದ ಮಾತು ಹೊರಟುಹೋಯಿತು. ಆ ಮಾತನ್ನು ನುಡಿಸಿದವನು ಶ್ರೀಹರಿಯು ಪರೀಕ್ಷೆಗೇ ಬಂದಮೇಲೆ ಅವನ ಮಾತನ್ನು ಅವನೇ ಕಾಪಾಡಿಕೊಳ್ಳದಿದ್ದರೆ ಯಾರಿಗೆ ಅಪಕೀರ್ತಿ? ಆಗಲಿ ಮಗಳೆ, ಹೆದರಬೇಡ! ಒಂದರ ಜೊತೆಗೆ ಮತ್ತೊಂದಾದೀತು!' ಎಂದುಕೊಂಡು ಶವದ ಬಳಿಗೆ ಬಂದರು. ಪರಮಾತ್ಮ ನನ್ನು ಕೆಳಕಂಡ ಹದಿಮೂರು ಉಗಾಭೋಗಗಳಿಂದ ಸ್ತುತಿಸಿದರು.

### ಉಗಾಭೋಗಗಳು

ಪುರಂದರದಾಸರು ವೈಶ್ಯಮಾದಮ್ಮನ
ಪರ ಕುಮಾರಕನ ಬದುಕಿಸಿದರು ಗಡ!

ಗುರು ವ್ಯಾಸಮುನಿ ಭೂಪತಿಗೆ ಬಂದ ದು
ಸ್ತರವಾದ ಕುಹುಯೋಗ ಬಿಡಿಸಿದಗು ಗಡ !
ಶ್ರೀನಾರಾಯಣಯೋಗಿ ವ್ಯಾಸಮುನಿಗೆ ಬಂದ
ಉರಗಬಾಧೆಯ ಕಳೆದು ಪಾಲಿಸಿದರು ಗಡ !
ಹರಿಯೆ ಈಕಲಿಯುಗದಿ ನಿನ್ನ ಶರಣರು ಇಂಥಾ
ಚರಿಯಮಾಡಿಪ್ಪರು ಆವನಾದರು ಇನಿತು
ಸ್ಮರಣೆಮಾಡಿದವಗೆ ಮನಸು ನಿರ್ಮಲಕಣೊ !
ಧರೆಯೊಳು ಈಮನುಜರಾಡಿದ್ದೇ ವೇದ
ನೆರೆನಂಬಿದವರಿಗೆ ರೋಗ ಹಿಂಗಳೆವುದು
ಪರಮಶುದ್ಧ ಹರಿಶರಣರ್ಗೆ ಎದುರುಂಟೆ?
ಕರುಣಾಕರಮೂರ್ತಿ ವಿಜಯವಿಠಲ ನಿನ್ನ
ಚರಣಸೇವಿಸುವವರ ಪಡಿದೊತ್ತು ನಾನಯ್ಯ ||೧||

ಪ್ರಮೋದಸಂವತ್ಸರದಲೆನ್ನವರಿಗೆ
ರೋಮಕುಂದದುಕಣೊ ನೀನೊಲಿದಿರಲು
ಪ್ರಮೋದವಲ್ಲದೆ ಕ್ಲೇಶಲೇಶವಿಲ್ಲ
ಸ್ವಾಮಿ ಲಾಲಿಸಿಕೇಳೊ ಇಷ್ಟದೈವ
ಪ್ರಮಾದದಿಂದಲಿ ಬಂದಿದ್ದ ಕಾಲಕ್ಕು
ಗೋಮಾಯುವಿನಂತೆ ಓಡಿಪೋಗುವದು
ಶ್ರೀಮನೋಹರ ನಮ್ಮ ವಿಜಯವಿಠಲ ನಿನ್ನ
ನಾಮನೆನೆದ ಮಾರ್ಕಾಂಡಮುನಿಯ ನೋಡೊ ||೨||

ಕಾಲನಾಮಕ ಭಗವಂತ ನಿನ್ನಯಭೀತಿ
ಕಾಲನಾಮಕಳಾದ ದುರ್ಗಿಯಳಿಗೆ
ಕಾಲ ಗರುಡಶೇಷರುದ್ರರಿಗೆ ದುರ್ಗಾಭಯ
ಕಾಲಯಮನಿಗೆ ಇವರಭಯ, ಯಮನಭೀತಿ
ಕಾಲನೆಂಬ ಇವನ ತಮ್ಮಗಾಗುವದು
ಕಾಲಮೃತ್ಯುವಿಗೆ ಈ ಕಾಲನ ಭಯ

ಕಾಲದೂತರಿಗೆಭಯ ಇವರಿಂದ ಕ್ಷುದ್ರ
ಕಾಲದೇವತೆಗಳಿಗೆ ದೂತರಿಂದ ಭಯ
ಕಾಲಕಾಲಕಿರಲು ಸ್ವಾತಂತ್ರ್ಯದಲಿ ಲೇಶ
ಕಾಲವಾದರು ನರನ ಮುಟ್ಟುವರೆ ?
ಕಾಲನಿಯಾಮಕ ನಿನ್ನ ನಂಬಲು ಸರ್ವ
ಕಾಲದಲಿ ಸುಖವುಂಟು ನಿರೋಗದಿ
ಕಾಲದೇಶಪೂರ್ಣ ವಿಜಯವಿಠಲನೆ
ಕಾಲಿಗೆರಗುವೆನು ಕರಪಿಡಿದು ಸಲಹಯ್ಯ ||೬||

ರುದ್ರಾಂತರ್ಗತನರಸಿಂಹ ರೋಗಹರ
ಭದ್ರವಾಗಲಿ ಇವಗೆ ಇವನ ಪತ್ನಿ
ಆರ್ದ್ರಳಾಗಿಕಾಲಿವರಿದು ವಂದಿಪಳು ಸ
ಮುದ್ರಶಾಯಿ ಇವಳ ಮಂಗಳಸೂತ್ರ
ನಿದ್ರೆಯೊಳಾದರು ಸ್ಥಿರವಾಗಿರಲಿ ಉ
ಪದ್ರಗಳುಬಂದರೆ ಪರಿಹರಿಸು
ಅದ್ರಿಧರಿಸಿ ಗೋಕುಲಕಾಯ್ದ ಕರುಣಾಸ
ಮುದ್ರ ಆಪತ್ಕಾಲಬಾಂಧವನೆ
ಕ್ಷುದ್ರದೇವತೆಗೆ ಈಪರಿಶಕ್ತಿಯುಂಟೆ
ಛಿದ್ರಸಾಸಿರವಿರೆ ಕ್ಷಮಿಸಬೇಕು
ಮುದ್ರಧರಾಪಾಲ ವಿಜಯವಿಠಲನೆ ದಾ
ರಿದ್ರ್ಯಭಂಜನ ಎನಗೆ ಇದೆ ಮಾತುರಕೊಡೊ ||೭||

ಮಂಗಳಪ್ರದ ನೀನು ನಿನ್ನ ಭಜಿಸಿದ ಜನರ
ಸಂಗದಲಿ ಇದ್ದ ಮಾನವಗೆ ಸತತ
ಮಂಗಳವಲ್ಲದೆ ಲೇಶಕ್ಲೇಶಗಳಿಲ್ಲ
ತುಂಗಮಂಗಳತರಂಗವಾರ್ಧಿಚಂದ್ರ
ಹಿಂಗಳೆದು ರೋಗವ ಹಿರಿದಾಗಿ ಬ್ರಾಹ್ಮಣಗೆ
ಅಂಗ ಆರೋಗ್ಯವಾಗಲಿ ಅಂಗನೆ

ಗಂಗಾಜನಕ ನಮ್ಮ ವಿಜಯವಿಠಲ ನಿನ್ನ
ಅಂಘ್ರಿಧ್ಯಾನವೆ ಸರ್ವ ಅರಿಷ್ಟನಾಶ ||೫||

ಒಬ್ಬ ಸತಿಪತಿಗಾಗಿ ಮುನಿಯಶಾಪವ ಧರಿಸಿ
ಅಬ್ಜಬಾಂಧವನ ನಿಲಿಸಿದಳು ನೋಡೋ
ಒಬ್ಬ ಸತಿ ಪತಿಗಾಗಿ ಧರ್ಮನ ಸಭೆಸಾರಿ
ನಿಬ್ಬರದಿ ಪ್ರಾಣವನು ಪಡೆದಳು ನೋಡೋ
ಒಬ್ಬ ಸತಿ ಪತಿಗಾಗಿ ಚಿತ್ರಗುಪ್ತರಾಡಿದ
ಶಬ್ದಲಾಲಿಸಿ ಐದೆತನಪಡೆದಳೋ
ಊರ್ವಿಯೊಳೀಪರಿ ಸತಿಯರ ಸ್ವಧರ್ಮ
ನಿರ್ಭೀಡೆಯಾಗಿದೆ ನಿನ್ನ ದಯದಿ
ಅಬ್ಜನಾಭನೆ ಇವನಮೇಲೆ ದಯಮಾಡು ಕರು
ಣಾಬ್ಧಿಯೆ ಉಪೇಕ್ಷೆಮಾಡದಲೆ
ಅಬ್ಬರದದೈವ ವಿಜಯವಿಠಲರೇಯ
ಲಬ್ಧವಾಗಲಿ ನಾನುಬೇಡಿದ ವರವು ||೬||

ಮರಿಗುಬ್ಬಿ ಬಾಯಿಬಿಟ್ಟಂತೆ ಬಿಡುತಲಿನಿಂದು
ಕೆರಗೊಡ್ಡಿಬೇಡಿ ಕೇಳುತ್ತಿಹಳೋ ಜೀಯ
ಪರಮಪುರುಷ ನೀನು ಎನ್ನೊಳು ವ್ಯಕ್ತನಾಗಿ
ಇರುತಿರಲು ತಿಳಿದು ಬಲುದೈನ್ಯದಿಂದ
ಶರಣಪೇಳುವ ಮಾತು ನಿನ್ನದೇ ಎಂದಿಗು
ಸರಿಯೆಂದು ಜ್ಞಾನಿಗಳು ಪೇಳುತಿಹರೊ
ಬರಿದಾಗಗೊಡದಿರು ಬ್ರಾಹ್ಮಣಗೆ ಬಂದ
ದುರಿತಪರಿದಟ್ಟಿ ರೋಗಗಳ ಕಳೆಯೊ
ಮರಣವಿರಹಿತ ನಮ್ಮ ವಿಜಯವಿಠಲ ನಿನ್ನ
ಸರಿ ಥೊರೆಯಕಾಣೆ ರಕ್ಷಿಸುವಲ್ಲಿ ||೭||

ನಿನ್ನ ಮನದೊಳಗೆ ಉಳಿಸುವೆನೆಂಬುವದು
ಘನ್ನವಾಗಿರಲಿಕ್ಕೆ ಎನ್ನೊಳಗೆ
ಇನ್ನಿತು ಪ್ರೇರಿಸಿ ನೀನೆ ನುಡಿಸಿದ್ದು
ಘನ್ನವಲ್ಲವೆ ಇದಕೆ ಸಂಶಯವಿಲ್ಲ
ಇನ್ನು ಯೋಚಿಸಲೇಕೆ ಭಕ್ತ್ತಪಾಲಕ ಬಿರಿದು
ಅನ್ನಂತಕಾಲಕ್ಕು ನಿನ್ನದಯ್ಯಾ
ಉನ್ನಂತಮಹಿಮಶಿರಿ ವಿಜಯವಿಠಲರೇಯ
ಎನ್ನ ಮಾನಾಪಮಾನ ಮತ್ತಾರದಲ್ಲಾ ||೮||

ಅಬಲೆಯಮಾತಿಗೆ ಮನಸುಕರಗಿತು ನಿನ್ನ
ಅಬುಜಪಾದಕೆ ಬಿಡದೆ ಬಿನ್ನೈಸಿದೆ
ಪ್ರಬಲ ನೀನಾದಕಾರಣದಿಂದ ಚನ್ನಾಗಿ
ವಿಬುಧೇಶ ನಾನಾರೋಗವಿನಾಶನೆ
ಶುಭವೆಕೊಡುಜೀಯ ನಿನಗಲ್ಲದೆ ಅನ್ಯ
ವಿಭುಗಳಿಗೆ ಶರಣೆನ್ನೆ ಸರ್ವಕಾಲ
ಶಬತಮಾತುರವಲ್ಲ ಅಂತರಂಗದಸ್ತೋತ್ರ
ಶಬರಿಗೆ ಒಲಿದವನೆ ಸತ್ಯಮೂರ್ತಿ
ಕುಬುಜೆಯತಿದ್ದಿದ ವಿಜಯವಿಠಲರೇಯ
ನಿಬಿಡ ಕರುಣಾಂಬುಧಿ ಮಹಾದುರಿತಾರಿ ||೯||

ಒಂದೆರಡು ಮೂರು ನಾಲ್ಕೈದಾರು ಏಳು
ಒಂದೇಳು ಒಂಭತ್ತು ಹತ್ತುಸಾರಿ
ವಂದಿಸಿ ಸ್ತೋತ್ರಮಾಡಿದುದಕ್ಕೆ ಅವರವರ
ಬಂಧನಪರಿಹರಿಸಿಕಾಯ್ದೆ ನೀನು
ಒಂದೊಂದುಚಿತ್ತಕ್ಕೆ ಅನುಭವ ನೋಡಿ
ಇಂದು ಪ್ರಾರ್ಥಿಸಿದೆನೊ ಪಾರ್ಥಸೂತ
ಅಂದಮಾತನು ಬರಿದಾಗದಂತೆ ದೇವ
ಬಂದಪಮೃತ್ಯುವ ಕಳೆಗೆಮಾಡಿ

ನಂದವಿತ್ತು ಈ ದೇಹದಿ ಸುಖಪಡಿಸು
ತಂದೆ ಈ ಭಕತನ ಮೊರೆಯ ಕೇಳಿ
ಕಂದರ್ಪಪಿತ ನಮ್ಮ ವಿಜಯವಿಠಲ ನಿನ್ನ
ಪೊಂದಿದ ಮೇಲೆ ಮುನ್ನಾವ ಕ್ಲೇಶಗಳಿಲ್ಲ ॥೧೦॥

ಮಾತು ಮಿಂಚಿತು ಕಣೊ ಹೆಂಗಳಿಯ ಮನ
ಪ್ರೀತಿಗೆ ಆತುಮದೊಳಗಿಪ್ಪ ಆತ್ಮ ಕೇಳೊ
ಭೂತಳದೊಳಗೆ ಭಕ್ತರಧೀನನೆಂದು
ಖ್ಯಾತವಾಗಿದೆ ನೋಡು ಸರ್ವದಲ್ಲಿ
ನೀತಗುಣವಂತ ನಿನ್ನವರ ದಾಸನು
ಜ್ಞಾತಾಜ್ಞಾತದಿ ನುಡಿದೆನಯ್ಯಾ
ನೀತನಕದಿಂದ ನುಡಿಯ ಪಾಲಿಸದಿರಲು
ದಾತರೊಬ್ಬರ ಕಾಣೆ ಬ್ರಹ್ಮಾಂಡದಿ
ಯಾತರವನಲ್ಲ ನಿನ್ನ ನಾಮವೆಗತಿ ಚೆ
ನ್ನಾತು ಕಾಯೊ ಎನ್ನ ಮನದೈವವೆ
ವಾತಾಂತರ್ಗತ ನಮ್ಮ ವಿಜಯವಿಠಲರೇಯ
ಪ್ರೀತನಾಗು ಎನ್ನ ಸ್ತುತಿಗೆ ಮೈದೋರಿ ॥೧೧॥

ದೇವ ನಿನ್ನ ಪಾದದಾಣೆ ಭಕ್ತರಾಣೆ
ಈ ವಚನ ಸತ್ಯ ಮಾಡುವದು ಎನಗೆ
ಇವನ ಜೀವದಾನ ಕೊಡು ಇದೇ ದೇಹದಲಿ
ಮೂರು ವರುಷ ಎನ್ನಾಯುಷದೊಳಿತ್ತು
ಕಾವುದಲ್ಲದೆ ಇನ್ನು ಸುಮ್ಮನಿಪ್ಪದು ಸಲ್ಲ
ಸಾವಿರ ಬ್ರಾಹ್ಮಣ ಭೋಜನ ಮಾಡಿಸುವೆ
ದೇವ ನಿನ್ನ ಪಾದದಾಣೆ ಭಕತರಾಣೆ
ಈ ವೇಳೆಗೆ ಬಂದ ಅಪಮೃತ್ಯು ಓಡಿಸು
ಭೂವಿಬುಧರೆಲ್ಲ ಕಷ್ಟಪಡುವದ ನೋಡಿ
ಕೋವಿದರಾಯ ಎನ್ನಾಣೆ ಕೇಳಿದು ಸತ್ಯ

ಪಾವನ್ನಮೂರುತಿ ವಿಜಯವಿಠಲರೇಯ
ಜೀವೇಶನಿಂದಲಿ ರಕ್ಷಣೆಮಾಡಿಸೊ ||೧೬||

ಅನ್ನಂತ ಕಲ್ಪಕ್ಕೆ ನಿನ್ನ ಮೊರೆಬಿದ್ದವಗೆ
ಖಿನ್ನತೆಯಿಲ್ಲವೆಂಬುದ ಕೇಳಿಬಲ್ಲೆ
ಚಿಣ್ಣ ಧ್ರುವಪ್ರಹ್ಲಾದ ಮೊದಲಾದ ಭಕ್ತರ
ಘನ್ನತೆ ಏನೆಂಬೆ ಲೋಕಪಲ್ಲಿ
ಮನ್ನಿಸು ಮಹರಾಯ ವಿಜಯವಿಠಲರೇಯ
ಬಿನ್ನಪಕೈಕೊಂಡು ಭಕ್ತನ್ನಪಾಲಿಸೋ ||೧೭||

ದಾಸರು ಈ ಪ್ರಕಾರ ಸ್ತೋತ್ರಮಾಡಿ ಅನನ್ಯಭಾವನೆಯಿಂದ ಪರಮಾತ್ಮನನ್ನು ಧ್ಯಾನಿಸುತ್ತಿರಲು, ಭಕ್ತಿಪಾರವಶ್ಯದಿಂದ ಧಾರೆಯಾಗಿ ಹರಿಯುತ್ತಿರುವ ಬಾಷ್ಪಗಳನ್ನು ಗೋಪಾಲದಾಸರು ಒರೆಸುತ್ತಾ ನಿಂತಿರಲು, ಮನೆಯ ಹೊರಭಾಗದಲ್ಲಿ ಬೇಡ ಬೇಡೆಂದು ಯಜಮಾನನು ಬರುವ ಜನರನ್ನು ನಿವಾರಿಸುತ್ತಿರಲು, ಒಳಗೆ ದಿವ್ಯಜ್ಯೋತಿಯು ಹೊಳೆದಂತಾಯಿತು. ವಿಜಯದಾಸರು ಶ್ರೀಹರೇ ಎಂದು ಕಣ್ದೆರೆದರು. ಮೃತದೇಹವು ಪ್ರಾಣಸಂಚಾರವಾಗಿ ಚಲಿಸಿತು. ತರುಣನು ಕಣ್ಣುಗಳನ್ನು ತಿಕ್ಕುತ್ತಾ ಎದ್ದು ಕುಳಿತನು. ವಿಜಯದಾಸರು ಮದವಣಿಗನನ್ನು ತೊಡೆಯಮೇಲೆ ಕೂಡಿಸಿಕೊಂಡು ತಮ್ಮ ಆಯುಸ್ಸಿನಲ್ಲಿ ಮೂರು ವರ್ಷಗಳನ್ನು ಧಾರೆಯೆರೆದರು. ಯಜಮಾನ ಕೇಶವರಾಯನ ಆನಂದವು ಅಪರಿಮಿತವಾಗಿ ದಾಸರಿಗೆ ಸಾಷ್ಟಾಂಗ ನಮಸ್ಕಾರ ಮಾಡಿದನು. ದಾಸರು ಮದವಣಿಗನಿಗೆ ಆಯುರ್ದಾನಮಾಡುವರು ಯಾರಾದರಿದ್ದರೆ ಬನ್ನಿರೆಂದು ಕರೆದರು. ತೊಂಭತ್ತು ವರ್ಷದ ಮುದುಕಿ ಕೇಶವರಾಯನ ತಾಯಿಯು ನಾನಿನ್ನು ವೃದ್ಧಾಪ್ಯದಲ್ಲಿ ಕಷ್ಟಪಡಲಾರೆ! ನನ್ನ ಆಯುಸ್ಸೆಲ್ಲವೂ ಮೊಮ್ಮಗನಿಗೆ ಬರಲೆಂದು ಮುಂದೆ ಬಂದು ನಿಂತಳು. ಆಕೆಯ ಆಯುರ್ಮಾನವಿನ್ನೂ ಏಳು ವರ್ಷಗಳಿರುವವೆಂದು ದಾಸರು ಒಟ್ಟು ಮುಂದೆ ಹತ್ತು ವರ್ಷಕಾಲ ಈ ತರುಣನು ಜೀವಿಸುವನೆಂದು ಅಭಯದಾನ ಮಾಡಿದರು. ದಾಸರ ಆಜ್ಞೆಯಂತೆ ನಡೆಯಬೇಕಾಗಿದ್ದ ಮಹೋತ್ಸವವು ಆ ದಿನವೇ ನಡೆಯಿತು. ಗೋಪಾಲದಾಸರು

ವಿಜಯದಾಸರ ಬಾಯಿಂದ ಬಂದ ಸಹಸ್ರ ಭೋಜನವನ್ನು ಮಾಡಿಸೆಂದು ಕೇಶವರಾಯನಿಗೆ ತಿಳಿಸಿದರು. ರಾಯನು ಒಂದಿಲ್ಲದಿದ್ದರೆ ಹತ್ತು ಸಹಸ್ರ ಬ್ರಾಹ್ಮಣ ಭೋಜನ ಮಾಡಿಸುವೆನೆಂದು ಸಂತೋಷದಿಂದ ನುಡಿದನು.

ವಿಜಯದಾಸರು ಕೇಶವರಾಯನನ್ನು ಕರೆದು ನಿನಗೆ ನಮ್ಮ ಪೂರ್ವ ಪರಿಚರ್ಯವೇನಾದರಿದೆಯೇ ಎಂದು ಕೇಳಿದರು. ರಾಯನು ನನಗೆ ಜ್ಞಾಪಕವಿಲ್ಲವೆಂದನು. ದಾಸರು—ಮಹರಾಯ! ನಿನ್ನ ಮನೆಯ ಹುಗ್ಗಿಯ ಪ್ರಭಾವವೆಂದು ಪೂರ್ವವೃತ್ತಾಂತವನ್ನು ತಿಳಿಸಿದರು.

"ಉಪ್ಪು ಹಾಕಿದವನನ್ನು ಮುಪ್ಪಿನತನಕ ನೆನೆ" ಯೆಂಬ ಗಾದೆಯನ್ನು ವಿಜಯದಾಸರು ಅಕ್ಷರಶಃ ನಡೆಸಿದರು. ರಾಯನು ಆದರದಿಂದ ಮಾಡಿದ ಒಂದು ದಿನದ ಅನ್ನದಾನಕ್ಕೆ ಪ್ರತಿಯಾಗಿ ದಾಸರು ಅವನ ಮಗನ ಅಪಮೃತ್ಯುವನ್ನೇ ಪರಿಹರಿಸಿ ತಮ್ಮ ಆಯುಸ್ಸಿನಲ್ಲಿ ಮೂರು ವರ್ಷಗಳನ್ನು ಧಾರೆಯೆರೆದರು. ಸತ್ಪಾತ್ರರಿಗೆ ಅನ್ನದಾನ ಮಾಡಿದ್ದರ ಪ್ರಭಾವವು ಕಾದಿದ್ದು ಕೇಶವರಾಯನ ವಂಶೋದ್ಧಾರ ಮಾಡಿತು.

---

- ೫ -

ವಿಜಯದಾಸರು ಛಾಗಿಯಿಂದ ಚೀಕಲಪರಿಗೆ ಬಂದು ಕೆಲವುಕಾಲ ವಾಸಮಾಡಿದರು. ವಯಸ್ಸು ಎಪ್ಪತ್ತಾಗಿದ್ದುದರಿಂದ ಮತ್ತೆ ಅವರೆಲ್ಲೂ ದೇಶಸಂಚಾರ ಮಾಡಲಿಲ್ಲ. ಮೋಹನದಾಸರು ಮಾತ್ರ ಎಡೆಬಿಡದೆ ದಾಸರ ಸಮೀಪದಲ್ಲಿದ್ದರು. ತಮ್ಮ ಅಂತಿಮಕಾಲದಲ್ಲಿ ಭಾಸ್ಕರ ಕ್ಷೇತ್ರವೆನಿಸಿರುವ ಚಿಪ್ಪಗಿರಿಯಲ್ಲಿರಬೇಕೆಂಬ ಅಭಿಲಾಷೆ ದಾಸರಿಗಾಯಿತು. ಚಿಪ್ಪಗಿರಿಯು ಈಗಿನ ಗುಂಟಕಲ್ಲು ಸ್ಟೇಷನ್ನಿಗೆ ಐದು ಮೈಲಿ ದೂರದಲ್ಲಿದೆ. ಬಳ್ಳಾರಿ ಜಿಲ್ಲಾ ಆಲೂರು ತಾಲ್ಲೂಕಿಗೆ ಸೇರಿದೆ.

ಚಿಪ್ಪಗಿರಿಯಲ್ಲಿ ಜೈನರಾಜರ ಕಾಲದ ಅಂದರೆ ಹನ್ನೆರಡನೇ ಶತಮಾನದ ಬಲು ಪುರಾತನ ದೇವಾಲಯಗಳಿವೆ. ಇವುಗಳಲ್ಲಿ ಒಂದು ಭೋಗೇ

ಶ್ವರ ದೇವಾಲಯ. ಒಂದು ಚನ್ನಕೇಶವ ದೇವಾಲಯ. ಮತ್ತೊಂದು ವೆಂಕಟೇಶ ದೇವಾಲಯ. ಚನ್ನಕೇಶವ ದೇವಾಲಯದಲ್ಲಿ ವಿಜಯನಗರದ ಕೃಷ್ಣದೇವರಾಯನ ಕನ್ನಡದ ದಾನ ಶಾಸನಗಳಿವೆ. ಚಿಪ್ಪಗಿರಿಯು ಜೈನ ರಾಜರ ಕಾಲದಲ್ಲಿ ಕೋಟಿ ಕೊತ್ತಲಗಳಿಂದ ಶೋಭಿಸುತ್ತಿದ್ದು ಈಗ ಒಂದು ಸಾಧಾರಣ ಹಳ್ಳಿಯಾಗಿದೆ.

ವಿಜಯದಾಸರು ಪ್ರಥಮತಃ ಭೋಗೇಶ್ವರ ದೇವಾಲಯದಲ್ಲಿಳಿದರು. ಆ ಊರಿಗೆ ಅರ್ಧಮೈಲಿ ದೂರದಲ್ಲಿ ಒಂದು ಪುರಾತನ ವಟವೃಕ್ಷವಿದ್ದು ಸಮೀಪದಲ್ಲಿ ಒಂದು ಸರೋವರವಿತ್ತು. ಏಕಾಂತಸ್ಥಳವಾಗಿದೆಯೆಂದು ದಾಸರು ಅಲ್ಲಿ ಸ್ನಾನಾಹ್ನಿಕಗಳನ್ನು ಮಾಡಿ ವೃಕ್ಷಮೂಲದಲ್ಲಿ ಕೂಡುತ್ತಿದ್ದರು. ಆ ಪ್ರದೇಶವು ಚಂದಪ್ಪನೆಂಬ ಕುರುಬನಿಗೆ ಸೇರಿತ್ತು. ಅವನು ಇಪ್ಪತ್ತೈದು ಕೂರಿಗೆ (ನೂರು ಎಕರೆ) ಭೂಮಿಗೆ ಒಡೆಯನಾಗಿ ತನ್ನ ಕುರಿಗಳ ಮಂದೆಯನ್ನು ಅಲ್ಲೇ ಇಟ್ಟು ಸಾಕುತ್ತಿದ್ದನು. ತನ್ನ ಭಾವಿಯಲ್ಲಿ ಸ್ನಾನಮಾಡಿ ತನ್ನ ಗಿಡದ ಕೆಳಗೆ ತಪಸ್ಸು ಮಾಡುತ್ತಿರುವ ವೃದ್ಧದಾಸರನ್ನು ನೋಡಿ ಯಾರೋ ಸತ್ಪುರುಷರೆಂದು ಚಂದಪ್ಪನು ಅವರನ್ನು ಆದರಿಸುತ್ತಿದ್ದನು. ಆಗಾಗ ದಾಸರ ಬಳಿಯಲ್ಲಿ ಕುಳಿತು ಏನಾದರೂ ಉಪದೇಶ ಹೊಂದುತ್ತಿದ್ದನು. ದಾಸರನ್ನು ಕುರಿತು—

ಚಂದಪ್ಪ—ಸ್ವಾಮಿ, ಊರೊಳಗಿನ ದೇವಾಲಯವನ್ನು ಬಿಟ್ಟು ನನ್ನ ಭಾವಿಯಲ್ಲೇ ಸ್ನಾನಮಾಡಿ ನನ್ನ ಮರದ ಕೆಳಗೇ ಏಕೆ ಕೂಡುತ್ತಿರುವಿರಿ ?

ದಾಸರು—ಚಂದಪ್ಪಾ! ಇದು ಪವಿತ್ರಸ್ಥಾನವಾಗಿದೆ. ನಿನ್ನ ಭಾವಿಯಲ್ಲಿ ನಮ್ಮ ದೇವರಿದ್ದಾನೆ. ಅದಕ್ಕೇ ಇಲ್ಲಿದ್ದೇನಪ್ಪಾ.

ಚಂದಪ್ಪ—ಭಾವಿಯಲ್ಲಿ ದೇವರೆಲ್ಲಿದ್ದಾನೆ ಸ್ವಾಮಿ, ನಿತ್ಯಕಪಿಲೆ ಹೊಡೆಯುತ್ತೇನೆ! ಭಾವಿಯೆಲ್ಲಾ ಜಲಾಡುತ್ತೇನೆ!

ದಾಸರು—ಅಲ್ಲೇ ಇದ್ದಾನಪ್ಪಾ!

ಚಂದಪ್ಪ—ನಾನು ಕಾಣದ್ದು ನಮ್ಮ ಭಾವಿಯಲ್ಲಿ ನಿಮಗೇನುಗೊತ್ತು ಸ್ವಾಮಿ!

ದಾಸರು—ನಿನ್ನ ಭಾವಿಯ ಏಳನೇ ಮೆಟ್ಟಲಲ್ಲಿ ನಮ್ಮ ದೇವರಿದ್ದರೆ ನೀನೇನುಮಾಡುವೆ?

ಚಂದಪ್ಪ--ದೇವರಿದ್ದರೆ ಗುಡೀ ಕಟ್ಟಿಸುತ್ತೇನೆ. ಭೂಮಿಾ ಕೊಡುತ್ತೇನೆ.

ದಾಸರು—ನಿನಗೆ ಸಂಶಯವಿದ್ದರೆ ಈಗಲೇ ನೀರಿನಲ್ಲಿಳಿದು ನೋಡು.

ಕುತೂಹಲದಿಂದ ಚಂದಪ್ಪನು ಭಾವಿಯಲ್ಲಿಳಿದನು. ದಾಸರು ಹೇಳಿದ ಮೆಟ್ಟಲಮೇಲೆ ಹುಡುಕಾಡಿದನು. ಮೆಟ್ಟಲಿಗೆ ಒರಗಿಸಿದಂತೆ ಒಂದು ಶಿಲೆಯಿರುವದು ಗೊತ್ತಾಯಿತು. ಪ್ರಯತ್ನದಿಂದ ಮುಳುಗಿ ಅದನ್ನು ಮೇಲೆ ತೆಗೆದಿಟ್ಟನು. ಅದು ಗೋಪಾಲಕೃಷ್ಣ ವಿಗ್ರಹವಾಗಿತ್ತು. ಚಂದಪ್ಪನಿಗೆ ಸಂತೋಷವಾಯಿತು. ಒಡನೆಯೇ-'ಸ್ವಾಮಿಾ, ನನಗೆ ನಾಲ್ವರು ಮಕ್ಕಳಿರುವರು. ಅವರಿಗೆ ಇಪ್ಪತ್ತು ಕೂರಿಗೆ ಭೂಮಿಯನ್ನು ಹಂಚಿಕೊಡುವೆನು. ಉಳಿದ ಐದು ಕೂರಿಗೆಯನ್ನು ಸ್ವಾಮಿಗೆ ಬಿಡುವೆನು. ಸ್ವಾಮಿಗೊಂದು ಗುಡಿ ಕಟ್ಟುವೆನು' ಎಂದು ನುಡಿದನು. ನುಡಿದಂತೆ ನಡೆದನು. ಅನಂತರ ದಾಸರು ಗೋಪಾಲಕೃಷ್ಣಸನ್ನಿಧಿಯಲ್ಲಿ ವಾಸಮಾಡಿದರು.

ವಿಜಯದಾಸರ ಜೀವನಚರಿತ್ರೆಯ ಆದ್ಯಂತವೂ ಆಸಕ್ತಿಯಿಂದ ಗಮನಿಸುವ ಚರಿತ್ರೆಯು. ಬಾಲ್ಯದಲ್ಲಿ ಅವರು ಪಟ್ಟಶ್ರಮವು ಅವರ್ಣನೀಯವಾದುದು ದೈವಾನುಗ್ರಹವಾದಮೇಲೆ ಅವರಿಗುಂಟಾದ ಸನ್ಮಾನವೂ ಅವರ್ಣನೀಯವಾದುದು. ವಿಜಯದಾಸರಂಥಾ ದಯಾಮಯರು ಮತ್ತೊಬ್ಬರಾಗಲಿಲ್ಲ. ಜನರು ಅಗಣಿತ ಧನರಾಶಿಯನ್ನು ಸಮರ್ಪಿಸಿದರೂ ವಾಸಕ್ಕೆ ಕಡೆಗೊಂದು ಗುಡಿಸಲನ್ನು ಮಾಡಿಕೊಳ್ಳಲಿಲ್ಲ. ಕಡೆಗಾಲದಲ್ಲಿ ಚಂದ್ರಪ್ಪನು ಕಟ್ಟಿಕೊಟ್ಟ ಕುಟೀರವು ದಾಸರ ವಾಸಸ್ಥಾನವಾಯಿತು. **'ಸಾಲಮಾಡಬೇಡ, ಸಾಲದೆನಬೇಡ, ನಾಳೆಗೆನಬೇಡ'**ವೆಂಬ ಪುರಂದರದಾಸರ ಆದರ್ಶಗಳು ವಿಜಯರಾಯರಲ್ಲಿ ಮೂರ್ತಿವತ್ತಾಗಿ ಕಂಡುಬಂದವು.

ವಿಜಯದಾಸರ ಪದಗಳ ಧಾಟಿಗಳನ್ನು ನೋಡಿದರೆ ಆ ಕಾಲಕ್ಕೆ ಮಾತ್ರವಲ್ಲ, ಅವು ಈ ಕಾಲದಲ್ಲೂ ಸುಂದರವಾದ ಮಾದರಿಗಳಾಗಿವೆ. ಅನೇಕ ಪದಗಳು ಪಲ್ಲವಿಗಳ ಮಟ್ಟಿನಲ್ಲಿದ್ದು ವಿನ್ಯಾಸಮಾಡಿ ಹಾಡಲು ಅನು

ಕೂಲವಾಗಿವೆ. ರಾಗ, ರಾಗಕ್ಕೆ ತಕ್ಕಭಾವ, ಭಾವಕ್ಕನುಗುಣವಾದ ಕಾಲ, ಎಲ್ಲವನ್ನೂ ನೋಡಲು ವಿಜಯದಾಸರ ಪದಗಳು ಆದರ್ಶಗಳಾಗಿವೆ. ಹಾಡುವವರ ಲೋಪದಿಂದಲೂ, ಮುದ್ರಣಕಾರರ ಅವಿಚಾರದಿಂದಲೂ ದಾಸರ ಪದಗಳು ತಪ್ಪು ತಪ್ಪಾಗಿ ಕಿವಿಗೆ ಬಿದ್ದಮಾತ್ರಕ್ಕೇ ಆ ದೋಷಗಳನ್ನು ದಾಸರಲ್ಲಿ ಆರೋಪಿಸುವದು ಯೋಗ್ಯವಲ್ಲ. ದಾಸರ ಅನೇಕ ಸುಳಾದಿ ಉಗಾಭೋಗಗಳು ಬಲು ತಪ್ಪು ಪಾಠವಾಗಿರುವದು ಮಾತ್ರವಲ್ಲದೆ ಇಲ್ಲದ ಮಾತುಗಳು ಸೇರಿರುವದು ಸಹ ಕಂಡುಬರುತ್ತಿವೆ. ವಾಙ್ಮಯ ದೃಷ್ಟಿಯಿಂದ ದಾಸಸಾಹಿತ್ಯಶೋಧನಾ ಕಾರ್ಯವು ಇನ್ನಾದರೂ ವ್ಯವಸ್ಥಿತ ರೀತಿಯಿಂದ ನಡೆಯದಿದ್ದರೆ ಕರ್ಣಾಟಕಕ್ಕೇ ದೊಡ್ಡ ನಷ್ಟವಾಗುವದರಲ್ಲಿ ಸಂಶಯವಿಲ್ಲ. ವಿಜಯದಾಸರ ಕಟ್ಟೆಯಲ್ಲಿ ದಾಸರ ದೇವರನಾಮಗಳನ್ನು ಬರೆದಿಟ್ಟಿರುವ ಕೆಲವು ಶಿಥಿಲ ಪಟಿಗಳಿವೆ. ಅವುಗಳನ್ನು ಬರೆದಿಟ್ಟವರ ದೋಷ ಬೇಕಾದ್ದಿರಲಿ, ಇದ್ದಂತೆಯಾದರೂ ಬರೆದು ಜೋಪಾನಮಾಡುವ ಪ್ರಯತ್ನ ಮಾಡುವರೂ ಇಲ್ಲವಾಗಿದೆ. ಮೋಹನದಾಸರ ವಂಶೀಕರೆಂದು ಚಿಪ್ಪಗಿರಿಯಲ್ಲಿರುವವರಿಗೆ ದೊಡ್ಡ ಕುಟುಂಬಿಕರಾದ್ದರಿಂದ ಜೀವನಸಂಗ್ರಾಮವೇ ದೊಡ್ಡದಾಗಿದೆ. ದೇಶದ ದುರ್ದೈವದಿಂದ ಅಲ್ಲಿನ ಜನರಿಗೆ ಕನ್ನಡ ಮಾತಾಡುವದು ಮಾತ್ರವಲ್ಲದೆ ಓದಿ ಬರೆಯುವ ವಿದ್ಯಾಭ್ಯಾಸವಾಗುತ್ತಿಲ್ಲ. ಮಾತಾಡುವದು ಕನ್ನಡಭಾಷೆಯಾದರೆ ವ್ಯವಹಾರವು ತೆಲುಗು ಭಾಷೆಯಲ್ಲಾಗಿದೆ. ಪುರಂದರದಾಸರ ಗ್ರಂಥಗಳಂತು ವಿಜಯನಗರದ ಜೊತೆಯಲ್ಲೇ ಅದೃಶ್ಯವಾದವು. ವಿಜಯದಾಸರ ಕಟ್ಟೆಯಲ್ಲಲ್ಲದೆ ಮಿಕ್ಕ ಯಾವ ಹರಿದಾಸರ ಸ್ಥಾನದಲ್ಲೂ ಪುಸ್ತಕಭಂಡಾರವಿಲ್ಲ. ವಿಜಯರಾಯರಕಟ್ಟೆಗೆ ಬಂದು ಪದಗಳನ್ನು ಬರೆದುಕೊಂಡು ತಿರುಗಿ ಕಳುಹಿಸುವೆನೆಂದು ಅನೇಕರು ತೆಗೆದುಕೊಂಡುಹೋದ ಪುಸ್ತಕಗಳು ಮೂಲಸ್ಥಳಕ್ಕೆ ಬರಲಿಲ್ಲವೆಂಬ ಮಾತು ವಿಷಾದಜನಕವಾಗಿದೆ. ಮುಂದಿನ ಪೀಳಿಗೆಯ ಜನರಿಗೆ ವಿಜಯದಾಸರಂಥಾ ಕನ್ನಡ ಮಹಾತ್ಮರಿದ್ದರೆಂದು ತಿಳಿಸಲು ಆಧಾರಗಳೇ ದೊರೆಯದಿದ್ದರೆ ಎಂಥಾ ಅಪರಾಧವಾಗುವದೆಂಬಷ್ಟೆ ತಾಪಹುಟ್ಟಿದ: ಜನರನ್ನು ನೋಡಬೇಕೆಂದರೂ ಸಿಗದಿದ್ದರೆ ಮಾಡುವದೇನು ?

ಈಗಿನ ಸ್ಥಿತಿಯಲ್ಲೇ ಕನ್ನಡಿಗರ ಉದಾಸೀನತೆಯಿರುವದಾದರೆ

ಇನ್ನೂ ಹತ್ತಿಪ್ಪತ್ತು ವರ್ಷ ಚಿಪ್ಪಗಿರಿಯಲ್ಲಿ ದಾಸರ ಆರಾಧನಾಂಗವಾದ ಮಹಾ ಸಮಾರಾಧನೆಯಾಗಬಹುದು. ದಾಸರಲ್ಲಿ ಭಕ್ತಿಯುಳ್ಳ ಜನರು ಒಂದು ದೇಶದಲ್ಲಿ ಒಂದೆರಡು ಮನೆತನದ ಹಿರಿಯರಿದ್ದರೆ ಆ ಹಿರಿಯರಿರುವವರೆಗೆ ಅವರ ಮನೆಯಲ್ಲಿ ದಾಸರ ಪುಣ್ಯತಿಥಿಯನ್ನಾಚರಿಸಬಹುದು. ಇದಕ್ಕಿಂತ ಹೆಚ್ಚಾಗಿ ಏನು ನಡೆಯುವದೆಂದೂ ಭಾವಿಸಲು ಯಾರಿಗೂ ಸಾಧ್ಯವಿಲ್ಲ.

ನಿಜವಾದ ದಾಸರ ಆರಾಧನೆಯೆಂದರೆ ದಾಸರ ಗ್ರಂಥಗಳ ಪ್ರಚಾರ; ದಾಸರ ಪದಗಳನ್ನು ಹಾಡೋಣ; ದಾಸರ ಗ್ರಂಥಗಳನ್ನು ಮುದ್ರಿಸೋಣ. ಇದಕ್ಕಿಂತ ದೊಡ್ಡ ಪ್ರೀತಿಯು ಆರಾಧನೆಯು ಮತ್ತಾವದೂ ಇರುವದಿಲ್ಲ.

ಪ್ರಕೃತ ಚಿಪ್ಪಗಿರಿಯಿರುವದು ಬಳ್ಳಾರಿ ಜಿಲ್ಲೆಯಲ್ಲಿ. ಕೇವಲ ಸಂಕುಚಿತ ದೃಷ್ಟಿಯಿಂದ ನೋಡಿದರೆ ವಿಜಯದಾಸರು ಮಧ್ವಮತಸ್ಥರು. ಬಳ್ಳಾರಿ ಜಿಲ್ಲೆಯಲ್ಲಿ ಹೇರಳವಾಗಿರುವ ಬ್ರಾಹ್ಮಣರೆಂದರೆ ಮಾಧ್ವರೇ! ತಮ್ಮ ಜಿಲ್ಲೆಯಲ್ಲಿರುವವರು, ತಮ್ಮ ಮತಸ್ಥರು, ಎಂಬ ಅಭಿಮಾನದಿಂದಾದರೂ ಬಳ್ಳಾರಿಯ ಜನರು ದಾಸರ ಸಾಹಿತ್ಯವನ್ನು ಸಂಗ್ರಹಿಸಿ ಮುದ್ರಿಸುವ ಪ್ರಯತ್ನ ಮಾಡುವರೆ?

ಹಾಗೆ ದೊಡ್ಡ ಮನಸ್ಸು ಮಾಡುವರಾದರೆ ಹದಿನೆಂಟನೇ ಶತಮಾನದಲ್ಲಿ ಹುಟ್ಟಿ ಅದೇ ಶತಮಾನದಲ್ಲಿ ಕಾರ್ತಿಕ ಶುದ್ಧ ದಶಮಿ ಗುರುವಾರ ಪ್ರಾತಃಕಾಲ ವಿಜಯದಾಸಾರ್ಯರು ವೈಕುಂಠವಾಸಿಗಳಾದರೆಂದು ದುಃಖಿಸುವರಾರು? ದಾಸರನ್ನು ಮರೆಯುವರಾರು?



# ಶ್ರೀ ಗೋಪಾಲದಾಸರ ಚರಿತ್ರೆ

ತೀರ್ಥಗಳಲ್ಲಿ ಪುರುಷಾರ್ಥ ಚತುಷ್ಟಯಗಳಂತೆ ಕರ್ನಾಟಕದಲ್ಲಿ ಹರಿದಾಸ ಚತುಷ್ಟಯರು ಅತ್ಯಂತ ಪ್ರಸಿದ್ಧರೆನಿಸಿದರು. ಈ ನಾಲ್ವರ ಹಿಂದಾಗಲಿ ಮುಂದಾಗಲಿ ನೂರಾರು ಪ್ರಖ್ಯಾತ ದಾಸರುಗಳವತರಿಸಿ ಎಷ್ಟೋ ಮಹತ್ಕಾರ್ಯಮಾಡಿ ತೋರಿಸಿದ್ದರೂ, ಇವರ ಸ್ಥಾನಮಾನಗಳು ಅವರಿಗೆ ದೊರೆತಿಲ್ಲ. ಈ ನಾಲ್ವರು ದಾಸರ ವಾಕ್ಯಗಳೆಂದರೆ ವ್ಯಾಸವಾಕ್ಯದಂತೆ ಇಂದಿಗೂ ಮಾನ್ಯವಾಗಿವೆ. ಪಂಡಿತೋತ್ತಮರು ಸಂಶಯಗ್ರಸ್ತ ಪ್ರಮೇಯಗಳೊದಗಿದರೆ, ನಿಸ್ಸಂಶಯವಾದ ದಾಸರ ವಾಕ್ಯಗಳನ್ನುದಹರಿಸಿದ ಕೂಡಲೇ ಶಿರಸಾ ಮನ್ನಿಸುತ್ತಾರೆ. ಈ ಭಾಗ್ಯವು ದಾಸಚತುಷ್ಟಯರ ವಾಕ್ಯಗಳಿಗಿದ್ದಂತೆ ಇತರ ದಾಸರವಾಕ್ಯಗಳಿಗೆ ವ್ಯಾಪಕವಾಗಿಲ್ಲ. ಈ ದಾಸವರ್ಯರುಗಳೆಂದರೆ—ಪುರಂದರದಾಸರು, ವಿಜಯದಾಸರು, ಗೋಪಾಲದಾಸರು ಮತ್ತು ಜಗನ್ನಾಥದಾಸರು.

ಪ್ರಸಕ್ತ ಚರಿತ್ರೆಯಾದರೋ—ಈ ನಾಲ್ವರಲ್ಲಿ ಒಬ್ಬರಾದ "ಭಕ್ತಿಯಲಿ ಭಾಗಣ್ಣ" ನೆಂದು ಪೂಜ್ಯತೆಯನ್ನು ಪಡೆದ ಮಹಾನುಭಾವರಾದ ಗೋಪಾಲದಾಸರದಾಗಿರುವದು. ವಿಜಯದಾಸರ ಶಿಷ್ಯರುಗಳಲ್ಲಿ ಮೊದಲನೆಯ ದಾಸವರ್ಯರದಾಗಿರುವುದು. ತ್ಯಾಗದಲ್ಲಿ ಜಗನ್ನಾಥದಾಸರಂಥವರಿಗೆ ನಲವತ್ತು ವರ್ಷ ಆಯುರ್ದಾನ ಮಾಡಿದ ತ್ಯಾಗಮೂರ್ತಿಗಳದಾಗಿರುವದು. ಬಿಂಬೋಪಾಸನಾ ಕ್ರಮವನ್ನು ಚಿತ್ರಪಠದಂತೆ ಬರೆದಿಟ್ಟು ಬಲು ಜನರಿಗುಪದೇಶಿಸಿ ಅಪರೋಕ್ಷಿಗಳನ್ನು ಮಾಡಿದ ದಯಾಮಯರದಾಗಿರುವದು. ಕರ್ನಾಟಕದಲ್ಲಿ ಗೋಪಾಲದಾಸರ ಹೆಸರನ್ನು ಕೇಳದವರಿಲ್ಲ. ಗೋಪಾಲವಿಠಲ ಮುದ್ರಿಕೆಯ ಒಂದು ಪದವನ್ನಾದರೂ ಹಾಡದವರಿಲ್ಲ.

ಗೋಪಾಲದಾಸರು ರಾಯಚೂರು ಜಿಲ್ಲೆಯವರು. ದೇವದುರ್ಗ ತಾಲ್ಲೂಕಿಗೆ ಸೇರಿದ ಮೊಸರುಕಲ್ಲೆಂಬ ಗ್ರಾಮವು ದಾಸರ ಜನ್ಮಸ್ಥಳವು.

ತಾತನ ಹೆಸರು ಮುದ್ಗಲ್ಲಪ್ಪ. ತಂದೆಯ ಹೆಸರು ಮುರಾರಿರಾಯ. ತಾಯಿಯ ಹೆಸರು ವೆಂಕಮ್ಮ. ಗೋತ್ರವಾದರೋ ಹರೀತಸ. ಜನನ ಕಾಲ ಸುಮಾರು ಶಾಲೀವಾಹನಶಕ ೧೬೪೦. ಅಂದರೆ ಕ್ರಿಸ್ತಾಬ್ದ ೧೭೧೭. ದಾಸರ ಚರಿತ್ರೆಗೆ ಅವರ ತಮ್ಮ ರಂಗದಾಸರು ಮಾಡಿದ ೮೪ ನುಡಿಗಳ ದೇವರನಾಮವು ಪ್ರಮಾಣವಾಗಿರುವದು. ನಮ್ಮ ಹಿರಿಯರ ಕಡೆತದ ವಾಕ್ಯಾವಳಿಗಳು ಪ್ರಮಾಣವಾಗಿರುವವು. ಮತ್ತು ದಾಸರ ಅನೇಕ ಪದ ಸುಳಾದಿಗಳು ಪ್ರಮಾಣವಾಗಿರುವವು. ಚರಿತ್ರೆಯಲ್ಲಿ ಯಾವ ತರದ ಕಲ್ಪನೆಗಳೂ ಇಲ್ಲ.

ದೇವದುರ್ಗ ತಾಲ್ಲೂಕು ಮೊಸದುಕಲ್ಲೆಂಬ ಗ್ರಾಮದಲ್ಲಿ ಹರೀತಸ ಗೋತ್ರದ ಮುದ್ಗಲ್ಲಪ್ಪನೆಂಬ ಬಡಬ್ರಾಹ್ಮಣನಿದ್ದನು. ಇವನು ವೈದಿಕನೆನ್ನುವದಕ್ಕೆ ಯಾವ ಶಾಸ್ತ್ರಾಧ್ಯಯನ ಮಾಡಿದ್ದನೆಂದೂ ಹೇಳಿಕೆಯಿಲ್ಲ. ಲೌಕಿಕನೆನ್ನುವದಕ್ಕೆ ಸರ್ಕಾರದ ಉದ್ಯೋಗಮಾಡಿದವನಲ್ಲ. ದೊಡ್ಡ ಜಮೀನ್ದಾರ ಅಥವ ಜಹಗೀರ್ದಾರನಲ್ಲ. ವ್ಯಾಪಾರಮಾಡಿದ ಚಿನವಾರನೂ ಅಲ್ಲ. ಪಿತ್ರಾರ್ಜಿತವಾದ ಕೆಲವು ಕೂರಿಗೆ ಹೊಲಗಳಿಂದ ಬಂದಷ್ಟರಲ್ಲಿ ತೃಪ್ತನಾಗಿ ಜೀವನ ಮಾಡುತ್ತಿದ್ದನು. ಮಗ ಮುರಾರಿಯ ಕಾಲದಲ್ಲಿ ಸಂಸಾರವು ದೊಡ್ಡದಾಯಿತು. ಪಿತ್ರಾರ್ಜಿತ ಭೂಸ್ಥಿತಿಯು ಒಂದೊಂದಾಗಿ ಕೈಬಿಟ್ಟಿತು. ಮುರಾರಿಗೆ ನಾಲ್ವರು ಗಂಡುಮಕ್ಕಳಾದರು. ಕಡೆಯ ರಂಗಪ್ಪನು ತೊಟ್ಟಿಲ ಕೂಸಾಗಿರುವಾಗ ಮುರಾರಿಯು ಮೃತನಾದನು. ಅವನ ಅಣ್ಣತಮ್ಮಂದಿರು ಮುರಾರಿಯ ಹೆಂಡತಿ ಮಕ್ಕಳ ಯೋಗಕ್ಷೇಮ ನೋಡಲಿಲ್ಲ. ಸಾಲದುದಕ್ಕೆ ಪುತ್ರವಂತನೆಂದು ದ್ವೇಷಮಾಡಿ ವೆಂಕಮ್ಮನನ್ನು ಮನೆಯಿಂದೋಡಿಸಿದರು. ಅನಾಥ ವಿಧವೆಗೆ ಪಾಲಕರಿಲ್ಲದಂತಾಯಿತು. ಮಕ್ಕಳನ್ನೂ ಕರೆದುಕೊಂಡು ಭಿಕ್ಷುಕಳಾಗಿ ಸಂಚರಿಸುತ್ತಾ ಗದ್ವಾಲ ಸಂಸ್ಥಾನಕ್ಕೆ ಸೇರಿದ ಸಂಕಾಪುರಕ್ಕೆ ಆಕೆಯು ಬಂದಳು. ಊರಿನವರು ಇರುವದಕ್ಕೆ ಸ್ಥಳಕೊಡದಿದ್ದ ಕಾರಣ ಅವಳು ಊರಿಗೆ ಅರ್ಧಮೈಲಿ ದೂರದಲ್ಲಿರುವ ಮಾರುತಿಯ ಗುಡಿಯಲ್ಲಿ ವಾಸಮಾಡಿದಳು. ಮನೆಭಿಕ್ಷೆ ಕಣಭಿಕ್ಷೆಗಳಿಂದ ವಿಧವೆಯು ಜೀವಿಸಬೇಕಾಯಿತು. ಮಾರುತಿಯ ದೇವಾಲಯವು ಈಗಿರುವಂತೆ ಗಟ್ಟಿ ಕಟ್ಟಡವಾಗಿರಲಿಲ್ಲ. ಒರಟು ಕಲ್ಲುಗಳನ್ನು ಒಂದರ

ಮೇಲೊಂದು ಪೇರಿಸಿದ ಮೆತ್ತಿಗೆಯಿಲ್ಲದ ಗುಡಿಯು ಹಾವು ಚೇಳುಗಳಿಗೆ ಆವಾಸವಾಗಿತ್ತು. ಮಕ್ಕಳಿಗೆ ಮಾನಮುಚ್ಚುವ ಬಟ್ಟೆಗಳಿಲ್ಲ. ಎಣ್ಣೆ ಬೆಣ್ಣೆ ಧೂಪದೀಪಗಳು ಅಪರಿಚಿತ ಪದಾರ್ಥಗಳು. ಜೋಳ ಸಜ್ಜೆಗಳ ರೊಟ್ಟಿಯ ಜೊತೆಗೆ ಅಕ್ಕಿಯ ಅನ್ನವನ್ನು ಕಂಡದಿನವೇ ಮಕ್ಕಳಿಗೆ ಹಬ್ಬದ ದಿನವಾಗಿತ್ತು. ವಿಧವೆಯ ದಾರಿದ್ರ್ಯವನ್ನು ನೋಡಲಾರದೆ ಯಾವನೋ ಪುಣ್ಯಾತ್ಮನು ಆಕೆಗೊಂದು ಸೀಳುಗದ್ದೆಯನ್ನು ಕೊಟ್ಟನು. ಪಕ್ಕದ ಗದ್ದೆಯ ರೈತನು ಉಚಿತವಾಗಿ ಆ ಗದ್ದೆಯಲ್ಲಿ ಭತ್ತವನ್ನು ಬೆಳೆಸಿದನು. ಮೌಜೇ ಕುಲಕರಣಿಗೆ ವೆಂಕಮ್ಮನ ಇಷ್ಟು ಭಾಗ್ಯವೇ ಸಹನೆಯಾಗಲಿಲ್ಲ. ವೆಂಕಮ್ಮನು ತನ್ನ ಮನೆಯಲ್ಲಿ ಬಿಟ್ಟೀಚಾಕರಿ ಮಾಡದಿದ್ದ ಕಾರಣ ಗದ್ದೆಯನ್ನು ಕೊಯ್ಯುವ ಕಾಲಕ್ಕೆ ಸರಿಯಾಗಿ, ಸರ್ಕಾರೀ ಕೆರೆಯ ನೀರನ್ನುಪಯೋಗಿಸಿಕೊಂಡಳೆಂದು ಆ ದೀನಳಮೇಲೆ ಅಪವಾದ ಹಾಕಿದನು. ಗದ್ದೆಯ ಭತ್ತವನ್ನು ಅಪರಾಧಕ್ಕೆ ದಂಡವೆಂದು ತನ್ನ ಮನೆಗೆ ಸಾಗಿಸಿದನು. ದೀನ ವಿಧವೆಯು ಕುಲಕರಣಿಯ ಕಾಲಿಗೆ ಬಿದ್ದು ಅರ್ಧವಾದರೂ ಕೊಡಪ್ಪಾ, ಎಂದು ಮೊರೆಯಿಟ್ಟಳು. ಆ ಪಾಪಿಯು ಅವಳನ್ನು ಕಾಲಿನಿಂದ ಒದ್ದು, ಹೆಚ್ಚು ಗದ್ದಲಮಾಡಿದರೆ ಗುಡಿಯಿಂದೋಡಿಸುವೆನೆಂದು ಹೆದರಿಸಿದನು. ಇದನ್ನು ನೋಡುತ್ತಿದ್ದ ಭಾಗಣ್ಣನಿಗೆ ಕಣ್ಣಿನಿಂದ ದಳದಳನೆ ನೀರುದುರಿತು. ಬಾಲಕನಿಗೆ ಕುಲಕರಣಿಯ ಸಂಗಡ ಮಾತಾಡುವ ಧೈರ್ಯಬರಲಿಲ್ಲ. ತಾಯಿಯನ್ನೇ ಕುರಿತು—'ಅಮ್ಮಾ! ನಮಗಾಗಿ ನಿನಗಿಂಥಾ ಕಷ್ಟವಾಯಿತು! ಕುಲಕರಣಿಯೇ ಉಂಡು ಬದುಕಲಿ! ಆದರೆ ನಮ್ಮಂಥಾ ಮಕ್ಕಳು ಅವನಿಗಾಗಬೇಡ! ಆ ಹಾಳು ಕೆರೆಗೆ ನೀರೂ ಬರಬೇಡ!' ಎಂದು ಶಪಿಸಿದನು.

ದಾರುಚರ್ಮವಿನಿಶ್ವಾಸಃ ದಹತೇ ಲೋಹಪಂಚಕಂ।
ಸಾಧುಸಜ್ಜನಸಂತಾಪಃ ಕಿಮಾಶ್ಚರ್ಯಂ ಕುಲಕ್ಷಯಂ॥

ಎಂಬಂತೆ ಬಾಲಕನ ಶಾಪವು ಅಕ್ಷರಶಃ ಸತ್ಯವಾಯಿತು. ಕಾಲಾಂತರದಲ್ಲಿ ಕುಲಕರಣಿಯ ವಂಶವು ದೌಹಿತ್ರರಿಂದ ಬೆಳೆಯ ಬೇಕಾಯಿತು. ಆ ಕೆರೆಯಲ್ಲಿ ಇಂದಿಗೂ ಏನು ಮಾಡಿದರೂ ನೀರುನಿಲ್ಲುವದಿಲ್ಲ.

ವೆಂಕಮ್ಮನು ಎಷ್ಟು ಕಷ್ಟವಾದರೂ ಸಹಿಸಿದಳು. ಮಕ್ಕಳು ದೊಡ್ಡ

ವರಾದರೆ ತನ್ನ ಕಷ್ಟ ನೀಗೀತೆಂದು ತಿಳಿದುಕೊಂಡಳು. ಆ ಗ್ರಾಮದ ಪಳ್ಳಿಕೂಟ (School)ದ ಅಯ್ಯನಿಗೆ ತನ್ನ ಮಕ್ಕಳಿಗೂ ವಿದ್ಯಾಭ್ಯಾಸಮಾಡಿಸೆಂದು ಮೊರೆಬಿದ್ದಳು. ಆ ದಯಾಳು ಉಪಾಧ್ಯಾಯನು ತಬ್ಬಲಿ ಮಕ್ಕಳೆಂದು ಅಕ್ಕರೆಯಿಂದ ವೆಂಕಮ್ಮನ ನಾಲ್ವರು ಮಕ್ಕಳಿಗೆ ವಿದ್ಯಾದಾನಮಾಡಿದನು. ಸಂಕಾಪುರದ ಶಾನುಭೋಗ ಗುಂಡಪ್ಪನೆಂಬ ಪುಣ್ಯಾತ್ಮನು ತನ್ನ ಮಗನ ಜೊತೆಯಲ್ಲಿ ಭಾಗಣ್ಣನಿಗೆ ಧರ್ಮೋಪನಯನ ಮಾಡಿದನು. ಪುರೋಹಿತ ಆಚಾರ್ಯನಿಂದ ಭಾಗಣ್ಣನಿಗೆ ಸಂಧ್ಯಾವಂದನ ಅಗ್ನಿಕಾರ್ಯ ಮೊದಲಾದ ಮಂತ್ರಗಳು ಅರ್ಥವತ್ತಾಗಿ ಪಾಠವಾದವು. ಒಮ್ಮೆ ಕೇಳಿದ ಪಾಠವನ್ನು ಏಕಸಂಧಿಗ್ರಾಹಿಯಾಗಿ ಒಡನೆಯೇ ಒಪ್ಪಿಸುತ್ತಿದ್ದುದರಿಂದ ವಿದ್ಯಾಗುರುಗಳಿಗೆ ಭಾಗಣ್ಣನಲ್ಲಿ ವಿಶೇಷ ಪ್ರೀತಿಯುಂಟಾಯಿತು. ಇತರರಿಗೆ ೮-೧೦ ವರ್ಷಗಳಲ್ಲಾಗುವ ಪಾಠವು ಭಾಗಣ್ಣನಿಗೆ ಒಂದೆರಡು ವರ್ಷಗಳಲ್ಲಿ ಆಯಿತು. ಭಾಗಣ್ಣನಂತೆ ಮಿಕ್ಕ ಮೂವರೂ ಕ್ರಮವಾಗಿ ವಿದ್ಯಾವಂತರಾದರು. ಮಕ್ಕಳ ಪ್ರೌಢಿಮೆಯನ್ನು ನೋಡಿ ತಾಯಿಯ ದುಃಖಗಳು ಕಡಮೆಯಾದವು.

ಭಾಗಣ್ಣನು ತನ್ನ ಸಕಲ ಅರಿಷ್ಟಗಳೂ ಪರಿಹಾರವಾಗಿ ಇಷ್ಟಾರ್ಥ ಪ್ರಾಪ್ತಿಯಾಗಬೇಕಾದರೆ—

ನಗಾಯಿತ್ರ್ಯಾಃ ಪರಂ ಮಂತ್ರಂ।
ನಮಾತುಃ ಪರದೇವತಾ ॥

ಎಂಬಂತೆ ಗಾಯಿತ್ರೀಪುರಶ್ಚರಣೆ ಮಾಡಬೇಕೆಂದು, ನಿಶ್ಚಯಿಸಿದನು. ತಾಯಿ ವೆಂಕಮ್ಮನಾದರೂ—ಧ್ರುವಮಹಾರಾಜನಿಗೆ—

ತಮೇವ ವತ್ಸಾಶ್ರಯ ಭಕ್ತವತ್ಸಲಂ।
ಮುಮುಕ್ಷುಭಿರ್ಮೃಗ್ಯ ಪದಾಬ್ಜಪದ್ಧತಿಂ ॥
ಯೋಽಮೃಗ್ಯತೇ ಹಸ್ತಗೃಹೀತ ಪದ್ಮಯಾ।
ಶ್ರಿಯೈ ತರೈರಂಗ ವಿಮೃಗ್ಯಮಾಣಯಾ ॥

ಎಂದು ಉಪದೇಶಿಸಿದ ಸುನೀತಿ ದೇವಿಯಂತೆ, ಮಗನ ಸಂಕಲ್ಪಕ್ಕೆ ನೆರೆವಾದಳು. ಸುಮುಹೂರ್ತದಲ್ಲಿ ಭಾಗಣ್ಣನ ತಪಸ್ಸಿಗಾರಂಭವಾಯಿತು. ಸಂಕಾ

ಪುರದ ಬಳಿಯ ಭಾವಿಯಲ್ಲಿ ಪ್ರಾತಃಕಾಲ ಸ್ನಾನಮಾಡುವದು; ಪಕ್ಕದಲ್ಲಿದ್ದ ವಟವೃಕ್ಷದ ಬುಡದಲ್ಲಿ ಕುಳಿತು ಗಾಯಿತ್ರೀ ಮಂತ್ರ ಜಪಮಾಡುವದು; ಈ ರೀತಿ ಎರಡು ವರ್ಷಕಾಲ ಮೌನವ್ರತದಿಂದ ಭಾಗಣ್ಣನು ತಪಸ್ಸು ಮಾಡಿದನು.

ದುಷ್ಟ ಜನರು ಭಾಗಣ್ಣನು ಮೂಗು ಹಿಡಿದು ಮೌನದಿಂದ ಕೂಡುವದನ್ನು ನೋಡಿ, ಮಾತಾಡಿಸಿ ವ್ರತಭಂಗ ಮಾಡಬೇಕೆಂದು ಪರಿಪರಿಯ ತೊಂದರೆಗಳನ್ನಿತ್ತರು. ಬಾಯಿಗೆ ಬಂದಂತೆ ವೆಂಕಮ್ಮನನ್ನು ಪರಿಹಾಸ್ಯ ಮಾಡಿದರು. ದಾಯಾದನೊಬ್ಬನು,—ನಾಕಾಣದ ಭಾಗಣ್ಣನೇ ಇವನು? ಈಗ ಮಾತಾಡಿಸಿ ಬಿಡುವನೆಂದು ಬಾಲಕನ ಮೇಲೆ ಕುದಿಯುವ ನೀರನ್ನು ಸುರಿದನು. ಏನಾದರೂ ಬಾಗಣ್ಣನು ಚಲಿಸಲಿಲ್ಲ. ಬಿಸಿನೀರು ಸುರಿದವನಿಗೇ ಬೊಬ್ಬುಳಿಗಳಾಗಿ ಗುಣವಾಗುವದು ದುಸ್ತರವಾಯಿತು. ಇದನ್ನು ಕಂಡ ಇತರ ಜನರು ಅವನ ತಂಟೆಗೆ ಹೋಗಬಾರದೆಂದು ತಟಸ್ಥರಾದರು.

ವೇದಮಾತೆಯಾದರೂ ಬಾಲಕನನ್ನು ಎಷ್ಟುಕಾಲ ಪರೀಕ್ಷಿಸುವದೆಂದು ಪ್ರಸನ್ನಳಾದಳು. ಭಾಗಣ್ಣನ ನಾಲಿಗೆಯಮೇಲೆ ಬೀಜಾಕ್ಷರಗಳನ್ನು ಬರೆದು ಅನುಗ್ರಹಿಸಿ ಅದೃಶ್ಯಳಾದಳು. ಅಂದಿನಿಂದಲೇ ಭಾಗಣ್ಣನು ವರಕವಿಯಾದನು. ಯಾರನ್ನು ನೋಡಿದರೂ ಅವರ ಮೂರು ಜನ್ಮ ವೃತ್ತಾಂತವನ್ನು ತಿಳಿಯುವ ಮಹಾಜ್ಞಾನವು ಭಾಗಣ್ಣನಿಗಾಯಿತು.

ತಪಸ್ಸು ಮಾಡುತ್ತಿದ್ದ ಕಾಲದಲ್ಲಿ ಒಂದುದಿನ ಮಧ್ಯಾಹ್ನ ಭಾಗಣ್ಣನ ಹೊಟ್ಟೆಗೆ ಒಂದು ಸರ್ಪವು ಸುತ್ತಿಕೊಂಡು ತಲೆಯಮೇಲೆ ಹೆಡೆಯಾಡಿಸಿ ಕ್ರೀಡಿಸುತ್ತಿತ್ತು. ಅದನ್ನು ಕಂಡ ಗೋಪಾಲಕರು ಗಾಬರಿಗೊಂಡು ವೆಂಕಮ್ಮನಿಗೂ ಊರ ಜನರಿಗೂ ತಿಳಿಸಿದರು. ಆಕೆಯೂ ಗ್ರಾಮಸ್ಥರೂ ಬಂದು ನೋಡಲು, ಭಾಗಣ್ಣನು ಸರ್ಪಭೂಷಣನಾಗಿ ಪದ್ಮಾಸನಾಸೀನನಾಗಿ ಕುಳಿತಿದ್ದನು. ತಿಳಿದವರು—ಭಾಗಣ್ಣನು ಮಹಾಪುರುಷ! ನಾವು ಪರೀಕ್ಷೆ ಮಾಡುತ್ತಾ ನಿಲ್ಲಬಾರದು; ಶೇಷಶಾಯಿಯೇ ಅವನನ್ನು ರಕ್ಷಿಸುವನೆಂದು ಬಂದವರಿಗೆ ಸಮಾಧಾನ ಹೇಳಿ ಎಲ್ಲರೊಡನೆ ಹೊರಟು ಹೋದರು.

ವೆಂಕಮ್ಮನಿಗಾದರೋ—ದಾಯಾದನು ಬಿಸಿನೀರು ಚೆಲ್ಲಿ ಪಟ್ಟ ಕಷ್ಟ ವನ್ನು ಕಣ್ಣಾರ ನೋಡಿದ್ದುದರಿಂದ, ಗಾಯಿತ್ರೀಮಂತ್ರ ಪ್ರಭಾವದಿಂದ ಹೀಗೆಲ್ಲಾ ಆಗುವದೆಂದು ಧೈರ್ಯವಾಗಿತ್ತು.

ರಾತ್ರಿ ಮಾರುತಿಯ ದೇವಾಲಯಕ್ಕೆ ಭಾಗಣ್ಣನು ಬರಲು, ತಾಯಿ ಯು, ಕಂದ! ಸರ್ಪವೇಕೆ ನಿನ್ನನ್ನು ಸುತ್ತಿಕೊಂಡಿತು? ನಿನಗೆ ಭಯವಾಗ ಲಿಲ್ಲವೆ? ಎಂದು ಕೇಳಿದಳು. ಅವನು—"ಅವಸರವೇಕೆ? ಮುಂದೆ ತಾನೇ ಗೊತ್ತಾಗುವದು;" ಎಂದು ನೆಲದ ಮೇಲೆ ಬರೆದನು.

ಸಂಕಾಪುರದಲ್ಲಿ ಈಗಲೂ ಭಾಗಣ್ಣನಿಗೆ ಅಪರೋಕ್ಷವಾದ ಸ್ಥಳ ವೆಂದು ವಟವೃಕ್ಷವಿದ್ದ ಗುರುತನ್ನೂ ಭಾವಿಯನ್ನೂ ತೋರಿಸುತ್ತಾರೆ.

ಗಾಯಿತ್ರೀಮಂತ್ರ ಪುರಶ್ಚರಣೆಯಿಂದ ಲೋಕದಲ್ಲಿ ಸಿದ್ಧಿಸದ ಕಾರ್ಯ ಗಳಾವುವು? ಗಾಯಿತ್ರೀಮಂತ್ರ ಪುರಶ್ಚರಣೆಯಿಂದ ವಿಶ್ವಾಮಿತ್ರನು ಬ್ರಹ್ಮ ರ್ಷಿಯಾದನು. ಗಾಯಿತ್ರೀಮಂತ್ರ ಪುರಶ್ಚರಣೆಯಿಂದ ವಿದ್ಯಾರಣ್ಯರು ವಿಜ ಯನಗರದಲ್ಲಿ ಕನಕವೃಷ್ಟಿಯನ್ನು ಕರೆಸಿದರು. ಸಕಲವೇದಗಳೂ ಗಾಯಿ ತ್ರಿಯಿಂದುತ್ಪನ್ನವಾದವು. ಗಾಯಿತ್ರಿಯ ಇಪ್ಪತ್ತುನಾಲ್ಕು ವರ್ಣಗಳೇ ಶ್ರೀಮದ್ರಾಮಾಯಣದ ಇಪ್ಪತ್ತುನಾಲ್ಕು ಸಾವಿರ ಶ್ಲೋಕಗಳಾದವು.

ಇದೇ ಕಾಲದಲ್ಲಿ ಗದ್ವಾಲಿಯ ವಿದ್ವತ್ಸಭೆಗೆ ಬಂದು ಸನ್ಮಾನಿತನಾದ ತ್ರಿಲಿಂಗದೇಶದ ಕವೀಶ್ವರನೊಬ್ಬನು ಐಜಿಗೆ ಬಂದು ತನ್ನ ವಿದ್ಯಾಪ್ರದ ರ್ಶನ ಮಾಡಿದನು. ಕವಿಯ ಪಾಂಡಿತ್ಯಕ್ಕೆ ಮೆಚ್ಚಿದ ಜನರು ಅವನಿಗೆ ಯೋಗ್ಯ ಸಂಭಾವನೆ ಮಾಡಬೇಕೆಂದು ಪ್ರಯತ್ನಿಸಿದರು. ಕವಿಯು ತನಗೆ ಸಂಭಾವನೆ ಮಾತ್ರ ಸಾಲದು; ಈ ಪ್ರಾಂತ್ಯದ ವಿದ್ವಜ್ಜನರು ಜಯಪತ್ರಿಕೆ ಯನ್ನು ಬರೆದು ಕೊಡಬೇಕೆಂದು ಕೇಳಿದನು. ಆ ಕಾಲದ ಕವಿಗಳಿಗೆ ಹೋದ ಕಡೆಗಳಲ್ಲೆಲ್ಲಾ ಜಯಪತ್ರಿಕೆ ಬರೆಸಿಕೊಳ್ಳುವದೊಂದು ಚಟವಾಗಿದ್ದಿತು. ಸುತ್ತುವಳಯದ ವಿದ್ವಾಂಸರಾದರೊ — ಕವಿಗೆ ಸಂಭಾವನೆ ಕೊಡುವು ದಕ್ಕೂ ಜಯಪತ್ರ ಕೊಡುವದಕ್ಕೂ ವ್ಯತ್ಯಾಸವಿದೆಯಾದ್ದರಿಂದ ತಾವು ಬರೆದುಕೊಡುವುದಿಲ್ಲವೆಂದು ನಿರಾಕರಿಸಿದರು. ಪ್ರಮುಖ ದೊಡ್ಡ ಮನುಷ್ಯರು, ಆಗತಾನೇ ಪ್ರಶಂಸೆಗೆ ಬರುತ್ತಿದ್ದ ಮಂತ್ರಸಿದ್ಧ ಭಾಗಣ್ಣ

ಬ್ರಹ್ಮಚಾರಿಯ ಬಳಿಗೆ ಕವಿಯನ್ನು ಕಳುಹಿಸಿದರಾಯಿತೆಂದು ಹಂಚಿಕೆಮಾಡಿದರು. ಕವಿಯು ಭಾಗಣ್ಣನ ಬಳಿಗೆ ಬಂದು ಜಯಪತ್ರಿಕೆ ಬರೆದುಕೊಡೆಂದೇ ಕೇಳಿದನು.

ಭಾಗಣ್ಣ—ಜಯಪತ್ರಿಕೆ ನಿನ್ನ ದೇಹಬಲಕ್ಕೋ ವಿದ್ಯಾಬಲಕ್ಕೋ?

ಕವಿ—ಕವಿತ್ವಕ್ಕೆ.

ಭಾಗಣ್ಣ—ಕ್ಷುದ್ರಗ್ರಾಮಾಧಿಪತಿಗಳನ್ನು ಕೊಂಡಾಡುವ ಕವಿತ್ವಕ್ಕೋ?

ಕವಿ—ಗದ್ವಾಲಧರಾಧೀಶ್ವರರು ನನಗೆ ಉತ್ತಮ ಸನ್ಮಾನಮಾಡಿದ್ದಾರೆ.

ಭಾಗಣ್ಣ—ರಾಜಮರ್ಯಾದೆ ನಿನಗಾದಮೇಲೆ ವಿದ್ವಾಂಸರಗೊಡವೆಯೇಕೆ?

ಕವಿ—ವಿದ್ವಾಂಸರ ಜಯಪತ್ರಿಕೆಯು ನನ್ನ ಇತರ ಸಂಸ್ಥಾನಗಳ ದಿಗ್ವಿಜಯಕ್ಕೆ ಸಾಧಕವಾಗುವದು.

ಭಾಗಣ್ಣ—ಹಾಗಿದ್ದರೆ ನಿನಗೆ ನಾನು ಜಯಪತ್ರ ಕೊಡುವದಿಲ್ಲ. ಕವಿತ್ವಸ್ಪರ್ಧೆ ನಿನಗಿದ್ದರೆ ದೇವರಮೇಲೆ ಕವನಮಾಡು. ನಾನೂ ಮಾಡುವೆನು. ನನ್ನನ್ನು ಜೈಸಿದರೆ ಆಗ ನಾನೇ ನಿನಗೆ ಜಯಪತ್ರ ಕೊಡುವೆನು.

ಕವಿಯು ಭಾಗಣ್ಣನ ಮಾತು ಕೇಳಿ ಎದೆಗುಂದಿದನು. ಕವಿತ್ವಸ್ಪರ್ಧೆಯಲ್ಲಿ ಭಾಗಣ್ಣನ ಮುಂದೆ ನಿಲ್ಲದೇ ಹೋದನು. ಭಾಗಣ್ಣನು, 'ನಿನ್ನ ಬಿರುದುಗಳನ್ನು ಕಿತ್ತುಕೊಂಡು ಕಳುಹಿಸಬೇಕಾಗಿತ್ತು; ಇನ್ನೂ ವರ್ಧಿಷ್ಣು ನೀನಾಗಿರುವದರಿಂದ ನಿನ್ನನ್ನು ಸುಮ್ಮನೆ ಬಿಟ್ಟಿರುವೆನು; ಇನ್ನು ಮುಂದೆ ನರಸ್ತುತಿಮಾಡಿ ಸರಸ್ವತಿಯನ್ನು ವಿಕ್ರಯಿಸಬೇಡ; ನಿನ್ನ ಕವಿತ್ವವು ಭಗವದ್ಗುಣಾನುವಾದದಿಂದ ಪಾವನವಾಗಲಿ' ಎಂದು ಬುದ್ಧಿ ಹೇಳಿದನು. ಜನರು ಕವಿಗೆ ಮಾಸಲಾಗಿಟ್ಟಿದ್ದ ಸಂಭಾವನೆಯನ್ನು ಭಾಗಣ್ಣನಿಗೇ ಸಮರ್ಪಿಸಿದರು.

ಭಾಗಣ್ಣ ಬ್ರಹ್ಮಚಾರಿಯ ಒಂದೊಂದು ಚರಿತ್ರೆಯೂ ಗದ್ವಾಲದ ರಾಜಾರಾಮ ಭೂಪಾಲನಿಗೆ ತರಂಗ ತರಂಗವಾಗಿ ತಿಳಿಯಿತು. ಭೂಪಾಲನು—'ನನ್ನ ರಾಜ್ಯದಲ್ಲಿ ಇಂಥಾ ಮಂತ್ರಸಿದ್ಧರೂ ಕವೀಶ್ವರರೂ ಇರು

ವರೇ!' ಎಂದು ತಾನಾಗಿ ಬ್ರಹ್ಮಚಾರಿಯ ದರ್ಶನಮಾಡಲು ಸಂಕಾಪುರಕ್ಕೆ ಬಂದನು. ಅಧಿಕಾರಿಗಳು ರಾಜಯೋಗ್ಯವಾದ ಪಟಗೃಹವನ್ನು ಭಾಗಣ್ಣ ನಿದ್ದ ಮಾರುತಿಯ ದೇವಾಲಯದ ಬಳಿಯಲ್ಲಿ ನಿರ್ಮಿಸಿ, ತಳಿರು ತೋರಣಗಳಿಂದಲಂಕರಿಸಿದರು. ರಾಜಾಗಮನ ಕಾರಣದಿಂದ ಮಾರುತಿರಾಯನಿಗೂ ಪಂಚಾಮೃತದಭಿಷೇಕದ ಸುಯೋಗ ದೊರೆಯಿತು. ಮೇಲ್ಪಟ್ಟ ಅಧಿಕಾರಿಗಳು ಮೊದಲು ಭಾಗಣ್ಣನಿಂದ ರಾಜಾಶೀರ್ವಾದ ಮಾಡಿಸಬೇಕೆಂದು ಸಿದ್ಧತೆಮಾಡಿದರು. ಭಾಗಣ್ಣನು ಅದಕ್ಕೊಪ್ಪದೆ ಗ್ರಾಮಧರ್ಮವನುಸರಿಸಿ ಕುಲಕರಣಿಗೇ ಮೊದಲು ರಾಜದರ್ಶನವಾಗಬೇಕೆಂದನು. ಗಜಾರೂಢನಾಗಿ ಬರುತ್ತಿರುವ ರಾಜನನ್ನು ನೋಡಿ ಜನರು ವಾದ್ಯವೈಭವದಿಂದ ಕರೆತಂದರು. ರಾಜನು ಕುಲಕರಣಿಯನ್ನು ಕರೆದು—'ನಾನು ನಿಮ್ಮಿಂದ ಮರ್ಯಾದೆ ಮಾಡಿಸಿಕೊಳ್ಳಲು ಬಂದಿಲ್ಲ. ಬ್ರಹ್ಮಚಾರಿಗಳನ್ನು ಕಾಣಲು ಬಂದಿರುವೆನು. ಅವರ ಬಳಿಗೆ ನನ್ನನ್ನು ಕರೆದುಕೊಂಡುಹೋಗು' ಎಂದು ನುಡಿದನು. ಗುಂಡಪ್ಪನು—ಬ್ರಹ್ಮಚಾರಿಗಳು ಇದೇ ಗುಡಿಯಲ್ಲಿರುವರೆಂದು ಸಿದ್ಧವಾಗಿದ್ದ ಪಟಗೃಹದಲ್ಲಿ ರಾಜನನ್ನು ತಂದಿಳಿಸಿದನು. ರಾಮಭೂಪಾಲನು ಪರಿಶುದ್ಧನಾಗಿ ಅತ್ಯಂತ ಭಯಭಕ್ತಿಯಿಂದ ಬ್ರಹ್ಮಚಾರಿಯಿದ್ದ ಗುಡಿಗೆ ಬಂದು ನಮಸ್ಕರಿಸಿದನು. ಪರಸ್ಪರರ ಕುಶಲ ಪ್ರಶ್ನೆಯಾಯಿತು. ಭೂಪಾಲನು ತಮ್ಮಂಥಾ ಸತ್ಪುರುಷರಿಂದ ನನ್ನ ರಾಷ್ಟ್ರ ಪಾವನವಾಯಿತೆಂದನು. ಭಾಗಣ್ಣನು,-ಮಹಾಪ್ರಭೋ, ನಿನ್ನಂಥಾ ಧರ್ಮಪ್ರಭುವಿನ ರಾಜ್ಯದಲ್ಲಿ ನನ್ನಂಥಾ ಬ್ರಹ್ಮಚಾರಿಗಳನೇಕರಾದಾರೆಂದು ನುಡಿದನು. ಭಾಗಣ್ಣನ ಅನೇಕ ಧಾರ್ಮಿಕ ವಾಕ್ಯಗಳಿಂದ ಮಹಾರಾಜನಿಗೆ ಪರಮಾನಂದವಾಯಿತು. ಆಗಲೇ ತನ್ನ ಕಾಣಿಕೆಯೆಂದು ಕೆಲವು ಭೂಮಿಗಳನ್ನೂ ಅಶ್ವಸಹಿತವಾದ ಇತರ ಗುರು ಮರ್ಯಾದೆಗಳನ್ನೂ ಬ್ರಹ್ಮಚಾರಿಗೆ ಸಮರ್ಪಿಸಿದನು. [ಆ ಭೂಮಿ ಕಾಣಿಗಳು ಈಗಲೂ ದಾಸರ ವಂಶೀಕರ ಅನುಭವದಲ್ಲಿವೆ.]

ಅನಂತರ ಭಾಗಣ್ಣನು ಸಂಕಾಪುರವನ್ನು ಬಿಟ್ಟು ತಾಯಿ ತಮ್ಮಂದಿರಿಂದ ಸಹಿತನಾಗಿ ಉತ್ತನೂರಲ್ಲಿ ವಾಸಮಾಡಿದನು. ಉತ್ತನೂರಿಗೆ ಬಂದಿದಿನದಿಂದ ವೆಂಕಮ್ಮನಿಗೆ ಭಿಕ್ಷ ಬೇಡುವದು ತಪ್ಪಿತು. ದಾಸಪ್ಪ ಸೀನಪ್ಪ ರಂಗಪ್ಪ ಈ ಮೂವರಿಗೂ ಲೌಕಿಕ ಮಾಡಬೇಕೆಂಬ ಇಚ್ಛೆಯಾಗಿ ಗದ್ವಾ

ಲಿಗೆ ಬಂದರು. ಭಾಗಣ್ಣನಿಗೆ ತಮ್ಮಂದಿರು ಲೌಕಿಕ ಮಾಡುವದು ಇಷ್ಟವಾಗಿರಲಿಲ್ಲ. ಮುಂದರಿದು ಹೋಗುವರನ್ನು ಬೇಡವೆಂದು ತಡೆಯುವದು ಸರಿಯಲ್ಲವೆಂದು ಸುಮ್ಮನಿದ್ದನು.

ಉತ್ತನೂರಿನಲ್ಲಿ ಭಾಗಣ್ಣನು ನಿತ್ಯವೂ ಮಾಡುತ್ತಿದ್ದ ಕೆಲಸವೆಂದರೆ ಜನರಿಗೆ ಅದೃಷ್ಟ ಹೇಳುವದು ; ವೆಂಕಟೇಶ ದೇವರ ಗುಡಿಯಲ್ಲಿ ಹಾಡುತ್ತಾ ನರ್ತನ ಸೇವೆ ಮಾಡುವದು ; 'ವೆಂಕಟಕೃಷ್ಣ'* ಎಂಬ ಮುದ್ರಿಕೆಯಿಂದ ಕವಿತ್ವಮಾಡುವದು.

ಭಾಗಣ್ಣನ ಭಕ್ತಿಗೆ ಮೆಚ್ಚಿ ವೆಂಕಟಪತಿಯು ಶ್ರೀಕೃಷ್ಣ ರೂಪದಿಂದ ನರ್ತನ ಮಾಡುತ್ತಿದ್ದರು. ಜನರು ಅವನನ್ನು ದೇವತಾ ಪುರುಷನೆಂದು ಭಕ್ತಿಯಿಂದ ಕಾಣುತ್ತಿದ್ದರು.

ಭಾಗಣ್ಣನ ಬಳಿಗೆ ಅದೃಷ್ಟವನ್ನು ಕೇಳಲು ಬರುವ ಜನಸಂದಣಿ ಬಲವಾಯಿತು. ಬೇಡ ಬೇಡೆಂದರೂ ಅಗಣಿತ ಧನರಾಶಿ ಬಂದು ಸೇರಲಾರಂಭಿಸಿತು. ಅಂದು ಕಣಭಿಕ್ಷದಿಂದ ಜೀವಿಸಿದ ಭಾಗಣ್ಣನು ಇಂದು ಶ್ರೀಮಂತನೆನಿಸಿದನು. ಬಡತನದ ದುಃಖಾನುಭವ ಮಾಡಿದ್ದುದರಿಂದ ಬಡವರಿಗೆ ಮನಬಂದಂತೆ ದಾನಮಾಡುತ್ತಿದ್ದನು. ಭಾಗಣ್ಣನ ಮನೆಯು ದೊಡ್ಡ ಅನ್ನಛತ್ರವಾಯಿತು. ಹಸಿದವರಿಗೆ ಅಶನ ಕೊಡಿರಿ, ದೀನರಿಗೆ ದ್ರವ್ಯದಾನ ಮಾಡಿರಿ, ಶ್ರೀನಿವಾಸನ ಪಾದವನ್ನು ಭಜಿಸಿರೆಂಬುವದೇ ಭಾಗಣ್ಣನ ಉಪದೇಶವಾಯಿತು ಮಗನೆಷ್ಟು ಧಾರಾಳಿಯಾಗಿದ್ದನೋ ತಾಯಿ ವೆಂಕಮ್ಮನು ಅಷ್ಟೇ ಲೋಭಿಯಾಗಿದ್ದಳು. ಅತಿಥಿಗಳಿಗೆ ತುಪ್ಪ ಮೊಸರುಗಳನ್ನು ಬಡಿಸಬೇಕೆಂದರೆ ಆ ಹೆಂಗಳೆಗೆ ಕೈ ಬರುತ್ತಿರಲಿಲ್ಲ. ಭಿಕ್ಷುಕರಿಗೆ ಬೊಗಸೆ ತುಂಬಾ ಭಿಕ್ಷ ನೀಡೆಂದರೆ ಅವಳು ಹಿಂಜರಿಯುತ್ತಿದ್ದಳು—ಭಾಗಣ್ಣಾ! ಒಂದು ಬೊಗಸೆ ಜೋಳಕ್ಕೆ ರಾತ್ರಿಯೆಲ್ಲಾ ಅವಲಕ್ಕಿಯನ್ನು ಕುಟ್ಟಿದೆನೆಂದು ಹೇಳುತ್ತಿದ್ದಳು. ಬಂದ ಧನಧಾನ್ಯಗಳನ್ನು ಬಚ್ಚಿಡುವದರಲ್ಲಿದ್ದ

---

*ಭಾಗಣ್ಣನು ವಿಜಯದಾಸರ ಶಿಷ್ಯನಾದಮೇಲೆ ಗೋಪಾಲವಿಠಲ ಮುದ್ರಿಕೆಯು ಗುರುಗಳಿಂದ ದೊರೆಯಿತು. ಅನಂತರ ಗೋಪಾಲದಾಸರೆಂಬ ಹೆಸರಾಯಿತು. ಮೊದಲು ಮಾಡಿದ ಕವಿತ್ವದಲ್ಲಿ ಮಾತ್ರ ವೆಂಕಟಕೃಷ್ಣ ಮುದ್ರಿಕೆಯಿದೆ.

ಆದರವು ಅವಳಿಗೆ ಕೊಡುವದರಲ್ಲಿರಲಿಲ್ಲ. ಇಂಗಿತಜ್ಞನಾದ ಭಾಗಣ್ಣನು ತಾಯಿಯನ್ನು ನೋಯಿಸಲಾರದೆ, ತಾನೇ ಭಿಕ್ಷುಕರ ಧ್ವನಿ ಕೇಳಿದೊಡನೆ ಅವರಿಗೆ ಆ ದಿನ ಮತ್ತೆಲ್ಲೂ ಭಿಕ್ಷ ಕೇಳದಷ್ಟು ಕೊಟ್ಟು ಕಳುಹಿಸುತ್ತಿದ್ದನು.

ವೆಂಕಮ್ಮನ ಮಾತಿರಲಿ, ಮೈಸೂರು ಸೀಮೆಯಲ್ಲಿ ಹಿಂದೆ ಬಲು ದೊಡ್ಡ ಅಧಿಕಾರದಲ್ಲಿ ಒಬ್ಬ ಗೃಹಸ್ಥನಿದ್ದನು. ಅವನೂ ಬಡತನದ ಪರಮಾವಧಿ ಯನ್ನನುಭವಿಸಿ ಮಹದೈಶ್ವರ್ಯಾನುಭವದಲ್ಲಿದ್ದನು. ಅವನ ತಾಯಿಯು ವೆಂಕಮ್ಮನಿಗಿಂತ ಲೋಭಿಯಾಗಿದ್ದಳು. ಭಿಕ್ಷುಕರು ಬಂದರೆ ಕಿಡಿ ಕಿಡಿ ಯಾಗಿ ಬಲು ಹೊತ್ತು ಕಾಯಿಸಿ ಮುಷ್ಟಿಯಲ್ಲಿ ಮೂರು ಕಾಳು ತಂದು ಹಾಕುತ್ತಿದ್ದಳು. ಗುಣವಂತ ಮಗನು ಬಂದವರಿಗೆ ಕೈತುಂಬ ಕಾಯಿಸದೆ ಭಿಕ್ಷ ಕೊಡಮ್ಮಾ ಎಂದನು. ಆ ತಾಯಿಯು ಮಗನೇ ! ನಿನಗೆ ಹೋಗುವ ದೇನು ! ಒಂದು ಬೊಗಸೆ ಅಕ್ಕಿಗೆ ದಿನವೆಲ್ಲಾ ದುಡಿದು ನಿನ್ನನ್ನು ಸಾಕಿ ದ್ದೇನೆ ; ಮುಂಜಿಮಾಡಲು ಗತಿಯಿಲ್ಲದೆ ಐದನೇ ವರ್ಷದಲ್ಲೇ ನಿನಗೆ ಕಳ್ಳ ಜನಿವಾರ ಹಾಕಿದ್ದೇನೆ ; ನಾನು ನಿನಗಾಗಿ ಪಟ್ಟ ಕಷ್ಟ ದೇವರಿಗೆ ಗೊತ್ತೆಂ ದಳು. ಗೃಹಸ್ಥನು,—ಅಮ್ಮಾ! ನಿಜವಾಗಿ ನನಗೆ ಉಪನಯನವಾಗಲಿ ಲ್ಲವೇ ಎಂದನು. ತಾಯಿಯು ಕಣ್ಣಿನಲ್ಲಿ ನೀರು ತಂದು, ಇಲ್ಲಪ್ಪಾ ನಿನಗೆ ಉಪನಯನವಾಗಲಿಲ್ಲವೆಂದಳು. ಗೃಹಸ್ಥನು ಪಶ್ಚಾತ್ತಾಪನಿಂದ ಪುರೋ ಹಿತರನ್ನು ಕರೆಸಿ, ಉಪನಯನಾದಿ ಸಂಸ್ಕಾರಗಳಿಂದ ಬ್ರಾಹ್ಮಣ್ಯವನ್ನು ಸಂಪಾದನೆ ಮಾಡಿದನು.

ಬಡತನವು ಯಾರಿಗೂ ಬಲು ಕೆಟ್ಟದ್ದು. ಭಗವತ್ಕೃಪೆಯಿಂದ ಐಶ್ವ ರ್ಯಪ್ರಾಪ್ತವಾದರೂ ಅನೇಕರಿಗೆ ಔದಾರ್ಯಗುಣ ಬರುವದಿಲ್ಲ.

ಭಾಗಣ್ಣನ ಮನೆಯಲ್ಲಿ ಏನು ಕಾರಣದಿಂದಲೋ ಒಂದು ದೊಡ್ಡ ಸಮಾರಾಧನೆಯಾಯಿತು. ಜನಸಂದಣಿ ಬಲವಾದ್ದರಿಂದ ಸಿದ್ಧವಾಗಿದ್ದ ಅಡಿಗೆಯ ಜೊತೆಗೆ ಮತ್ತಷ್ಟು ಮಾಡಬೇಕಾಯಿತು. ಲೋಭಿ ವೆಂಕ ಮ್ಮನು ಅಕ್ಕಿ ತುಂಬಿದ್ದ ಗುಡಾಣವನ್ನು ಮರೆಮಾಚಿ ಅಕ್ಕಿಯಿಲ್ಲವೆಂದಳು. ಭಾಗಣ್ಣನು ಹೇಗೋ ಆ ದಿನದ ಕಾರ್ಯವನ್ನು ನಿರ್ವಹಿಸಿದನು. ಮರು ದಿನ ತಾಯಿಯು ಮುಚ್ಚಿಟ್ಟಿದ್ದ ಗುಡಾಣವನ್ನು ತೆಗೆದು, ಅಮ್ಮಾ ಅಕ್ಕಿಯು

ಗುಡಾಣದ ತುಂಬಾ ಏನಿದೆ ನೋಡು ಬಾರೆಂದು ಕರೆದನು. ಗುಟ್ಟು ಬೈಲಾಯಿತೆಂದು ವೆಂಕಮ್ಮನು ಬಂದು ನೋಡಲು ಗುಡಾಣವು ಕ್ರಿಮಿಮಯವಾಗಿತ್ತು. ಭಾಗಣ್ಣನು ನೋಡಿದೆಯೋ ಲೋಭದ ಫಲ ಹೇಗಿದೆಯೆಂದನು. ಅಂದಿನಿಂದ ಅವಳು ಉದಾರಿಯಾದಳು.

ಹೀಗಿರಲು ಗದ್ವಾಲಿಗೆ ಲೌಕಿಕಮಾಡಿ ಜೀವಿಸುವೆವೆಂದು ಹೋಗಿದ್ದ ಮೂವರು ತಮ್ಮಂದಿರಿಗೂ ರಾಜಾಸ್ಥಾನದಲ್ಲಿ ನೌಕರಿ ಸಿಗುವುದಕ್ಕೆ ಬದಲಾಗಿ, ಚೋರತ್ವದ ಆಪಾದನೆಯಾಗಿ ಕಾರಾಗೃಹವಾಸ ಪ್ರಾಪ್ತವಾಯಿತು. ದುಷ್ಟ ಅಧಿಕಾರಿಗಳು ಬಾಲಕರಮೇಲೆ ರಾಜಾನುಗ್ರಹನಾದರೆ ಭಾಗಣ್ಣನ ಬಲುಮೆಯಿಂದವರು ದೊಡ್ಡ ಪದವಿಗೇರುವರೆಂದು, ಅಸೂಯೆಯಿಂದ ಮೂವರಿಗೂ ನಿಗಡಬಂಧನಮಾಡಿಸಿದರು. ಈ ಸಂಗತಿಯನ್ನು ಜ್ಞಾನ ದೃಷ್ಟಿಯಿಂದ ತಿಳಿದ ಭಾಗಣ್ಣನು ಅವರನ್ನು ಬಿಡಿಸಿ ಉತ್ತನೂರಿಗೆ ಕರೆತಂದನು. ಅಂದಿಗೇ ವೆಂಕಮ್ಮನ ಮತ್ತು ತಮ್ಮಂದಿರ ಲೌಕಿಕ ಮಾಡಬೇಕೆಂಬ ದುರಾಶೆ ಪೂರ್ತಿಯಾಯಿತು.

ಅನಂತರ ಭಾಗಣ್ಣನು ಆದವಾನಿಯಲ್ಲಿ ದಿವಾನಗಿರಿ ಮಾಡುತ್ತಿದ್ದ ಪಂಗನಾಮದ ತಿಮ್ಮಣ್ಣಯ್ಯನವರ ಬಳಿಯಲ್ಲಿ ಕೆಲವು ಕಾಲ ವಾಸಮಾಡಿದನು. ಎಲ್ಲಿದ್ದರೂ ಭಾಗಣ್ಣನ ಭವಿಷ್ಯ ಹೇಳುವ ವ್ಯಾಪಾರವು ಯಶಸ್ವಿಯಾಗಿ ನಡೆದು ಧನಪ್ರಾಪ್ತಿಯಾಯಿತು. ಅನುಕೂಲ ಕಾಲದಲ್ಲೇ ಕಾಶೀಯಾತ್ರೆಮಾಡುವ ಅಭಿಲಾಷೆ ಭಾಗಣ್ಣನಿಗಾಗಿ ಅಲ್ಲಿಗೂ ಹೋಗಿ ತನ್ನ ಅದೃಷ್ಟ ವಿದ್ಯಾಬಲದಿಂದ ಪ್ರಖ್ಯಾತನಾದನು. ಆ ಸಮಯದಲ್ಲಿ ಭಾಗಣ್ಣನಿಗೆ ವಿಜಯದಾಸರ ದರ್ಶನವಾಯಿತು. ವಿಜಯದಾಸರು ಆಗಲೇ ಪುರಂದರದಾಸರ ಅನುಗ್ರಹದಿಂದ ಹರಿದಾಸರಾಗಿ ದೈವಾನುಗ್ರಹಕ್ಕೆ ಪಾತ್ರರಾಗಿದ್ದರು. ಅನೇಕರು ಅವರನ್ನು ಹಿಂಬಾಲಿಸಿದರೂ ಭಾಗಣ್ಣನಮೇಲೆ ಮೊದಲು ದಾಸರ ಕೃಪೆಯಾಯಿತು. '**ಗೋಪಾಲವಿಠಲ**' ಎಂಬ ಅಂಕಿತ ದೊರೆತು ಭಾಗಣ್ಣನು ಪ್ರಖ್ಯಾತ ಗೋಪಾಲದಾಸರಾದನು. ಗೋಪಾಲದಾಸರು ತಮ್ಮ ತಮ್ಮಂದಿರಿಗೆ ಕ್ರಮವಾಗಿ ವರದಗೋಪಾಲವಿಠಲ, ಗುರುಗೋಪಾಲವಿಠಲ, ತಂದೆಗೋಪಾಲವಿಠಲ ಎಂಬ ಅಂಕಿತಗಳನ್ನನುಗ್ರಹಿಸಿದರು.

ಕಡೆಯ ರಂಗಪ್ಪನವರೂ ಮಿಕ್ಕೀವರ್ಗರೂ ಗೋಪಾಲದಾಸರಂತೆ ಮಹಾ ಅಪ ರೋಕ್ಷಜ್ಞಾನಿಗಳೆನಿಸಿದರು.

- ೨ -

ಗೋಪಾಲದಾಸರ ಕಾಲದಲ್ಲಿ ಐಜೀಯಲ್ಲಿ ವೆಂಕಟನರಸಿಂಹಾಚಾರ್ಯ ರೆಂಬ ಪ್ರಖ್ಯಾತ ಪಂಡಿತರಿದ್ದರು. ಅವರಿಗೆ ವೆಂಕಟರಾಮಾಚಾರ್ಯನೆಂಬ ಮಗನಿದ್ದನು. ತಂದೆಗೆ ಮಗನನ್ನು ತನಗೆ ಸಮಾನಪಂಡಿತನನ್ನು ಮಾಡ ಬೇಕೆಂಬ ಅಭಿಲಾಷೆಯಿತ್ತು. ಮಗನಿಗೆ ಮಾತ್ರ ವಿದ್ಯಾಸಕ್ತಿಯಿರಲಿಲ್ಲ. ಆಚಾರ್ಯರಿಗಿಂತ ಅವರ ಹೆಂಡತಿಗೆ ತನ್ನುದರದಲ್ಲಿ ಜನಿಸಿದ ಮಗನು ದಡ್ಡ ನಾಗುವನೆಂಬ ವ್ಯಾಕುಲವು ಬಲು ಬಾಧಿಸುತ್ತಿತ್ತು. ಪುತ್ರಪ್ರೇಮದಿಂದ ಆಚಾರ್ಯರು ಮಗನನ್ನು ದಂಡಿಸುತ್ತಿರಲಿಲ್ಲ.

ಆಚಾರ್ಯರು ಬಹುಮುಖದಿಂದ ಗೋಪಾಲದಾಸರ ಖ್ಯಾತಿಯನ್ನು ಕೇಳಿದ್ದರು. ಸ್ವಯಂ ಮಹಾ ವಿದ್ವಾಂಸರಾಗಿದ್ದುದರಿಂದ ತಾವಾಗಿ ದಾಸರ ಬಳಿಗೆ ಹೋಗುವದು ತಮ್ಮ ಆಚಾರ್ಯಪಟ್ಟಕ್ಕೆ ಅಗೌರವವೆಂದು ತಿಳಿದಿದ್ದರು. ಆಚಾರ್ಯರ ಪತ್ನಿಯಾದರೋ—ಆಚಾರ್ಯರ ಕಿವಿಗೆ ಬೀಳುವಂತೆ ಗೋಪಾಲದಾಸರ ಅನೇಕ ದೇವರನಾಮಗಳನ್ನು ಹಾಡುತ್ತಿದ್ದಳು. ದಾಸರ—

'ವಗತನದಲಿಸುಖವಿಲ್ಲ| ಅದ| ನೊಲ್ಲೆಂದರೆಬಿಡದಲ್ಲ'

ಎಂಬ ದೇವರನಾಮವನ್ನು ಹಾಡಿದಾಗ ಆಚಾರ್ಯರು ಮೂರು ಮೂರು ಬಾರಿ ಹೇಳಿಸಿ ಕೇಳುತ್ತಿದ್ದರು. ಆ ಪದ ವಿಸ್ತಾರವಾದದರೋ—

ಕಾಂಬೋದಿ — ಆದಿತಾಳ

ವಗತನದಲಿ ಸುಖವಿಲ್ಲ| ಅದ| ನೊಲ್ಲೆಂದರೆ ಬಿಡೆದಲ್ಲ ||ಪ||
ಹಗರಣ ಜಗದೊಳು ಮಿಗಿಲಾಯಿತು| ಪನ್ನಗನಗ ನಗರನಿವಾಸ||ಅ||

ಮೂರು ಬಣ್ಣಿಗೆಯ ಮನೆಗೆ| ಮೂರೆರಡು ಭೂತಗಳು|
ಮೂರು ನಾಲ್ಕು ಪ್ರಾಕಾರಕ್ಕೆ| ಮೂರಾರು ಛಿದ್ರಗಳು||
ಮೂರು ಅವಸ್ಥೆಯು ದಿನಕೆ| ಮೂರು ನೂರಾರು ಹತ್ತರಲಿ|
ಮೂರು ವಿಧದನ್ನದಿಂದ| ಮೂರು ತಾಪಕ್ಕಾರಲಾರೆ ||೧||

ಐದುಮಂದಿ ಭಾವನವರು| ಐದುಮೈದುನರು ಕೂಡಿ|
ಐದುಪರಿತಾನಾಗಿ ಮೂವ| ನೈದು ಕತ್ತಲೆಯ ಕೋಣೆ||
ಗೈದುವಂತೆಮಾಡುವರು| ಐದುತಂದು ಬೆಚ್ಚಿಸುವರು|
ಐದನೆ ಬೊಕ್ಕಸದಕೋಣೆ| ಗೈದುವಪರಿನಾಕಾಣೆ ||೨||

ಆರಾರು ಎರಡುಸಾವಿರ| ದಾರಿಯಲ್ಲಿ ಹೋಗಿಬರುವರು
ಆರು ಮೂರು ನೂರುಸಾವಿರ| ದಾರುನೂರು ನಿತ್ಯದಲ್ಲಿ||
ಆರು ನಾಲ್ಕುಮಂದಿ ಹಿರಿಯ ಪಾರುಪತ್ಯಗಾರರಿದಕೆ|
ಆರು ಎರಡು ವಿಧದಲೆನ್ನ| ಗಾರುಮಾಡುತಿಪ್ಪರೋ ||೩||

ಒಬ್ಬ ಬೆಳಕು ಮಾಡುವ ಮ | ತ್ತೊಬ್ಬ ಕತ್ತಲೆಗೈಸುವ
ಒಬ್ಬ ಎರಡೂ ಮಾಡುವ ಮ | ತ್ತೊಬ್ಬ ನಿಂತು ನೋಡುವ
ಒಬ್ಬ ಮೂವರ ಒಳಗೆ | ಹಬ್ಬಿಕೊಂಡಿಪ್ಪವರಂತೆ
ಒಬ್ಬನ ಕಾಣದೆ ನಾ | ತಬ್ಬಿಬ್ಬಿಗೊಳಗಾದೆನೋ ||೪||

ಆರು ಹತ್ತಾರ ಮೂಲದಿ | ಆರುಮಂದಿ ಬಿಡದೆ ಎನ್ನ
ಘೋರಿಸುವರು ಮರುಳೊಂದು ವಿಚಾರಮಾಡಲೀಸರೋ
ಆರು ಮೂರು ವಿಧದ ಸೋಪಸ್ಕಾರ ಒಂದಾದರೂ ಇಲ್ಲ
ಆರೆ ಇಬ್ಬರು ಸವತೇರ ಹೋರಾಟವ ಏನನೆಂಬೆ ||೫||

ಹಡೆದ ತಾಯಿ ಮಾಯಾದೇವಿ | ಹಿಡಿದು ಬದುಕು ಮಾಡಿಸುವಳು
ಒಡಹುಟ್ಟಿದೈವರು ಎನ್ನ | ಕಡೆಗಣ್ಣಿಂದ ನೋಡರೂ
ಬಿಡದೆ ಹತ್ತಿರ ಕಾದಿಪ್ಪ | ನುಡಿಸನು ಹಿರಿಯಣ್ಣನವರ
ಮಡದಿಯ ತ್ಯಾಗಕ್ಕೇನೆಂಬೆ | ತನ್ನ| ಒಡವೆ ಲೇಶವೀಯಳೋ ||೬||

ಅತ್ತೆ ಅತ್ತಿಗೆಯರು ಎನ್ನ । ಸುತ್ತಮುತ್ತ ಕಾದು ಕಟ್ಟಿ ।
ಎತ್ತ ಹೋಗಲೀಸರೋ ನಿನ್ನ । ಮತ್ತೆ ತೋರಲೀಸರೋ
ಅತ್ತ ಬಾರಲೀಸರು ಸರಿ । ಹೊತ್ತಿಗೆ ಬಂದೊದಗಿದ ನೃಪನ
ಭೃತ್ಯರು ಎಳೆದೊಯ್ಯುವಾಗ । ಹೆತ್ತಯ್ಯ ನೀ ಬಿಡಿಸದಿರಲು ॥೭॥

ಮನೆಯೊಳು ನಾಳಿನ ಗ್ರಾಸಕೆ । ಅಸುವಿಲ್ಲ ಅನುಮಾನವಾಗಿದೆ
ಋಣದಿಂದ ಕಡೆ ಹಾಯ್ವ ಮಾರ್ಗವನು ಲೇಶವಾದರು ಕಾಣೆ
ಗುಣಿಸಲು ಈ ಕಾಳ ಪುರುಷನ ಅನುಬಂಧದಿಂದ ನಾನಿನ್ನು
ದಣಿದೆನು ಇನ್ನೇನು ನಿನ್ನ । ಅಣುಗರೊಳೋಲಾಡಿಸೋ ॥೮॥

ನಿನ್ನ ಹೊಂದಿ ಇಷ್ಟು ಭವಣೆ । ಯನ್ನು ಬಡಲು ಈ ಜನರು
ನಿನ್ನ ದೂರಿ ಜರಿವರೊ ನಾ । ನಿನ್ನು ತಾಳಲಾರೆನೋ
ಘನ್ನ ಕರುಣ ಸೌಭಾಗ್ಯ ಸಂ । ಪನ್ನ **ಗೋಪಾಲವಿಠಲ**
ಬಿನ್ನಪವನ್ನು ಚಿತ್ತೈಸಿ । ಮನ್ನಿಸಯ್ಯ ಮಹರಾಯ ॥೯॥

ಎಂಬಂತಿರುವದು. ಈ ಪದವನ್ನು ಕೇಳಿ ತಲೆದೂಗಿದ ಸಮಯ ನೋಡಿ ಆಚಾರ್ಯರ ಪತ್ನಿಯು "ಭಾಗಣ್ಣದಾಸರು ಮಹಾನುಭಾವರು, ಅಪರೋಕ್ಷ ಜ್ಞಾನಿಗಳು" ಎಂದು ಸ್ತೋತ್ರ ಮಾಡುತ್ತಿದ್ದಳು.

ಆಚಾರ್ಯರಿಗೆ ಪದ ಚನ್ನಾಗಿದೆಯೆಂಬುದಕ್ಕಿಂತ ದಾಸರಿಗೆ ಹೆಚ್ಚಿನ ಮಾನ ಕೊಡಲು ಇಷ್ಟವಿರಲಿಲ್ಲ. ಅಪರೋಕ್ಷ ಜ್ಞಾನಿಗಳೆಂದು ಹೆಂಡತಿ ಯಾಡಿದ ಕೂಡಲೇ ಕಿಡಿಕಿಡಿಯಾಗುತ್ತಿದ್ದರು. ಹೆಂಗಸು ನಿನಗೇನು ಗೊತ್ತು? ಅಪರೋಕ್ಷಜ್ಞಾನ ನಮ್ಮಂಥ ವಿದ್ವಾಂಸರಿಗೇ ಆಗಿಲ್ಲ! ಭಾಗಣ್ಣಗೆ ಲ್ಲಿಂದ ಬಂದೀತು? ಸುಮ್ಮನಿರೆಂದು ಆಕೆಯ ವಾಗ್ಬಂಧ ಮಾಡುತ್ತಿದ್ದರು. ಆಕೆಯು ನೀವು ಹಾಗೇ ಅನ್ನಿ, ನಾನು ಹೀಗೇ ಅನ್ನುತ್ತೇನೆನ್ನುತ್ತಿದ್ದಳು. ಒಮ್ಮೆ ಭಾಗಣ್ಣನ ಬಳಿಗೆ ಹೋಗಿ ಮಗನ ಭವಿಷ್ಯವೇನೋ ಕೇಳಿಬನ್ನಿರೆ ನ್ನುತ್ತಿದ್ದಳು. ಮೇಲೆ ಮೇಲೆ ಆಡುವ ಹೆಂಡತಿಯ ಮಾತನ್ನು ಮೀರಲು ಆಚಾರ್ಯರಿಗೆ ಸಾಧ್ಯವಾಗಲಿಲ್ಲ.

ಒಂದು ಪ್ರಾತಃಕಾಲ ತುಳಸಿಯನ್ನು ತರುವ ನೆವನಮಾಡಿಕೊಂಡು

ವೆಂಕಟನೃಸಿಂಹಾಚಾರ್ಯರು ಉತ್ತನೂರಿಗೆ ಬಂದರು. ಐಜಿಗೆ ಉತ್ತನೂರು ಒಂದು ಹರಿದಾರಿ ದೂರವಿದ್ದುದರಿಂದ ಅವರಿಗೆ ಮಾರ್ಗಾಯಾಸವಾಗಲಿಲ್ಲ. ವೆಂಕಟೇಶ ದೇವರ ಗುಡಿಗೆ ಬಂದ ಸಮಯದಲ್ಲಿ ಗೋಪಾಲದಾಸರೊಬ್ಬರೇ ಮಂದಿರದಲ್ಲಿ ಕುಳಿತಿದ್ದರು. ಆಚಾರ್ಯರು ದೇವರಿಗೆ ನಮಸ್ಕಾರಮಾಡಿ, ಭಾಗಣ್ಣನನ್ನು ತಾವಾಗಿ ಮಾತಾಡಿಸುವ ಬಗೆ ಹೇಗೆಂದು ಯೋಚಿಸುತ್ತ ಅತ್ತಿತ್ತ ನೋಡಿದರು.

ಗೋಪಾಲದಾಸರು—ನಮಸ್ಕಾರ ಆಚಾರ್ಯರಿಗೆ! ಅಕ್ಕನವರು ಕಳುಹಿಸಿದರೇನೋ; ಬನ್ನಿ ಬನ್ನಿ!

ಆಚಾರ್ಯರು—ಏನೂ ಇಲ್ಲ. ತುಲಸಿಗೆ ಬಂದಿದ್ದೆ. ಹಾಗೇ ದೇವರ ದರ್ಶನ ಮಾಡೋಣವೆಂದು ಗುಡಿಗೆ ಬಂದೆ.

ಗೋಪಾಲದಾಸರು—ಇರಲಿ, ಚಿಂತೆಯಿಲ್ಲ. ಅಕ್ಕನವರು ಕಳುಹಿಸದಿದ್ದರೆ ತಾವೆಲ್ಲಿ ಬರುತ್ತಿದ್ದಿರಿ? ಮಗನ ಚಾಪಲ್ಯವೇನೋ ?

ಆಚಾರ್ಯರು—ಅಂಥಾದ್ದೇನಿಲ್ಲ. ಅದೆಲ್ಲಾ ಹೆಂಗಸರ ಚಾಪಲ್ಯ.

ಗೋಪಾಲದಾಸರು—ಹೆಂಗಸರಿಗೆ ಮಗನ ಚಾಪಲ್ಯ, ಆಚಾರ್ಯರಿಗೆ ಹೆಂಗಸರ ಚಾಪಲ್ಯ!

ಆಚಾರ್ಯರು ದಾಸರ ಮರ್ಮಗರ್ಭಿತವಾದ ಮಾತಿಗೆ ಬೆರಗಾದರು. ಹೆಂಡತಿಯ ಮಾತು ಸತ್ಯವಿರಬಹುದೆಂದರಿತರು. ವೆಂಕಟರಾಮನ ಭವಿಷ್ಯವೇನಾದೀತೆಂದು ಪ್ರಶ್ನೆ ಮಾಡಿದರು. ದಾಸರು ನಗುತ್ತಾ, ವೆಂಕಟರಾಮಾಚಾರ್ಯನು ಪಂಡಿತೋತ್ತಮನಾಗುವನು; ವೆಂಕಟರಾಮಾಚಾರ್ಯನು ಹಿರಿಯರಿಂದಲೂ ವಂದ್ಯನಾಗುವನು; ಅಗ್ನಿಸದೃಶನಾದ ವೆಂಕಟರಾಮನ ಯೋಚನೆ ನಿಮಗೇಕೆಂದರು. ಆಚಾರ್ಯರು, ನೀವೇನು ಹೇಳಿದಕೂ ವ್ಯಾಸಂಗವಿಲ್ಲದೆ ಅವನು ಪಂಡಿತನಾಗುವ ಬಗೆ ಹೇಗೆಂದರು. ದಾಸರು—ಆಚಾರ್ಯರೆ, ವೆಂಕಟರಾಮನ ಪೂರ್ವ ಸಂಸ್ಕಾರವು ಬಲವತ್ತರವಾಗಿರುವದು; ಅವನಿಗೆ ಸಕೃತ್ ಶ್ರವಣ ಮಾತ್ರದಿಂದ ಮಹಾ ಪಾಂಡಿತ್ಯವುಂಟಾಗುವದು; ಆ ಕಾಲವು ದೂರದಲ್ಲಿಲ್ಲ; ಅತಿ ಸಮೀಪದಲ್ಲಿರುವದು; ನೀವು ಮಾತ್ರ ನಿಶ್ಚಿಂತರಾಗಿದ್ದರಾಯಿತೆಂದರು.

ದಾಸರ ಭವಿಷ್ಯದಂತೆ ಕಾಲಕ್ರಮದಲ್ಲಿ ವೆಂಕಟರಾಮಾಚಾರ್ಯನು ಮಹಾ ಪಂಡಿತನಾದನು. ಗೋಪಾಲದಾಸರು ತಾವು ಹೇಳಿದಂತೆ ಆಚಾರ್ಯನು ಪಂಡಿತನಾದುದನ್ನು ನೋಡಿ 'ಕಂಡೆನಾ ಕರುಣಿಗಳೊಳಗಗ್ರೇಸರರಾದ ಪಂಡಿತ ರಾಮಾಚ್ಯರ' ಎಂಬದಾಗಿ ಪದವನ್ನು ಮಾಡಿರುತ್ತಾರೆ.

ವೆಂಕಟರಾಮಾಚಾರ್ಯನು ತಾನೆಷ್ಟು ಪಂಡಿತನಾದರೂ, ಗೋಪಾಲದಾಸರ ಜ್ಞಾನ ತನಗಾಗಲಿಲ್ಲವೆಂದು ಮಿಡುಕುತ್ತಿದ್ದನು. ಅದೇ ಕಾರಣದಿಂದ ಅಶನವಸನಗಳಲ್ಲೂ ಪಾಣಿಗೃಹೀತಿಯಲ್ಲೂ ಅತ್ಯಂತ ವಿರಕ್ತನಾದನು. ಈ ಜನ್ಮದಲ್ಲಿ ದಾಸರಿಗಾದಂತೆ ತನಗೂ ಅಪರೋಕ್ಷಜ್ಞಾನವಾದರೆ, ಎಲ್ಲ ಸಾಧನೆಯೂ ಸಫಲವಾಯಿತೆಂದು ಮಂತ್ರೋಪಾಸನರತನಾದನು. ಗೋಪಾಲದಾಸರಾದರೋ ನೋಡುವರ ಕಣ್ಣಿಗೆ ಮಹಾ ಭೋಗಿಗಳಂತೆ ಕಾಣಿಸುತ್ತಿದ್ದರು. ಕುದುರೆಯ ಸವಾರಿ ಮಾಡುವದು: ಬೆಲೆ ಬಾಳುವ ಶಹಲುಗಳನ್ನು ಹೊದಿಯುವುದು, ಮೃಷ್ಟಾನ್ನ ಭೋಜನಮಾಡುವುದು, ಗಂಧ ಕಸ್ತೂರಿಗಳನ್ನು ಲೇಪಿಸಿಕೊಳ್ಳುವದು. ಖರ್ಚು ಕಳೆದುಳಿದ ಹಣವನ್ನು ಕೂಡಿಡುವದು ; ಈ ರೀತಿಯೆಲ್ಲಾ ಮಾಡುತ್ತಿದ್ದರು. ಇದನ್ನು ನೋಡಿ ಆಚಾರ್ಯನ ಶಿಷ್ಯರು ನಮ್ಮ ಆಚಾರ್ಯರ ವೈರಾಗ್ಯ ದಾಸರಲ್ಲಿಲ್ಲವೆಂದು ನಿಂದಿಸುತ್ತಿದ್ದರು. ದಾಸರು ಅವರಿಗೆ ಜ್ಞಾನೋಪದೇಶ ಮಾಡಿದಂತೆ—

## ವೈರಾಗ್ಯ ಸುಳಾದಿ

### ಧ್ರುವತಾಳ

ವೈರಾಗ್ಯ ಮಾರ್ಗ ಕೇಳು । ದಾರಿದ್ರ್ಯ ಮಾರ್ಗ ಕೇಳು
ಮಾರರಮಣನ ಪಾದ ಆರಾಧಿಸುವದಕ್ಕೆ
ನಾರಿಯ ಧರಣಿಯ ಧನವ ಬಿಟ್ಟರಾಯಿತೆ
ವೈರಾಗ್ಯವಲ್ಲ ಕಂಡ್ಯ ಧೀರರಿಗೆ ॥
ಶರೀರಕ್ಕಾಪಾರ ಭಸ್ಮ ಧರಿಸಿಕೊಂಡು
ಚೀರವಸ್ತ್ರವನುಟ್ಟು ತಿರುಗಿದರೂ
ಆರಾದರೂ ಆವನ ಅವಧೂತನೆಂತೆಂದು

ಸಾರಿ ಸಾರಿಗೆ ಇನ್ನು ಕರೆವರೇನೈ ।
ವೈರಾಗ್ಯವೆಂಬಂಥ ವಾರುತಿಯೊಂದಲ್ಲದೆ
ಶ್ರೀರಮಣಗೆ ಇದು ಪ್ರಿಯವಲ್ಲ ।
ನಾರಿಸುತರುಗಳು ಶರೀರ ಬಂಧುಗಳೆಂ
ದರಿತಿರಬೇಕು ಅನುದಿನವು ।
ನೀರ ಒಳಗೆ ಇನ್ನು ಕಮಲವು ಇದ್ದಂತೆ
ಕಾರಣನಾಗಿ ಕಾರ್ಯವಿಲ್ಲದಿರಬೇಕು
ಮಾರರಮಣ ನಮ್ಮ ಗೋಪಾಲವಿಠಲನು
ತೋರಿಕೊಟ್ಟ ವೈರಾಗ್ಯ ಸಾರುವೆನು ॥೧॥

ಮಟ್ಟತಾಳ

ಸ್ವಯೋಗ್ಯತೆಯೊಳಗೆ ಆಯತವಾದದ್ದೇ
ನೋಯದೆ ಉಣುವೋದೇ ನ್ಯಾಯದ ವೈರಾಗ್ಯ ।
ಆಯಾಸವ ಪಡೆದ ಪರರ ಶ್ರೇಯಸ ನೋಡಿ
ಶ್ರೀಯರಸನಿತ್ತನೆಂಬುದೆ ವೈರಾಗ್ಯ ।
ಪ್ರೀಯದಿ ನೀನಿತ್ತ ಕರ್ತೃತ್ವವು ಎನಗೆ
ನೀನಿನ್ನಲ್ಲದೆ ಎನ್ನಿಂದಾಗದು ಎನುತಲಿ
ನೋಯದೆ ಇಪ್ಪುದೆ ನ್ಯಾಯದ ವೈರಾಗ್ಯ
ಮಾಯಾರಮಣ ನಮ್ಮ ಗೋಪಾಲವಿಠಲನ
ಪ್ರೀಯದಿ ನೆಚ್ಚಿ ಅನ್ಯಕ್ಕೆಳಗದಿಪ್ಪುದೆ ವೈರಾಗ್ಯ ॥೨॥

ತ್ರಿಪುಟತಾಳ

ಧನವ ಪರಿತ್ಯಾಗ ಮಾಡಿದರಾಯಿತೆ
ಘನವಾದ ವೈರಾಗ್ಯವಲ್ಲ ನೋಡಿ.
ಧನವಬಿಟ್ಟರವೇ ದನಗಳು ಅನುದಿನ
ಘನವೇನು ಇವಕೆ ಅವಕೆ ನೋಡು
ಮನೆಯ ಬಿಟ್ಟೇಕಾಂತದಲಿ ಕುಳಿತರಾಯಿತೆ

ಘನವಾದ ವೈರಾಗ್ಯವಲ್ಲ ನೋಡಿ
ಮನೆಯು ಬಿಟ್ಟರವೇ ಅನುದಿನ ಗೂಗಿಗಳು
ಘನವೆಂದು ಕರೆವರೆ ಜ್ಞಾನಿಗಳು !
ತನುಮನದಭಿಮಾನವನು ಬಿಟ್ಟರಾಯಿತೆ
ಘನವಾದ ವೈರಾಗ್ಯವಲ್ಲ ನೋಡಿ
ತನುಮನದಭಿಮಾನವನು ಬಿಟ್ಟು ಕುನ್ನಿ ತಾ
ಮನೆ ಮನೆ ತಿರುಗದೆ ಅನುಗಾಲವು
ಘನಮಹಿಮ ಚೆಲ್ವ ಗೋಪಾಲ ವಿಠಲನ
ನೆನೆದು ಏಕಾಂತದಲ್ಲಿ ನಿರ್ಮಲ ಮನನಾಗೊ ||೩||

ಅಟ್ಟತಾಳ

ಆಗ ಭೋಗಂಗಳು ಆಗದೆ ಇರಲ್ಯಾಕೆ
ಯಾಗಂಗಳ ಮಾಡಿ ಅರ್ಪಿಸಿ ಹರಿಗೆ ಸಮ
ಭಾಗವೆರಡು ಹರಿಯಿಂದಾದದ್ದು ಎಂದು
ಭೋಗಿಸುತಿಪ್ಪದೆ ವೈರಾಗ್ಯ ವೈರಾಗ್ಯ
ಕಾಗೆಯಂತೆ ಮಯ್ಯ ಕರ್ರಗೆ ಮಾಡಿನ್ನು
ರೋಗ ಬಂದ್ಯವ್ಯಂತೆ ನಾಮವ ಬರಕೊಂಡು
ಭೋಗದ ವಸ್ತು ಪರಿತ್ಯಾಗ ಮಾಡಿನ್ನು
ಆಗುವ ಕಾರ್ಯಗಳಾಗುತ್ತಲಿರೆ ಅಂತೆ
ಹ್ಯಾಗೆ ಜನರು ಕಾಂಬ ಹಾಗೇವೆ ಬಾಹಿರ
ವೈರಾಗ್ಯವನು ಮಾಡೆ ವೈರಾಗ್ಯವಲ್ಲವೊ
ನಾಗಶಯನ ಗೋಪಾಲವಿಠಲ ಸಮ್ಮ
ತಾಗಿ ಉಣಿಸಿದ್ದು ಉಂಡಿಹುದೆ ವೈರಾಗ್ಯ ||೪||

ಆದಿತಾಳ

ಧನವ ಕಟ್ಟಿದ ಚೀಲ ಧಾನ್ಯ ತುಂಬಿದ ಗೋಣಿ
ಪುನಗು ಬೆಕ್ಕಿನಂತೆ ಪುಣ್ಯಾತ್ಮರಘದಂತೆ

ಒಣಗಿದ್ದ ಗೋಡೆಗೆ ಹರಳು ವಿಾಟದಂತೆ
ಉಣುವ ಜಿಹ್ವೆಗೆ ಕೈ ಅನುಕೂಲವಾದಂತೆ
ಮನಸಿಗೆ ಹರುಷವ ಮಾಧವ ಮಾಡಿದ್ದು
ತನುವಿಗೆ ಸುಖವೆಂದು ತಿಳಿದು ಕೆಡದಲೆ
ಗುಣಿಸುತ ಅಲ್ಲಲ್ಲಿ ಗುಣ ತಿಳಿದು ಹರಿಯ
ನೆನೆದು ನೆನೆದು ದಿನಗಳೆವುದೆ ವೈರಾಗ್ಯ
ಮುನಿನುತ ಶಿರಿ ಗೋಪಾಲ ವಿಠಲನು
ಇನಿತೀಪರಿಯಾಗಿದ್ದವನ ಪೊರೆವ || ೫ ||

ಜತೆ

ಅರಿಯದ ವೈರಾಗ್ಯ ಹರಹಿ ಕೊಂಬುದಕಿಂತ
ಅರಿತು ನೊರೆಯು ಹೊಗಿರೋ ಗೋಪಾಲ ವಿಠಲನೆ ೧

ಎಂಬ ಸುಳಾದಿಯನ್ನು ಹಾಡಿದರು. ಶಿಷ್ಯರಿಗಾಗಿ ಹೇಳಿದ ಸುಳಾದಿಯು ಗುರುವಿಗೇ ಅನ್ವಯಿಸಿತೆಂದು ಆಚಾರ್ಯನು ತನ್ನ ಶುಷ್ಕವೈರಾಗ್ಯವನ್ನು ತ್ಯಜಿಸಿದನು.

ಭರತ ಭೂಮಿಯಲ್ಲಿ ಯಾವ ಹರಿದಾಸರ ವೈರಾಗ್ಯ ಲಕ್ಷಣವನ್ನು ನೋಡಿದರೂ ಅದೊಂದು ಪ್ರತ್ಯೇಕಮಾರ್ಗವಾಗಿರುವದು. ಒಮ್ಮೆ ಕಬೀರದಾಸರ ಬಳಿಗೆ ಬಂದ ಶಿಷ್ಯನೊರ್ವನು ರಾಮತಾರಕದ ಉಪದೇಶ ಪಡೆದನು. ಮಂತ್ರ ಪುರಶ್ಚರಣೆ ಮಾಡುವುದಕ್ಕಿಂತ ಆ ಶಿಷ್ಯನಿಗೆ ತನ್ನ ವೇಷಭೂಷಣಗಳು ಹೇಗಿರಬೇಕೆಂಬ ಯೋಚನೆ ಬಲವಾಯಿತು. ಅವನು ತನ್ನಲ್ಲಿ ತಾನು ಯಾವ ಶೀರ್ಮಾನವನ್ನೂ ಮಾಡಿಕೊಳ್ಳಲು ಸಮರ್ಥನಾಗಲಿಲ್ಲ. ಮಹಾಮಂತ್ರವನ್ನೇ ಉಪದೇಶಿಸಿದ ಗುರುಗಳು ವೇಷಭೂಷಣಗಳನ್ನು ತಿಳಿಸಲಾರರೇ, ಎಂದು ಕಬೀರದಾಸರ ಬಳಿಗೆ ಮತ್ತೆ ಬಂದನು. ದಾಸರು ಶಿಷ್ಯನನ್ನು ನೋಡಿ ಎಷ್ಟು ಲಕ್ಷ ಜಪವಾಯಿತೆಂದು ಪ್ರಶ್ನೆ ಮಾಡಿದನು. ಶಿಷ್ಯನು—"ಜಪಕ್ಕೆ ನಾನಿನ್ನೂ ಕುಳಿತಿಲ್ಲ. ಮಧ್ಯದಲ್ಲಿ ನನಗೊಂದು ಸಂಶಯವಾಯಿತು. ಅನುಷ್ಠಾನ ಪರರು ತಲೆಯನ್ನು ಬೆಳೆಸಬೇಕೇ ಬೋಳಿಸಬೇಕೆ ಕೇಳಲು ಬಂದೆ"ನೆಂದನು. ಕಬೀರದಾಸರು—"ಮೂರ್ಖ! ತಲೆಯಕೂದ

ಲಿಗೂ ಮಂತ್ರ ಜಪಕ್ಕೂ ಏನು ಸಂಬಂಧವೊ? ಹೇಳುವೆನು ಕೇಳು! "ಕಬೀರಪಂತಹರಿನಾಮರಟಾವ್, ಬಾಲಬಡಾವ್, ನಹೀತೋಘೋಟ ಘುಟಾವ್" ಎಂದರು. ಈ ಮಾತಿನ ಅಭಿಪ್ರಾಯವೇನೆಂದರೆ:—ಕಬೀರನ ಪಂಥ ಹರಿಭಜನೆ. ಕೂದಲನ್ನು ಬೆಳೆಸಿದರೆ ಬೆಳೆಸು; ಬೋಳಿಸಿದರೆ ಬೋಳಿಸು; ಎಂಬುದಾಗಿರುವದು.

ವೆಂಕಟರಾಮಾಚಾರ್ಯನು ತನ್ನ ಪಾಠ ಪ್ರವಚನಗಳ ಕಡೆಗೆ ಹೆಚ್ಚು ಲಕ್ಷ್ಯಕೊಡದೆ ಗೋಪಾಲದಾಸರ ನಡೆನುಡಿಗಳನ್ನೇ ಗಮನಿಸುತ್ತಾ, ಅವರ ಬಳಿಯಲ್ಲಿ ವಾಸಮಾಡಿದನು. ತಂದೆ ವೆಂಕಟನರಸಿಂಹಾಚಾರ್ಯರು ನಿನ್ನ ತಾಯಿಯಂತೆ ನಿನಗೂ ಭಾಗಣ್ಣನ ಗಾಳಿ ಬಡಿಯಿತೆಂದು ಮಗನನ್ನು ಆಕ್ಷೇಪಿಸಿದರು. ಮಗನು,—ಹಾಗಲ್ಲ, ದಾಸರ ಒಂದೊಂದು ಮಾತೂ ಮನ ಮುಟ್ಟುವ ಅನುಭವದ ಮಾತಾಗಿದೆಯೆಂದು ನುಡಿದನು.

ಒಂದು ದಿನ ಆಚಾರ್ಯನು ದಾಸರೊಡನೆ ಮಾತಾಡುತ್ತಾ ಕುಳಿತಿರಲು, ಕಾಲಗೊತ್ತಾಗದೆ ಸಮರಾತ್ರಿಯಾಗಿ ಬಿಟ್ಟಿತು. ಆಚಾರ್ಯನು ಸಂಧ್ಯಾವಂದನೆಗೆ ಕಾಲಾತೀತವಾಯಿತೆಂದನು. ದಾಸರು—ಆಚಾರ್ಯ! ಇದುವರೆಗೆ ಮಾಡಿದ್ದು ಸಂಧ್ಯಾವಂದನೆಯಾಗಲಿಲ್ಲವೆ? ಸಂದೇಹ ಬಿಡಿರಿ; ಸಂಧ್ಯಾವಂದನ ಮಾಡೋಣ ಬನ್ನಿರೆಂದರು. ಉಭಯರೂ ಸಂಧ್ಯಾವಂದನೆಗೆ ಕುಳಿತರು. ದಾಸರು ಆಚಾರ್ಯನ ಅರ್ಘ್ಯಸಮಯದಲ್ಲಿ ಪ್ರಾಯಶ್ಚಿತ್ತಾರ್ಘ್ಯ ಕೊಡಬೇಕಾದುದಿಲ್ಲವೆಂದರು. ಅಷ್ಟು ಮಾತ್ರದಿಂದ ಆಚಾರ್ಯನ ಸಂದೇಹ ನಿವೃತ್ತಿಯಾಗಲಿಲ್ಲ. ದಾಸರು ಬೀದಿಯ ಬಾಗಿಲು ತೆರೆದು ಪಶ್ಚಿಮಾಭಿಮುಖರಾಗಿ ನಿಂತು, ಆಚಾರ್ಯ! ಅದೋ ಸೂರ್ಯನನ್ನು ನೋಡೆಂದರು. ಆಚಾರ್ಯನು ಇದಾವ ತಪಶ್ಶಕ್ತಿಯೆಂದು ಬೆರಗಾಗಿ ಪ್ರಶ್ನೆ ಮಾಡಿದನು. ದಾಸರು ಇಷ್ಟೇ ಮಂತ್ರ ಶಕ್ತಿಯಿಲ್ಲದಿದ್ದರೆ ಸಂಧ್ಯಾವಂದನೆಯನ್ನೇಕೆ ಮಾಡಬೇಕೆಂದರು.

ಆಚಾರ್ಯನು ಸಮರಾತ್ರಿಯಲ್ಲಿ ತನಗೆ ದಾಸರು ಸೂರ್ಯದರ್ಶನ ಮಾಡಿಸಿದ ಸಂಗತಿಯನ್ನು ತನ್ನ ತಂದೆಗೆ ತಿಳಿಸಿದನು. ವೆಂಕಟನರಸಿಂಹಾಚಾರ್ಯರು ಅದೇನು ಮಾಯಾಜಾಲವೋ ಎಂದು ಸಂಶಯಪಟ್ಟರು. ಆಚಾರ್ಯನು ಒಂದು ದಿನವಾದರೂ ತಾವು ದಾಸರ ಕೀರ್ತನಶ್ರವಣ ಮಾಡಿದರೆ ಅನೇಕ

ಸಂಶಯಗಳು ಪರಿಹಾರವಾದಾವೆಂದನು. ವೆಂಕಟನರಸಿಂಹಾಚಾರ್ಯರು—"ನಾವುಕೀರ್ತನ ಕೇಳಬೇಕೆ? ನಮ್ಮನ್ನೂ ನೀನು ಮೆಲ್ಲನೆ ದಾಸರ ಬುಟ್ಟಿಗೆ ಕೆಡಹುವಂತಿದೆ. ನೀನಿಷ್ಟು ಹೇಳಿದ ಮೇಲೆ ಆಗಲಿ ದಾಸರ ಕೀರ್ತನ ನಡೆಯುವಂತೆ ನಡೆಯಲಿ. ನಾವು ಕೇಳುವೆವೆಂಬ ಸುದ್ದಿಯನ್ನು ಭಾಗಣ್ಣಗೆ ಹೇಳಬೇಡ. ದೂರದಲ್ಲೆ ನಿಂತು ನಾಲ್ಕು ಮಾತುಗಳನ್ನು ಕೇಳುವೆ'ವೆಂದರು.

ದಾಸರು ಕೀರ್ತನಕ್ಕೆ ಕೂಡುವ ಹೊತ್ತಿಗೆ ಸರಿಯಾಗಿ ದಾ ಸ ಪ್ಪ ನು (ಗೋಪಾಲದಾಸರ ಮೂರನೇ ತಮ್ಮ)ಮಂಟಪವನ್ನು ಶೃಂಗರಿಸಿ ಕೆಳಗಿನ ಆವರಣದಲ್ಲಿ ಒಂದು ಬೆಳ್ಳಿಯ ಮಣೆಯನ್ನಿಡುತ್ತಿದ್ದನು. ಆ ಮಣೆಯು ಯಾವಾಗಲೂ ಬರಿದಾಗಿರುತ್ತಿತ್ತು. ದಾಸರು ಆ ಮಣೆಯನ್ನು ನೋಡುತ್ತಲೇ ಕೀರ್ತನಾರಂಭ ಮಾಡುತ್ತಿದ್ದರು. ಯಾರ ಕಡೆಗೂ ನೋಡದೆ ಆ ಮಣೆಯನ್ನು ನೋಡುತ್ತಾ ಕೀರ್ತನ ಮಾಡುವದು ಅನೇಕರಿಗೆ ಸಂಶಯವಾಗುತ್ತಿತ್ತು. ಸಂಪ್ರದಾಯಸ್ಥಪುರಾಣೀಕರು ಭಾರತ ಪುರಾಣ ಹೇಳುವಾಗ ಅ ಶ್ವ ತ್ಥಾ ಮಾ ಚಾ ರ್ಯ ರಿ ಗೂ, ಭಾಗವತ ಪುರಾಣ ಹೇ ಳು ವಾ ಗ ಶುಕಾಚಾರ್ಯರಿಗೂ, ಪೀಠಗಳನ್ನು ಮೀಸಲಿಡುವಂತೆ ದಾಸರು ತಮ್ಮ ಕೀರ್ತನ ಕಾಲದಲ್ಲಿ ಮಾರುತಿರಾಯನಿಗೋಸ್ಕರ ಆ ಬೆಳ್ಳಿಯ ಮಣೆಯನ್ನು ಮೀಸಲಿಡುತ್ತಿದ್ದರು. ಆ ಚಾ ರ್ಯ ನು ಎಂದೂ ಇ ಲ್ಲ ದೆ ಇವತ್ತು ತನ್ನ ತಂದೆಯು ಕೀರ್ತನ ಕೇಳಲಿಕ್ಕೆ ಬಂದಿರುವರೆಂದು ಆಗಾಗ ಹೊರಗೆ ಬರುತ್ತಾ, ಒಳಗೆ ಹೋಗುತ್ತಾ, ಕೀರ್ತನ ಸ್ವಾರಸ್ಯ ಹೇಗಿದೆಯೆಂದು ಪ್ರಶ್ನೆ ಮಾಡಿದನು. ವೆಂಕಟನರಸಿಂಹಾಚಾರ್ಯರು—'ಭಾಗಣ್ಣ ಥಲೊ ಹೇಳ್ತಾನೆ, ನೆಟ್ಟಗಿದೆ ನೆಟ್ಟಗಿದೆಯೆನುತ್ತಾ—ಏನೋ' ದಾಸ ಒಳ್ಳೆ ಮಂಗ್ಯಾನ್ನ ಸಾಕಿದ್ದಾನೇನು?' ಎಂದು ಕೇಳಿದರು. ವೆಂಕಟರಾಮಾಚಾರ್ಯನು (ತಂದೆಗಿನ್ನೂ ದಾಸರಲ್ಲಿ ವಿಶ್ವಾಸ ಬರಲಿಲ್ಲವೆಂದು ಖಿನ್ನನಾಗಿ) 'ಮಂಗ್ಯ ಎಲ್ಲಿ ಬರಬೇಕು? ಆದೇಕೆ ಹೀಗೆ ಕೇಳುವಿರೆಂ'ದನು. ವೆಂಕಟನರಸಿಂಹಾಚಾರ್ಯರು ಅದೋ ನೋಡು, ಬೆಳ್ಳಿಯ ಮಣೆಯಮೇಲೆ ಕೂತಿರುವದೇನೆಂದರು. ಆಚಾರ್ಯನು ನನಗೆ ಕಾಣಿಸುತ್ತಿಲ್ಲವೆಂದನು. ಉತ್ತರ ಕ್ಷಣಕ್ಕೆ ನರಸಿಂಹಾಚಾರ್ಯರಿಗೂ ಕಾಣಿಸಲಿಲ್ಲ. ವಿ ಚಾ ರ ಮಾಡುವಲ್ಲಿ ಬೆಳ್ಳಿಯ ಮಣೆಯು ಮಾರುತಿಯದೆಂದು ಗೊತ್ತಾಯಿತು. ತಮಗೆ ಒಮ್ಮೆ ದರ್ಶನವಾಗಿ ಮತ್ತೆ ದರ್ಶನವಾಗದಿರುವ

ದನ್ನೂ, ತಮಗಾದಂತೆ ಮಗನಿಗೆ ದರ್ಶನವಾಗದಿರುವನ್ನೂ, ನೋಡಿ ಆಚಾರ್ಯರು ಭೀತರಾದರು. ದಾಸರನ್ನು ಸಾಧಾರಣರೆಂದು ತಿಳಿದು ಮಾತಾಡುತ್ತಿದ್ದುದು ಅಪಚಾರವಾಯಿತೆಂದು ಪಶ್ಚಾತ್ತಾಪಪಟ್ಟು ಮಗನಿಗಿಂತ ಹೆಚ್ಚಾಗಿ ತಾವೂ ದಾಸರ ಅನುಯಾಯಿಗಳಾದರು.

ಇದೆಲ್ಲವನ್ನೂ ನೋಡಿ ನೋಡಿ ವೆಂಕಟರಾಮಾಚಾರ್ಯನಿಗೆ ಅಪರೋಕ್ಷದ ಹಂಬಲು ಬಲವಾಯಿತು. ಏನು ಮಾಡಿದರೆ ತನ್ನಲ್ಲಿ ಭಗವತ್ಕೃಪೆಯಾದೀತೆಂದು ದಾಸರನ್ನು ಬಾರಿಬಾರಿಗೂ ಕೇಳುತ್ತ ಬಂದನು. ದಾಸರು—

ಮನುಷ್ಯಾಣಾಂ ಸಹಸ್ರೇಷು ಕಶ್ಚಿದ್ಯತತಿಸಿದ್ಧಯೇ

ಯತತಾಮಪಿ ಸಿದ್ಧಾನಾಂ ಕಶ್ಚಿನ್ಮಾಂ ವೇತ್ತಿತತ್ವತಃ ॥೩॥ VII

ಎಂಬಂತೆ ನಿಮ್ಮ ಯತ್ನವೇನೋ ಸರಿ! ನೀವು ಸಿದ್ಧರಾದರೂ ಕಾಲಬರಬೇಕು. ಈ ಜನ್ಮದಲ್ಲೇ ನಿಮಗೆ ಭಗವದ್ದರ್ಶನವಾದೀತೆಂದು ಹೇಳಲು ಸಾಧ್ಯವಿಲ್ಲ. ನಿಮಗಿನ್ನೂ ವಾಸನಾಪರಂಪರೆಗಳು ಬಿಟ್ಟಿಲ್ಲ. ಬಾಹ್ಯವೈರಾಗ್ಯಗಳು ನಿಜವಾದ ವೈರಾಗ್ಯಗಳಲ್ಲವೆಂದರು.

ಆಚಾರ್ಯನಿಗೆ ದಾಸರ ಮಾತಿನಿಂದ ಎದೆಗುಂದಿತು. ಈ ಜನ್ಮದಲ್ಲೇ ಭಗವದ್ದರ್ಶನವಾಗದಿದ್ದರೆ ಮುಂದೆ ಇಂಥಾ ಜನ್ಮ ಬಂದೀತೆಂಬ ನಂಬುಗೆಯೇನೆಂಬ ಭಯವಾಯಿತು. ಉತ್ತಮ ಸನ್ನಿವೇಶ ಸಂಸ್ಕಾರ ಬಲಗಳುಳ್ಳ ಜನ್ಮ ಬಂದರೂ, ಗೋಪಾಲದಾಸರಂಥಾ ಅಪರೋಕ್ಷಜ್ಞಾನಿಗಳ ಸಹವಾಸ ದೊರೆಯುವದೆಂತೆಂಬ ಯೋಚನೆಯಾಯಿತು. ಈ ಕಾರಣಗಳಿಂದ ಸ್ವಲ್ಪ ಮಾತ್ರ ಪ್ರತಿಬಂಧಕವಾಗಿದ್ದ ಅಹಂಮಮತೆಯು ನಿರ್ಮೂಲವಾಯಿತು. ತಾವೇ ನನ್ನ ಮಾರ್ಗದರ್ಶಿಗಳೆಂದು ದಾಸರ ಮೊರೆಬಿದ್ದನು. ದಾಸರು ಆಚಾರ್ಯನಿಗೆ ಅಭಯವಿತ್ತು ಸನ್ಯಾಸ ಸ್ವೀಕಾರ ಮಾಡಿಬಂದರೆ ನಿಮ್ಮ ಇಷ್ಟಾರ್ಥವು ಸಿದ್ಧಿಸುವದೆಂದರು. ಆಚಾರ್ಯನು ದಾಸರ ವಾಕ್ಯವನ್ನು ಭಗವದ್ವಾಕ್ಯದಂತೆ ಶಿರಸಾವಹಿಸಿದನು. ಸನ್ಯಾಸ ಸ್ವೀಕಾರ ಮಾಡುವುದರಿಂದ ಜನ್ಮಾಂತರವಾದಂತಾಗುವದೆಂಬ ಮಾತಿನ ಔಚಿತ್ಯವನ್ನು ಗ್ರಹಿಸಿ, ದಾಸರನ್ನು ಬಾರಿಬಾರಿಗೂ ವಂದಿಸಿದನು. ವಸುಧೇಂದ್ರ (ಭುವನೇಂದ್ರ) ಸ್ವಾಮಿಗಳಿಂದ ಆಶ್ರಮಸ್ವೀಕಾರ ಮಾಡುವೆನೆಂದು ಮಂತ್ರಾಲಯಕ್ಕೆ ಪ್ರಯಾಣ ಮಾಡಿದನು.

ಭುವನೇಂದ್ರರು— ಮಹಾಪಂಡಿತನೂ ತೇಜೋವಂತನೂ ಪೂರ್ವಾಶ್ರಯಸ್ಥನೂ ಆದ ಆಚಾರ್ಯನು ವೈರಾಗ್ಯ ತಾಳಿ ಸನ್ಯಾಸಗ್ರಹಣಕ್ಕಾಗಿ ಬಂದಿರುವದನ್ನು ನೋಡಿ ಸಂತುಷ್ಟರಾದರು. ತಮ್ಮ ವೃದ್ಧಾಪ್ಯದಲ್ಲಿ ಶ್ರೀ ರಾಘವೇಂದ್ರರ ಮಹಾಪೀಠಕ್ಕೆ ಯೋಗ್ಯಾಧಿಕಾರಿಯು ಪ್ರಯತ್ನವಿಲ್ಲದೆ ದೊರೆತನೆಂದು ತಿಳಿದರು. ಶಾಸ್ತ್ರನಿಯಮವನ್ನನುಸರಿಸಿ ಆಚಾರ್ಯನಿಗೆ ತುರೀಯಾಶ್ರಮವಿತ್ತು ಶ್ರೀ ವ್ಯಾಸತತ್ವಜ್ಞರೆಂದು ನಾಮಕರಣ ಮಾಡಿದರು. ಆಶ್ರಮ ಸ್ವೀಕಾರಾನಂತರ ವ್ಯಾಸತತ್ವಜ್ಞರು ಸಂಸ್ಥಾನಾಧಿಪತ್ಯವನ್ನು ಬಯಸಿ ಬಂದವರಲ್ಲವೆಂಬುದು ಭುವನೇಂದ್ರರಿಗೆ ಗೊತ್ತಾಯಿತು. ವ್ಯಾಸತತ್ವಜ್ಞರು ಕೆಲವು ದಿವಸಗಳನಂತರ ದಾಸರ ಬಳಿಗೇ ಬಂದುಬಿಟ್ಟರು. ಗೋಪಾಲದಾಸರಿಂದ ವ್ಯಾಸತತ್ವಜ್ಞರಿಗೆ ಅಪರೋಕ್ಷಜ್ಞಾನ ಪ್ರಾಪ್ತಿಯಾಯಿತು. ವ್ಯಾಸತತ್ವಜ್ಞರು ವಾಸುದೇವವಿಠಲ ಮುದ್ರಿಕೆಯಿಂದ ಕನ್ನಡದೇವರನಾಮಗಳನ್ನು ಹಾಡುತ್ತಾ, ಗೋಪಾಲದಾಸರೊಡನೆ ಕಾಲಿಗೆ ಗೆಜ್ಜೆಯನ್ನು ಕಟ್ಟಿಕೊಂಡು ಕೈಯಲ್ಲಿ ತಂಬೂರಿಯನ್ನು ಬಾರಿಸುತ್ತಾ, ಭಗವದ್ಭಜನೆಗಾರಂಭಿಸಿದರು. ಏಕಾಂತಸ್ಥಳವೂ ಹಾಗೂ ತುಂಗಭದ್ರಾತೀರವೂ ಆಗಿದ್ದುರಿಂದ ವೇಣೀಸೋಮಪುರದಲ್ಲಿ ಉಭಯರೂ ವಾಸಮಾಡಿದರು.

ಸನ್ಯಾಸ ಧರ್ಮವನ್ನವಲಂಬಿಸಿದ ವ್ಯಾಸತತ್ವಜ್ಞರು ದಾಸರೊಡನೆ ಸೇರಿಕೊಂಡು ಕನ್ನಡಪದಗಳನ್ನು ಹಾಡುತ್ತಾ ನರ್ತನ ಮಾಡುವದು, ಮಂತ್ರಾಲಯದಲ್ಲಿದ್ದ ಭುವನೇಂದ್ರರಿಗೆ ತರಂಗತರಂತವಾಗಿ ವರ್ತಮಾನವಾಯಿತು. ಅವರು ಕುಪಿತರಾಗಿ, ''ನಮ್ಮಿಂದ ಆಶ್ರಮ ಪಡೆದೂ ಸಂಸ್ಥಾನಾಧಿಪತ್ಯವನ್ನು ನಿರಾಕರಿಸಿ, ದಾಸರಂತೆ ನೀವು ನರ್ತನಾದಿಗಳನ್ನು ಮಾಡುತ್ತಿರುವಿರೆಂದು ಕೇಳುತ್ತೇವೆ. ನೀವು ಕೂಡಲೇ ಎಲ್ಲವನ್ನೂ ಬಿಟ್ಟು ಮಂತ್ರಾಲಯಕ್ಕೆ ಬರದಿದ್ದರೆ ನಿಮಗೆ ಬಹಿಷ್ಕಾರ ಹಾಕುತ್ತೇವೆ'' ಎಂಬದಾಗಿ ಆಜ್ಞಾಪತ್ರವನ್ನು ಕಳುಹಿಸಿದರು. ವ್ಯಾಸತತ್ವಜ್ಞರು, ಸಂಸ್ಥಾನ ಪಾಲನೆಗೆ ನಾನು ಸನ್ಯಾಸಿಯಾದವನಲ್ಲವೆಂಬುದನ್ನು ವಿಜ್ಞಾಪಿಸಿ ''ನಂಬಿದೆ ಖರೆಯ—ಶ್ರೀ ಹರಿಯ'' ಎಂಬದಾಗಿ ಕನ್ನಡ ದೇವರನಾಮವನ್ನು ಬರೆದು ಸ್ವಾಮಿಗಳ ಬಳಿಗೆ ಕಳುಹಿಸಿ ತನ್ನನ್ನು ಕ್ಷಮಿಸಬೇಕೆಂದು ಪತ್ರಬರೆದರು. ಅನಂತರವೇ ವರದೇಂದ್ರರೆಂಬುವರಿಗೆ ಸಂಸ್ಥಾನಾಧಿಪತ್ಯವಾಯಿತು.

ವ್ಯಾಸತತ್ವಜ್ಞರನ್ನು ಐಜೀಸ್ವಾಮಿಗಳೆಂದು ಕರೆಯುವದು ಜನರ ರೂಢಿಯಾಯಿತು. ಸ್ವಾಮಿಗಳೂ ದಾಸರೂ ಏಕತ್ರ ವಾಸಮಾಡಿದ ಕಾಲದಲ್ಲಿ ನಡೆದ ಅನೇಕ ಮಹಿಮಾ ವಿಶೇಷಗಳನ್ನು ಆ ಪ್ರಾಂತ್ಯದ ಜನರು ಇಂದಿಗೂ ಹೀಗೆಹೀಗೆ ನಡೆದವೆಂದು ಹೇಳುವರು. ಆ ಪೈಕಿ ಮಾದರಿಗಾಗಿ ಒಂದೇ ಸಂಗತಿಯನ್ನು ಸಂಕ್ಷೇಪವಾಗಿ ಉದಹರಿಸುವೆನು:—

ಒಂದು ಮಧ್ಯಾಹ್ನ, ಗೋಪಾಲದಾಸರೂ ಅವರ ಇಬ್ಬರು ತಮ್ಮಂದಿರೂ ಐಜೀಸ್ವಾಮಿಗಳೂ ಭಗವಂತನ ಶ್ರೀ ಕೃಷ್ಣಾವತಾರ ವೈಭವವನ್ನೂ ಗೋಪಿಯರ ಭಕ್ತಿಯನ್ನೂ ವರ್ಣಿಸುತ್ತಾ ಪರಸ್ಪರ ಮಾತಾಡುತ್ತಿದ್ದರು. ದಾಸಪ್ಪ ದಾಸರು ಆಗಲೇ ತಮಗುಂಟಾದ ಪಾರವಶ್ಯದಿಂದ ಪರಮಾತ್ಮನ ವಿರಹವನ್ನು ಸೈರಿಸಲಾರೆವೆಂದು ಗೋಪಿಯರು ಪ್ರಾರ್ಥನೆ ಮಾಡಿದ ಘಟ್ಟವನ್ನು ಆಶುಕವಿತೆಯಿಂದ

ರಾಗ ತೋಡಿ — ಆದಿತಾಳ

ಅಗಲಿ ಸೈರಿಸಲಾರೆವೋ | ವೇಣುಗೋಪಾಲ ||ಪ||

ಅಗಲಿ ಸೈರಿಸಲಾರೆವೊ | ನಗಧರಪನ್ನಗ ನಗಾಧೀಶ |
ಮೃಗಮದತಿಗರಿನ | ನಗೆಮೊಗಚನ್ನಿಗ
ನಿಗಮಗಳಿಗೆ ಸಿಗ | ದಗಣಿತ ಸುಗುಣ ನಿನ್ನಗಲಿ ||ಅ||

ಗುಲುಗಂಜಿಬರ್ಹಿಯಗರಿಯು |
ಎಳೆದಳಿರು ಕೇತಕಿಯಗರಿಯು |
ಥಳಥಳಿಪ ಫಾಲದರಳೆಲೆಯು |
ಹೊಳೆವ ಕುಂಡಲಗಳ ಪ್ರಭೆಯು |
ಉಲಿವ ಹಾರಗಳದಿ ಒಪ್ಪುತ್ತಾ |
ಸುಧಾಮುರಾವು |
ಗೆಳೆಯರಿಂದಕೂಡಿ ಪಾಡುತ್ತಾ |
ರಾಜಬೀದಿಯೊಳು |
ಸುಳಿದು ಕುಲುಕಿನಲಿನಲಿದಾಡುತ್ತಾ |

ನಿತ್ಯ ಗೋವತ್ಸ |
ಗಳನು ಸಂರಕ್ಷಣೆಮಾಡುತ್ತಾ |
ಕೊಳಲನೂದುತ್ತ ||
ಸುಳಿವಳಿಗಿಳಿಶಿಖಿಗಳ ಕುಲಾವಳಿಗಳ
ಘಲಿಘಲಿಘಲಿರೆಂದು ಕುಣಿಸುತ್ತಾ |
ಎಳೆವಾರಿಗಣ್ಣಲಿ ನೋಡುತ್ತಾ |
ಲಲನೇರ ತನುಮನ ಶೆಳೆಯುತ್ತಾ ||
ಕಿಲಿಕಿಲಿ ನಗುತೆಮ್ಮೊಳು ರಮಿಸುತ ಕೆಂ |
ದೊಳದುಟಿ ಸವಿಯುವ ಚಲುವಚನ್ನಿಗ ||೧||

ದೇವ ಕೊಳಲನೂದುವದು
ನಾವುಕೇಳಿ ಮುದದಿನಲಿದು
ಗೋವ್ಯಾಘ್ರ ಏಕತ್ರಬೆರೆದು
ಕೇವಲ ವೈರತ್ವಮರೆದು
ಮೇವುಜರಿದು ನಿನ್ನನೆ ನೋಡುತ್ತಾ |
ಖಗಮೃಗ ಏಕೋ
ಭಾವದಿಂದ ಗಾನವಕೇಳುತ್ತಾ |
ಚಿತ್ರದಿಬರೆದ
ಭಾವದಂತೆ ಜಗಕೆ ತೋರುತ್ತಾ |
ಮನೆಮನೆಯೊಳು
ನಾವೀವಾರ್ತೆ ಕಿವಿಯಲಿ ಕೇಳುತ್ತಾ
ನಿಲ್ಲದೆತ್ವರಿತ ||
ತಾವನಬಾವನ ಮಾವಿನಮರದೊಳು
ಗೋವಳ ನಿನ್ನನು ಕಾಣುತ್ತಾ |
ಭಾವಜ ಕಲೆಗಳು ಉಕ್ಕುತ್ತಾ |
ಭಾವದಿ ಬಿಗಿಬಿಗಿದಪ್ಪುತ್ತಾ ||
ಈವಿಧವಮುದ ನಮಗೀವ ಸುಖಾಂಬುಧಿ
ಪೂವಿನ ಶರಪಿತ ಮಾವನಚೆರೆದರೆ ||೨||

ಅನಘ ನಿನ್ನನುಗಾರರ ಕೂಡಿ
ವನವನ ಸುಳಿಯಲು ನೋಡಿ
ಕೊನೆಗಣ್ಣಿಂದ ಸನ್ನೆಮಾಡಿ
ಮನೆಯ ಕೆಲಸಗಳೀಡ್ಯಾಡಿ
ವನಿತೇರೆಲ್ಲ ಮಾತನಾಡುತ್ತಾ ||
ಚಲುವ ಮೂರ್ತಿಯ
ಮನದೊಳಗೆ ಧ್ಯಾನವಮಾಡುತ್ತಾ
ಊದುವ ಕೊಳಲ
ಧ್ವನಿಯು ಕರ್ಣದಿಂದ ಕೇಳುತ್ತಾ
ಬಂಧುಗಳಮಾತ
ಗಣನೆಮಾಡದಲೆ ಮೀರುತ್ತಾ
ನಿನ್ನನರಸುತ್ತ ||
ತನುಮನಧನವನು ಗಣನೆಗೆತಾರದೆ
ವನವನತಿರುಗುತ ಬಂದೆವೋ
ತನುಮನ ಒಪ್ಪಿಸಿನಿಂದೆವೋ
ಕ್ಷಣವನು ಅಗಲಿದರೆಂದೆವೋ ||
ಚಿನುಮಯ ಗುರುಗೋಪಾಲವಿಠಲ ಮಾ
ಮನೋಹರ ಮುನಿಜನಮನಮಂದಿರ ನಿನ್ನಗಲಿ ||೩||

ಎಂಬದಾಗಿ ಹಾಡಿ ಭಾವಸಮಾಧಿಗೊಳಗಾದರು. ಗೋಪಾಲದಾಸರು ಸ್ವಾಮಿಗಳನ್ನು ಕುರಿತು ಅಗೋ ವೇಣುಗಾನವಾಗುವದು ಕೇಳಿರೆಂದರು. ಉಭಯರೂ ತಲ್ಲೀನರಾಗಿ ಶ್ರೀ ಕೃಷ್ಣನ ಗಾನಾನಂದದಲ್ಲಿ ಪರವಶರಾದರು.

ದಾಸರೂ ಸ್ವಾಮಿಗಳೂ ಕಲೆತಾಗಲೇ ಐಜೀಸ್ವಾಮಿಗಳ ಶಿಷ್ಯರು ಪಾಠ ಓದುವದಕ್ಕೆ ಬಂದಿದ್ದರು. ಪಾಠಾರಂಭವೂ ಸತ್ಪುರುಷರು ನಾಲ್ವರ ವಾಚಾರಂಭಣವೂ ಏಕಕಾಲದಲ್ಲಿ ನಡೆದುದರಿಂದ ಸ್ವಾಮಿಗಳ ಗಮನವು ದಾಸರ ಕಡೆಗಾಯಿತು. ಶಿಷ್ಯರು ಅವರವರ ಮಾತನ್ನು ಕೇಳುತ್ತಾ ಕುಳಿತಿದ್ದರು. ಗೋಪಾಲದಾಸರು ವೇಣುಗಾನವಾಗುವದು ಕೇಳಿರೆಂದು ಸ್ವಾಮಿಗಳಿಗೆ ಹೇಳಿದ ಕೂಡಲೆ, ಶಿಷ್ಯರುಗಳು ಒಳ್ಳೇ ಹುಚ್ಚರ ಸಹವಾಸ ದೊರೆಯಿತೆಂದು

ತಮ್ಮ ಪುಸ್ತಕಗಳನ್ನು ಕಟ್ಟಿಟ್ಟು ಕುಳಿತರು. ಸ್ವಾಮಿಗಳು ಬಹಿರ್ಮುಖ ರಾಗುತ್ತಲೇ ಶಿಷ್ಯರ ಕಡೆಗೆ ತಿರುಗಿ, ಯಾವ ವಾಕ್ಯವದು ಹೇಳುತ್ತಿದ್ದುದು? ಎಂದು ಕೇಳಿದರು. ಶಿಷ್ಯರು ಪುಸ್ತಕವನ್ನು ಕಟ್ಟಿಟ್ಟೆವೆಂದು ಹೇಳಿ ಪುನಃ ಬಿಚ್ಚಲು ಹೊರಟರು.

ಸ್ವಾಮಿಗಳು—ಪುಸ್ತಕವನ್ನು ಕಟ್ಟಿಡಲು ಕಾರಣವೇನು?

ಶಿಷ್ಯರು—ಬಲುವೇಳೆಯಾಯಿತು. ದಾಸರು ವೇಣುಗಾನವಾಗುವದು ಕೇಳಿರೆಂದು ಬೇರೆ ಶ್ರೀಗಳವರಿಗೆ ಹೇಳಿದರು. ಶ್ರೀಗಳವರೂ ಅತ್ತ ಕಡೆ ಆಸಕ್ತರಾಗಿದ್ದಿರಿ. ವೇಣುಗಾನವಾದಮೇಲೆ, ಶ್ರೀಕೃಷ್ಣನು ಬಂದಮೇಲೆ, ಅವನ ಹಿಂದೆ ಗೋವುಗಳೂ ಬರುವವು. ಆವು ಎಲ್ಲಾದರೂ ಪುಸ್ತಕದಮೇಲೆ ಸಗಣಿಯನ್ನು ಹಾಕುವವೆಂದು ಹೆದರಿ ನಾವು ಕಟ್ಟಿಟ್ಟೆವು.

ಸ್ವಾಮಿಗಳು— (ಕೋ ಪ ದಿಂ ದ) ಭ್ರಷ್ಟರಿರಾ! ನಿಮಗೆ ಪರಿಹಾಸ್ಯವಾಯಿತೆ? ನಿಮ್ಮ ಪುಸ್ತಕದಮೇಲೆ ಸಗಣಿಯೇ ಬಿದ್ದು ಹೋಯಿತು, ಹೋಗಿತೆಂದು ಶಪಿಸಿದರು.

ಆ ಶಿಷ್ಯರ ವಂಶೀಕರು ಈಗಲೂ ಜ್ಞಾನಶೂನ್ಯರಾಗಿ ತೇಜೋಹೀನರಾಗಿರುವರು. ದೊಡ್ಡವರ ಅಪಚಾರವೆಂಬುವದು ಕುಲಕುಲವನ್ನೇ ಬಾಧಿಸುವದು.

ವ್ಯಾಸತತ್ವಜ್ಞರು ಅನೇಕ ಸಂಸ್ಕೃತ ಗ್ರಂಥಗಳಿಗೆ ಟಿಪ್ಪಣಿಗಳನ್ನು ಬರೆದು ವಿದ್ವಜ್ಜನರಿಗೆ ಉಪಕಾರಮಾಡಿದಂತೆ, ಸಾವಿರಾರು ದೇವರನಾಮುಗಳನ್ನು ರಚಿಸಿ ಪಾಮರ ಜನರಿಗೂ ತತ್ವೋಪದೇಶಮಾಡಿ ಉಪಕಾರಮಾಡಿರುವರು. ಗದ್ವಾಲ ಸಂಸ್ಥಾನದ ಮಹಾರಾಜನಾಗಿದ್ದ ರಾಜಾರಾಮಭೂಪಾಲನು ವ್ಯಾಸತತ್ವಜ್ಞರ ಅನೇಕ ಮಹಿಮೆಗಳನ್ನು ನೋಡಿ ಶಿಷ್ಯನಾದನು.

ಗದ್ವಾಲ ಸಂಸ್ಥಾನವು ಯಾವಾಗಲೂ ಹೈದರಾಬಾದಿಗೆ ಆಶ್ರಿತ ಸಂಸ್ಥಾನವಾಗಿದ್ದು ಪ್ರತಿವರ್ಷವೂ ಕಪ್ಪವನ್ನು ಸಲ್ಲಿಸುತ್ತಿತ್ತು. ದೇಶದಲ್ಲಿ ಮಳೆ ಬೆಳೆಗಳಾಗದೆ ಒರದು ವರ್ಷದ ಪೊಗದಿಯು ಕೇಂದ್ರ ಸರ್ಕಾರಕ್ಕೆ ಗದ್ವಾಲ ಖಜಾನೆಯಿಂದ ಸಲ್ಲುವದು ತಡವಾಯಿತು. ರಾಜಾ ರಾಮಭೂಪಾಲನು ನವಾಬನೊಡನೆ ತನಗೆ ತಕ್ಕಷ್ಟು ಅವಕಾಶ ಕೊಡಬೇಕೆಂದು ಪತ್ರವ್ಯವಹಾರ ನಡೆಸಿದ್ದನು. ವ್ಯವಸ್ಥಿತವಾದ ರಾಜ್ಯ ಪದ್ಧತಿಯಿಲ್ಲದ ಆ ಕಾಲ

ದಲ್ಲಿ ಸೇನಾಪತಿಗಳ ಪ್ರಾಬಲ್ಯವು ಬಲವತ್ತರವಾಗಿತ್ತು. ಒಬ್ಬ ಮುಸಲ್ಮಾನ ಸರದಾರನಿಗೂ ಗೋಪಾಲಹರಿಯೆಂಬ ದಳಪತಿಗೂ ಗದ್ವಾಲ ರಾಜನ ಮೇಲೆ ಬಹುಕಾಲದಿಂದ ದ್ವೇಷವಿತ್ತು. ಆ ಅಧಿಕಾರಿಗಳು ನವಾಬನಿಗೆ ತಿಳಿಸದೆ ತುಂಗಾ ಕೃಷ್ಣಾ ನದಿಗಳ ಇಕ್ಕೆಲಗಳಲ್ಲಿ ತಮ್ಮ ದಂಡನ್ನು ನಿಲ್ಲಿಸಿ, ಕೂಡಲೇ ಕಪ್ಪವನ್ನು ಸಲ್ಲಿಸುವೆಯೋ ಯುದ್ಧಕ್ಕೆ ಬರುವೆಯೋ ಎಂದು ಭೂಪಾಲನಿಗೆ ಹೇಳಿಕಳುಹಿಸಿದರು. ಭೂಪಾಲನು ಕಪ್ಪಕೊಡಲು ಹಣವಿಲ್ಲದೆ, ಯುದ್ಧಮಾಡಲು ಬಲವಿಲ್ಲದೆ, ಏನುಮಾಡಿ ರಾಜ್ಯರಕ್ಷಣೆ ಮಾಡಿಕೊಳ್ಳಬೇಕೆಂದು ಆಪ್ತನೊಬ್ಬನ ಮುಖೇನ ವ್ಯಾಸತತ್ವಜ್ಞರ ಬಳಿಗೆ ಕಳುಹಿಸಿದನು. ವ್ಯಾಸ ತತ್ವಜ್ಞರು ಆ ಕಾಲದಲ್ಲಿ ದೇವತಾರ್ಚನೆಗೆ ಕುಳಿತಿದ್ದರು. ಪುರಾಣಿಕನು ಭಾಗವತ ಪುರಾಣ ಹೇಳುತ್ತಿದ್ದನು. ವಾರ್ತಾವಾಹಿಯು ರಾಜಕಾರ್ಯದ ಅವಸರವಿದೆಯೆಂದು ಕ್ಷಮೆಬೇಡಿ, ಸ್ವಾಮಿಗಳಿಗೆ ಭೂಪಾಲನ ಮನವಿಯನ್ನು ವಿಜ್ಞಾಪಿಸಿದನು. ಸ್ವಾಮಿಗಳು ಸ್ವಲ್ಪಹೊತ್ತು ಯೋಚಿಸಿ ತಾಡಾವಾಲೆಯಮೇಲೆ—

ಧರ್ಮೋಭವತು ಸದ್ಧರ್ಮಃ
ಮಾರ್ಗಣಾಸ್ಸಂತು ಮಾರ್ಗಣಾಃ ||
ವಾಹಿನೀ ವಾಹಿನೀ ರಾಜನ್
ಸ್ಯಾದರಾತಿಪರಾಜಯಃ ||೧||

ಎಂಬದಾಗಿ ಅರ್ಥಗರ್ಭಿತವಾದ ಶ್ಲೋಕವನ್ನು ಬರೆದು ಕಳುಹಿಸಿದರು. ಭೂಪಾಲನು ಸ್ವಾಮಿಗಳ ಪತ್ರಾಭಿಪ್ರಾಯ ತಿಳಿಯದೆ, ಪಂಡಿತರನ್ನು ಕರೆಸಿ ಶ್ಲೋಕಾಭಿಪ್ರಾಯವೇನೆಂದು ಕೇಳಿದನು. ಅವರು ಭಾವಾರ್ಥವನ್ನು ಗ್ರಹಿಸಲಾರದೆ ಶಬ್ದಾರ್ಥ ವಿವರಣೆ ಮಾಡಿದರು. ಪಂಡಿತರ ಅರ್ಥದಿಂದ ರಾಜನಿಗೆ ತೃಪ್ತಿಯಾಗಲಿಲ್ಲ. ನಾನು ಕೇಳಿದ ವಿಷಯವೇನು, ಅವರು ದಾಸರೊಡನೆ ಕುಳಿತು ಬರೆದು ಕಳುಹಿಸಿದ ಶ್ಲೋಕವೇನು, ಒಂದಕ್ಕೊಂದು ಸಂಬಂಧವಿಲ್ಲವೆಂದು ಅಶ್ವಾರೂಢನಾಗಿ ತಾನೇ ವೇಣೀಸೋಮಪುರಕ್ಕೆ ಬಂದನು. ಸ್ವಾಮಿಗಳನ್ನು ಕುರಿತು:-'ಏನು ಗುರುಗಳೇ ನನ್ನ ಆತುರವೆಂಥಾದ್ದು? ನೀವು ಬರೆದು ಕಳುಹಿಸಿದ ಶ್ಲೋಕವೇನು? ಶ್ಲೋಕಗಳನ್ನು ಬರೆಯುವ ಸಮ

ಯವೇ ಇದು? ಉಭಯ ಸರದಾರರು ಕೋಟೆಗೆ ಹಲ್ಲಾ ಹಾಕಿದರೆ ನನ್ನ ಪಾಡಿರಲಿ, ರಾಣಿಯರ ಮಾನದ ಗತಿಯೇನು? ನನ್ನನ್ನು ವೃಥಾ ಬಳಲಿಸಿ ದಿರೆಂದು ವಿಜ್ಞಾಪಿಸಿದನು. ಸ್ವಾಮಿಗಳು—ರಾಜನೆ, ಹೀಗೇಕೆ ನುಡಿ ಯುವೆ? ನಿನ್ನ ಅವಸರಕ್ಕೆ ತಕ್ಕ ಉತ್ತರವನ್ನೇ ಬರೆದು ಕಳುಹಿಸಿದ್ದೇವೆ. ನಿನ್ನ ಆಸ್ಥಾನದ ಕಾವ್ಯಪಂಡಿತರಿಗೆ—ಸದ್ಧರ್ಮಃ=ನಿನ್ನ ಸಮೀಚೀನ ವಾದ ಧರ್ಮವು, ಧರ್ಮೋಭವತು=ಧನುಸ್ಸಾಗಲಿ; ಮಾರ್ಗಣಾಃ=ಶೃತಿವಾ ಕ್ಯಗಳು, ಮಾರ್ಗಣಾಸ್ಸಂತು=ಬಾಣಗಳಾಗಲಿ; ವಾಹಿನೀ=ತುಂಗಾಕೃಷ್ಣಾ ಪ್ರವಾಹವು; ವಾಹಿನೀಭವತು=ಪೂರ್ಣಪ್ರವಾಹವಾಗಲಿ; ಅದರಿಂದ ರಾಜನೇ ಸ್ಯಾದರಾತಿಪರಾಜಯಃ=ಶತ್ರುಗಳ ಪರಾಜಯವಾಗಲಿ, ಎಂಬಷ್ಟು ಅರ್ಥ ಹೇಳಲು ತಿಳಿಯಲಿಲ್ಲವೆ? ಇದರಲ್ಲಿ ಸಂಶಯವೇನಿದೆಯೆಂದು ನುಡಿದರು.

ರಾಜನು, ಶ್ಲೋಕಾರ್ಥವಾಯಿತು; ಆದರಿಂದ ನನ್ನ ಇಷ್ಟಾರ್ಥ ಮಾತ್ರ ಆಗಲಿಲ್ಲವೆಂದನು.

ಸ್ವಾಮಿಗಳು—ಕೋಪದಿಂದ ಹನ್ನೊಂದಕ್ಷೋಹಿಣೀ ಕೌರವ ಸೈನ್ಯ ದಮೇಲೆ ಧನುರ್ಬಾಣ ಹಿಡಿದು ಯುದ್ಧಮಾಡಿದ ಧೃಷ್ಟದ್ಯುಮ್ನನ ಮಾತಿ ನಲ್ಲಿ ನಿನಗೆ ಸಂಶಯವೆ? ನಡೆನಡೆ, ಎರಡೂ ನದಿಗಳಲ್ಲಿ ಪ್ರವಾಹ ಬಂದು ಉಭಯ ಸರದಾರರ ಸೈನ್ಯಗಳೂ ನಾಶವಾಗುವವು. ಹೆದರಬೇಡವೆಂದು ರಾಜನಿಗೆ ಫಲಮಂತ್ರಾಕ್ಷತೆಗಳನ್ನು ಕೊಟ್ಟು ಕಳುಹಿಸಿದರು. ರಾಜನು ಪ್ರತಿ ಮಾತಾಡಲು ಶಕ್ತನಾಗಲಿಲ್ಲ. ಗುರುಗಳ ಮಾತಿನಲ್ಲಿ ಸಂಶಯವಿಲ್ಲ. ಆದರೆ ಮಾತ್ರ ಈ ಚೈತ್ರಮಾಸದಲ್ಲಿ ಪ್ರವಾಹಬರುವದು ಹೇಗೋ ಎಂದು ಚಿಂತಿ ಸುತ್ತಾ ಗದ್ವಾಲಿಗೆ ಬಂದನು. ರಾಣಿಯರನ್ನು ಗೋಪ್ಯಸ್ಥಾನದಲ್ಲಿಟ್ಟನು. ಫಿರಂಗಿಗಳನ್ನು ಸಜ್ಜುಗೊಳಿಸಿ ತನ್ನ ಮಿತಸೈನ್ಯದೊಡನೆ ರಾತ್ರಿಯೆಲ್ಲಾ ಕೋಟೆಯನ್ನು ಕಾಯುತ್ತಾ ಕುಳಿತನು.

ಅತ್ತ ಉಭಯ ಸೈನಿಕರು ಸುತ್ತಮುತ್ತಣ ಗ್ರಾಮಗಳಲ್ಲಿ ಸಿಕ್ಕಿದ ಕುರಿ ಕೋಳಿಗಳನ್ನು ಹಿಡಿದು ತಂದು ತಿಂದು, ಅಕ್ಕಪಕ್ಕಗಳಲ್ಲಿದ್ದ ಈಚಲು ಗಿಡಗಳ ಹೆಂಡವನ್ನು ಕುಡಿದು, ಸ್ಮೃತಿತಪ್ಪಿ ಬೇಸಿಗೆಯ ಧಗೆಗೆ ತಾಳಲಾ ರದೆ, ನದಿಯಪಾತ್ರದಲ್ಲಿ ಶಯನಮಾಡಿದರು. ಸೈನಿಕರಂತೆ ಸೈನ್ಯಾಧಿಪತಿ

ಗಳೂ ವೇಶ್ಯಾಲೋಲರಾಗಿ, ಮನಬಂದಂತೆ ಮದ್ಯಪಾನಮಾಡಿ, ನೀರಿನ ದಡದಲ್ಲಿ ಮಂಚಗಳನ್ನು ಹಾಕಿಕೊಂಡು ನಿದ್ರಾವಶರಾದರು. ಏಕಾಏಕಿ ಅನಿರೀಕ್ಷಿತವಾಗಿ ಉಭಯ ನದಿಗಳಲ್ಲಿ ಮೇರೆದಪ್ಪಿ ಪ್ರವಾಹಬಂದು ಬೆಳಗಾಗುವದರೊಳಗೆ ಹೇಳುವದಕ್ಕೆ ಹೆಸರಿಲ್ಲದಂತೆ ಎರಡು ಸೈನ್ಯಗಳೂಪ್ಪ ಕೊಚ್ಚಿಹೋದವು. ತೀರ ಗ್ರಾಮವಾಸಿಗಳು ದಂಡಾಳುಗಳನ್ನು ಕಾಣದೆ, ದಡದಲ್ಲಿ ಕಟ್ಟಿದ್ದ ಕುದುರೆಗಳನ್ನು ಹಿಡಿತಂದು, 'ಮಹಾಸ್ವಾಮಿ, ಉಭಯ ನದಿಗಳಲ್ಲಿ ಪೂರ್ಣಪ್ರವಾಹ ಬಂದಿದೆ, ಸೈನಿಕರೇನಾದರೋ ಗೊತ್ತಿಲ್ಲ. ನಾವು ಆಲ್ಲೆಲ್ಲಾ ಹುಡುಕಿ, ಯಾರನ್ನೂ ಕಾಣದೆ ಕೈಗೆ ಸಿಕ್ಕಿದ ಈ ಕುದುರೆಗಳನ್ನು ತಂದಿದ್ದೇವೆಂದು' ಮಹಾರಾಜನಿಗೊಪ್ಪಿಸಿದರು. ಈ ಸುವಾರ್ತೆಯನ್ನು ಕೇಳಿ ರಾಜನಿಗೆ ಪರಮಾನಂದವಾಯಿತು. ಗುರುಗಳಾಡಿದ ಮಾತು ಅಕ್ಷರಶಃ ಸತ್ಯವಾಯಿತೆಂದು ಕೃತಜ್ಞತಾಪ್ರದರ್ಶನಕ್ಕಾಗಿ ಜಹಗೀರು ಗ್ರಾಮಗಳನ್ನೂ, ಉತ್ತಮವಾದ ಇತರ ಸೇವೆಗಳನ್ನೂ ಸ್ವಾಮಿಗಳಿಗೆ ಸಮರ್ಪಣೆಮಾಡಿದನು. ಗದ್ವಾಲದ ಕೇಶವಸ್ವಾಮಿಯ ದೇವಾಲಯದಲ್ಲಿ ಮಹೋತ್ಸವವನ್ನು ನಡೆಸಿದನು. ರಾಜಾರಾಮಭೂಪಾಲನು ಕೊಟ್ಟ ಜಹಗೀರು ಅದ್ಯಾಪಿ ಸ್ವಾಮಿಗಳ ಪೂರ್ವಾಶ್ರಮದ ವಂಶೀಕರ ಅನುಭವದಲ್ಲಿವೆ. ಗದ್ವಾಲ ರಾಜಸಂತತಿಯವರು ಇಂದಿಗೂ ವ್ಯಾಸತತ್ವಜ್ಞರ ಹೆಸರನ್ನು ಮರೆತಿಲ್ಲ.

---

ಗೋಪಾಲದಾಸರು ಬದರಿಯಿಂದ ರಾಮೇಶ್ವರದವರೆಗಿನ ಎಲ್ಲ ಕ್ಷೇತ್ರಗಳ ಯಾತ್ರೆ ಮಾಡಿದ್ದರೂ ಪಂಡರಪುರಿಗೆ ಹೋಗಿರಲಿಲ್ಲ. ಒಮ್ಮೆ ದೇಶ ಸಂಚಾರಮಾಡಿ ಬಂದನಂತರ ಪ್ರತಿವರ್ಷವೂ ಬ್ರಹ್ಮೋತ್ಸವ ಕಾಲದಲ್ಲಿ ತಿರುಪತಿಗೆ ಹೋಗಿ ಬರುವದರವಿನಾ ಮತ್ತೆಲ್ಲೂ ವಿಶೇಷ ಸಂಚಾರ ಮಾಡುತ್ತಿರಲಿಲ್ಲ. ಉತ್ತನೂರು ತಪ್ಪಿದರೆ ವೇಣೀಸೋಮಪುರಗಳಲ್ಲಿ ದಾಸರಿರುತ್ತಿದ್ದರು.

ಹೀಗಿರಲು, ಒಂದು ಪ್ರಾತಃಕಾಲ ತುಲಸಿಯ ನಿಮಿತ್ತ ಎಂದಿನಂತೆ ದಾಸರು ಅಡವಿಗೆ ಹೋದರು. ಸವಾರನೊಬ್ಬನು ಇವರ ಹೆಜ್ಜೆಯನ್ನೇ ಅನುಸರಿಸಿ ಕುದುರೆಯನ್ನೋಡಿಸುತ್ತಾ ಬಂದನು. ದಾಸರು ಮಾರ್ಗಬಿಟ್ಟು ಹೋದರೂ ಅವನು ಹಿಂಬಾಲಿಸುವದನ್ನು ಬಿಡಲಿಲ್ಲ. ರಾವುತನ ಭ್ರುಕುಟಿ ಬದ್ಧ ಮುಖವು ಭಯವನ್ನುಂಟು ಮಾಡುತ್ತಿತ್ತು. ಓಡಿದ ಹಾಗೆಲ್ಲಾ ಸವಾರನು ದಾಸರನ್ನು ಅರಸಿಕೊಂಡೇ ಬಂದನು. ದಾಸರು, ನಾನೇನು ಮಾಡಿದೆನಪ್ಪಾ, ನಿನಗೆ ದ್ರೋಹವೆನ್ನುತ್ತಾ ಕಾಡುಬಿದ್ದು ಓಡಿದರು. ಅವನು ದಾಸರು ಪೂರ್ತಿ ಸುಸ್ತಾಗಿ ನಿಲ್ಲುವವರೆಗೆ ಬೆನ್ನು ಬಿಡಲಿಲ್ಲ. ಮತ್ತೆ ಮುಂದೆ ಧಾವನ ಮಾಡಲಾರದೆ ದಾಸರು ನಿಂತಲ್ಲೇ ಏನು ಮಾಡುವೆಯೋ ಮಾಡೆಂದು ನಿಂತುಬಿಟ್ಟರು. ಸವಾರನು ಮರಾಟಿಯಲ್ಲಿ ದಾಸರನ್ನು ಸಂಬೋಧಿಸಿ "ಆಲೇನಾಹಿ" ಎಂದು ಕೇಳಿ ಮಾಯವಾದನು.

ದಾಸರು ಸ್ಮೃತಿ ತಪ್ಪಿದಂತಾಗಿ ಎಚ್ಚತ್ತು ನೋಡಲು ಸವಾರನಿರಲಿಲ್ಲ. ಇದೇನು ಈ ಮಾಯವೆಂದು ಧ್ಯಾನಿಸುತ್ತಾ—

## ಸುಳಾದಿ

### ಧ್ರುವತಾಳ

ನೀಲಕುದುರೆಯನೇರಿ ಶಾಲು ಟೊಂಕಕ್ಕೆ ಸುತ್ತಿ
ಕಾಲಕುಪ್ಪುಸ ತೊಟ್ಟು ಮೇಲೆ ಮೋಹನ್ನ ಹಾಕಿ
ತೋಳುತಾಯಿತ ಶಿರಕೆ ಮೇಲಾದ ವಸ್ತ್ರಸುತ್ತಿ
ಫಾಲಕಸ್ತೂರಿನಿಟ್ಟು ಮೈಗೆ ಗಂಧವ ಪೂಸಿ
ಪಲಾಯನದಿ ಅಶ್ವನೇರಿ ಹಾರಾಡಿಸುತ್ತ

ಆಲೇನಾಹೀ, ಎಂದು ಕೇಳಿದನಾರವ್ವ ?
ವೇಳೆ ಸಾಲದಾಯಿತು ಕೇಳುವದಕ್ಕೆನಗೆ
ಕೇಳುವದಕೆ ಮತ್ತೆ ವಚನಗದ್ಗದವಾಯ್ತು
ಏಳದು ವಚನವು ಉಚ್ಚರಿಸುವೆನೆನಲು
ಆಲೋಚನೆಗೆ ಅತಿ ವಿಚಿತ್ರವು
ಕೇಳಿಲ್ಲ ಕಂಡಿಲ್ಲ ಇಂಥಾ ಪುರುಷನ ಎಂದೂ
ಕಾಳ ಕತ್ತಲೆಯಲ್ಲ ನೋಡೆ ಹಗಲು
ಕೇಳು ತಗ್ಗುಮಿಟ್ಟೆ ಮಳೆಯ ಮಂಜೀರವಲ್ಲ
ಪೇಳಲೇನಿದು ಒಂದು ಸೋಜಿಗವು
ಕಾಲು ಏಳದು ಇಂದು ನಡೆಯಲು ಎನಗಿನ್ನು
ಆಲೋಚನೆಯೆಲ್ಲಾ ಅತ್ತಲಾಗಿ ಎನ್ನ
ಕೇಳಿದನಲ್ಲೆ ಆರೆ ಮಾತಿನಿಂದಲಿ ಎನ್ನ
ಪೇಳು ಆ ಪುರುಷನು ಆವನಾಹ
ಆಲೋಚನೆಗೆ ಎನಗೆ ತೋರುತಲಿದೆ ತುಲಸಿ
ಮಾಲೆ ಪರಿಮಳಗಂಧ ಕುರುಹಿನಿಂದ
ಶೀಲ ಮೂರುತಿ ಪಂಢರಿಯ ಗೋಪಾಲವಿಠಲ
ಓಲಾಡಿಸುತ್ತ ಕುದುರೆ ಓಲಾಡೆ ಪೋದನೆಂದು ||೧||

ಮುಟ್ಟುತಾಳ

ಕಂಡಿರ ಕಂಡೀರಾಖಂಡ ವ್ಯಾಪ್ತನೀತ
ಕಂಡಿರ ಕಂಡೀರಾ ಬೊಮ್ಮಾಂಡದೊಡೆಯನ
ಕಂಡಿರ ಮಣಿಮೌಳಿ ಮಲ್ಲಿಗೆ ದಂಡೆಯು
ಕಂಡಿರ ಶಿರಿ ಅಜಭವಾದಿಗಳನ್ನ
ತೊಂಡರಮಾಡಿ ಬಿಡದೆ ಕಾಯ್ವ ಗೋಪಾಲನ್ನ
ಕಂಡಿರ ಕಂಡೀರಾ ಕಪಟನಾಟಕ ಹರಿಯು
ಕಂಡಿರ ಕಂಡೀರಾ ಗೋಪಾಲ ವಿಠಲನ ||೨||

ರೂಪಕತಾಳ

ಆವರೂಪದಲ್ಲಿ ಗೋವಕಾಯ್ದ್ದ ರೂಪ
ಆವ ಈ ರೂಪವೆ ಅಜಾದಿ ರೂಪವು
ಆವ ಈ ರೂಪವೆ ಆತ್ಮಾದಿ ರೂಪವು
ಆವ ಈ ರೂಪವೆ ಅನಂತ ರೂಪವು
ಶ್ರೀ ವಿಷ್ಣುರೂಪ ಮತ್ತಿವನೆ ಸಾಕ್ಷಾತು ನೋಡ
ಈವಿಧರೂಪ ಅನಂತವಿರಾಟರೂಪ
ಆವರಾವುತನಂತೆ ಅಶ್ವವೇರಿ ಎನ್ನ
ಈವಿಧದಲಿನ್ನು ಕಾವುಗೊಳಿಸಿದರೇನು
ನಾವೊಂದರಿತವನಲ್ಲ ನಿನ್ನ ಲೀಲೆ
ಆವಲ್ಲಿಗೊ ನಾನರಿಯೆ ಬರಹೇಳಿದ್ದು ?
ಸೇವಕನಸ್ಥಿತಿ ನೀನೆಬಲ್ಲೆಯೊ ಸ್ವಾಮಿ
ನೋವಿಗೆ ಮನವೊಯ್ದು ವಶಮಾಡಲಿಬೇಡ
ನಾವೊಬ್ಬನೆ ಅಲ್ಲ ನಿನ್ನಪೊಂದಿ ನಡೆವ
ಶ್ರೀವಿಜಯರಾಯರ ಸಹವಾಸದಲಿಪ್ಪ
ಜೀವರುಗಳಿಗೆಲ್ಲ ನೋವೆಂಬುದೇ ಬೇಡ
ದೇವ ಪಂಡರಿರಾಯ ಗೋಪಾಲವಿಠಲ
ನೀವಲಿದದಕಿಂತ ಈ ವರವನೆ ನೀಡು ||೩||

ಜಂಪೆತಾಳ

ನೋಡಿದಂತೆನ್ನನು ನೋಡುತಿದ್ದರೆ ಕೊನೆಗೆ
ಮಾಡಿಕೊಂಬೆ ಮನಕೆ ಆವನಾದಾನೆಂದು
ನೋಡನೋಡದೃಶ್ಯವಾದ ಕಾರಣ ಮನಕೆ
ನೋಡೆ ಎಂತಿಪ್ಪುದು ನೋಡುವರಿಗೆ
ಆಡುವಮಾತಲ್ಲ ಕಂಡಕಂಡಂತಿನ್ನು
ನೋಡಬಾರದೆ ಒಂದುಗಳಿಗೆ ನಿಂತು ?
ನೋಡಿದಾಕ್ಷಣ ನಿನ್ನ ಬೇಡುತಿದ್ದೆನೇನ

ನೋಡು ಯೋಗ್ಯತೆಯರಿತು ನೋಡು ಥೊರೆಯೆ
ನೋಡು ಅವಸ್ಥೆಗಳಿಕೆ ಬರಲಿ ನಾನು ದೇವ
ನೋಡಿ ತಿಳಿಯದುಸ್ವಾಮಿ ಗೋಪಾಲವಿಠಲ ||೪||

ತ್ರಿಪುಟತಾಳ

ಆವದೇಶಕೆಬರಲಿ ಆವಕ್ಷೇತ್ರನೋಡಲಿ
ಆವದಾವದುಬಿಡಲಿ ಆವುದ ಜಪಿಸಲಿ
ಆವದಾವದುಡಲಿ ಆವದಾವದ ತೊಡಲಿ
ದೇವ ನೀನಲ್ಲದಿಲ್ಲ ಇದರೊಳಗೊಂದೂ
ಆವಲ್ಲಿಗೋಕಾಣೆ ನೀನು ಬರಹೇಳಿದ್ದು
ಕಾವಕರುಣಿ ನಮ್ಮ ಗೋಪಾಲವಿಠಲ
ದೇವ ಪಂಢರಿರಾಯ ವಿಜಯರಾಯರಪ್ರಿಯ ||೫||

ಅಟ್ಟತಾಳ

ಶರಣುಗೋವಳರಾಯ ಶರಣುನಿರ್ಜಿತಮಾಯ
ಶರಣುಮುಕ್ತಾಶ್ರಯ ಶರಣಾನಂದಮಯ
ಶರಣು ಅಘಟಿತಘಟಿಕ ಅನಂತ ಐಶ್ವರ್ಯ
ಶರಣುಮಹಾಪ್ರಭು ರಾಜಾಧಿರಾಜ
ಶರಣುಶರಣು ಅಯ್ಯ ಪೂತುರೆಪೂತುರೆ
ಶರಣುಶರಣು ನಮ್ಮ ಗೋಪಾಲವಿಠಲ
ಶರಣುಶರಣು ಶಿರಿ ಅಜಭವಾದಿಗಳೊಡೆಯ
ಶರಣುಶರಣು ನಿನ್ನ ಪರಿವಾರಕೆ ಎಲ್ಲಾ ||೬||

ಆದಿತಾಳ

ಮಾನಿಸರೂಪದಿ ಮನೆಮನೆಪೊಕ್ಕನೆ
ಮಾನಿಸರೂಪದಿ ಮನೆಮನೆಗೋಡಿದನೆ
ಮಾನಿಸರೂಪದಿ ಕೆನೆಪಾಲಕದ್ದನೆ

ಮಾನಿಸರೂಪದಿ ಧನುವಮುರಿದನೆ
ಮಾನಿಸರೂಪದ ಅಮಾನಿಸಮಹಿಮನೆ
ಮಾನಿತವೇನಯ್ಯ ಮರೆವೆಯಿಸಮಾಡುವದು
ಮಾನಿಸನೆಂದು ನಿನ್ನಮನದಿ ನಿಶ್ಚೈಸಿದೆ
ಮಾನಿಸಾನ್ನವನುಂಡ ಮನುಜನಾದದರಿಂದ
ಮನವಾಚಾಕಾಯದಿ ಮರೆಹೊಕ್ಕೆನೋ ಸ್ವಾಮಿ
ಮಾನವಿತ್ತುಕಾಯೋ ಗೋಪಾಲವಿಠಲ ||೭||

ಜತೆ

ಎಲ್ಲಿ ನೋಡಲು ಮತ್ತಲ್ಲಿ ನೀನಿರೆ ಬರ
ಲಿಲ್ಲವೆಂಬುದೇನೋ ಗೋಪಾಲವಿಠಲ ||೧||

ಎಂಬದಾಗಿ, ಸವಾರನಾಗಿ ಬಂದವನು ಪಾಂಡುರಂಗನೆಂದೇ ನಿಶ್ಚಯಿಸಿ ಸ್ತೋತ್ರಮಾಡುತ್ತಾ ಮನೆಗೆ ಬಂದರು. ಆ ದಿನವೆಲ್ಲಾ ದಾಸರು ಭಾವಸಮಾಧಿಯಲ್ಲಿದ್ದರು. ಸಮಾಧಿಯಿಳಿದನಂತರ, ಮನಸ್ಸಿನಂತೆ ದೇಹವೂ ಸಮಸ್ಥಿತಿಗೆ ಬರಬೇಕಾದರೆ ತಕ್ಕ ಉಪಚಾರಗಳಾಗಬೇಕು. ಹಾಗಿಲ್ಲದಿದ್ದರೆ ಅಂತಹ ದೇಹಗಳು ಬಲುಕಾಲ ಬಾಳುವದಿಲ್ಲ. ದಾಸರ ತಮ್ಮಂದಿರಿಬ್ಬರೂ ದಾಸರಬಳಿಯಿದ್ದು ಸೇವೆಮಾಡಿದರು. ನಾಲ್ಕಾರು ದಿನಗಳು ಕಳೆದ ನಂತರ ದಾಸರು ತಮ್ಮಂದಿರನ್ನು ಕುರಿತು—'ಏನಪ್ಪಾ, ನಾವು ಪಂಢರಿಗೆ ಬರಲಿಲ್ಲವೆಂದು ಪಾಂಡುರಂಗನು ಅಗ್ರಹದಿಂದ ನಮ್ಮನ್ನು ಓಡಾಡಿಸಿ ಆಲೇನಾಹೀ ಎಂದು ಎಚ್ಚರಿಸಿದ್ದಾನೆ. ಪಂಢರಪುರಿಗೂ ಮತ್ತೆ ಉಡುಪಿ ಮೊದಲಾದ ಸ್ಥಳಗಳಿಗೂ ಯಾತ್ರೆಮಾಡಿಬರೋಣ ನಡೆಯಿರಿ. ನಾದಬ್ರಹ್ಮ ಅನ್ನಬ್ರಹ್ಮ ಕಾಂಚನಬ್ರಹ್ಮರನ್ನು ಬಿಟ್ಟರೆ ಹರಿದಾಸರಿಗೆ ಗತಿಯಾವದು' ಎಂದು ನೊದಲು ಪಂಢರಿನಾಥನ ಯಾತ್ರಾ ಮಂಗಳೋತ್ಸವವನ್ನು ನೆರವೇರಿಸಿದರು. ದಾಸರು ಭೀಮರಥಿಯಲ್ಲಿ ಜಾಹ್ನವಿಯನ್ನು ಧ್ಯಾನಿಸಿ ಸ್ನಾನಮಾಡಲು ಉದಕವೃದ್ಧಿಯಾದುದನ್ನು ನೋಡಿ, ಭಕ್ತಜನರು ಅವರನ್ನು ಮಹಾಪುರುಷರೆಂದು ತಿಳಿದರು.

ಧ್ಯಾನವೆಂಬುವದು ಸಕಲ ಸಿದ್ಧಿಗಳ ಸೋಪಾನವು. ಧ್ಯಾನದಿಂದ ಪ್ರಪಂಚದ ಅಂತರ್ಬಹಿಸ್ಥಿತಿಗಳು ಗೋಚರವಾಗುವವು. ಪ್ರಾರ್ಥನಾ ಮಂತ್ರಗಳನ್ನುಚ್ಚರಿಸುವದೇ ಧ್ಯಾನವೆನಿಸುವದಿಲ್ಲ. ಧ್ಯಾನವು ಮಂತ್ರ ಸ್ತೋತ್ರಗಳ ರೂಪದಲ್ಲಿ ಮಾತ್ರವಿಲ್ಲ. ಅದು ವ್ಯಕ್ತಿಯು ಮಾಡುವ ಸತ್ಯ ಶೋಧನೆಯಾಗಿರುವದು. ಮಹಾತ್ಮರು ಉದಕ ತತ್ವವನ್ನು ಧ್ಯಾನಿಸಿ ಸ್ನಾನ ಮಾಡಿದರೆ ಉದಕವೃದ್ಧಿಯಾಗುವದು. ಅವರು ಅಗ್ನಿತತ್ವವನ್ನು ಚಿಂತಿಸಿದ ರೆಂದರೆ ಅವರೇ ಅಗ್ನಿಗೋಳದಂತೆ ಕಾಣಿಸುವರು. ಧ್ಯಾನವು ವ್ಯಕ್ತಿಯನ್ನು ಭೂಪಥದಿಂದ ಸ್ವರ್ಗಪಥಕ್ಕೇರಿಸುವದು ; ದುಃಖದಿಂದ ಶಾಂತಿಸಾಮ್ರಾಜ್ಯಕ್ಕೆ ಕರೆದೊಯ್ಯುವದು. ಇಂತಹ ಸ್ವಾಭಾವಿಕ ಸಾಧನಾ ಮಾರ್ಗವನ್ನು ತಿಳಿಯದವರು ಅತಿಮಾನುಷವೆನ್ನುವರು. ತಮಗೆ ತಿಳಿಯದ ಮಾತ್ರಕ್ಕೇ ಧ್ಯಾನದಿಂದುಂಟಾಗುವ ಫಲಪರಿಣಾಮಗಳನ್ನು ಅವರು ಸುಳ್ಳೆಂದು ಜರಿಯುವದಕ್ಕೂ ಹಿಂದೆಗೆಯುವದಿಲ್ಲ, ಇರಲಿ.—

ಅತ್ತ ಗೋಪಾಲದಾಸರ ಸಾನ್ನಿಧ್ಯದಿಂದ ಪಂಢರಪುರದಲ್ಲಿ ಭಕ್ತಜನರಿಗೆ ಮಹೋತ್ಸವವಾದಂತಾಯಿತು. ಅದೇ ಕಾಲದಲ್ಲಿ ಅದವಾನಿಯಿಂದ ದಿವಾನ ಪಂಗನಾಮದ ತಿಮ್ಮಣ್ಣಯ್ಯನವರು ಯಾತ್ರಿಕರಾಗಿ ಶ್ರೀ ಕ್ಷೇತ್ರಕ್ಕೆ ಬಂದರು. ಅಯ್ಯನವರಿಗೂ ಪಟ್ವರ್ಧನ ಸಂಸ್ಥಾನಗಳ ಸರದಾರರಿಗೂ ಸ್ನೇಹವಿತ್ತು. ಆ ಸರದಾರರೆಲ್ಲರೂ ಪಾಂಡುರಂಗನ ಭಕ್ತರಾಗಿ, ತಾವು ಪಂಢರಪುರಿಗೆ ಬಂದಾಗ ವಾಸಮಾಡಲು ಪ್ರತ್ಯೇಕ ಮನೆಗಳನ್ನು ಕಟ್ಟಿ ಕೊಂಡಿರುವುದು, ಈಗಲೂ ಶ್ರೀ ಕ್ಷೇತ್ರದಲ್ಲಿ ಕಂಗೊಳಿಸುತ್ತಿರುವದು. ಅಯ್ಯನವರ ಲೌಕಿಕ ವರ್ಚಸ್ಸವು ಸರದಾರರನ್ನೂ ಗೋಪಾಲದಾಸರ ಕೀರ್ತನಕ್ಕೆ ಆಕರ್ಷಣಮಾಡಿತು. ಇಲ್ಲಿನವರೆಗೆ ಕರ್ನಾಟಕದಂತೆ ವ್ಯವಸ್ಥಿತವಾದ ಕೀರ್ತನ ಪದ್ಧತಿಯು ಮಹಾರಾಷ್ಟ್ರದಲ್ಲಿರಲಿಲ್ಲ. ಮಹಾರಾಷ್ಟ್ರ ಭಕ್ತರ ಕೀರ್ತನವು ಮಾತಾಡಿದಂತೆ ಓವಿಗಳನ್ನು ಹೇಳುವದು, 'ವಿಠಲ ವಿಠಲ' ಎಂಬ ನಾಮಭಜನೆ ಮಾಡುತ್ತಾ ಕರತಾಳಪೂರ್ವಕ ನರ್ತನಮಾಡುವದು, ಇಷ್ಟರಿಂದ ಪೂರ್ತಿಯಾಗುತ್ತಿತ್ತು. ಭಕ್ತಿಪಾಂಡಿತ್ಯಗಳೆರಡೂ ಕಲೆತ ಕೀರ್ತನವು ಆ ದೇಶೀಯರಿಗೆ ಆ ಭಾಷೆಯಲ್ಲಿ ಅತ್ಯಂತ ಅಪೂರ್ವವಾಗಿತ್ತು. ಗೋಪಾಲದಾಸರ ಕೀರ್ತನಶ್ರವಣದಿಂದ ಶ್ರೀಮಂತ ಸರದಾರರು

ಅತ್ಯಂತ ಸಂತುಷ್ಟರಾಗಿ, ಮರಾಠಿಯಲ್ಲೂ ಇದೇ ಪ್ರಕಾರದ ಕೀರ್ತನಪದ್ಧತಿಯನ್ನು ಕಾಲಾಂತರದಲ್ಲಿ ಆಚರಣೆಗೆ ಬರುವಂತೆ ಮಾಡಿಕೊಂಡರು.

ಗೋಪಾಲದಾಸರು ಪಂಢರಪುರದಿಂದ ಕೊಲ್ಹಾಪುರಕ್ಕೂ, ಅನಂತರ ಮೈಸೂರುಸೀಮೆಯ ಶಿವಮಗ್ಗಿಯ ಮಾರ್ಗವಾಗಿ ಉಡುಪಿಗೂ, ಪ್ರಯಾಣ ಮಾಡಿದರು.

ಆ ಕಾಲದಲ್ಲಿ ಮಂಡಗದ್ದೆಯ (Shimoga Dist) ಭೀಮನೆಂಬ ತುಂಟಮನುಷ್ಯನು ಯಾತ್ರಿಕರಿಗೆ ಕಂಟಕನಾಗಿ ಅವರ ಸುಲಿಗೆಮಾಡಿ ಜೀವಿಸುತ್ತಿದ್ದನು. ಮಂಡಗದ್ದೆಯ ಮಾರ್ಗದಲ್ಲಿ ಯಾತ್ರಿಕರನ್ನು ಕಂಡಕೂಡಲೆ, ವಿನಯಸಂಪನ್ನನಾಗಿ ಅವರ ಆದರಾತಿಥ್ಯ ಮಾಡುವನಂತೆ ನಟನೆಮಾಡುತ್ತಿದ್ದನು. ಮೋಸವರಿಯದ ಜನರು ಅವನ ಉಪಚಾರಕ್ಕೆ ಮರುಳಾಗಿ ತಮ್ಮ ದ್ರವ್ಯರಕ್ಷಣೆಯ ಭಾರವನ್ನು ಭೀಮನಿಗೆ ವಹಿಸಿಬಿಡುತ್ತಿದ್ದರು. ಯಾತ್ರಿಕರನ್ನು ನೋಡಿ ಭೀಮನು—'ಸ್ವಾಮಿ ಇದು ಕಳ್ಳರ ದಾರಿ; ಘಾಟಿಯನ್ನಿಳಿಯುವಾಗ ನೀವು ಜಾಗರೂಕರಾಗಿರಬೇಕು; ನನ್ನ ಕಡೆಯ ಜನರ ವಶಕ್ಕೆ ನಿಮ್ಮ ದ್ರವ್ಯವೇನಿದ್ದರೂ ಕೊಟ್ಟರೆ, ನಿಮಗೆ ಪ್ರಾಣಾಪಾಯವಾಗದಂತೆ ಅವರು ನಿಮ್ಮನ್ನು ರಕ್ಷಿಸಿ ಘಟ್ಟವಿಳಿದಕೂಡಲೆ ನಿಮಗೆ ಕೊಡುವರು; ನೀವು ನನ್ನ ಸೇವಕರಿಗೆ ಏನಾದರೂ ತಿಳಿದ ಬಹುಮಾನ ಮಾಡಬಹುದು' ಎಂದು ನಂಬಿಸಿ ಕಡೆಗೆ ಮೋಸಮಾಡಿಬಿಡುತ್ತಿದ್ದನು. ತನ್ನ ಕೈಗೆ ಸಿಗದೆ ಸ್ವತಂತ್ರವಾಗಿ ಪ್ರಯಾಣಮಾಡಿದ ಜನರಮೇಲೆ ಕಾವಲಿಟ್ಟು ಹೊಡೆದು ಬಡಿದು, ಅವರ ಸರ್ವಸ್ವವನ್ನೂ ಅಪಹರಿಸುತ್ತಿದ್ದನು. ಘಟ್ಟಪ್ರಾಂತ್ಯದಲ್ಲಿ ಭೀಮನು ಜನರ ಕೊಲೆಮಾಡಿ ದರಿಗಳಲ್ಲಿ ತಳ್ಳಿದರೂ ಪತ್ತೆಯಾಗುತ್ತಿರಲಿಲ್ಲ. ದಂಡಪಾಣಿಗಳಾಗಿಯೂ, ಖಡ್ಗಧಾರಿಗಳಾಗಿಯೂ, ತಕ್ಕ ಸಿಬ್ಬಂದಿಯೊಡನೆ ಯಾತ್ರೆಮಾಡುವರಿಗೆ ಭೀಮನ ಅಂಜಿಕೆಯಿರುತ್ತಿರಲಿಲ್ಲ.

ಗೋಪಾಲದಾಸರ ಜೊತೆಯಲ್ಲಿ ನೂರಾರು ಜನ ಯಾತ್ರಿಕರು ಅಶ್ವಾರೂಢರಾಗಿ ಪ್ರಯಾಣಮಾಡುತ್ತಿದ್ದುದರಿಂದ, ಅವರನ್ನು ಎದುರಿಸಲು ಭೀಮನಿಗೆ ಸಾಧ್ಯವಾಗಲಿಲ್ಲ. ದಾಸರ ಕಡೆಯವರಿಗೆ ಭೀಮನ ಆತಿಥ್ಯದ ಅವಶ್ಯಕತೆಯಿರಲಿಲ್ಲ. ದಾಸರಲ್ಲೂ ಅನುಯಾಯಿಗಳಲ್ಲೂ ದ್ರವ್ಯಸಂಪತ್ತಿಗೆ ಕಡಿ

ಮೆಯಿರಲಿಲ್ಲ. ಭೀಮನು ಹೇಗಾದರೂ ಮಾಡಿ ಈ ದೊಡ್ಡ ಗುಂಪನ್ನು ಸುಲಿಯಬೇಕೆಂದು ಮೂರು ಕಳ್ಳಗಂಡಿಗಳಲ್ಲಿ ಬಲವಾದ ಕಾವಲಿರಿಸಿದನು. ತಾನು ಸಾತ್ವಿಕ ಮನುಷ್ಯನಂತೆ ದಾಸರ ಜೊತೆಯಲ್ಲಿ ಪ್ರಯಾಣಮಾಡಿದನು. ದಾಸರು ಬೇಡಿಕೆಮಾಡಿದ ಸ್ಥಳಗಳಲ್ಲಿ ತಾನೂ ಬೇಡಿಕೆಮಾಡಿದನು. ಅವರಲ್ಲಿ ದೊರೆತ ಪ್ರಸಾದವನ್ನೇ ಭುಜಿಸಿದನು. ದಾಸರ ಭಜನೆಯ ಕಾಲದಲ್ಲಿ ತಕ್ಕ ಭಕ್ತಿಯನ್ನು ತೋರಿಸುತ್ತಾ ಕುಳಿತನು. ಇವನ ಚರ್ಯವನ್ನು ನೋಡಿ ಗೋಪಾಲದಾಸರು ಚಿಕ್ಕತಮ್ಮ ದಾಸಪ್ಪದಾಸರೊಡನೆ—

ಗೋಪಾಲದಾಸರು—ತಮ್ಮಾ ನೋಡಿದೆಯಾ, ಈ ಮಾರೀಚನನ್ನ !

ದಾಸಪ್ಪದಾಸರು—ನೋಡಿದೆ, ಬಲು ಠಕ್ಕನಾಗಿ ಕಾಣುತ್ತಾನೆ.

ಗೋಪಾಲದಾಸರು—ಇವನೇ ಆ ಮಂಡಗದ್ದೆಯ ಭೀಮ! ಯಾತ್ರಿಕರಿಗೆ ಔತಣಮಾಡುತ್ತಾನೆ. ಅನಂತರ ಕಳ್ಳಗಂಡಿಯಲ್ಲಿ ಕಾದಿದ್ದು ಇದ್ದಬದ್ದದ್ದನ್ನು ಕಸಿದುಕೊಳ್ಳುತ್ತಾನೆ. ಈಗ ನಮ್ಮೆಲ್ಲರ ಸುಲಿಗೆಮಾಡಲು ಹೊಂಚುಹಾಕಿದ್ದಾನೆ.

ದಾಸಪ್ಪದಾಸರು—ಇರಬಹುದು, ನಮ್ಮ ಜೊತೆಯಲ್ಲಿ ಹೆಂಗಸರು ಮಕ್ಕಳಿದ್ದಾರೆ, ಒಡವೆ ವಸ್ತುಗಳಿವೆ. ಜನರ ಬಳಿಯಲ್ಲಿ ಸಾಕಷ್ಟು ಹಣವಿದೆ. ಪಾರಾಗುವ ಬಗೆಹೇಗೆ ?

ಗೋಪಾಲದಾಸರು—ಸರ್ವಜ್ಞರನ್ನು (ಮಧ್ವಾಚಾರ್ಯರನ್ನು) ಹಿಂಬಾಲಿಸಿದ ಕಳ್ಳರ ಕಥೆಯೇ ಈ ಭೀಮನದಾಗುವದು. ಅದಕ್ಕೆ ಯೋಚನೆಯೇಕೆ ?

ದಾಸರ ಪರಿವಾರವು ಕಣಿವೆಯ ಇಕ್ಕಟ್ಟಾದ ಸ್ಥಳವನ್ನು ಸೇರಿತು. ಭೀಮನು ಎಲ್ಲರಿಗಿಂತ ಮುಂದೆ ಬಂದು ತನ್ನ ನೂರಾರು ಕಳ್ಳರೊಡನೆ ಸೇರಿದನು. ಒಳ್ಳೇ ಬೇಟೆ ಸಿಕ್ಕಿತು ಬಿಡಬೇಡಿರಿ; ಹೆಂಗಸರು ಮಕ್ಕಳೆಂದು ನೋಡಬೇಡಿರಿ; ಒಬ್ಬೊಬ್ಬಳಮೇಲೆ ಸೇರುಗಟ್ಟಳೆ ಭಂಗಾರವಿದೆ; ಬಲವಾಗಿ ಒಬ್ಬಿಬ್ಬರನ್ನು ಪ್ರಹರಿಸಿದಿರೆಂದರೆ ಮಿಕ್ಕವರು ಸುಲಭವಾಗಿ ಪ್ರಾಣಭೀತಿಯಿಂದ ಎಲ್ಲವನ್ನೂ ಒಪ್ಪಿಸುವರು; ಎಂದು ಆ ಪಾಪಿಯು ತನ್ನ ಅನು

ಯಾಯಿಗಳನ್ನು ಪ್ರೋದ್ಬಲಗೊಳಿಸಿದನು. ಕುದುರೆಯ ಮೇಲೆ ಕುಳಿತು ಮುಂದೆ ಬರುತ್ತಿರುವ ದಾಸರನ್ನು ನಿಲ್ಲಿರೆಂದು ಹೂಂಕರಿಸಿ ತಡೆದನು.

ದಾಸರು—ಏನು ಭೀಮ! ನಮ್ಮೆಲ್ಲರ ಸುಲಿಗೆ ಮಾಡಲು ಬಂದೆಯಾ ಎಂದರು. ಭೀಮನು ಇದಾರು ನನ್ನನ್ನು ಗುರ್ತಿಸಿ ಮಾತನಾಡುವರೆಂದು ಚಕಿತನಾದನು. ದಾಸರ ಮುಖವನ್ನು ನೋಡಿ,ಯಾರೋ ಎಂದು, ಮೇಲೇರಿ ಬಂದನು. ಭೀಮನಿಗೂ ಅವನ ಅನುಚರರಿಗೂ, ಜನರ ಮೇಲೆ ಪ್ರಯೋಗಿಸಲು ದಂಡವನ್ನೆತ್ತಿದರೆ ಎತ್ತಿದ ಕೈಗಳು ಸೆಟೆದು ನಿಂತು ಇಳಿಸಲು ಬರದಂತಾದವು. ನಿಂತವರು ನಿಂತಂತೆ ನಿಶ್ಚೇಷ್ಟರಾದರು. ದಾಸರು ತಮ್ಮ ಕಡೆಯುವರನ್ನು ಹೆದರಬೇಡಿರೆಂದು ಆ ಶ್ವಾ ಶ ವಿ ತ್ತು ಮುಂದರಿಸಿದರು. ಭೀಮನು ತನ್ನಂತೆ ತನ್ನವರೂ ಮುಗ್ಧರಾದುದನ್ನು ನೋಡಿ, ಹೀಗೇಕಾಯಿತೆಂದು ಒಬ್ಬೊಬ್ಬರೊಡನೆ ಪ್ರಶ್ನೆ ಮಾಡಿದನು. ಯಾರಿಂದಲೂ ಸರಿಯಾದ ಉತ್ತರ ಬರದಿರುವದನ್ನು ನೋಡಿ,ಹೆಚ್ಚು ಸಂಖ್ಯೆಯ ಯಾತ್ರಿಕರಾದ್ದರಿಂದ ತಮ್ಮೆಲ್ಲರಿಗೂ ಕ್ಷ ಣ ಕಾ ಲ ಈ ಸ್ಥಿತಿಯಾಗಿರಬೇಕೆಂದು ಧೈರ್ಯತಾಳಿದನು. ಏನಾದರೂ ಈ ಗುಂಪನ್ನು ಬಿಡಬಾರದೆಂದು ಕಳ್ಳರನ್ನು ಹುರಿಗೊಳಿಸಿ, ಮತ್ತೊಂದು ಕಣಿವೆಯ ಬಳಿ ಒಳದಾರಿಯಿಂದ ಪ್ರಯಾಣ ಮಾಡಿ ಸಜ್ಜಾಗಿ ನಿಂತನು. ದಾಸರು ತಮ್ಮನನ್ನು ಕುರಿತು ನಿಮಗೆಲ್ಲಾ ಮತ್ತೊಮ್ಮೆ ಮಾರೀಚನ ದರ್ಶನವಾಗುವದೆಂದರು. ಯಾತ್ರಿಕರು ಹಿಂದಾದಂತೆಯೇ ಮುಂದೂ ಕಳ್ಳರಗತಿಯಾದೀತೆಂದು ನಿರ್ಭಯರಾಗಿ ಮಾತಾಡಿದರು. ದಾಸರು ಹಿಂದಿನಂತೆಯೋ ಮತ್ತೂ ಅಧಿಕವಾಗಿಯೋ ಏನಾದರಾಗುವದೆಂದರು. ಯಾತ್ರಿಕರು ಕಣಿವೆಯ ಬಳಿಗೆ ಬರಲು ಭೀಮನು ಜೀವದ ಹಂಗು ತೊರೆದು ಗುಂಪಿನ ಮೇಲೆ ಬಿದ್ದನು. ಕಳ್ಳರು ದಂಡಗಳನ್ನೆತ್ತಲಾರದೆ ಕುರುಡರಾಗಿ ತಡವರಿಸುತ್ತಾ ನಿಂತು ಬಿಟ್ಟರು. ಭೀಮನು ಇ ವ ರೇ ನೋ ೀ ಕಣ್ಣು ಕಟ್ಟು ಮಾಡಿದರೆಂದು ಚಿಂತಾತುರನಾಗಿ, ಮುಹೂರ್ತ ಕಾಲಾನಂತರ ಎಲ್ಲರೂ ತಮ್ಮ ಸ್ಥಿತಿ ಹೀಗೇಕೆ ಆ ಯಿ ತೆಂ ದು ಚರ್ಚಿಸುತ್ತಿರುವರೊಡನೆ ಮಾತಾಡುತ್ತಾ, ಮತ್ತೆ ಧೈರ್ಯಮಾಡಿ ಮೂರನೇ ಸ್ಥಳದಲ್ಲಿ ಇದೇ ಕಡೆಯ ಸಾಹಸವೆಂದು ಕಾದುನಿಂತನು. ಈ ಸಲದ ಭೀಮನ ಅಪಜಯವು ಜನ್ಮದಲ್ಲಿ ಮರೆಯದಂತಾಯಿತು. ಭೀಮನೂ ಅವನ ಅನುಯಾಯಿ ಕ ಳ್ಳ ರೂ ಎತ್ತಿದ

ಕೈಯನ್ನು ಇಳಿಸಲಾರದೆ, ಮಾತಾಡಲು ನಾಲಿಗೆಬಾರದೆ, ನೋಡಲು ಕಣ್ಣು ಕಾಣದೆ, ಸ್ಥಾಣುಗಳಂತೆ ನಿಶ್ಚೇಷ್ಟರಾದರು. ದಿನವೆಲ್ಲಾ ಕಳೆದರೂ ಕಳ್ಳರಿಗೆ ಕೈಯಿಳಿಸಲು ಬರಲಿಲ್ಲ; ಹಿಂದಿನಂತೆ ಕಣ್ಣು ಕಾಣಲಿಲ್ಲ; ಸಾಲದುದಕ್ಕೆ ನಾಲಿಗೆಯ ವ್ಯಾಪಾರವು ನಿಂತು ಹೋಯಿತು. ಕಣಿವೆಗೆ ಸಮೀಪದಲ್ಲಿ ದಾಸರು ಬಿಡಾರ ಮಾಡಿ ಆ ದಿನದ ಪೂಜೆ ಭೋಜನಗಳನ್ನು ನೆರವೇರಿಸಿದರು. ರಾತ್ರಿ ಭಜನೆಯು ಪದ್ಧತಿಯಂತೆ ಉದ್ರೇಕಜನಕವಾಗಿ ನಡೆಯಿತು. ದಾಸರ ಸಂಗಡಿಗರು ಕಳ್ಳರಿಗಾದ ಗತಿಯನ್ನು ನೆನೆನೆನೆದು ಆಶ್ಚರ್ಯಭರಿತರಾದರು. ದಾಸರಿಂದ ಪರಿಣಾಮವಾಯಿತೆಂದು ತಮಗೆ ತಾವೇ ಧನ್ಯವಾದ ಮಾಡಿಕೊಂಡರು.

ನಿಂತ ಬಳಿಯಲ್ಲಿ ನಿಂತ ಭೀಮನೇ ಮೊದಲಾದ ಕಳ್ಳರು ಆಹಾರವಿಲ್ಲದೆ ಪರಿತಪಿಸುತ್ತಾ, ರಾತ್ರಿ ಭಜನೆಯಾಗುವ ಸಪ್ಪಳವನ್ನು ಕೇಳಿ, ದಾಸರಿದ್ದ ಬಳಿಗೆ ತಡವರಿಸಿಕೊಂಡು ಬಂದು ಶರಣಾಗತರಾದರು. ಎಲ್ಲರ ಯಜಮಾನ ಭೀಮನು,-'ಸ್ವಾಮಿ, ತಾವು ಸತ್ಪುರುಷರು. ನಮ್ಮ ಕಣ್ಣು ನಾಲಿಗೆಗಳನ್ನನುಗ್ರಹಿಸಬೇಕು; ನಮ್ಮ ಅಪರಾಧಗಳನ್ನು ಕ್ಷಮಿಸಬೇಕು;' ಎಂದು ಸಂಜ್ಞೆಯಿಂದ ಬೇಡಿಕೊಂಡನು. ದಾಸರು—'ಪಾಪಿಗಳಿರಾ! ಎಷ್ಟು ಜನ ಯಾತ್ರಿಕರ ಸುಲಿಗೆ ಮಾಡಿ, ಎಷ್ಟು ಜನರ ಕೊಲೆ ಮಾಡಿ ಇನ್ನೂ ಜೀವಿಸಿರುವಿರಿ. ನಾನು ಬ್ರಾಹ್ಮಣನಾದುದರಿಂದ ನಿಮ್ಮನ್ನು ಕ್ಷಮಿಸಬೇಕಾಗಿದೆ. ಜನ್ಮದಲ್ಲಿ ಇಂಥಾ ಪಾಪಕಾರ್ಯಗಳನ್ನು ಮಾಡುವದಿಲ್ಲವೆಂದು ಪ್ರಮಾಣ ಮಾಡಿದರೆ, ನೀವು ಮೊದಲಿನಂತಾಗುವಿರಿ' ಎಂದು ಜಬರಿಸಿದರು. ಪಾಪಿಗಳ ದುಃಖಸ್ಥಿತಿಯನ್ನು ನೋಡಿ ಕನಿಕರ ತಾಳಿ ಅವರಲ್ಲಿ ಕೃಪೆ ಮಾಡಿದರು. ಕಳ್ಳ ಭೀಮನು—ಸ್ವಾಮಿ, ಬಾಲ್ಯಪ್ರಭೃತಿ ಯಾತ್ರಿಕರ ಸುಲಿಗೆ ಮಾಡಿ ಜೀವಿಸಿದ ನಮ್ಮ ಮುಂದಿನ ಜೀವನೋಪಾಯವೇನೆಂದು ಮೊರೆಯಿಟ್ಟನು. ದಯಾಮಯರಾದ ದಾಸರು, ಯಾರೋ ಪೂರ್ವ ರಾಜರು ಭೂಗತ ಮಾಡಿದ್ದ ನಿಕ್ಷೇಪವನ್ನು ತೋರಿಸಿ, ಆ ಧನದಿಂದ ಬದುಕಿರೆಂದು ಹರಸಿ ಕಳುಹಿಸಿದರು. ಭೀಮನಾದಿಯಾದ ಕಳ್ಳರಿಗೆ ಇದೊಂದು ಪರಿಯ ಅನುಗ್ರಹವೇ ಆಯಿತು. ಹರಿದಾಸರ ದಯಾಮಯ ಮನಃಸ್ಥಿತಿಯು ಇಂಥಾದ್ದು.

ಗೋಪಾಲದಾಸರು ಉಡುಪೀಕ್ಷೇತ್ರದಲ್ಲಿದ್ದು ಹಾಡಿದ ದೇವರನಾಮ ಸುಳಾದಿಗಳು ಅತ್ಯಂತ ಸ್ಫೂರ್ತಿದಾಯಕಗಳಾಗಿವೆ. ಮಹಿಮಾದ್ಯೋತಕಗಳಾಗಿವೆ. ದಾಸರು ಉತ್ತನೂರಿಗೆ ಬಂದನಂತರ ಗುರುಗಳಾದ ವಿಜಯರಾಯರ ಆಜ್ಞಾನುಸಾರ ಮಾನವಿಯ ನರಸಿಂಹಾಚಾರ್ಯರಿಗೆ (ಭಾವೀ ಜಗನ್ನಾಥದಾಸರು)ಪ್ರಾಪ್ತವಾಗಿದ್ದ ಉದರಶೂಲೆಯನ್ನು ಪರಿಹರಿಸಿ, ತಿರುಪತಿಯಲ್ಲಿ ಮತ್ತೆ ತಮ್ಮ ಆಯುಸ್ಸಿನಲ್ಲಿ ನಲವತ್ತು ವರ್ಷಗಳ ಆಯುರ್ದಾನಮಾಡಿ, ಹರಿದಾಸ ಪದವಿಯಲ್ಲಿ ದೀಕ್ಷೆಯನ್ನನುಗ್ರಹಿಸಿದರು. ಈ ಚರಿತ್ರೆಯು ಮುಂದೆ ಜಗನ್ನಾಥದಾಸರ ವೈಭವ ವಿವರಣೆಯಲ್ಲಿ ವಿಸ್ತಾರವಾಗಿ ಬರುವದರಿಂದ ಇಲ್ಲಿ ವಿಸ್ತರಿಸುವದಿಲ್ಲ.

ಜಗನ್ನಾಥದಾಸರಿಗೆ ರೋಗನಿವಾರಣೆಮಾಡಿ ಆಯುರ್ದಾನಮಾಡಿದ ನಂತರ, ಆ ಉದರಶೂಲೆಯು ಪ್ರಾರಬ್ಧರೂಪವಾಗಿ ಗೋಪಾಲದಾಸರನ್ನು ಬಾಧಿಸತೊಡಗಿತು. ಆ ಕಾರಣದಿಂದ ದಾಸರು ಪ್ರಾತಃಕಾಲ ಹತ್ತು ಘಂಟೆಯೊಳಗೆ ಭೋಜನಮಾಡಲಾರಂಭಿಸಿದರು. ಇಷ್ಟಾದರೂ, ಏನಾದರೂ ಬಲವತ್ತರ ಕಾರಣಗಳಿಂದ ಭೋಜನ ಮಾಡುವದು ತಡವಾದರೆ ಉದರಶೂಲೆಗೊಳಗಾಗಿ ದಾಸರು ದುಃಖಾನುಭವ ಮಾಡುತ್ತಿದ್ದರು. ಹೀಗಿರಲು ತಿರುಪತಿಯ ಬ್ರಹ್ಮೋತ್ಸವಕ್ಕೆ ಪದ್ಧತಿಯಂತೆ ಪಾದಚಾರಿಗಳಾಗಿ ಪ್ರಯಾಣಮಾಡುವ ಸರದಿ ಬಂದಿತು. ದಾಸರು ಪ್ರಾರಬ್ಧಾನುಭವವೇನಿದ್ದರೂ ಪಾದಚಾರಿಗಳಾಗಿ, ತಮ್ಮ ನಿಯಮ ಮೀರದೆ ಪ್ರಯಾಣ ಬೆಳೆಸಿದರು. ಶೀಳು ಹಾದಿಗಳ ಅರಣ್ಯದಲ್ಲಿ ನಡೆಯುತ್ತಿರುವಾಗ ದಾಸರ ಮತ್ತು ಅವರ ತಮ್ಮಂದಿರ ಮಾರ್ಗಗಳು ಬೇರೆಬೇರೆಯಾದವು. ಮುಂದು ಮುಂದೆ ನಡೆದ ತಮ್ಮಂದಿರು ತಂಗಿದ ಬಳಿಗೆ ಮಧ್ಯಾಹ್ನವಾದರೂ ಗೋಪಾಲದಾಸರು ಬರಲಿಲ್ಲ. ಚಿಕ್ಕ ತಮ್ಮ ಗುರುಗೋಪಾಲದಾಸರು (ದಾಸಪ್ಪದಾಸರು) ಕಾಲಾತೀತವಾದ್ದರಿಂದ ಅಣ್ಣಂದಿರೆಲ್ಲೋ ಉದರಶೂಲೆಗೊಳಗಾಗಿ ಶಯನಮಾಡಿರಬೇಕೆಂದು ಚಿಂತಾಕ್ರಾಂತರಾದರು. ತಾವು ಮುಂದೆ ನಡೆದು ಬಂದುದರಿಂದ ಹಿರಿಯರಿಗೆ ಅಪಚಾರಮಾಡಿದಂತಾಯಿತೆಂದೂ, ಇನ್ನು ಮುಂದೆ ಅಣ್ಣನವರಿಗೆ ಉದರಶೂಲೆ ಬರದಂತೆ ಪರಮಾತ್ಮನನ್ನು ಪ್ರಾರ್ಥಿಸಬೇಕೆಂದೂ ಸ್ನಾನಮಾಡಿ, ಕೆಳಕಂಡಂತೆ ಮಧ್ಯಾಹ್ನ ಕಾಲಕ್ಕೆ ತಕ್ಕ ಮಧ್ಯಮಾವತೀರಾಗದಲ್ಲಿ—

## ಮಧ್ಯಮಾವತಿ — ತ್ರಿಪುಟತಾಳ

ವಿಜಯವಿಠಲರಾಯ । ಅಸ್ಮದ್ಗುರ್ಗುರು ॥ಪ॥

ವಿಜಯರಾಯರ ಪ್ರಿಯಾ । ಸ್ತುತಿಶ್ರವಣವಂದನೆ
ಭಜನೆ ತಿಳಿಯದು ಜೀಯಾ । ಒಲಿದೆನ್ನ ಪಾಲಿಸು
ವಿಜಯಸಖ ಸುಖದಾಯಾ । ನಿರ್ಧೂತಮಾಯಾ ॥
ತ್ರಿಜಗದೀಶ್ವರ ತ್ರಿಗುಣವಿರಹಿತ
ವ್ರಜಜನಾರ್ತಿಹ ಸತತಶ್ರೀವಧೂ
ಭುಜಕೃತಾಶ್ರಿತ ಕುಂಕುಮಾಂಕಿತ
ನಿಜಪದಾಂಬುಜ ತೋರೊ ಮನದಲಿ ॥ಅ॥

ಇಂದ್ರಭವಮುಖಅಮರ । ತಾರಾನಿಕರದೊಳು
ಚಂದ್ರನಂತಿಹ ಧೀರ । ಪುರುಷೋತ್ತಮನೆ ಖಚ
ರೇಂದ್ರಸ್ಕಂಧ ವಿಹಾರ । ಮಮಸ್ವಾಮಿ ಸತತ ಫ
ಣೀಂದ್ರಶೈಲಾಗಾರಾ । ಸೌಂದರ್ಯಸಾರ ॥

ಚಂದ್ರಮಂಡಲಮಧ್ಯವರ್ತಿಯೆ
ಚಂದ್ರಮಂಡಲ ನಿಭ ಶುಭಾನನ
ಚಂದ್ರಸೋದರಿರಮಣ ಯದುಕುಲ
ಚಂದ್ರಗೋಪಾಂಗನೆಯರ ಹೃದಯ
ಚಂದ್ರಕಾಂತಿಯಮಣಿಸಮೂಹಕೆ
ಚಂದ್ರ ಮುನಿಹೃತ್ಕುಮುದಕೋರಕ
ಚಂದ್ರ ಚಕ್ರ ಗದಾಬ್ಜಧರ ಶತ
ಚಂದ್ರಪಾಣಿಸುಜನ ಚಕೋರಕೆ
ಚಂದ್ರ ಚಂದ್ರಕುಲಾಬ್ಧಿ ಚಂದ್ರನೆ
ಚಂದ್ರರವಿಸ್ಮರನಂತೆಪ್ರಭೋ ಅಜ
ಚಂದ್ರಶೇಖರನುತಚರಣನಖ
ಚಂದ್ರ ಚಂದ್ರಿಕೆ ತೋರೊಮನದಲಿ ॥೧॥

ಮೌನವ್ರತಶೃತಿಧ್ಯಾನ | ಅಹರಹಾಜಪವ್ಯಾ
ಖ್ಯಾನಧರ್ಮಸುದಾನ | ಅಜಿತೇಂದ್ರಿಯರಿಗಹಿ
ಕಾನುಭವಕಾರಣ | ಡಾಂಭಿಕರಿಗಿವು ಫಲ
ವೇನಕೊಡವೊನಿದಾನ | ಮೋಕ್ಷಕಿವೆಕಾರಣ

ನಾನು ಅಜಿತೇಂದ್ರಿಯನುಡಾಂಭಿಕ
ಈ ನುಡಿದಸಾಧನದೊಳೊಂದನು
ಕೂನ ಕಂಡು ಕೇಳಿಅರಿಯೆನು
ನೀನೊಲಿದು ರಕ್ಷಿಪ ಉಪಾಯವ
ನೀನೆಬಲ್ಲೆಯೊ ವಿಭುವೆ ಸುಖಮಯ
ಮೀನಮಂದರಧರ ಧರಾಧರ
ಶ್ರೀನೃಸಿಂಹ ಮಾಣವಕ ಭಾರ್ಗವ
ಜಾನಕೀಪತಿ ಕೃಷ್ಣ ಬುದ್ಧನ
ದೀನವತ್ಸಲಕಲ್ಕಿಹಯಮುಖ
ನಾನಾರೂಪಗುಣಾತ್ಮಕನೆ ಜಗ
ತ್ರಾಣನಿಖಿಳಬಿಂಬಾಹ್ವಯಕ್ರಿಯಾ
ಜ್ಞಾನಪಾಲಿಸು ಶ್ರೀನಿಕೇತನ ||೨||

ನಾನು ಮಾಡುವಸ್ನಾನ | ನಿಮಗಡೆ ವಿಚಿತ್ರ
ಸ್ನಾನಗಂಧಸುವಸನ | ಉಪವೀತಸ್ರಕುಆಚ
ಮಾನ ದೇಹವೈಭವನ | ಮನಸಿನಬಯಕೆಗಳು
ನಾನಾಮಣಿಗಳಾಭರಣ | ದೀಪವೆಸುಜ್ಞಾನ ||
ಕೋಣತ್ರಯಹೃದಯಾಬ್ಜಪೀಠವು
ಈ ನೆರೆದಜನರೇ ಆವರಣವು
ಪಾನ ಉಂಬನ್ನ ವೆನೈವೇದ್ಯವು
ಘ್ರಾಣೇಂದ್ರಿಯ ವಿಷಯಧೂಪವು
ಕಾಣಿಕೆ ಭಕುತಿ ಗತಿಪ್ರದಕ್ಷಿಣೆ ಶ
ಘನನಮನ ನುಡಿಯೆ ಮಹಾಜಪ

ಏನಕಂಡದುಕೇಳಿದದುಸುಖ
ಶ್ರೇಣಿನಿನ್ನಯಪ್ರತಿಮೆಗಳು ಜಗ
ತ್ರಾಣ ಗುರು ಗೋಪಾಲವಿಠಲ
ದೀನವತ್ಸಲಸಾತ್ವತಾಂಪತಿ
ನೀನಿರುತ ಒಲಿದೆನ್ನ ಪಾಲಿಸು ||೩||

ಎಂಬದಾಗಿ ಪ್ರಾರ್ಥನೆ ಮಾಡಿದರು. ಗುರುಗೋಪಾಲದಾಸರ ಪದಗಳಲ್ಲಿ ಇದು ಬಲು ಅರ್ಥವತ್ತಾದ ಪದವು; ಮಹಿಮಾ ಪ್ರದರ್ಶಕವಾದ ಪದವು.

ಸನಾತನು ಧರ್ಮರೀತ್ಯಾ ಸನ್ಯಾಸಿಯಾದ ವಿನಾ ಹಿರಿಯರಿಗೆ ಕಿರಿಯರು ಅನುಗ್ರಹ ಮಾಡಲು ಅಧಿಕಾರವಿರುವದಿಲ್ಲ ದಾಸಪ್ಪ ದಾಸರಿಗೆ ಗೋಪಾಲದಾಸರು ಅಣ್ಣಂದಿರು; ವಿದ್ಯಾಗುರುಗಳು; ಅಪರೋಕ್ಷಕ್ಕೂ ಗುರುಗಳು ಗೋಪಾಲದಾಸರಿಗೆ ವಿಜಯದಾಸರು ಗುರುಗಳು. ಅನುಗ್ರಹವು ಯಾವಾಗಲೂ ಗುರು ಮುಖದಿಂದ ಬರಬೇಕು. ಆದುದರಿಂದ ದಾಸಪ್ಪ ದಾಸರು 'ವಿಜಯವಿಠಲರಾಯ' ಎಂಬದಾಗಿ ಗುರುಗಳ ಗುರುಗಳೆನಿಸಿದ ವಿಜಯದಾಸರ ಉಪಾಸ್ಯಮೂರ್ತಿಯ ಹೆಸರಿನಿಂದ ಪ್ರಾರ್ಥನಾರೂಪವಾದೀ ಪದವನ್ನಾರಂಭಿಸಿದರು. ಉದರ ಶೂಲೆಯು ಉಷ್ಣತೆಯಿಂದುಂಟಾಗುವ ವ್ಯಾಧಿ. ಉಷ್ಣಯನ್ನು ಪರಿಹರಿಸಲು ಔಷಧವಾದರೂ ಶೀತಲವಾಗಿರಬೇಕು. ಈ ಪದದ ಪ್ರಥಮ ಚರಣದಲ್ಲಿ ಪರಮಾತ್ಮನನ್ನು ಚಂದ್ರನಿಗೆ ವಿಶೇಷಿಸಿ, ಮಾತು ಮಾತಿಗೆ ಚಂದ್ರ ಶಬ್ದವನ್ನು ಪ್ರಯೋಗಿಸಿರುವದರಿಂದ, ಸೀತ ಕಿರಣನು ಉಷ್ಣವ್ಯಾಧಿಯನ್ನು ಪರಿಹರಿಸುವನು. ಎರಡನೇ ಚರಣದಲ್ಲಿ ದಾಸಪ್ಪದಾಸರ ಸ್ವಾಹಂಕಾರ ಖಂಡನೆಯೂ ದಶಾವತಾರಗಳ ವರ್ಣನೆಯೂ ಬಂದಿರುವದು. ಮೂರನೇ ಚರಣದಲ್ಲಿ ಪದಕರ್ತರು ಅಣ್ಣಂದಿರಿಗೆ ಆಹ್ನಿಕ ಫಲವನ್ನು ಸಮರ್ಪಿಸಿರುವರು.

ಈ ಪದವನ್ನು ಹಾಡಿದಾಗ, ಗೋಪಾಲದಾಸರಿಗೆ ಇದ್ದಕ್ಕಿದ್ದ ಹಾಗೆ ಉದರದಲ್ಲಿದ್ದ ವ್ಯಾಧಿಯು ಮಾಯವಾಗಿ ಶೀತಲವಾಯಿತು. ಪರಮಾತ್ಮ ಸಾಕ್ಷಾತ್ಕಾರವಾಗಿ ವಿಚಿತ್ರಾನಂದ ಪ್ರಾಪ್ತಿಯಾಯಿತು. ಧ್ಯಾನಮಾಡದೆ ಭಗವದ್ದರ್ಶನಾನಂದವಾದುದನ್ನೂ, ಔಷಧವಿಲ್ಲದೆ ಉದರವೇದನೆಯು ಪರಿ

ಹಾರವಾದುದನ್ನೂ, ತಮ್ಮಂದಿರ ಪ್ರಾರ್ಥನೆಯಿಂದಾಯಿತೆಂದು ಗೋಪಾಲ ದಾಸರು ತಿಳಿದರು. ತಮ್ಮನ ಭಕ್ತಿ ಭಾವವನ್ನೂ ಪರಮಾತ್ಮನ ಕಾರುಣ್ಯ ವನ್ನೂ ಅಡಿಗಡಿಗೆ ಚಿಂತಿಸಿ ಪ್ರೇಮರಸದಲ್ಲಿ ಪರವಶರಾದರು. ಗುರು ಗೋಪಾಲದಾಸರು (ದಾಸಪ್ಪ ದಾಸರು) ಅಣ್ಣಂದಿರನ್ನು ಹುಡುಕುತ್ತಾ ಮರದಡಿಯಲ್ಲಿ ಆನಂದ ಭರಿತರಾಗಿರುವರನ್ನು ಕಂಡು, ತನ್ನ ಅಪರಾಧವನ್ನು ಕ್ಷಮಿಸಬೇಕೆಂದು ನಮಸ್ಕಾರಮಾಡಿದರು. ದಾಸರು,-'ತಮ್ಮ! ಉದರಶೂಲೆಯನ್ನು ಪರಿಹರಿಸಿದುದು ಅಪರಾಧವೆ? ಭಗವದ್ದರ್ಶನಮಾಡಿಸಿದುದು ಅಪರಾಧವೆ? ನಿನ್ನ ಉಪಕಾರವು ಮಹತ್ತರವಾಯಿತು. ನಾವು ಬಡಮಾತಾಪಿತೃಗಳ ಉದರದಲ್ಲಿ ಜನಿಸಿದೆವು. ಬಾಲ್ಯದಲ್ಲಿ ನಮ್ಮ ಜೀವನವು ದುಃಖಮಯವಾಯಿತು. ನಮಗಾಗಿ ನಮ್ಮ ತಾಯಿಯು ಪಟ್ಟ ಶ್ರಮವು ಅವರ್ಣನೀಯವಾಯಿತು. ಯಾರ ಋಣವನ್ನು ತೀರಿಸಿದರೂ ಕಾರುಣ್ಯಮಯಿಯಾದ ನಮ್ಮ ತಾಯಿಯ ಋಣವನ್ನು ಮಾತ್ರ ನಾವು ತೀರಿಸಲಾರೆವು 'ನಮಾತುಃ ಪರದೇವತಾ' ಎಂಬ ಅಮೃತವಾಣಿಯನ್ನು ಹಿರಿಯರು ನಮಗಾಗಿ ರಚನೆಮಾಡಿ ಕೊಟ್ಟಂತೆ ಕಾಣುತ್ತದೆ. ಜನ್ಮಾಂತರ ಸುಕೃತ ವಿಶೇಷದಿಂದ ನಾಲ್ವರು ಸಹೋದರರಾದ ನಮ್ಮಲ್ಲಿ ಮೂವರಿಗೆ ಅಪರೋಕ್ಷಜ್ಞಾನ ದೊರೆಯಿತು. ಬಾಲ್ಯದಲ್ಲೇ ನನ್ನಲ್ಲಿ ಕೃಪೆ ಮಾಡಿದ ಗಾಯಿತ್ರಿಮಾತೆಯ ಕಾರುಣ್ಯವನ್ನು ಏನೆಂದು ವರ್ಣಿಸಲಿ? ಆಕೆಯ ಅನುಗ್ರಹಬಲದಿಂದಲ್ಲವೇ ನಮಗೀ ಶ್ರೀಮಂತಿಕೆ ದೊರೆಯಿತು! ಚಿಕ್ಕ ತಮ್ಮ ರಂಗಪ್ಪನ ಯೋಚನೆಯು ನನಗೆ ಬಹಳವಾಗಿರುವದು. ನಮ್ಮ ಮನೆತನವು ಅವನಿಂದಲೇ ಬೆಳೆಯಬೇಕು. ಅವನಿನ್ನೂ ಸಂಸಾರಿಯಾಗಿರುವದರಿಂದ ಅವನನ್ನು ಪ್ರಾಪಂಚಿಕದಲ್ಲಿಟ್ಟಿರಬೇಕಾಗಿದೆ. ತಮ್ಮಾ ತಿರುಪತಿಯಾತ್ರೆಗೆ ನೀನು ಮಾಡಿದ ಸಹಾಯವು ಅಪಾರವಾದುದು. ಆ ವೆಂಕಟೇಶನೇ ಸರ್ವರಕ್ಷಕನು' ಎಂದು ನುಡಿದು, ತಮ್ಮನು ತಂದಿದ್ದ ಪಾಯಸವನ್ನು ಸವಿದು ಪ್ರಯಾಣ ಮಾಡಿದರು.



ಧ್ಯಾನವೆಂಬುವದು ಸಕಲ ಸಿದ್ಧಿಗಳ ಸೋಪಾನವು. ಧ್ಯಾನದಿಂದ ಪ್ರಪಂಚದ ಅಂತರ್ಬಹಿಸ್ಥಿತಿಗಳು ಗೋಚರವಾಗುವವು. ಪ್ರಾರ್ಥನಾ ಮಂತ್ರಗಳನ್ನುಚ್ಚಾರಿಸುವದೇ ಧ್ಯಾನವೆನಿಸುವದಿಲ್ಲ. ಧ್ಯಾನವು ಮಂತ್ರ ಸ್ತೋತ್ರಗಳ ರೂಪದಲ್ಲಿ ಮಾತ್ರವಿಲ್ಲ. ಅದು ವ್ಯಕ್ತಿಯು ಮಾಡುವ ಸತ್ಯ ಶೋಧನೆಯಾಗಿರುವದು. ಮಹಾತ್ಮರು ಉದಕ ತತ್ವವನ್ನು ಧ್ಯಾನಿಸಿ ಸ್ನಾನ ಮಾಡಿದರೆ ಉದಕವೃದ್ಧಿಯಾಗುವದು. ಅವರು ಅಗ್ನಿತತ್ವವನ್ನು ಚಿಂತಿಸಿದ ರೆಂದರೆ ಅವರೇ ಅಗ್ನಿಗೋಳದಂತೆ ಕಾಣಿಸುವರು. ಧ್ಯಾನವು ವ್ಯಕ್ತಿಯನ್ನು ಭೂಪಥದಿಂದ ಸ್ವರ್ಗಪಥಕ್ಕೇರಿಸುವದು; ದುಃಖದಿಂದ ಶಾಂತಿಸಾಮ್ರಾಜ್ಯಕ್ಕೆ ಕರೆದೊಯ್ಯುವದು. ಇಂತಹ ಸ್ವಾಭಾವಿಕ ಸಾಧನಾ ಮಾರ್ಗವನ್ನು ತಿಳಿಯದವರು ಅತಿಮಾನುಷವೆನ್ನುವರು. ತಮಗೆ ತಿಳಿಯದ ಮಾತ್ರಕ್ಕೇ ಧ್ಯಾನದಿಂದುಂಟಾಗುವ ಫಲಪರಿಣಾಮಗಳನ್ನು ಅವರು ಸುಳ್ಳೆಂದು ಜರಿಯುವದಕ್ಕೂ ಹಿಂದೆಗೆಯುವದಿಲ್ಲ, ಇರಲಿ.—

ಅತ್ತ ಗೋಪಾಲದಾಸರ ಸಾನ್ನಿಧ್ಯದಿಂದ ಪಂಢರಪುರದಲ್ಲಿ ಭಕ್ತಜನರಿಗೆ ಮಹೋತ್ಸವವಾದಂತಾಯಿತು. ಅದೇ ಕಾಲದಲ್ಲಿ ಅದವಾನಿಯಿಂದ ದಿವಾನ ಪಂಗನಾಮದ ತಿಮ್ಮಣ್ಣಯ್ಯನವರು ಯಾತ್ರಿಕರಾಗಿ ಶ್ರೀ ಕ್ಷೇತ್ರಕ್ಕೆ ಬಂದರು. ಅಯ್ಯನವರಿಗೂ ಪಟ್ವವರ್ಧನ ಸಂಸ್ಥಾನಗಳ ಸರದಾರರಿಗೂ ಸ್ನೇಹವಿತ್ತು. ಆ ಸರದಾರರೆಲ್ಲರೂ ಪಾಂಡುರಂಗನ ಭಕ್ತರಾಗಿ, ತಾವು ಪಂಢರಪುರಿಗೆ ಬಂದಾಗ ವಾಸಮಾಡಲು ಪ್ರತ್ಯೇಕ ಮನೆಗಳನ್ನು ಕಟ್ಟಿಕೊಂಡಿರುವುದು, ಈಗಲೂ ಶ್ರೀ ಕ್ಷೇತ್ರದಲ್ಲಿ ಕಂಗೊಳಿಸುತ್ತಿರುವದು. ಅಯ್ಯನವರ ಲೌಕಿಕ ವರ್ಚಸ್ಸವು ಸರದಾರರನ್ನೂ ಗೋಪಾಲದಾಸರ ಕೀರ್ತನಕ್ಕೆ ಆಕರ್ಷಣಮಾಡಿತು. ಇಲ್ಲಿನವರೆಗೆ ಕರ್ನಾಟಕದಂತೆ ವ್ಯವಸ್ಥಿತವಾದ ಕೀರ್ತನ ಪದ್ಧತಿಯು ಮಹಾರಾಷ್ಟ್ರದಲ್ಲಿರಲಿಲ್ಲ. ಮಹಾರಾಷ್ಟ್ರ ಭಕ್ತರ ಕೀರ್ತನವು ಮಾತಾಡಿದಂತೆ ಓವಿಗಳನ್ನು ಹೇಳುವದು, 'ವಿಠಲ ವಿಠಲ' ಎಂದು ನಾಮಭಜನೆ ಮಾಡುತ್ತಾ ಕರತಾಳಪೂರ್ವಕ ನರ್ತನಮಾಡುವದು, ಇಷ್ಟರಿಂದ ಪೂರ್ತಿಯಾಗುತ್ತಿತ್ತು. ಭಕ್ತಿಪಾಂಡಿತ್ಯಗಳೆರಡೂ ಕಲೆತ ಕೀರ್ತನವು ಆ ದೇಶೀಯರಿಗೆ ಆ ಭಾಷೆಯಲ್ಲಿ ಅತ್ಯಂತ ಅಪೂರ್ವವಾಗಿತ್ತು. ಗೋಪಾಲದಾಸರ ಕೀರ್ತನಶ್ರವಣದಿಂದ ಶ್ರೀಮಂತ ಸರದಾರರು

ಅತ್ಯಂತ ಸಂತುಷ್ಟರಾಗಿ, ಮರಾಠಿಯಲ್ಲೂ ಇದೇ ಪ್ರಕಾರದ ಕೀರ್ತನಪದ್ಧತಿಯನ್ನು ಕಾಲಾಂತರದಲ್ಲಿ ಆಚರಣೆಗೆ ಬರುವಂತೆ ಮಾಡಿಕೊಂಡರು.

ಗೋಪಾಲದಾಸರು ಪಂಢರಪುರದಿಂದ ಕೊಲ್ಹಾಪುರಕ್ಕೂ, ಅನಂತರ ಮೈಸೂರುಸೀಮೆಯ ಶಿವಮುಗ್ಗಿಯ ಮಾರ್ಗವಾಗಿ ಉಡುಪಿಗೂ, ಪ್ರಯಾಣ ಮಾಡಿದರು.

ಆ ಕಾಲದಲ್ಲಿ ಮಂಡಗದ್ದೆಯ (Shimoga Dist) ಭೀಮನೆಂಬ ತುಂಟಮನುಷ್ಯನು ಯಾತ್ರಿಕರಿಗೆ ಕಂಟಕನಾಗಿ ಅವರ ಸುಲಿಗೆಮಾಡಿ ಜೀವಿಸುತ್ತಿದ್ದನು. ಮಂಡಗದ್ದೆಯ ಮಾರ್ಗದಲ್ಲಿ ಯಾತ್ರಿಕರನ್ನು ಕಂಡಕೂಡಲೆ, ವಿನಯಸಂಪನ್ನನಾಗಿ ಅವರ ಆದರಾತಿಥ್ಯ ಮಾಡುವನಂತೆ ನಟನೆಮಾಡುತ್ತಿದ್ದನು. ಮೋಸವರಿಯದ ಜನರು ಅವನ ಉಪಚಾರಕ್ಕೆ ಮರುಳಾಗಿ ತಮ್ಮ ದ್ರವ್ಯರಕ್ಷಣೆಯ ಭಾರವನ್ನು ಭೀಮನಿಗೆ ವಹಿಸಿಬಿಡುತ್ತಿದ್ದರು. ಯಾತ್ರಿಕರನ್ನು ನೋಡಿ ಭೀಮನು—'ಸ್ವಾಮಿ ಇದು ಕಳ್ಳರ ದಾರಿ; ಘಾಟಿಯನ್ನಿಳಿಯುವಾಗ ನೀವು ಜಾಗರೂಕರಾಗಿರಬೇಕು; ನನ್ನ ಕಡೆಯ ಜನರ ವಶಕ್ಕೆ ನಿಮ್ಮ ದ್ರವ್ಯವೇನಿದ್ದರೂ ಕೊಟ್ಟರೆ, ನಿಮಗೆ ಪ್ರಾಣಾಪಾಯವಾಗದಂತೆ ಅವರು ನಿಮ್ಮನ್ನು ರಕ್ಷಿಸಿ ಘಟ್ಟವಿಳಿದಕೂಡಲೆ ನಿಮಗೆ ಕೊಡುವರು; ನೀವು ನನ್ನ ಸೇವಕರಿಗೆ ಏನಾದರೂ ತಿಳಿದ ಬಹುಮಾನ ಮಾಡಬಹುದು' ಎಂದು ನಂಬಿಸಿ ಕಡೆಗೆ ಮೋಸಮಾಡಿಬಿಡುತ್ತಿದ್ದನು. ತನ್ನ ಕೈಗೆ ಸಿಗದೆ ಸ್ವತಂತ್ರವಾಗಿ ಪ್ರಯಾಣಮಾಡಿದ ಜನರಮೇಲೆ ಕಾವಲಿಟ್ಟು ಹೊಡೆದು ಬಡಿದು, ಅವರ ಸರ್ವಸ್ವವನ್ನೂ ಅಪಹರಿಸುತ್ತಿದ್ದನು. ಘಟ್ಟಪ್ರಾಂತ್ಯದಲ್ಲಿ ಭೀಮನು ಜನರ ಕೊಲೆಮಾಡಿ ದರಿಗಳಲ್ಲಿ ತಳ್ಳಿದರೂ ಪತ್ತೆಯಾಗುತ್ತಿರಲಿಲ್ಲ. ದಂಡಪಾಣಿಗಳಾಗಿಯೂ, ಖಡ್ಗಧಾರಿಗಳಾಗಿಯೂ, ತಕ್ಕ ಸಿಬ್ಬಂದಿಯೊಡನೆ ಯಾತ್ರೆಮಾಡುವರಿಗೆ ಭೀಮನ ಅಂಜಿಕೆಯಿರುತ್ತಿರಲಿಲ್ಲ.

ಗೋಪಾಲದಾಸರ ಜೊತೆಯಲ್ಲಿ ನೂರಾರು ಜನ ಯಾತ್ರಿಕರು ಅಶ್ವಾರೂಢರಾಗಿ ಪ್ರಯಾಣಮಾಡುತ್ತಿದ್ದುದರಿಂದ, ಅವರನ್ನು ಎದುರಿಸಲು ಭೀಮನಿಗೆ ಸಾಧ್ಯವಾಗಲಿಲ್ಲ. ದಾಸರ ಕಡೆಯವರಿಗೆ ಭೀಮನ ಆತಿಥ್ಯದ ಅವಶ್ಯಕತೆಯಿರಲಿಲ್ಲ. ದಾಸರಲ್ಲೂ ಅನುಯಾಯಿಗಳಲ್ಲೂ ದ್ರವ್ಯಸಂಪತ್ತಿಗೆ ಕಡಿ

ಮೆಯಿರಲಿಲ್ಲ. ಭೀಮನು ಹೇಗಾದರೂ ಮಾಡಿ ಈ ದೊಡ್ಡ ಗುಂಪನ್ನು ಸುಲಿಯಬೇಕೆಂದು ಮೂರು ಕಳ್ಳಗಂಡಿಗಳಲ್ಲಿ ಬಲವಾದ ಕಾವಲಿರಿಸಿದನು. ತಾನು ಸಾತ್ವಿಕ ಮನುಷ್ಯನಂತೆ ದಾಸರ ಜೊತೆಯಲ್ಲಿ ಪ್ರಯಾಣಮಾಡಿದನು. ದಾಸರು ಬೀಡಿಕೆಮಾಡಿದ ಸ್ಥಳಗಳಲ್ಲಿ ತಾನೂ ಬೀಡಿಕೆಮಾಡಿದನು. ಅವರಲ್ಲಿ ದೊರೆತ ಪ್ರಸಾದವನ್ನೇ ಭುಜಿಸಿದನು. ದಾಸರ ಭಜನೆಯ ಕಾಲದಲ್ಲಿ ತಕ್ಕ ಭಕ್ತಿಯನ್ನು ತೋರಿಸುತ್ತಾ ಕುಳಿತನು. ಇವನ ಚರ್ಯವನ್ನು ನೋಡಿ ಗೋಪಾಲದಾಸರು ಚಿಕ್ಕತಮ್ಮ ದಾಸಪ್ಪದಾಸರೊಡನೆ—

ಗೋಪಾಲದಾಸರು—ತಮ್ಮಾ ನೋಡಿದೆಯಾ, ಈ ಮಾರೀಚನನ್ನ !

ದಾಸಪ್ಪದಾಸರು—ನೋಡಿದೆ, ಬಲು ತಕ್ಕನಾಗಿ ಕಾಣುತ್ತಾನೆ.

ಗೋಪಾಲದಾಸರು—ಇವನೇ ಆ ಮುಂಚಗದ್ದೆಯ ಭೀಮ! ಯಾತ್ರಿಕರಿಗೆ ಔತಣಮಾಡುತ್ತಾನೆ. ಅನಂತರ ಕಳ್ಳಗಂಡಿಯಲ್ಲಿ ಕಾದಿದ್ದು ಇದ್ದಬದ್ದದ್ದನ್ನು ಕಸಿದುಕೊಳ್ಳುತ್ತಾನೆ. ಈಗ ನಮ್ಮೆಲ್ಲರ ಸುಲಿಗೆಮಾಡಲು ಹೊಂಚುಹಾಕಿದ್ದಾನೆ.

ದಾಸಪ್ಪದಾಸರು—ಇರಬಹುದು, ನಮ್ಮ ಜೊತೆಯಲ್ಲಿ ಹೆಂಗಸರು ಮಕ್ಕಳಿದ್ದಾರೆ, ಒಡವೆ ವಸ್ತುಗಳಿವೆ. ಜನರ ಬಳಿಯಲ್ಲಿ ಸಾಕಷ್ಟು ಹಣವಿದೆ. ಪಾರಾಗುವ ಬಗೆಹೇಗೆ ?

ಗೋಪಾಲದಾಸರು—ಸರ್ವಜ್ಞರನ್ನು (ಮಧ್ವಾಚಾರ್ಯರನ್ನು) ಹಿಂಬಾಲಿಸಿದ ಕಳ್ಳರ ಕಥೆಯೇ ಈ ಭೀಮನದಾಗುವದು. ಅದಕ್ಕೆ ಯೋಚನೆಯೇಕೆ ?

ದಾಸರ ಪರಿವಾರವು ಕಣಿವೆಯ ಇಕ್ಕಟ್ಟಾದ ಸ್ಥಳವನ್ನು ಸೇರಿತು. ಭೀಮನು ಎಲ್ಲರಿಗಿಂತ ಮುಂದೆ ಬಂದು ತನ್ನ ನೂರಾರು ಕಳ್ಳರೊಡನೆ ಸೇರಿದನು. ಒಳ್ಳೇ ಬೇಟೆ ಸಿಕ್ಕಿತು ಬಿಡಬೇಡಿರಿ ; ಹೆಂಗಸರು ಮಕ್ಕಳೆಂದು ನೋಡಬೇಡಿರಿ ; ಒಬ್ಬೊಬ್ಬಳಮೇಲೆ ಸೇರುಗಟ್ಟಳೆ ಭಂಗಾರವಿದೆ; ಬಲವಾಗಿ ಒಬ್ಬಿಬ್ಬರನ್ನು ಪ್ರಹರಿಸಿದಿರೆಂದರೆ ಮಿಕ್ಕವರು ಸುಲಭವಾಗಿ ಪ್ರಾಣಭೀತಿಯಿಂದ ಎಲ್ಲವನ್ನೂ ಒಪ್ಪಿಸುವರು; ಎಂದು ಆ ಪಾಪಿಯು ತನ್ನ ಅನು

ಯಾಯಿಗಳನ್ನು ಪ್ರೋದ್ಬಲಗೊಳಿಸಿದನು. ಕುದುರೆಯ ಮೇಲೆ ಕುಳಿತು ಮುಂದೆ ಬರುತ್ತಿರುವ ದಾಸರನ್ನು ನಿಲ್ಲಿರೆಂದು ಹೂಂಕರಿಸಿ ತಡೆದನು.

ದಾಸರು—ಏನು ಭೀಮ! ನಮ್ಮೆಲ್ಲರ ಸುಲಿಗೆ ಮಾಡಲು ಬಂದೆಯಾ ಎಂದರು. ಭೀಮನು ಇವರಾರು ನನ್ನನ್ನು ಗುರ್ತಿಸಿ ಮಾತನಾಡುವರೆಂದು ಚಕಿತನಾದನು. ದಾಸರ ಮುಖವನ್ನು ನೋಡಿ,ಯಾರೋ ಎಂದು, ಮೇಲೇರಿ ಬಂದನು. ಭೀಮನಿಗೂ ಅವನ ಅನುಚರರಿಗೂ, ಜನರ ಮೇಲೆ ಪ್ರಯೋಗಿಸಲು ದಂಡವನ್ನೆತ್ತಿದರೆ ಎತ್ತಿದ ಕೈಗಳು ಸೆಟೆದು ನಿಂತು ಇಳಿಸಲು ಬರದಂತಾದವು. ನಿಂತವರು ನಿಂತಂತೆ ನಿಶ್ಚೇಷ್ಟರಾದರು. ದಾಸರು ತಮ್ಮ ಕಡೆಯುವರನ್ನು ಹೆದರಬೇಡಿರೆಂದು ಆ ಶ್ವಾ ಸ ವಿ ತ್ತು ಮುಂದರಿಸಿದರು. ಭೀಮನು ತನ್ನಂತೆ ತನ್ನವರೂ ಮುಗ್ಧರಾದುದನ್ನು ನೋಡಿ, ಹೀಗೇಕಾಯಿತೆಂದು ಒಬ್ಬೊಬ್ಬರೊಡನೆ ಪ್ರಶ್ನೆ ಮಾಡಿದನು. ಯಾರಿಂದಲೂ ಸರಿಯಾದ ಉತ್ತರ ಬರದಿರುವದನ್ನು ನೋಡಿ,ಹೆಚ್ಚು ಸಂಖ್ಯೆಯ ಯಾತ್ರಿಕರಾದ್ದರಿಂದ ತಮ್ಮೆಲ್ಲರಿಗೂ ಕ್ಷ ಣ ಕಾ ಲ ಈ ಸ್ಥಿತಿಯಾಗಿರಬೇಕೆಂದು ಧೈರ್ಯತಾಳಿದನು. ಏನಾದರೂ ಈ ಗುಂಪನ್ನು ಬಿಡಬಾರದೆಂದು ಕಳ್ಳರನ್ನು ಹುರಿಗೊಳಿಸಿ, ಮತ್ತೊಂದು ಕಣಿವೆಯ ಬಳಿ ಒಳದಾರಿಯಿಂದ ಪ್ರಯಾಣ ಮಾಡಿ ಸಜ್ಜಾಗಿ ನಿಂತನು. ದಾಸರು ತಮ್ಮನನ್ನು ಕುರಿತು ನಿಮಗೆಲ್ಲಾ ಮತ್ತೊಮ್ಮೆ ಮಾರೀಚನ ದರ್ಶನವಾಗುವದೆಂದರು. ಯಾತ್ರಿಕರು ಹಿಂದಾದಂತೆಯೇ ಮುಂದೂ ಕಳ್ಳರಗತಿಯಾದೀತೆಂದು ನಿರ್ಭಯರಾಗಿ ಮಾತಾಡಿದರು. ದಾಸರು ಹಿಂದಿನಂತೆಯೋ ಮತ್ತೂ ಅಧಿಕವಾಗಿಯೋ ಏನಾದರಾಗುವದೆಂದರು. ಯಾತ್ರಿಕರು ಕಣಿವೆಯ ಬಳಿಗೆ ಬರಲು ಭೀಮನು ಜೀವದ ಹಂಗು ತೊರೆದು ಗುಂಪಿನ ಮೇಲೆ ಬಿದ್ದನು. ಕಳ್ಳರು ದಂಡಗಳನ್ನೆತ್ತಲಾರದೆ ಕುರುಡರಾಗಿ ತಡವರಿಸುತ್ತಾ ನಿಂತು ಬಿಟ್ಟರು. ಭೀಮನು ಇ ವ ರೇ ನೋ ಕಣ್ಣು ಕಟ್ಟು ಮಾಡಿದರೆಂದು ಚಿಂತಾತುರನಾಗಿ, ಮುಹೂರ್ತ ಕಾಲಾನಂತರ ಎಲ್ಲರೂ ತಮ್ಮ ಸ್ಥಿತಿ ಹೀಗೇಕೆ ಆ ಯಿ ತೆಂ ದು ಚರ್ಚಿಸುತ್ತಿರುವರೊಡನೆ ಮಾತಾಡುತ್ತಾ, ಮತ್ತೆ ಧೈರ್ಯಮಾಡಿ ಮೂರನೇ ಸ್ಥಳದಲ್ಲಿ ಇದೇ ಕಡೆಯ ಸಾಹಸವೆಂದು ಕಾದುನಿಂತನು. ಈ ಸಲದ ಭೀಮನ ಅಪಜಯವು ಜನ್ಮದಲ್ಲಿ ಮರೆಯದಂತಾಯಿತು. ಭೀಮನೂ ಅವನ ಅನುಯಾಯಿ ಕ ಳ್ಳ ರೂ ಎತ್ತಿದ

ಕೈಯನ್ನು ಇಳಿಸಲಾರದೆ, ಮಾತಾಡಲು ನಾಲಿಗೆಬಾರದೆ, ನೋಡಲು ಕಣ್ಣು ಕಾಣದೆ, ಸ್ಥಾಣುಗಳಂತೆ ನಿಶ್ಚೇಷ್ಟರಾದರು. ದಿನವೆಲ್ಲಾ ಕಳೆದರೂ ಕಳ್ಳರಿಗೆ ಕೈಯಿಳಿಸಲು ಬರಲಿಲ್ಲ; ಹಿಂದಿನಂತೆ ಕಣ್ಣು ಕಾಣಲಿಲ್ಲ; ಸಾಲದುದಕ್ಕೆ ನಾಲಿಗೆಯ ವ್ಯಾಪಾರವು ನಿಂತು ಹೋಯಿತು. ಕಣಿವೆಗೆ ಸಮೀಪದಲ್ಲಿ ದಾಸರು ಬಿಡಾರ ಮಾಡಿ ಆ ದಿನದ ಪೂಜೆ ಭೋಜನಗಳನ್ನು ನೆರವೇರಿಸಿದರು. ರಾತ್ರಿ ಭಜನೆಯು ಪದ್ಧತಿಯಂತೆ ಉದ್ರೇಕಜನಕವಾಗಿ ನಡೆಯಿತು. ದಾಸರ ಸಂಗಡಿಗರು ಕಳ್ಳರಿಗಾದ ಗತಿಯನ್ನು ನೆನೆನೆನೆದು ಆಶ್ಚರ್ಯಭರಿತರಾದರು. ದಾಸರಿಂದ ಪರಿಣಾಮವಾಯಿತೆಂದು ತಮಗೆ ತಾವೇ ಧನ್ಯವಾದ ಮಾಡಿಕೊಂಡರು.

ನಿಂತ ಬಳಿಯಲ್ಲಿ ನಿಂತ ಭೀಮನೇ ಮೊದಲಾದ ಕಳ್ಳರು ಆಹಾರವಿಲ್ಲದೆ ಪರಿತಪಿಸುತ್ತಾ, ರಾತ್ರಿ ಭಜನೆಯಾಗುವ ಸಪ್ಪಳವನ್ನು ಕೇಳಿ, ದಾಸರಿದ್ದ ಬಳಿಗೆ ತಡವರಿಸಿಕೊಂಡು ಬಂದು ಶರಣಾಗತರಾದರು. ಎಲ್ಲರ ಯಜಮಾನ ಭೀಮನು,-'ಸ್ವಾಮಿ, ತಾವು ಸತ್ಪುರುಷರು. ನಮ್ಮ ಕಣ್ಣು ನಾಲಿಗೆಗಳನ್ನನುಗ್ರಹಿಸಬೇಕು; ನಮ್ಮ ಅಪರಾಧಗಳನ್ನು ಕ್ಷಮಿಸಬೇಕು;' ಎಂದು ಸಂಜ್ಞೆಯಿಂದ ಬೇಡಿಕೊಂಡನು. ದಾಸರು—'ಪಾಪಿಗಳಿರಾ! ಎಷ್ಟು ಜನ ಯಾತ್ರಿಕರ ಸುಲಿಗೆ ಮಾಡಿ, ಎಷ್ಟು ಜನರ ಕೊಲೆ ಮಾಡಿ ಇನ್ನೂ ಜೀವಿಸಿರುವಿರಿ. ನಾನು ಬ್ರಾಹ್ಮಣನಾದುದರಿಂದ ನಿಮ್ಮನ್ನು ಕ್ಷಮಿಸಬೇಕಾಗಿದೆ. ಜನ್ಮದಲ್ಲಿ ಇಂಥಾ ಪಾಪಕಾರ್ಯಗಳನ್ನು ಮಾಡುವದಿಲ್ಲವೆಂದು ಪ್ರಮಾಣ ಮಾಡಿದರೆ, ನೀವು ಮೊದಲಿನಂತಾಗುವಿರಿ' ಎಂದು ಜಬರಿಸಿದರು. ಪಾಪಿಗಳ ದುಃಖಸ್ಥಿತಿಯನ್ನು ನೋಡಿ ಕನಿಕರ ತಾಳಿ ಅವರಲ್ಲಿ ಕೃಪೆ ಮಾಡಿದರು. ಕಳ್ಳ ಭೀಮನು—ಸ್ವಾಮಿ, ಬಾಲ್ಯಪ್ರಭೃತಿ ಯಾತ್ರಿಕರ ಸುಲಿಗೆ ಮಾಡಿ ಜೀವಿಸಿದ ನಮ್ಮ ಮುಂದಿನ ಜೀವನೋಪಾಯವೇನೆಂದು ಮೊರೆಯಿಟ್ಟನು. ದಯಾಮಯರಾದ ದಾಸರು, ಯಾರೋ ಪೂರ್ವ ರಾಜರು ಭೂಗತ ಮಾಡಿದ್ದ ನಿಕ್ಷೇಪವನ್ನು ತೋರಿಸಿ, ಆ ಧನದಿಂದ ಬದುಕಿರೆಂದು ಹರಸಿ ಕಳುಹಿಸಿದರು. ಭೀಮನಾದಿಯಾದ ಕಳ್ಳರಿಗೆ ಇದೊಂದು ಪರಿಯ ಅನುಗ್ರಹವೇ ಆಯಿತು. ಹರಿದಾಸರ ದಯಾಮಯ ಮನಃಸ್ಥಿತಿಯು ಇಂಥಾದ್ದು.

ಗೋಪಾಲದಾಸರು ಉಡುಪೀಕ್ಷೇತ್ರದಲ್ಲಿದ್ದು ಹಾಡಿದ ದೇವರನಾಮ ಸುಳಾದಿಗಳು ಅತ್ಯಂತ ಸ್ಫೂರ್ತಿದಾಯಕಗಳಾಗಿವೆ. ಮಹಿಮಾದ್ಯೋತಕಗಳಾಗಿವೆ. ದಾಸರು ಉತ್ತನೂರಿಗೆ ಬಂದನಂತರ ಗುರುಗಳಾದ ವಿಜಯರಾಯರ ಆಜ್ಞಾನುಸಾರ ಮಾನವಿಯ ನರಸಿಂಹಾಚಾರ್ಯರಿಗೆ (ಭಾವೀ ಜಗನ್ನಾಥದಾಸರು)ಪ್ರಾಪ್ತವಾಗಿದ್ದ ಉದರಶೂಲೆಯನ್ನು ಪರಿಹರಿಸಿ, ತಿರುಪತಿಯಲ್ಲಿ ಮತ್ತೆ ತಮ್ಮ ಆಯುಸ್ಸಿನಲ್ಲಿ ನಲವತ್ತು ವರ್ಷಗಳ ಆಯುರ್ದಾನಮಾಡಿ, ಹರಿದಾಸ ಪದವಿಯಲ್ಲಿ ದೀಕ್ಷೆಯನ್ನನುಗ್ರಹಿಸಿದರು. ಈ ಚರಿತ್ರೆಯು ಮುಂದೆ ಜಗನ್ನಾಥದಾಸರ ವೈಭವ ವಿವರಣೆಯಲ್ಲಿ ವಿಸ್ತಾರವಾಗಿ ಬರುವದರಿಂದ ಇಲ್ಲಿ ವಿಸ್ತರಿಸುವದಿಲ್ಲ.

ಜಗನ್ನಾಥದಾಸರಿಗೆ ರೋಗನಿವಾರಣೆಮಾಡಿ ಆಯುರ್ದಾನಮಾಡಿದ ನಂತರ, ಆ ಉದರಶೂಲೆಯು ಪ್ರಾರಬ್ಧರೂಪವಾಗಿ ಗೋಪಾಲದಾಸರನ್ನು ಬಾಧಿಸತೊಡಗಿತು. ಆ ಕಾರಣದಿಂದ ದಾಸರು ಪ್ರಾತಃಕಾಲ ಹತ್ತು ಘಂಟೆಯೊಳಗೆ ಭೋಜನಮಾಡಲಾರಂಭಿಸಿದರು. ಇಷ್ಟಾದರೂ, ಏನಾದರೂ ಬಲವತ್ತರ ಕಾರಣಗಳಿಂದ ಭೋಜನ ಮಾಡುವದು ತಡವಾದರೆ ಉದರಶೂಲೆಗೊಳಗಾಗಿ ದಾಸರು ದುಃಖಾನುಭವ ಮಾಡುತ್ತಿದ್ದರು. ಹೀಗಿರಲು ತಿರುಪತಿಯ ಬ್ರಹ್ಮೋತ್ಸವಕ್ಕೆ ಪದ್ಧತಿಯಂತೆ ಪಾದಚಾರಿಗಳಾಗಿ ಪ್ರಯಾಣಮಾಡುವ ಸರದಿ ಬಂದಿತು. ದಾಸರು ಪ್ರಾರಬ್ಧಾನುಭವವೇನಿದ್ದರೂ ಪಾದಚಾರಿಗಳಾಗಿ, ತಮ್ಮ ನಿಯಮ ಮೀರದೆ ಪ್ರಯಾಣ ಬೆಳೆಸಿದರು. ಶೇಷಾದ್ರಿಗಳ ಅರಣ್ಯದಲ್ಲಿ ನಡೆಯುತ್ತಿರುವಾಗ ದಾಸರ ಮತ್ತು ಅವರ ತಮ್ಮಂದಿರ ಮಾರ್ಗಗಳು ಬೇರೆಬೇರೆಯಾದವು. ಮುಂದು ಮುಂದೆ ನಡೆದ ತಮ್ಮಂದಿರು ತಂಗಿದ ಬಳಿಗೆ ಮಧ್ಯಾಹ್ನವಾದರೂ ಗೋಪಾಲದಾಸರು ಬರಲಿಲ್ಲ. ಚಿಕ್ಕ ತಮ್ಮ ಗುರುಗೋಪಾಲದಾಸರು (ದಾಸಪ್ಪದಾಸರು) ಕಾಲಾತೀತವಾದ್ದರಿಂದ ಅಣ್ಣಂದಿರೆಲ್ಲೋ ಉದರಶೂಲೆಗೊಳಗಾಗಿ ಶಯನಮಾಡಿರಬೇಕೆಂದು ಚಿಂತಾಕ್ರಾಂತರಾದರು. ತಾವು ಮುಂದೆ ನಡೆದು ಬಂದುದರಿಂದ ಹಿರಿಯರಿಗೆ ಅಪಚಾರಮಾಡಿದಂತಾಯಿತೆಂದೂ, ಇನ್ನು ಮುಂದೆ ಅಣ್ಣನವರಿಗೆ ಉದರಶೂಲೆ ಬರದಂತೆ ಪರಮಾತ್ಮನನ್ನು ಪ್ರಾರ್ಥಿಸಬೇಕೆಂದೂ ಸ್ನಾನ ಮಾಡಿ, ಕೆಳಕಂಡಂತೆ ಮಧ್ಯಾಹ್ನ ಕಾಲಕ್ಕೆ ತಕ್ಕ ಮಧ್ಯಮಾವತೀರಾಗದಲ್ಲಿ—

## ಮಧ್ಯಮಾವತಿ — ತ್ರಿಪುಟತಾಳ

ವಿಜಯವಿಠಲರಾಯ । ಅಸ್ಮದ್ಗುರೋರ್ಗುರು ||ಪ||

ವಿಜಯರಾಯರ ಪ್ರಿಯಾ । ಸ್ತುತಿಶ್ರವಣವಂದನೆ
ಭಜನೆ ತಿಳಿಯದು ಜೀಯಾ । ಒಲಿದೆನ್ನ ಪಾಲಿಸು
ವಿಜಯಸಖ ಸುಖದಾಯಾ । ನಿರ್ಧೂತಮಾಯಾ ||
ತ್ರಿಜಗದೀಶ್ವರ ತ್ರಿಗುಣವಿರಹಿತ
ವೃಜಜನಾರ್ತಿಹ ಸತತಶ್ರೀವಧೂ
ಭುಜಕೃತಾಶ್ರಿತ ಕುಂಕುಮಾಂಕಿತ
ನಿಜಪದಾಂಬುಜ ತೋರೊ ಮನದಲಿ ||ಅ||

ಇಂದ್ರಭವಮುಖಅಮರ । ತಾರಾನಿಕರದೊಳು
ಚಂದ್ರನಂತಿಹ ಧೀರ । ಪುರುಷೋತ್ತಮನೆ ಖಚ
ರೇಂದ್ರಸ್ಕಂಧ ವಿಹಾರ । ಮಮಸ್ವಾಮಿ ಸತತ ಫ
ಣೀಂದ್ರಶೈಲಾಗಾರಾ । ಸೌಂದರ್ಯಸಾರ ||

ಚಂದ್ರಮಂಡಲಮಧ್ಯವರ್ತಿಯೆ
ಚಂದ್ರಮಂಡಲ ನಿಭ ಶುಭಾನನ
ಚಂದ್ರಸೋದರಿರಮಣ ಯದುಕುಲ
ಚಂದ್ರಗೋಪಾಂಗನೆಯರ ಹೃದಯ
ಚಂದ್ರಕಾಂತಿಯಮಣಿಸಮೂಹಕೆ
ಚಂದ್ರ ಮುನಿಹೃತ್ಕುಮುದಕೋರಕ
ಚಂದ್ರ ಚಕ್ರ ಗದಾಬ್ಜಧರ ಶತ
ಚಂದ್ರಪಾಣಿಸುಜನ ಚಕೋರಕೆ
ಚಂದ್ರ ಚಂದ್ರಕುಲಾಬ್ಧಿ ಚಂದ್ರನೆ
ಚಂದ್ರರವಿಸ್ಮರನಂತೆಪ್ರಭೋ ಅಜ
ಚಂದ್ರಶೇಖರನುತಚರಣನಖ
ಚಂದ್ರ ಚಂದ್ರಿಕೆ ತೋರೊಮನದಲಿ ||೧||

ಮೌನವ್ರತಶ್ರುತಿಧ್ಯಾನ | ಅಹರಹಾಜಪವ್ಯಾ
ಖ್ಯಾನಧರ್ಮಸುದಾನ | ಅಜಿತೇಂದ್ರಿಯರಿಗಹಿ
ಕಾನುಭವಕಾರಣ | ಡಾಂಭಿಕರಿಗಿವು ಫಲ
ವೇನಕೊಡವೊನಿದಾನ | ಮೋಕ್ಷಕಿವೆಕಾರಣ

ನಾನು ಅಜಿತೇಂದ್ರಿಯನುಡಾಂಭಿಕ
ಈ ನುಡಿದಸಾಧನದೊಳೊಂದನು
ಕಾಣ ಕಂಡು ಕೇಳಿಅರಿಯೆನು
ನೀನೊಲಿದು ರಕ್ಷಿಪ ಉಪಾಯವ
ನೀನೆಬಲ್ಲೆಯೊ ವಿಭುವೆ ಸುಖಮಯ
ಮೀನಮಂದರಧರ ಧರಾಧರ
ಶ್ರೀನೃಸಿಂಹ ಮಾಣವಕ ಭಾರ್ಗವ
ಜಾನಕೀಪತಿ ಕೃಷ್ಣ ಬುದ್ಧನ
ದೀನವತ್ಸಲಕಲ್ಕಿಹಯಮುಖ
ನಾನಾರೂಪಗುಣಾತ್ಮಕನೆ ಜಗ
ತ್ರಾಣನಿಖಿಳಬಿಂಬಾಹ್ವಯಕ್ರಿಯಾ
ಜ್ಞಾನಪಾಲಿಸು ಶ್ರೀನಿಕೇತನ ||೨||

ಷಾನು ಮಾಡುವಸ್ನಾನ | ನಿಮಗಡೆ ವಿಚಿತ್ರ
ಸ್ನಾನಗಂಧಸುವಸನ | ಉಪವೀತಸ್ರಕುಲಿಚ
ಮಾನ ದೇಹವೈಭವನ | ಮನಸಿನಬಯಕೆಗಳು
ಷಾನಾಮಣಿಗಳಾಭರಣ | ದೀಪವೆಸುಜ್ಞಾನ ||
ಕೋಣತ್ರಯಹೃದಯಾಬ್ಜಪೀಠವು
ಈ ನೆರೆದಜನರೇ ಆವರಣವು
ಷಾನ ಉಂಬನ್ನವೆನೈವೇದ್ಯವು
ಘ್ರಾಣೇಂದ್ರಿಯ ವಿಷಯಧೂಪವು
ಕಾಣಿಕೆ ಭಕುತಿ ಗತಿಪ್ರದಕ್ಷಿಣೆ ಶ
ಯನನಮನ ನುಡಿಯೆ ಮಹಾಜಪ

ಏನಕಂಡೆದುಕೇಳಿದದುಸುಖ
ಶ್ರೇಣಿನಿನ್ನಯಪ್ರತಿಮೆಗಳು ಜಗ
ತ್ರಾಣ ಗುರುಗೋಪಾಲವಿಠಲ
ದೀನವತ್ಸಲಸಾತ್ವತಾಂಪತಿ
ನೀನಿರುತ ಒಲಿದೆನ್ನಪಾಲಿಸು ||೩||

ಎಂಬದಾಗಿ ಪ್ರಾರ್ಥನೆ ಮಾಡಿದರು. ಗುರುಗೋಪಾಲದಾಸರ ಪದಗಳಲ್ಲಿ ಇದು ಬಲು ಅರ್ಥವತ್ತಾದ ಪದವು; ಮಹಿಮಾ ಪ್ರದರ್ಶಕವಾದ ಪದವು.

ಸನಾತನು ಧರ್ಮರೀತ್ಯಾ ಸನ್ಯಾಸಿಯಾದ ವಿನಾ ಹಿರಿಯರಿಗೆ ಕಿರಿಯರು ಅನುಗ್ರಹ ಮಾಡಲು ಅಧಿಕಾರವಿರುವದಿಲ್ಲ ದಾಸಪ್ಪ ದಾಸರಿಗೆ ಗೋಪಾಲದಾಸರು ಅಣ್ಣಂದಿರು; ವಿದ್ಯಾಗುರುಗಳು; ಅಪರೋಕ್ಷಕ್ಕೂ ಗುರುಗಳು ಗೋಪಾಲದಾಸರಿಗೆ ವಿಜಯದಾಸರು ಗುರುಗಳು. ಅನುಗ್ರಹವು ಯಾವಾಗಲೂ ಗುರು ಮುಖದಿಂದ ಬರಬೇಕು. ಆದುದರಿಂದ ದಾಸಪ್ಪ ದಾಸರು 'ವಿಜಯವಿಠಲರಾಯ'ಎಂಬದಾಗಿ ಗುರುಗಳ ಗುರುಗಳೆನಿಸಿದ ವಿಜಯದಾಸರ ಉಪಾಸ್ಯಮೂರ್ತಿಯ ಹೆಸರಿನಿಂದ ಪ್ರಾರ್ಥನಾರೂಪವಾದೀ ಪದವನ್ನಾರಂಭಿಸಿದರು. ಉದರ ಶೂಲೆಯು ಉಷ್ಣತೆಯಿಂದುಂಟಾಗುವ ವ್ಯಾಧಿ. ಉಷ್ಣಯನ್ನು ಪರಿಹರಿಸಲು ಔಷಧವಾದರೂ ಶೀತಲವಾಗಿರಬೇಕು. ಈ ಪದದ ಪ್ರಥಮ ಚರಣದಲ್ಲಿ ಪರಮಾತ್ಮನನ್ನು ಚಂದ್ರನಿಗೆ ವಿಶೇಷಿಸಿ, ಮಾತು ಮಾತಿಗೆ ಚಂದ್ರ ಶಬ್ದವನ್ನು ಪ್ರಯೋಗಿಸಿರುವದರಿಂದ, ಸೀತ ಕಿರಣನು ಉಷ್ಣವ್ಯಾಧಿಯನ್ನು ಪರಿಹರಿಸುವನು. ಎರಡನೇ ಚರಣದಲ್ಲಿ ದಾಸಪ್ಪದಾಸರ ಸ್ವಾಹಂಕಾರ ಖಂಡನೆಯೂ ದಶಾವತಾರಗಳ ವರ್ಣನೆಯೂ ಬಂದಿರುವದು. ಮೂರನೇ ಚರಣದಲ್ಲಿ ಪದಕರ್ತರು ಅಣ್ಣಂದಿರಿಗೆ ಆಹ್ನಿಕ ಫಲವನ್ನು ಸಮರ್ಪಿಸಿರುವರು.

ಈ ಪದವನ್ನು ಹಾಡಿದಾಗ, ಗೋಪಾಲದಾಸರಿಗೆ ಇದ್ದಕ್ಕಿದ್ದ ಹಾಗೆ ಉದರದಲ್ಲಿದ್ದ ವ್ಯಾಧಿಯು ಮಾಯವಾಗಿ ಶೀತಲವಾಯಿತು. ಪರಮಾತ್ಮ ಸಾಕ್ಷಾತ್ಕಾರವಾಗಿ ವಿಚಿತ್ರಾನಂದ ಪ್ರಾಪ್ತಿಯಾಯಿತು, ಧ್ಯಾನಮಾಡದೆ ಭಗವದ್ದರ್ಶನಾನಂದಪಾದುದನ್ನೂ, ಔಷಧವಿಲ್ಲದೆ ಉದರವೇದನೆಯು ಪರಿ

ಕಾರವಾದುದನ್ನೂ, ತಮ್ಮಂದಿರ ಪ್ರಾರ್ಥನೆಯಿಂದಾಯಿತೆಂದು ಗೋಪಾಲ ದಾಸರು ತಿಳಿದರು. ತಮ್ಮನ ಭಕ್ತಿ ಭಾವವನ್ನೂ ಪರಮಾತ್ಮನ ಕಾರುಣ್ಯ ವನ್ನೂ ಅಡಿಗಡಿಗೆ ಚಿಂತಿಸಿ ಪ್ರೇಮರಸದಲ್ಲಿ ಪರವಶರಾದರು. ಗುರು ಗೋ ಪಾಲದಾಸರು (ದಾಸಪ್ಪ ದಾಸರು) ಅಣ್ಣಂದಿರನ್ನು ಹುಡುಕುತ್ತಾ ಮರದಡಿ ಯಲ್ಲಿ ಆನಂದ ಭರಿತರಾಗಿರುವರನ್ನು ಕಂಡು, ತನ್ನ ಅಪರಾಧವನ್ನು ಕ್ಷಮಿಸ ಬೇಕೆಂದು ನಮಸ್ಕಾರಮಾಡಿದರು. ದಾಸರು,-'ತಮ್ಮ! ಉದರಶೂಲೆಯನ್ನು ಪರಿಹರಿಸಿದುದು ಅಪರಾಧವೆ? ಭಗವದ್ದರ್ಶನಮಾಡಿಸಿದುದು ಅಪರಾಧವೆ? ನಿನ್ನ ಉಪಕಾರವು ಮಹತ್ತರವಾಯಿತು. ನಾವು ಬಡಮಾತಾಪಿತೃಗಳ ಉದ ರದಲ್ಲಿ ಜನಿಸಿದೆವು. ಬಾಲ್ಯದಲ್ಲಿ ನಮ್ಮ ಜೀವನವು ದುಃಖಮಯವಾಯಿತು. ನಮಗಾಗಿ ನಮ್ಮ ತಾಯಿಯು ಪಟ್ಟ ಶ್ರಮವು ಅವರ್ಣನೀಯವಾಯಿತು. ಯಾರ ಋಣವನ್ನು ತೀರಿಸಿದರೂ ಕಾರುಣ್ಯಮಯಿಯಾದ ನಮ್ಮ ತಾಯಿಯ ಋಣವನ್ನು ಮಾತ್ರ ನಾವು ತೀರಿಸಲಾರೆವು 'ನಮಾತುಃ ಪರದೇವತಾ' ಎಂಬ ಅಮೃತವಾಣಿಯನ್ನು ಹಿರಿಯರು ನಮಗಾಗಿ ರಚನೆಮಾಡಿ ಕೊಟ್ಟಂತೆ ಕಾಣುತ್ತದೆ. ಜನ್ಮಾಂತರ ಸುಕೃತ ವಿಶೇಷದಿಂದ ನಾಲ್ವರು ಸಹೋದರ ರಾದ ನಮ್ಮಲ್ಲಿ ಮೂವರಿಗೆ ಅಪರೋಕ್ಷಜ್ಞಾನ ದೊರೆಯಿತು. ಬಾಲ್ಯದಲ್ಲೇ ನನ್ನಲ್ಲಿ ಕೃಪೆ ಮಾಡಿದ ಗಾಯಿತ್ರಿಮಾತೆಯ ಕಾರುಣ್ಯವನ್ನು ಏನೆಂದು ವ ರ್ಣಿಸಲಿ? ಆಕೆಯ ಅನುಗ್ರಹಬಲದಿಂದಲ್ಲವೇ ನಮಗೀ ಶ್ರೀಮಂತಿಕೆ ದೊರೆ ಯಿತು? ಚಿಕ್ಕ ತಮ್ಮ ರಂಗಪ್ಪನ ಯೋಚನೆಯು ನನಗೆ ಬಹಳವಾಗಿರುವದು. ನಮ್ಮ ಮನೆತನವು ಅವನಿಂದಲೇ ಬೆಳೆಯಬೇಕು. ಅವನಿನ್ನೂ ಸಂಸಾರಿ ಯಾಗಿರುವದರಿಂದ ಅವನನ್ನು ಪ್ರಾಪಂಚಿಕದಲ್ಲಿಟ್ಟಿರಬೇಕಾಗಿದೆ. ತಮ್ಮಾ ತಿರುಪತಿಯಾತ್ರೆಗೆ ನೀನು ಮಾಡಿದ ಸಹಾಯವು ಅಪಾರವಾದುದು. ಆ ವೆಂಕ ಟೇಶನೇ ಸರ್ವರಕ್ಷಕನು' ಎಂದು ನುಡಿದು, ತಮ್ಮನು ತಂದಿದ್ದ ಪಾಯಸ ವನ್ನು ಸವಿದು ಪ್ರಯಾಣ ಮಾಡಿದರು.



- ೪ -

ಗೋಪಾಲದಾಸರ ಕಾಲದಲ್ಲಿ ಶ್ರೀ ಉತ್ತರಾದಿ ಮಠದ ಧರ್ಮಪೀಠದಲ್ಲಿ ಸತ್ಯಪ್ರಿಯರ ಶಿಷ್ಯರಾದ ಸತ್ಯಬೋಧರು ಮಠರಾಜ್ಯಭಾರಮಾಡುತ್ತಿದ್ದರು. ಸತ್ಯಬೋಧರ ಕಾಲವೆಂದರೆ ಉತ್ತರಾದಿ ಮಠದ ಮಹೋನ್ನತಿಯ ಕಾಲ. ಪುಣೆಯ ಶ್ರೀಮಂತ ಪೇಷ್ವಾಯಿಗಳು, ಕೊಲ್ಹಾಪುರದ ಛತ್ರಪತಿ ಮಹಾರಾಜರು, ಬರೋಡೆಯ ಗಾಯಕವಾಡರು, ತಂಜಾವೂರಿನ ಮಹಾರಾಷ್ಟ್ರರಾಜರು, ಕಡೆಗೆ ಸವಣೂರಿನ ಪಠಾನ ನವಾಬರು ಸಹ, ಶ್ರೀಮಠದಲ್ಲಿ ವಿಶೇಷ ಭಕ್ತಿಯನ್ನಿಟ್ಟು ಅಸಾಧಾರಣವಾದ ಮರ್ಯಾದೆ ಮಾಡುತ್ತಿದ್ದರು.

ಸತ್ಯಬೋಧರಿಗೆ ಒಮ್ಮೆ ವಿಜಯದಾಸರ ಪರಿಚರ್ಯವಾಗಿ ಅವರ ಮಹಾಮಹಿಮೆಯು ಪ್ರತ್ಯಕ್ಷಾನುಭವವಾಗಿದ್ದರೂ, ದಾಸರೆಂದರೆ ಒಂದು ಪ್ರಕಾರದ ಉದಾಸೀನತೆಯು ಅವರಲ್ಲಿ ಸ್ವಾಭಾವಿಕವಾಗಿತ್ತು. ಸಮೀಪಸ್ಥರ ಪ್ರೇರಣೆಯ ಜೊತೆಗೆ ಹರಿದಾಸನಾಮಧಾರಿಗಳ ಜ್ಞಾನಶೂನ್ಯತೆಯ ದಾಸಕೂಟಕಲ್ಪನೆಯು, ಸ್ವಾಮಿಗಳ ಉದಾಸೀನವನ್ನು ಹೆಚ್ಚಿಸಿತ್ತು. ಪರರ ಮುಖದಿಂದಲೇ ಲೋಕಾನುಭವಮಾಡಿಕೊಳ್ಳಬೇಕಾದ ರಾಜರಿಗೂ, ಮಠಾಧಿಪತಿಗಳಿಗೂ, ವ್ಯತ್ಯಾಸ ಭಾವನೆಗಳು ಬರುವದು ಯಾವ ಕಾಲದಲ್ಲೂ ಹೊಸದಲ್ಲ. ಹೀಗಿರಲು ರಾಯಚೂರಿನಲ್ಲಿ ಗೋಪಾಲದಾಸ ಸಹೋದರರಿಗೆ ಸ್ವಾಮಿಗಳ ದರ್ಶನಲಾಭವಾಯಿತು. ಗೃಹಸ್ಥ ಶಿಷ್ಯರನೇಕರು ದಾಸತ್ರಯರು ಮಹಾ ಅಪರೋಕ್ಷ ಜ್ಞಾನಿಗಳೆಂದು ಶ್ರೀ ಸ್ವಾಮಿಗಳಿಗೆ ತಿಳಿಸಿದರು. ಮಾತೆತ್ತಿದರೆ ದಾಸರು ಅಪರೋಕ್ಷಜ್ಞಾನಿಗಳೆಂದು ಜನರಾಡುವದು ಸ್ವಾಮಿಗಳಿಗೆ ಕೌತುಕವನ್ನುಂಟುಮಾಡಿತು. ಮೂವರ ಅಪರೋಕ್ಷಜ್ಞಾನವೆಂಥಾದ್ದೋ ಪರೀಕ್ಷೆಮಾಡೋಣವೆಂದು, ಸತ್ಯಬೋಧರು ಪ್ರತ್ಯೇಕ ಕೊಟ್ಟಡಿಗಳಲ್ಲಿ ಮೂವರಿಗೂ ತಾಳಾವಾಲೆಗಳನ್ನು ಕೊಟ್ಟು ಕೂಡಿಸಿ, ಒಂದು ಪದವನ್ನು ಪೂರ್ತಿಮಾಡಿರೆಂದು ಆಜ್ಞೈಗೈದರು. ಈ ವಿಧದ ಪರೀಕ್ಷೆ ಕೊಡು

---

- ೩ -ನೆಯ ಭಾಗವು ೧೦೭ನೇ ಪುಟದ ಶಿರೋಭಾಗದಲ್ಲಿ ಛಾಪೆಯಾಗಬೇಕಾಗಿತ್ತು. ಅದನ್ನು ಹಾಗೆ ಓದಿಕೊಳ್ಳಬೇಕು.

ವದು ಗೋಪಾಲದಾಸರಿಗೆ ಇಷ್ಟವಾಗಿರದಿದ್ದರೂ ಗುರುತ್ವ ಗೌರವಕ್ಕೆ ತಲೆ ಬಾಗಬೇಕಾಯಿತು. ದೂರದೂರದ ಪ್ರತ್ಯೇಕ ಸ್ಥಳಗಳಲ್ಲಿ ಕುಳಿತ ದಾಸ ಸಹೋದರರು ಮೂವರೂ ಕೂಡಿ ಮಾಡಬೇಕಾದ ಪದದಲ್ಲಿ, ಮೊದಲು ಪಲ್ಲವಿ, ಅನುಪಲ್ಲವಿ ಮತ್ತು ಕಡೆಯ ಅಂಕಿತದ ನುಡಿಗಳನ್ನು ಹಿರಿಯರಾದ ಗೋಪಾಲದಾಸರು ಬರೆದರು. ಮೊದಲನೆಯ ಮತ್ತು ಎರಡನೆಯ ನುಡಿಗಳನ್ನು ಕ್ರಮವಾಗಿ ಸೀನಪ್ಪದಾಸರೂ ದಾಸಪ್ಪದಾಸರೂ ಬರೆದರು. ಸ್ವಲ್ಪ ಹೊತ್ತು ಬಿಟ್ಟು ಸ್ವಾಮಿಗಳು ದಾಸರು ಬರೆದಾಯಿತೇ ವಿಚಾರಿಸಿರೆಂದರು. ಗೋಪಾಲದಾಸರು ಎಂದೋ ಆಯಿತೆಂದು ಉತ್ತರವಿತ್ತರು. ಅದೇನು ಬರೆದಿರುವರೋ ಎಂಬ ಕುತೂಹಲದಿಂದ ಸ್ವಾಮಿಗಳು ಮೂವರನ್ನೂ ಸಮುಖಕ್ಕೆ ಕರೆದು ನೀವು ಬರೆದಿರುವದನ್ನು ಓದಿರೆಂದರು. ಓದಿದ ಪದವು.

### ಅಸಾವೇರಿ — ಜಂಪೆತಾಳ

ಮಾರಮದಘನ್ನ ಸಮಿರ್ಮ್ಮರ ಮಧ್ವಾವಮತೋ
ದ್ಧಾರ ಶುಭಗುಣಸಾಗರಾ | ಪಾರಾ ||ಪ||
ಧೀರ ಶ್ರೀ ಸತ್ಯಬೋಧಾರ್ಯ ಗುರುಕರುಣದಲಿ
ವೈರಿವರ್ಗವಗೆಲಿದೆ ಧಾರುಣಿಯೊಳು ಮೆರೆದೆ ||ಅ||

—ಗೋಪಾಲದಾಸರು

ಮುನಿ ನಿಮ್ಮಮಹಿಮೆಯನು ತಿಳಿಯದಲೆ ದಂಡೆತ್ತಿ
ಮನಸಿಜನು ಬರಲು ಕೇಳೀ | ತಾಳೀ |
ಘನಮಹಿಮ ಸತ್ಯಪ್ರಿಯ ಗುರುಕರುಣ ದೃಢಕವಚ
ವನು ಧರಿಸಿ ಧೀರನಾಗೀ | ಸಾಗೀ |
ಮನೋಜಯಾ ದ್ಯಷ್ಟಾಂಗಯೋಗಾದಿ ಸಾಧನದಿ
ಮಣಿಯದಲೆ ಮಾರಮಲತೂ| ಕಲೆತೂ ||
ಪ್ರಣವಾದಿ ಮಂತ್ರ ಪ್ರತಿಪಾದ್ಯ ಮೂರ್ತಿಗಳ ಚಮೂ
ಮೊನೆಮಾಡಿ ಅರಿಪೃತನ ಹಣಿದು ಓಡಿಸಿದೆ ||೧||

—ಸೀನಪ್ಪದಾಸರು.

ಕುಸುಮಾಸ್ತ್ರನಂಗನಾಗಲು ಉಡುಸಹಿತ ಹಿಮಗು
ನೆಸಗಿನಭಕ್ಕೈದಿನಿಂದಾ । ಮಂದಾ ।
ಶ್ವಸನವೆಲ್ಲನೆ ಜರಿಯೆ ವನಕೆಪೋದವ ಸಂತ
ಝಷವು ಮಕರಿಯದೊಳಡಗೀ । ನಡುಗೀ ।
ಎಸೆವ ಶುಕಪಿಕಸಮೂಹಗಳಂಜಿ ಬಾಯ್ಬಿಡುತ
ದಶದಿಶೆಯೊಳಡಗಿ ಪೋಗೀ ॥ ಕೂಗೀ
ಪೊಸಮಲ್ಲಿಕಾದಿ ಕುಟ್ಮಲವಂಜಿ ಬಾಯ್ಬಿಡಲು
ಯಶಶರಧಿ ತವಕೀರ್ತಿ ಪಸರಿಸಿತು ಲೋಕದಲಿ ॥೨॥

—ದಾಸಪ್ಪದಾಸರು.

ಮಾರನಪಜಯುಕಂಡು ಕ್ರೋಧಾದಿವರ್ಗಗಳು
ದೂರದಲಿನಿಂದು ನಮಿಸೀ । ಗಮಿಸೀ ।
ವೀರಕರ್ಣನು ತನ್ನ ಮಿಾರಿತ್ಯಾಗವಕಂಡು
ಸಾರೆ ರವಿಮಂಡಲವನೂ । ಅವನೂ ।
ಧೀರ ನಿಮ್ಮಪಾಂಡಿತ್ಯಕಂ ಫಣಿಪ ಬಾಗಿಶಿರ
ಧಾರುಣಿಯ ಕೆಳಗೆ ನಡೆದಾ । ಬಿಡದಾ ॥
ಶ್ರೀರಾಮವ್ಯಾಸ ಗೋಪಾಲವಿಠಲನಂಘ್ರಿ
ಆರಾಧಿಕರೆ ನಿಮ್ಮ ಚಾರುಚರಣಕೆ ನಮಿಪೆ ॥

—ಗೋಪಾಲದಾಸರು.

ಮೂವರು ದಾಸರ ಮುಖಗಳಿಂದ ಈ ರೀತಿ ಉಚ್ಚರಿತವಾಯಿತು. ಸತ್ಯಬೋಧರು ಪರಮಾಶ್ಚರ್ಯಭರಿತರಾದರು. ದಾಸರೆ! ನಮ್ಮ ಮಠಕ್ಕೆ ನೀವು ಮೂವರೂ ಕಾಮಧೇನು ಕಲ್ಪವೃಕ್ಷ ಚಿಂತಾಮಣಿಗಳೆಂದರು, ಈ ರೀತಿ ಮಾಡಿದ ಪರೀಕ್ಷೆಯಿಂದ ನಿಮ್ಮ ಮಹಿಮೆಯು ಲೋಕಕ್ಕೇವಿದಿತವಾಯಿತೆಂದರು. ಮೂವರಿಗೂ ಅನರ್ಘ್ಯಗಳಾದ ಮುತ್ತಿನ ಕಂಠಿಗಳ ಬಹುಮಾನ ಮಾಡಿದರು. ತುಲಸೀಮಣಿಯ ಬಡದಾಸರಿಗೆ ಮುತ್ತಿನ ಕಂಠಿಗಳೇಕೆಂದು ದಾಸರು ಕೇಳಿದರು. ರಾಮಚಂದ್ರದೇವರ ಪ್ರಸಾದವು ಸ್ವೀಕಾರಾರ್ಹವೆಂದು ಸ್ವಾಮಿಗಳು ನುಡಿದರು. ಮೇಲ್ಕಂಡ ಪದವು ರಚಿತವಾದ ಕ್ರಮ

ವನ್ನು ನೋಡಿದ ಮಾತ್ರದಿಂದ ಮೂವರು ದಾಸರೂ ಎಂಥಾ ಜ್ಞಾನಿಗಳೆಂದು ಗೊತ್ತಾಗುತ್ತದೆ. ಕಾವ್ಯ ರಸಾಸ್ವಾದನಪರರಿಗೆ ಪದದಲ್ಲಿರುವ ಕಾವ್ಯದಿಂದ ಪರಮಾನಂದವಾಗುತ್ತದೆ. 'ದಾಸರ ಪದದಲ್ಲಿ ತಪ್ಪಿಲ್ಲ, ತಂಗಡೀ ಹೂವಿನಲ್ಲಿ ವಾಸನೆಯಿಲ್ಲ'ವೆಂದು ಹರಿದಾಸರನ್ನು ನಿಂದಿಸುವರ ವಾಗ್ಬಂಧನವಾಗುತ್ತದೆ.

ಪ್ರಕೃತಕಾಲವಾದರೋ ಭರತಖಂಡದ ಒಂದೊಂದು ಭಾಷೆಯೂ ಸಂಸ್ಕೃತಿಯೂ ಉಜ್ಜೀವನವಾಗುತ್ತಿರುವ ಕಾಲ. ಬಲು ಕಾಲದ ಅಭ್ಯಾಸದಿಂದ ರೂಪಾಂತರವಾಗಿರುವ ಧರ್ಮಕ್ಕೆ ನೂತನ ಸ್ವರೂಪವುಂಟಾಗುತ್ತಿರುವ ಕಾಲ. ದೇಶದ ನೈತಿಕ ಸಾಮಾಜಿಕ ಸಾಂಪತ್ತಿಕ ಧಾರ್ಮಿಕ ರಾಜಕೀಯ ವಿಷಯಗಳೆಲ್ಲದರ ಪುನರ್ವ್ಯವಸ್ಥೆಯಾಗುತ್ತಿರುವ ಕಾಲ. ತಮ್ಮ ತಮ್ಮ ಪೂರ್ವಾಚಾರ್ಯರುಗಳು ಹೇಗಿದ್ದರೆಂಬುದನ್ನು ವಿಚಾರಿಸಿ, ಅವರ ಧ್ಯೇಯಗಳನ್ನು ಆದರ್ಶವಾಗಿಟ್ಟುಕೊಂಡು, ಭಾರತದ ಭವಿತವ್ಯತೆಯನ್ನು ನಿರ್ದೇಶಿಸುತ್ತಿರುವ ಕಾಲ. ವಿವಿಧ ಕಲೆಗಳು ತಲೆಯೆತ್ತುತ್ತಿರುವ ಕಾಲ. ಇಂತಹ ಕಾಲದಲ್ಲಿ ನಮ್ಮ ಕರ್ಣಾಟಕವಾದರೂ ಕೆಲವರಾಡುತ್ತಿರುವಂತೆ ಅತ್ಯಂತ ಹಿಂದುಳಿದಿರುವ ರಾಷ್ಟ್ರವೇನಾಗಿಲ್ಲ. ತನ್ನ ಪರಿಸ್ಥಿತಿಗೆ ತಕ್ಕಂತೆ ಮುಂದರಿಯುತ್ತಿರುವ ಲಕ್ಷಣಗಳು ಎಲ್ಲೆಲ್ಲೂ ಕಂಡು ಬರುತ್ತಿವೆ. ಕರ್ಣಾಟಕದ ಚಿತ್ತವೃತ್ತಿ ಹೇಗೆದೆಯೆಂಬುದನ್ನು ಕನ್ನಡದ ಚಿತ್ರಕಲೆಗಳಿಂದ ನೋಡಬಹುದು. ರಂಗಭೂಮಿಯಲ್ಲಿ ಕರ್ಣಾಟಕದ ನಾಟ್ಯಕಲೆಯ ವೇಗವನ್ನು ಕಾಣಬಹುದು. ಗಾನಕೀರ್ತನಗಳ ಭದ್ರಪೀಠದಮೇಲೆ ಉಭಯಕಲೆಗಳೂ ಎಂತಹ ಆದರ್ಶವನ್ನು ಭರತಖಂಡಕ್ಕೆ ತೋರಿಸುತ್ತಿವೆಯೆಂಬುದನ್ನು ಪರೀಕ್ಷಿಸಬಹುದು. ಇಂತಹ ಕಾಲದಲ್ಲೇ ಕರ್ನಾಟಕ ಭಕ್ತವಿಜಯವು ಪೊತ್ತಾದೀ ಗ್ರಂಥರೂಪವನ್ನು ತಾಳಿ ಕನ್ನಡಿಗರ ಕರಗತವಾಗಲಿರುವದು. ಕನ್ನಡ ಹರಿದಾಸರ ಕವಿತೆಗಳ ಮಾದರಿಗಳನ್ನೂ ಅವರುಗಳ ಜೀವನದ ಆದರ್ಶಗಳನ್ನೂ ಕನ್ನಡಿಗರ ಮುಂದಿಡಲೆಳೆಸಿರುವದು.

'ಹರಿದಾಸರು ಕರ್ನಾಟಕಕ್ಕೆ ತೋರಿಸಿದ ಆದರ್ಶವೇನು? ದಾಸರಿಂದ ಈ ಕಾಲದಲ್ಲಿ ಜನರು ಕಲಿಯಬೇಕಾದುದೇನು?' ಎಂದು ದಾಸರ ಪದಗಳಲ್ಲಿ

ವಿಶ್ವಾಸವಿಲ್ಲದವರೂ, ದಾಸರಪದಗಳೆಂದು ಕಲ್ಪಿತ ಪದಗಳನ್ನು ಹೇಳಿಕೇಳು ವವರೂ, ದಾಸರ ಇತಿಹಾಸವನ್ನೇ ತಿಳಿಯದವರೂ, ಸು ಲ ಭ ವಾ ಗಿ ಪ್ರಶ್ನೆ ಮಾಡಬಹುದು. ಅಂಥವರು ಈಗ ತಾವು ನೋಡುತ್ತಿರುವ ಆಶಾದಾಸರು ಗಳ ಮಾನದಿಂದ ಪ್ರಶ್ನೆ ಮಾಡಿದರೆ ತಪ್ಪಲ್ಲ. ಹಿಂದಿನ ದಾಸರು ಈಗಿನವ ರಂತಿರಲಿಲ್ಲ. ಹಿಂದಿನ ದಾಸರುಗಳಲ್ಲನೇಕರು ತಮ್ಮ ಕೊಟ್ಯವಧಿ ದ್ರವ್ಯ ವನ್ನು ಜನತಾ ಜನಾರ್ದನನ ಸೇವೆಗೊಪ್ಪಿಸಿ ತಾವು ಬ್ರಹ್ಮಸಾಕ್ಷಾತ್ಕಾರ ಮಾಡಿಕೊಂಡು ಕೃತಾರ್ಥರಾದ್ದು ಮಾತ್ರವಲ್ಲದೆ, ದೇಶ ದೇಶವನ್ನೇ ಉದ್ಧಾ ರಮಾಡಿದರು. ಮತ್ತೆ ಕೆಲವರು ರಾಜ್ಯಾಧಿಕಾರವನ್ನು ಸಹ ತ್ಯಜಿಸಿ ಲೋಕ ಸೇವೆಗೆ ನಿಂತರು. ಮತ್ತೆ ಕೆಲವರು ತಾವು ಪಂಡಿತೋತ್ತಮರಾಗಿದ್ದರೂ ಲೋಕಸೇವೆಗಾಗಿ ಹರಿದಾಸ ಮಾರ್ಗಕ್ಕಿಳಿದರು. ಖಂಡಿತೋಕ್ತಿಯಿಂದ ಹೇಳುವದಾದರೆ ಕನ್ನಡ ವಾಙ್ಮಯಕ್ಕೇನಾದರೂ ಪ್ರಪಂಚದಲ್ಲಿ ಮರ್ಯಾದೆ ದೊರೆತಿದ್ದರೆ, ಅದು ಸತ್ಪುರುಷರಾದ ಹರಿದಾಸರಿಂದ ದೊರೆಯಿತು. ಇತರ ಕವಿಗಳಿಂದಲ್ಲ. ಪಾಮರರಿಗೆ ಸಮಾಜದಲ್ಲೇನಾದರೂ ಮರ್ಯಾದೆ ದೊರೆತಿ ದ್ದರೆ, ಅದು ವಿಶಾಲ ಮನಸ್ಸಿನ ಹರಿದಾಸರಿಂದ ದೊರೆಯಿತು. ಪಂಡಿತರಿಂ ದಲ್ಲ. ಜನತೆಯಲ್ಲಿ ಜಾತಿಮತದ್ವೇಷಗಳು ಕಡಿಮೆಯಾಗಿ ಶಾಂತಿಯೇನಾ ದರೂ ಆ ಕಾಲದಲ್ಲಿ ನೆಲೆಸಿದ್ದರೆ ಅದೂ ಹರಿದಾಸರಿಂದಾಯಿತು. ರಾಜರಿಂದಲ್ಲ. ಮಹಾರಾಷ್ಟ್ರದಲ್ಲಿ ರಾಜಕಾರಣದಲ್ಲಿ ಪ್ರವೇಶಿಸಿ ಸಮಾಜವನ್ನು ಏಕರೂಪಕ್ಕೆ ತಂದು ರಾಜ್ಯಸ್ಥಾಪನೆ ಮಾಡಿದ ಯಶವು ಹರಿದಾಸರದಲ್ಲದೆ ಇತರರದಲ್ಲ. ಉತ್ತರ ಹಿಂದೂಸ್ಥಾನದಲ್ಲಿ ಹಿಂದೂ ಸಂಘಟನೆ, ಶುದ್ಧಿ, ಹಿಂದೂ ಮುಸ ಲ್ಮಾನರ ಐಕಮತ್ಯಗಳು, ಲೋಡೀ ವಂಶದ ಮುಸಲ್ಮಾನರಾಜರ ಕಾಲದಲ್ಲಿ ನಡೆದ ಯಶವು ಕಬೀರ ಪಂಥದ ಹರಿದಾಸರದಲ್ಲದೆ ಇತರರದಲ್ಲ. ಒಟ್ಟಿನಲ್ಲಿ ವಿಚಾರ ಮಾಡಿದರೆ ಹರಿದಾಸರ ಕಾರ್ಯಗಳು ವ್ಯಾಪಕವಾದವುಗಳು. ಅವು ಒಂದುಜಾತಿ ಒಂದು ಮತ ಒಂದುರಾಷ್ಟ್ರಕ್ಕೇ ಸಂಬಂಧಿಸಿದವುಗಳಲ್ಲ. ತ್ಯಾಗದ ಪರಮಾವಧಿಯನ್ನು ನೋಡಬೇಕು ಹರಿದಾಸರ ಜೀವನದಲ್ಲಿ, ದಯೆಯ ಪರ ಮಾವಧಿಯನ್ನು ನೋಡಬೇಕು ಹರಿದಾಸರ ಉಪದೇಶದಲ್ಲಿ; ಸಮತ್ವದ ಪರ ಮಾವಧಿಯನ್ನು ನೋಡಬೇಕು ಹರಿದಾಸರ ಚರ್ಯದಲ್ಲಿ, ಈ ಎಲ್ಲ ಆದರ್ಶ ಗಳಿಗೆ ಖನಿಗಳು ಹರಿದಾಸರು. ಮತ್ತೆ ಕೇಳಿದರೆ ಕರ್ನಾಟಕದ ಹರಿದಾಸರು.

ಹರಿದಾಸರ ಜೀವನದಲ್ಲಿ ಆದರ್ಶಗಳು ಸಿಗುವದಿಲ್ಲವೆಂದರೆ ಅವು ಪ್ರಪಂಚ ದಲ್ಲಿ ಬೇರೆಡೆಗಳಲ್ಲಿ ಸಿಗುವದೂ ಸಾಧ್ಯವಲ್ಲ.

ದಾಸರು ರಾಯಚೂರಿನಿಂದ ಮಂತ್ರಾಲಯದ ಮಾರ್ಗ ಹಿಡಿದು ಉತ್ತ ನೂರಿಗೆ ಪ್ರಯಾಣ ಬೆಳೆಸಿದರು. ಮಾರ್ಗ ಗ್ರಾಮದ ಒಬ್ಬಾನೊಬ್ಬ ಗೌಡನು ಮಹಾರೋಗಪೀಡಿತನಾಗಿ ಚಿಕಿತ್ಸೆಗಳಿಂದ ಗುಣವಾಗದಿರಲು, ರಾಘವೇಂದ್ರ ಸ್ವಾಮಿಗಳ ಮೊರೆ ಬಿದ್ದು 'ಸ್ವಾಮಿ, ನನಗೆ ರೋಗವಾಸಿಯಾದರೆ ಲಕ್ಷ ಬ್ರಾಹ್ಮಣ ಭೋಜನ ಮಾಡಿಸುವೆ'ನೆಂದು ಹರಕೆ ಮಾಡಿದ್ದನು. ಗೌಡನಿಗೆ ಲಕ್ಷ ಜನರ ಮಾತಿರಲಿ, ಹತ್ತು ಜನರಿಗಾದರೂ ಮೃಷ್ಟಾನ್ನ ಉಣಿಸುವ ಯೋಗ್ಯತೆಯಿರಲಿಲ್ಲ. ಭವರೋಗ ವೈದ್ಯರಾದ ರಾಘವೇಂದ್ರಸ್ವಾಮಿಗಳ ಅನುಗ್ರಹದಿಂದ ಗೌಡನ ವ್ಯಾಧಿ ಪರಿಹಾರವಾಯಿತು. ಮಾಡಿದ ಹರಕೆ ಯನ್ನು ಸಲಿಸುವ ಬಗೆ ಹೇಗೆಂದು ಗೌಡನು ಚಿಂತಾಪರನಾಗಿ ದಿನದಿನಕ್ಕೆ ಕೃಶನಾಗುತ್ತ ಬಂದನು. ರೋಗ ಪರಿಹಾರ ಮಾಡಿದ ಗುರುಗಳೇ ತನ್ನ ಹರಕೆಯನ್ನೂ ಸಾಧಿಸಿ ಕೊಡಬೇಕೆಂದು ಗುರುಗಳ ಸ್ಮರಣೆಗಾರಂಭಿಸಿದನು. ಗೌಡನ ಹರಕೆಯು ಹೆಂಡತಿಯೊಬ್ಬಳ ವಿನಾ ಇತರರಿಗೆ ತಿಳಿದಿರಲಿಲ್ಲ. ಹರಕೆ ಹನ್ನೆರಡು ವರ್ಷವೆಂದು ನಿಶ್ಚಿಂತನಾಗಿರುವುದು ಗೌಡನ ಸ್ವಭಾವದ ಲ್ಲಿರಲಿಲ್ಲ. ಸ್ವಯಂ ವೀರಶೈವನಾಗಿ ಬ್ರಾಹ್ಮಣ ಗುರುಗಳಿಗೆ ಹರಕೆಯೇಕೆ ಮಾಡಿದೆಯೆಂದು ಕುಲಸ್ಥರು ಆಕ್ಷೇಪಿಸಬಹುದಾದ ಭಯಮಾತ್ರ ಗೌಡ ನನ್ನು ಬಿಟ್ಟಿರಲಿಲ್ಲ. ಹೀಗಿರಲು ಒಂದು ಶ್ರಾವಣ ಸೋಮವಾರದ ದಿನ ಗುರುಗಳನ್ನೇ ಸ್ಮರಿಸುತ್ತಾ ಗೌಡನು ಉಪವಾಸ ಮಾಡಿದನು. ತನ್ನ ತೋಟ ದ ಭಾವಿಯ ಬಳಿ ಮೃತ್ತಿಕೆಯಿಂದ ಒಂದು ಲಿಂಗಾಕಾರವನ್ನು ರಚಿಸಿ, ದೊರೆತ ಪುಷ್ಪಗಳನ್ನು ತಂದು ಇದು ರಾಘಪ್ಪನಿಗೆಂದು ಪೂಜಿಸಿದನು. ಮನೆಗೂ ಹೋಗದೆ ಭಾವಿಯ ಕಟ್ಟೆಯಮೇಲೆ ಶಯನಮಾಡಿದನು. ಆ ರಾತ್ರಿ ಗೌಡನ ಸ್ವಪ್ನದಲ್ಲಿ ಗುರು ರಾಘವೇಂದ್ರರು ದರ್ಶನವಿತ್ತು 'ಎಲವೋ ಗೌಡ! ನನ್ನ ಹೆಸರಿನಿಂದೇಕೆ ವೃಥಾ ಉಪವಾಸ ಮಾಡುವೆ? ನಾಡದ್ದು ಬುಧವಾರ ಕುದುರೆಯಮೇಲೆ ಕುಳಿತು ಮೂವರು ಬ್ರಾಹ್ಮಣರು ಬರುವರು. ಅವರಿಗೆ ನೀನು ಭೋಜನ ಮಾಡಿಸಿದೆಯೆಂದರೆ ನಿನ್ನ ಲಕ್ಷ ಭೋಜನದ ಹರಕೆ ಸಂದಂತಾಗುವುದು, ಅವರ ಆಶೀರ್ವಾದದಿಂದ ನಿನ್ನ

ಶ್ರೇಯೋಭಿವೃದ್ಧಿಯಾಗುವುದು.” ಎಂದು ವರವಿತ್ತು ಅದೃಶ್ಯರಾದರು. ಗೌಡನು ಎದ್ದು ಕುಳಿತು ಇಂದಿಗೆ ಧನ್ಯನಾದೆನೆಂದುಕೊಂಡನು. ಒಡನೆಯೇ ಮನೆಗೆ ಹೋಗಿ ತನ್ನ ಹೆಂಡತಿಗೀಸ್ವಪ್ನವಾರ್ತೆಯನ್ನು ತಿಳಿಸಿದನು. ಮಂಗಳವಾರ ಕಳೆದ ಬುಧವಾರವೆಂದಿಗೆ ಬರುವುದೆಂದು ನಿರೀಕ್ಷಿಸಿದನು. ಹೊಸ ಮಡಿಕೆಕುಡಿಕೆಗಳನ್ನು ತಂದು, ತನ್ನ ಮನೆಯಲ್ಲಿ ದೊರೆತ ಗೋಕ್ಷೀರವನ್ನು ಕಾಯಿಸಿ ಕೆನೆಮೊಸರಿಗೆಂದು ಹೆಪ್ಪುಕೂಡಿಸಿದನು. ಸ್ವಲ್ಪ ಹಲಸಂದೆಯನ್ನೂ ಜೋಳದ ನುಚ್ಚನ್ನೂ ನವಣಕ್ಕಿಯನ್ನೂ ತೆಗೆದುಕೊಂಡು, ಬುಧವಾರ ಸೂರ್ಯೋದಯಕ್ಕೆ ಮುಂಚಿತವಾಗಿ ದಾರಿ ಮಾರ್ಗದಲ್ಲಿ ಕುಳಿತನು. ಭಾಗಣ್ಣ ಸಹೋದರ ತ್ರಿತಯರು ಪರಸ್ಪರವಾಗಿ—

ಭಾಗಣ್ಣದಾಸರು—( ಕುದುರೆಯಮೇಲೆ ಕುಳಿತು ಬರುತ್ತಾ ) ತಮ್ಮಾ! ಇವತ್ತು ನಮಗೆ ಮೃಷ್ಟಾನ್ನಯೋಗವಿರುವುದು ಬಲ್ಲೆಯಾ ?

ದ್ವಿತೀಯರು—ರಾಯರು ಮಾಡಿಸುವರೇನು ?

ತೃತೀಯರು—ಹೌದು, ಗೌಡನ ಲಕ್ಷ ಭೋಜನದ ಹರಕೆ.

ದಾಸತ್ರಯರು ಕುದುರೆಗಳಮೇಲೆ ಕುಳಿತು ಎಂಟು ಗಂಟೆಗೆ ಸರಿಯಾಗಿ ಗೌಡನ ಭಾವಿಯ ಬಳಿಯಲ್ಲಿಳಿದು, ‘ಏನಪ್ಪಾ ಗೌಡ ! ಇದೋ ಬಂದಿರುವೆವು ನೋಡೆಂದರು.’ ಗೌಡನು ಚಕಿತನಾದನು. ಸ್ವಪ್ನವಾರ್ತೆಯು ಸತ್ಯವಾಯಿತೆಂದು ಮೂವರ ಪಾದಗಳಿಗೆ ನಮಸ್ಕಾರ ಮಾಡಿದನು. ಗೋಪಾಲದಾಸರು ನಮ್ಮ ಊಟಕ್ಕೆ ಸಾಮಾನು ತಂದಿರುವೆಯೋ ಎಂದರು. ಗೌಡನು, ಇದೋ ಸ್ವಾಮಿ ! ಹುಳಿಗೆ ಹಲಸಂದೆ, ಅನ್ನಕ್ಕೆ ನವಣಕ್ಕಿ ಜೋಳದ ನುಚ್ಚುಗಳು, ಹಾಲು ಮೊಸರು ಗಡಿಗೆಗಳು, ಹುಳಿ ಉಪ್ಪು ಖಾರಗಳು, ಎಂಬು ಒಂದೊಂದಾಗಿ ಮುಂದಿರಿಸಿದನು. ದಾಸರು ಮೂವರಿಗೆ ತಕ್ಕಷ್ಟು ಸಾಮಾನುಗಳನ್ನು ತೆಗೆದುಕೊಂಡು, ಇನ್ನಿಬ್ಬರ ಸಾಮಾನು ಹೆಚ್ಚಾಗಿದೆ, ಇದನ್ನು ನೀವು ಗಂಡಹೆಂಡಿರು ಈ ತೋಟದಲ್ಲಿಯೇ ಅಡಿಗೆ ಮಾಡಿಕೊಂಡು ಭೋಜನ ಮಾಡಿರೆಂದು ಕೈಮುಟ್ಟಿ ಪದಾರ್ಥಗಳನು ಗೌಡನ ಉಡಿಗೆ ಹಾಕಿದರು. ಗೌಡನು ಮಹಾ ಪ್ರಸಾದವೆಂದು ಸ್ವೀಕರಿಸಿದನು. ದಾಸರ ಸ್ನಾನವಾಗುತ್ತಲೇ ಗೌಡದಂಪತಿಗಳು ಭಾವಿಯಲ್ಲಿ ಸ್ನಾನ

ಮಾಡಿದರು. ದಾಸರ ಭೋಜನವಾಗುವವರೆಗೆ ತಮ್ಮ ಅಡಿಗೆಯನ್ನು ಮಾಡಿ ಕಾದು ಕುಳಿತರು.

ಗೋಪಾಲದಾಸರು—ತಮ್ಮ! ನಮ್ಮಮ್ಮನ ಕಾಲದಲ್ಲಿ ನೋಡು ಇಂಥಾ ರುಚಿಯಾದ ಊಟ ವುಂಡಿದ್ದೆವು. ಇಂದು ದೊರೆಯಿತು ಆ ರುಚಿ.

ಸೀನಪ್ಪದಾಸರು—ಹೌದು ಹೌದು ಅದು ನೈವೇದ್ಯದ ಪ್ರಭಾವ. ರಸ ಗತ ಭಗವದ್ರೂಪಗಳು ಇಂದು ಮೂರ್ತಿಮತ್ತಾಗಿ ಸುರಸವಾಗಿವೆ. ತತ್ವೇಶರು ಸುಪ್ರೀತರಾಗಿದ್ದಾರೆ.

ದಾಸಪ್ಪದಾಸರು—ಇದೆಲ್ಲಾ ಗೌಡನ ಭಕ್ತಿ ಪ್ರಭಾವ. ಗೌಡನಮೇಲೆ ರಾಯರ ಅನುಗ್ರಹದ ಪ್ರಭಾವ. ಲಕ್ಷ ಭೋಜನವು ಮೂವರ ಭೋಜನದಿಂದ ತೇಲುವಾಗ ರುಚಿಯಾಗಿರದೆ ಏನಾದೀತು ?

ದಾಸತ್ರಯರು ಭೋಜನಾನಂತರ ಆಚಮನಮಾಡಿ ತೀರ್ಥವನ್ನು ಸವಿದು ಭಾವಿಯ ಹಾಸುಕಲ್ಲಿನ ಮೇಲೆ ಕುಳಿತರು. ಗೌಡದಂಪತಿಗಳು ಮೂವರಿಗೆ ದಕ್ಷಿಣೆಯೆಂದು ಮೂರು ದುಡ್ಡುಗಳನ್ನೂ, ಬೆಟ್ಟಡಿಕೆಗಳನ್ನೂ ಮುಂದಿಟ್ಟು ನಮಸ್ಕಾರ ಮಾಡಿದರು. ಗೋಪಾಲದಾಸರು ಗೌಡದಂಪತಿಗಳನ್ನು ಕುರಿತು—"ನಿಮ್ಮ ಸೇವೆಯಿಂದ ರಾಯರು ಸುಪ್ರೀತರಾದರು. ಲಕ್ಷ ಬ್ರಾಹ್ಮಣ ಭೋಜನದ ಪುಣ್ಯ ನಿಮಗೆ ದೊರೆಯಿತು. ಇಬ್ಬರಿಗಾಗುವಷ್ಟು ಹೆಚ್ಚು ಪದಾರ್ಥಗಳನ್ನು ನೀವು ಕೊಟ್ಟ ಕಾರಣ, ನಿಮ್ಮ ವಂಶದಲ್ಲಿ ನಿಮ್ಮ ಕಾಲದಲ್ಲಿ ಮಾತ್ರವಲ್ಲದೆ ಮಕ್ಕಳು ಮೊಮ್ಮಕ್ಕಳ ಕಾಲದಲ್ಲೂ ನಿಮ್ಮ ಮನೆಯಲ್ಲಿ ಧಾನ್ಯ ಸಮೃದ್ಧಿಯುಂಟಾಗುವುದು. ನಿಮ್ಮ ದಕ್ಷಿಣೆಯು ಲಕ್ಷ ಲಕ್ಷವಾಗಿ ವೃದ್ಧಿಹೊಂದಿ ನಿಮ್ಮಿಂದ ಮೂರು ಪೀಳಿಗೆಯ ತನಕ ಶ್ರೀಮಂತರಾಗಿರುವಿರಿ. ನಿಮ್ಮ ಕಾರ್ಯವಾಯಿತು. ನಾವಿನ್ನು ಪ್ರಯಾಣ ಮಾಡುವೆವು" ಎಂಬುದಾಗಿ ಆಶೀರ್ವಾದ ಮಾಡಿ ಅಶ್ವಾರೂಢರಾದರು.

ಪಾತ್ರವರಿತು ಮಾಡುವ ದಾನದ ಪ್ರಭಾವವೆಂದರೆ ಇದು. ಮಾತೆತ್ತಿದರೆ ಹಿಂದೂ ಸಮಾಜದಲ್ಲಿ ಶುಭಾಶುಭ ಕರ್ಮಗಳಲ್ಲಿ ಬ್ರಾಹ್ಮಣರಿಗೆ ಭೋಜನ ಮಾಡಿಸಬೇಕು, ದಕ್ಷಿಣೆ ಕೊಡಬೇಕು, ಎಂಬ ಮಾತಿನ ಚಲಾವ

ಣೆಯಿರುವದು. ಲಕ್ಷಾವಧಿ ವರ್ಷಗಳಿಂದ ಈ ವಿಧವಾದ ಆಚರಣೆಯಿರುವದನ್ನು ನೋಡಿದ ಮಾತ್ರದಿಂದಲೇ ಇದರಲ್ಲೇನೋ ಅರ್ಥವಿದೆಯೆಂದು ಯಾರಿಗೂ ತೋರದಿರುವದಿಲ್ಲ. ಜಾತಿ ಪುತ ಮತ್ಸರಗಳ ಈ ಕಾಲದಲ್ಲಾದರೋ ಬ್ರಾಹ್ಮಣ ಭೋಜನವೆಂಬ ಮಾತು ಕಿವಿಗೆ ಬಿದ್ದ ಕೂಡಲೇ ಹಾಸ್ಯಾಸ್ಪದವಾಗುವದು. ಇತರರ ಮಾತಿರಲಿ; ಬ್ರಾಹ್ಮಣರೇ ಹೆಚ್ಚು ಪರಿಹಾಸ್ಯ ಮಾಡುವರು. ಹೀಗೆ ಮಾಡಲು ಬ್ರಾಹ್ಮಣರಲ್ಲಿ ಬ್ರಾಹ್ಮಣ್ಯ ಲೋಪವಾಗುತ್ತಿರುವದು ಕಾರಣವಲ್ಲದೆ ಜನರ ಅಜ್ಞಾನದಿಂದಲ್ಲ. ಬ್ರಹ್ಮಜ್ಞಾನಿಯಾದ ಬ್ರಾಹ್ಮಣನ ಭೋಜನವೆಂದರೆ ಅದೊಂದು ಪರಿಯ ಯಜ್ಞಾಚರಣೆಯೆನಿಸುವದು. ಬ್ರಹ್ಮವೇತ್ತನು, ತನ್ನ ದೇಹಸ್ಥಿತಿಯು ಕೇವಲ ಪರಮಾತ್ಮನ ಸೇವೆಗಾಗಿರುವದೆಂದು ತಿಳಿಯುವನು. ತಾನು ಮಾಡುವ ಭೋಜನವನ್ನು ಶರೀರಾಂತರ್ವರ್ತಿ ವೈಶ್ವಾನರನಿಗೆ ಕೊಡುವ ಆಹುತಿಯೆಂದು ಭಾವಿಸುವನು.“ ಅನ್ನಂ ಬ್ರಹ್ಮ” ಎಂಬ ವೇದವಾಕ್ಯದಂತೆ, ಭೋಜನ ಪದಾರ್ಥಗಳ ವಿವಿಧ ರಸಗಳಲ್ಲಿ ವಿವಿಧ ಭಗವದ್ರೂಪಗಳ ಚಿಂತನೆಮಾಡಿ, ಅವುಗಳನ್ನು ತನ್ನ ಅಂತರ್ಯಾಮಿಯಲ್ಲಿ ಐಕ್ಯಾನುಸಂಧಾನ ಮಾಡುವನು. ಈ ವಿಧವಾದ ಭೋಜನ ಕ್ರಮದಲ್ಲಿ ಪಿಂಡಾಂಡದ ಸೃಷ್ಟಿಸ್ಥಿತಿಗಳು, ಶರೀರದ ಇಪ್ಪತ್ತುನಾಲ್ಕು ತತ್ವಗಳು, ತನ್ನಿಯಾಮಕ ದೇವತೆಗಳು, ಈ ಎಲ್ಲ ಚಿಂತನೆಗಳುಂಟಾಗಿ, ಆಹಾರ ಪದಾರ್ಥಗಳು ಸಂಪಾದಿಸಿದವನ ಮತ್ತು ಪಾಕ ಮಾಡಿದವನ ಸಂಬಂಧ ದೋಷಗಳಿಂದ ಪರಿಶುದ್ಧವಾಗಿ, ತೇಜೋಮಯವಾಗಿ, ಶರೀರಕ್ಕೆ ಉಪಚಯ, ತತ್ವದೇವತೆಗಳಿಗೆ ಆತ್ಮಪ್ರದರ್ಶನಗಳುಂಟಾಗಿ, ಪರಮಾತ್ಮನ ಪ್ರೀತಿಗೆ ಕಾರಣವಾಗುವದು. ಈ ಅನುಸಂಧಾನದಿಂದ ಭೋಜನ ಮಾಡುವವನಿಗೆ ವಿಷವಾದರೂ ಅಮೃತವಾಗುವದು. ಆದ್ದರಿಂದ ಇಂತಹ ಬ್ರಹ್ಮಜ್ಞಾನಿಗಳಿಗೆ ಅನ್ನದಾನ ಮಾಡುವದನ್ನು ಕೇವಲ ಪುಣ್ಯಕರವೆಂದು ಜನರು ಭಾವಿಸಿದರು. ಇಂಥವರನ್ನು ಸಂತೋಷಪಡಿಸುವದೇ ಈಶ್ವರಪೂಜೆಯೆಂದು ಜನರು ತಿಳಿದರು. ಈ ಕಾರಣದಿಂದ ಬ್ರಾಹ್ಮಣಭೋಜನ ಮಾಡಿಸುವದು ಎಲ್ಲ ಸಾಧನೆಗಳಿಗಿಂತ ಉತ್ತಮ ಸಾಧನೆಯೆಂದು ಸಮಾಜದ ಭಾವನೆಯಾಯಿತು. ಹಿಂದಿನ ಕಾಲದಲ್ಲಿ ಇಂತಹ ಬ್ರಾಹ್ಮಣರು ಹೇರಳವಾಗಿದ್ದುದರಿಂದ, ಸಮುದಾಯಕ್ಕೇನ

ಬ್ರಾಹ್ಮಣ ಭೋಜನ ಮಾಡಿಸುವದು ಧರ್ಮಸಾಧನೆಯೆಂಬ ಕಲ್ಪನೆಯುಂಟಾಗಿ ಆಚರಣೆಗೆ ಬಂದಿತು. ಇಂತಹ ಬ್ರಹ್ಮವೇತ್ತರಾದ ಬ್ರಾಹ್ಮಣರು ಬಲವತ್ತರವಾದ ಕಾರಣಗಳಿದ್ದ ವಿನಾ ಪರಾನ್ನ ಭೋಜನ ಮಾಡುತ್ತಿರಲಿಲ್ಲ. ತಮ್ಮ ಪುಣ್ಯ ಲೋಪವಾಗುವುದೆಂದು ಯಾವುದೇ ರೀತಿಯ ಪರಿಗ್ರಹವನ್ನೂ ಮಾಡುತ್ತಿರಲಿಲ್ಲ. ಈ ವಿಷಯದಲ್ಲಿ ಪೌರಾಣಿಕವಾದ ಅರ್ಥವತ್ತಾದ ಕಥೆಯೊಂದಿರುವದು. ಅದರ ಕ್ರಮವೇನೆಂದರೆ:—

ದ್ವಾಪರಾಂತ್ಯದಲ್ಲಿ ಯುಧಿಷ್ಠಿರ ಮಹಾರಾಜನು ರಾಜಸೂಯಯಾಗ ಮಾಡಿ ಲಕ್ಷಾವಧಿ ಬ್ರಾಹ್ಮಣರನ್ನು ಅನ್ನದಾನ ವಸ್ತ್ರದಾನ ಹಿರಣ್ಯದಾನಗಳಿಂದ ಸಂತೋಷ ಪಡಿಸಿದನು. ಯಜ್ಞವು ಸಾಂಗವಾಗುತ್ತಲೇ ಶ್ರೀ ಕೃಷ್ಣ ಪರಮಾತ್ಮನಿಗೆ ಅಗ್ರಪೂಜೆಮಾಡಿ ತಾನು ಸಾಮ್ರಾಟ ಪದವಿಯಲ್ಲಿ ಪಟ್ಟಾಭಿಷಿಕ್ತನಾದನು. ಯುಧಿಷ್ಠಿರನಿಗೆ ತಾನು ಮಾಡಿದ ಧರ್ಮ ಕಾರ್ಯಗಳನ್ನು ನೆನೆಸಿದಾಗ ತನ್ನ ಸಮಾನ ಧರ್ಮಾತ್ಮರು ಮತ್ತೊಬ್ಬರಿಲ್ಲವೆಂಬ ಗರ್ವವುಂಟಾಯಿತು. ಇದನ್ನರಿತ ಶ್ರೀ ಕೃಷ್ಣನು ಮೊಳಕೆಯಾಗಿರುವಾಗಲೇ ಧರ್ಮನಂದನನ ಅಹಂಕಾರವನ್ನು ಖಂಡಿಸಬೇಕೆಂದು ಬಗೆದನು. 'ಅಯ್ಯಾ, ಧರ್ಮನಂದನ ಲೋಕ ತ್ರಯಗಳಲ್ಲಿ ನಿನ್ನಂಥಾ ಧರ್ಮಾತ್ಮರಿಲ್ಲವು. ಲಕ್ಷಾವಧಿ ಬ್ರಾಹ್ಮಣರನ್ನು ಸಂತುಷ್ಟಿಗೊಳಿಸಿ, ರಾಜಸೂಯಯಾಗ ಮಾಡಿ, ಶಾಶ್ವಿತವಾದ ಕೀರ್ತಿಯನ್ನು ಸಂಪಾದಿಸಿರುವೆ. ಯಾವ ಲೋಕಾಧಿಪರೂ ನಿನ್ನನ್ನು ಗೌರವಿಸುವರು. ಅಮರಾವತಿಯ ಅರಸನಾದ ಇಂದ್ರನು ನಿನ್ನನ್ನು ತನ್ನ ಅರ್ಧ ಸಿಂಹಾಸನದಲ್ಲಿ ಕುಳ್ಳಿರಿಸಿಕೊಳ್ಳುವನು. ಅಸಹಾಯಸೂರರಾದ ಭೀಮಾರ್ಜುನರಂಥಾ ತಮ್ಮಂದಿರು ನಿನಗಿರುವರು. ನಿನಗೆ ಲೇಶವಾದರೂ ಶ್ರಮ ಕೊಡದಂತೆ ರಾಜ್ಯಕಾರ್ಯವನ್ನು ಅವರೇ ನಿರ್ವಹಿಸಿ ನಿನಗೆ ಕೀರ್ತಿಯನ್ನು ತಂದು ಕೊಡುತ್ತಿರುವರು. ಈ ಸಂತೋಷಕಾಲದಲ್ಲೇ ನಾವೀರ್ವರೂ ಕಲೆತು ದೇಶ ಪರ್ಯಟನ ಮಾಡಿಬರೋಣ. ಸುತಳಲೋಕಾಧಿಪತಿಯಾದ ಬಲಿಚಕ್ರವರ್ತಿಯನ್ನು ನೋಡಬೇಕೆಂಬ ಕುತೂಹಲ ನನಗೆ ಬಹಳವಾಗಿದೆ. ಆ ಪುಣ್ಯಶ್ಲೋಕನ ಮನೆಯ ಬಾಗಿಲನ್ನು ವಾಮನ ಮೂರ್ತಿ ಯುಗ ದಾಪಾಣಿಯಾಗಿ ಕಾಯುತ್ತಿರುವನಂತೆ. ಅಲ್ಲಿಗೆ ಹೋಗಿ ಬರೋಣವೇ' ಎಂದನು. ಧರ್ಮನಂದನನು, 'ಶ್ರೀ ಕೃಷ್ಣ! ಒಳ್ಳೇ ಸಲಹೆಯನ್ನು ಸೂಚಿಸಿದೆ, ಈಗಲೇ

ಪ್ರಯಾಣ ಮಾಡೋಣನಡೆ'ಯೆಂದು ಕುತೂಹಲದಿಂದ ನುಡಿದನು. ಶ್ರೀಕೃಷ್ಣಯುಧಿಷ್ಠಿರರೀರ್ವರೂ ರಥಾರೂಢರಾಗಿ ಬಲಿಚಕ್ರವರ್ತಿಯ ಅರಮನೆಯ ಮಹಾದ್ವಾರದ ಬಳಿಗೆ ಬಂದರು. ವಾಮನಮೂರ್ತಿಯು ಈರ್ವರನ್ನೂ ಪುರಸ್ಕರಿಸಿ ಬಂದ ಕಾರ್ಯವೇನೆಂದು ಪ್ರಶ್ನೆ ಮಾಡಿದನು. ಶ್ರೀ ಕೃಷ್ಣನು—'ತ್ರಿವಿಕ್ರಮಾ, ರಾಜಸೂಯ ಯಜ್ಞಮಾಡಿ ಲಕ್ಷಾವಧಿ ಬ್ರಾಹ್ಮಣರನ್ನು ಸಂತುಷ್ಟಿಗೊಳಿಸಿ ಸಾಮ್ರಾಟ್ಪದದಲ್ಲಿ ಪಟ್ಟಾಭಿಷಿಕ್ತನಾದ ಯುಧಿಷ್ಠಿರ ಚಕ್ರೇಶ್ವರನು ಬಲಿರಾಜನನ್ನು ನೋಡಲು ಬಂದಿರುವನು. ಧರ್ಮನಂದನನೆಂದರೆ ಸಾಮಾನ್ಯಮರ್ತ್ಯನಲ್ಲ. ಆದ್ದರಿಂದ ಯೋಗ್ಯರೀತಿಯಿಂದ ಬಲಿರಾಜನು ಧರ್ಮರಾಜನನ್ನು ಬಂದು ಕಾಣುವಂತೆ ತಕ್ಕ ಪ್ರಯತ್ನ ಮಾಡೆ'ಂದನು. ವಾಮನನು ಕೃಷ್ಣನ ಮಾತಿಗೆ ನಗುತ್ತಾ, ನೀನು ಹೇಳಿದ ಸಂಗತಿಯನ್ನು ಬಲಿರಾಜನಿಗೆ ತಿಳಿಸುವೆನೆಂದು ರಾಕ್ಷಸಾಧಿಪತಿಯ ಮುಂದೆ ಕೃಷ್ಣನ ಮಾತನ್ನೇ ಅಕ್ಷರಶಃ ತಿಳಿಸಿದನು. ಬಲಿಯು—'ಲಕ್ಷಾವಧಿ ಬ್ರಾಹ್ಮಣರನ್ನು ತಣಿಸಿ ರಾಜಸೂಯ ಮಾಡಿದ ನನ್ನ ಸಮರಾರೆಂಬ ಮದಗರ್ವಿತನಾದ ಆ ಯುಧಿಷ್ಠಿರನು, ತನ್ನ ಪ್ರತಿಷ್ಠೆಯನ್ನು ತೋರಿಸಲು ನನ್ನ ಬಳಿಗೆ ಬಂದಿರುವನೆ? ಆ ನೀಚನ ಮುಖಾವಲೋಕನ ಮಾಡುವದಿಲ್ಲವೆಂದು ಖಂಡಿತವಾಗಿ ತಿಳಿಸೆ'ಂದು ನುಡಿದನು.

ಶ್ರೀ ಕೃಷ್ಣ—ವಾಮನಮೂರ್ತಿ! ಏಕೆ ಒಬ್ಬನೇ ಬಂದೆ? ಬಲಿರಾಜನ ಸಮಯವೇನು? ಅವನೇನೆಂದನು?

ವಾಮನ—ಕೃಷ್ಣ! ಅವನೆಷ್ಟಾದರೂ ರಕ್ಕಸನು. ಹೇಳಿ ಫಲವಿಲ್ಲ. ಈ ಸಮಯ ಸರಿಯಾಗಿಲ್ಲ.

ಶ್ರೀ ಕೃಷ್ಣ—ಸಮಯವಿಲ್ಲದಿದ್ದರೆ ಚಿಂತೆಯಿಲ್ಲ. ನೀನೇನು ಹೇಳಿದೆ? ಧರ್ಮರಾಜನು ಬಂದಿರುವ ಸಂಗತಿಯನ್ನು ನಾನು ತಿಳಿಸಿದ ಮಾತಿನಿಂದಲೇ ತಿಳಿಸಿದೆಯಷ್ಟೆ!

ವಾಮನ—ನಿನ್ನ ಮಾತಿಗೆ ಮತ್ತಷ್ಟು ಸೇರಿಸಿ ಹೇಳಿದೆ. ಧರ್ಮಾತ್ಮನಾದ ಯುಧಿಷ್ಠಿರನ ಗುಣ ಕಥನವನ್ನೂ ಮಾಡಿದೆ, ಫಲವೇನು?

ಶ್ರೀ ಕೃಷ್ಣ—ಹೋಗಲಿ, ಬಲಿರಾಜನಾಡಿದ ಮಾತಾದರೂ ಹೇಳು.

ವಾಮನ—ಆ ಮಾತಿನಿಂದ ಫಲವೇನು?

ಶ್ರೀ ಕೃಷ್ಣ—ಚಿಂತೆಯಿಲ್ಲ, ಆದರಿಂದ ಧರ್ಮನಂದನನಿಗೆ ಅಪಮಾನವಿಲ್ಲ, ಹೇಳು.

ವಾಮನ— ಆ ಮಾತನ್ನು ನನ್ನ ಬಾಯಿಂದಲೂ ಬರಿಸಬೇಕೆನ್ನುವೆಯಾ ಕೇಳು! ಆ ಲಕ್ಷಾವಧಿ ಬ್ರಾಹ್ಮಣರ ಭೋಜನ ಮಾಡಿಸಿ ರಾಜಸೂಯ ಮಾಡಿದೆನೆಂಬ ಮದಗರ್ವಿತನಾದ ಯುಧಿಷ್ಠಿರನೇ? ಆ ನೀಚನ ಮುಖಾವಲೋಕನ ಮಾಡುವದಿಲ್ಲವೆಂದು ಹೇಳಿದನು.

ಶ್ರೀ ಕೃಷ್ಣನು,—"ಯುಧಿಷ್ಠಿರ! ನಾವಿಲ್ಲಿಗೆ ಬಂದುದೇ ತಪ್ಪಾಯಿತು. ಎಷ್ಟಾದರೂ ಅವನು ರಕ್ಕಸ. ನಿನ್ನನ್ನು ವೃಥಾದಣಿಸಿದ ತಪ್ಪು ನನ್ನದಾಯಿತು. ಅನ್ಯೋಪಾಯವಿಲ್ಲ. ಬಂದದ್ದಕ್ಕೆ ಆ ಬಲಿರಾಜನನ್ನು ಕಣ್ಣಿಂದ ನೋಡಿದೆವೆಂಬ ತೃಪ್ತಿಯಾದರೂ ಆಗಬೇಕಾಗಿತ್ತು. ನಾವು ಹೊರಟವೇಳೆಯೇ ಸರಿಯಲ್ಲ. ಮತ್ತೊಮ್ಮೆ ಬೇರೆ ರೀತಿಯಿಂದ ಪ್ರಯತ್ನ ಮಾಡಿ ನೋಡೋಣವೇ ?" ಎಂದನು.

ಧರ್ಮನಂದನನು—ಕೃಷ್ಣ ! ಆದದ್ದಾಯಿತು. ಬಲಿರಾಯನನ್ನು ಕಣ್ಣಿಂದಲಾದರೂ ನೋಡಲು ನೀನೇ ಏನಾದರೂ ಹಂಚಿಕೆ ಮಾಡು. ನನಗೆ ಯಾವ ಬಹುಮಾನವೂ ಬೇಡವೆಂದನು.

ಶ್ರೀಕೃಷ್ಣನು ಮತ್ತೆ ವಾಮನ ಮೂರ್ತಿಯ ಬಳಿಗೆ ಬಂದು—ವಾಮನ! ಆ ಗೋವಳ ಕೃಷ್ಣ ಬಂದಿದ್ದಾನೆಂದು ಒಳಗೆ ತಿಳಿಸಿ ಸಹಾಯ ಮಾಡುವೆಯಾ ಎಂದನು.

ವಾಮನನು, ಅದಕ್ಕೇನು ? ಹೇಳುವ ಮಾತು ಹೇಳಿಬರುತ್ತೇನೆಂದನು. ಬಲಿರಾಜ ! ಶ್ರೀಕೃಷ್ಣನು ನಿನ್ನ ದರ್ಶನಾಭಿಲಾಷಿಯಾಗಿ ಬಂದಿರುವೆನೆಂದು ದಾನವೇಂದ್ರನಿಗೆ ತಿಳಿಸಿದನು.

ಬಲಿಯು—ಭೂಭಾರ ಪರಿಹಾರಾರ್ಥವಾಗಿ ದ್ವಾಪರದಲ್ಲವತರಿಸಿ ಧರ್ಮಸ್ಥಾಪನೆಮಾಡಿದ ಶ್ರೀಕೃಷ್ಣಪರಮಾತ್ಮನು ನನ್ನಂಥಾ ಪಾಮರನಿಗೆ ದರ್ಶನವೀಯಲು ದಯಮಾಡಿರುವನೆ? ನಾನು ಧನ್ಯನು. ಎಂದು ಅರ್ಘ್ಯ

ಪಾದ್ಯಗಳಿಗೆ ಬೇಕಾದ ಸಾಮಗ್ರಿಗಳನ್ನು ತೆಗೆಸಿಕೊಂಡು ಶ್ರೀಕೃಷ್ಣನ ಪಾದಾರವಿಂದಗಳಿಗೆ ನಮಸ್ಕಾರಮಾಡಿ ಉಪಚರಿಸಿ, ದಿವ್ಯಾಸನದಲ್ಲಿ ಕುಳ್ಳಿರಿಸಿ ಸ್ವಾಮಿಯನ್ನು ಅಪಾರವಾಗಿ ಸ್ತೋತ್ರಮಾಡಿದನು. ಶ್ರೀಕೃಷ್ಣನು "ಬಲಿರಾಜ ! ನಿನ್ನನ್ನು ನೋಡಿ ನನಗೆ ಪರಮಾನಂದವಾಯಿತು. ನನ್ನ ಜೊತೆಯಲ್ಲಿ ಬಂದಿರುವನಾರೆಂಬುದನ್ನು ಬಲ್ಲೆಯಾ ? ಧರ್ಮಾತ್ಮನಾದ ಯುಧಿಷ್ಠಿರನ ರಾಜಸೂಯ ಸದ್ವಾರ್ತೆಯನ್ನು ಕೇಳಿಲ್ಲವೆ? ನನ್ನನ್ನು ಸನ್ಮಾನಿಸುವದಿರಲಿ, ಮೊದಲು ಧರ್ಮನಂದನನನ್ನು ಪೂಜಿಸು" ಎಂದು ನುಡಿದನು.

ಬಲಿಯು—'ಆ ನೀಚನ ಮುಖಾವಲೋಕವೇ ಪಾಪವೆಂದು ಭಾವಿಸಿರುವ ನನ್ನನ್ನು, ದೇವ, ಏತಕ್ಕೆ ಬಲಾತ್ಕರಿಸುವೆ ? ಲಕ್ಷಾವಧಿ ಬ್ರಾಹ್ಮಣರ ಭೋಜನಮಾಡಿಸಿದ ವಾರ್ತೆಯು ಆವನಿಗೆ ಕೀರ್ತಿಯೇ ? ಬ್ರಾಹ್ಮಣರು ಪರಾನ್ನವನ್ನು ಹುಡುಕಿಕೊಂಡು ಬರುವಷ್ಟು ದುರ್ಗತಿಗೆ ಬಂದರೆ ? ಇವನ ರಾಜ್ಯಭಾರದಲ್ಲಿ ಬ್ರಾಹ್ಮಣರಿಗೆ ಇವನ ಅನ್ನ ಸಿಕ್ಕಿತೆಂದು ತಮ್ಮ ಕರ್ಮವನ್ನೂ ತ್ಯಜಿಸಿ ಬರುವಷ್ಟು ದಾರಿದ್ರ್ಯ ಬಂದಿತೆ ? ಸ್ವಾಮಿಯೇ ಕೇಳು:— ನನ್ನ ಪಿತೃಶ್ರಾದ್ಧಕ್ಕೆ ವರ್ಷಕ್ಕೊಮ್ಮೆ ಇಬ್ಬರು ಬ್ರಾಹ್ಮಣರನ್ನು ಸಂಪಾದಿಸುವದು ಎಷ್ಟೋ ಕಠಿಣವಾಗಿದೆ. ಬ್ರಾಹ್ಮಣರೆಂದರೆ ಶಮದಮಾದಿ ಗುಣಸಂಪನ್ನರು, ತಪೋನಿಷ್ಠರು, ಶೌಚಾಚಾರಪರರು, ಕ್ಷಮಾವಂತರು, ಋಜುಮಾರ್ಗಗಾಮಿಗಳು, ಜ್ಞಾನ ವಿಜ್ಞಾನ ಆಸ್ತಿಕ್ಯಾದಿ ಗುಣಭೂಷಿತರು. ಪ್ರಾಣಾಪತ್ತಿನಲ್ಲೂ ಪುಣ್ಯಕ್ಷೀಣವಾಗುವದೆಂಬ ಭೀತಿಯಿಂದ ಪ್ರತಿಗ್ರಹಮಾಡುವರಲ್ಲ. ಪರಾನ್ನವನ್ನು ಬಯಸುವರಲ್ಲ. ಇಂಥಾ ಬ್ರಾಹ್ಮಣರು ಅಶನಾರ್ಥಿಗಳಾದ ಕಾಲಕ್ಕೆ ಈರಾಜನೇ ಕಾರಣನಲ್ಲವೆ?' ಎಂದು ವಿಜ್ಞಾಪಿಸಿದನು. ಈ ವಾಕ್ಯಗಳನ್ನು ಕೇಳಿ ಧರ್ಮರಾಜನ ಗರ್ವವಡಗಿತು.

ಬ್ರಾಹ್ಮಣ್ಯದ ನಿಜಲಕ್ಷಣವಾದರೋ ಹೀಗಿರುವದು. ಈ ಗುಣಗಳನ್ನು ಕಳೆದುಕೊಂಡು ನಾವು ಬ್ರಾಹ್ಮಣ ಗೋತ್ರೋದ್ಭವರೆಂದು ಬ್ರಾಹ್ಮಣನಾಮಧಾರಿಗಳು ಪರಾನ್ನವನ್ನು ಬಯಸುವರಾದರೆ ಅವರನ್ನು ಆ ಪವಿತ್ರನಾಮದಿಂದ ಕರೆಯುವದು ಪಾಪವೆನಿಸುವದು. ಅಂಥವರಿಗೆ ಅನ್ನದಾನ ಮಾಡುವದರಿಂದ ಭೂತತೃಪ್ತಿಗಿಂತ ಹೆಚ್ಚು ಪುಣ್ಯವೇನೂ ಬರುವದಿಲ್ಲ.

ಗೋಪಾಲದಾಸತ್ರಯರಾದರೋ ಕೇವಲ ಬ್ರಹ್ಮವೇತ್ತರಾದುದರಿಂದ ಆ ಮೂವರ ಭೋಜನ ಮಾತ್ರದಿಂದ ಗೌಡನಿಗೆ ಲಕ್ಷ ಭೋಜನ ಮಾಡಿಸಿದ ಪುಣ್ಯ ಪ್ರಾಪ್ತಿಯಾಗುವದರ ಜೊತೆಗೆ ಅವನ ಮೂರು ತಲೆಯ ತನಕ ಮಹದೈಶ್ವರ್ಯವೂ ವಂಶಾಭಿವೃದ್ಧಿಯೂ ಆಯಿತು.

ಚಿತ್ರಲೇಖನದಲ್ಲಿ ಗೋಪಾಲದಾಸರು ಬಲು ಕುಶಲರಿದ್ದರು. ವಿಜಯದಾಸರು ಮಾಡಿದ ಕಂಕಣಾಕಾರಸುಳಾದಿಯನ್ನು ಚಕ್ರಾಬ್ಜದಲ್ಲಿಟ್ಟು ಬೀಜಾಕ್ಷರಗಳನ್ನು ಆಯಾಸ್ಥಳಗಳಲ್ಲಿ ಗುರ್ತಿಸಿ ಉಪಾಸಕರಿಗೆ ಸೌ ಲ ಭ್ಯ ವ ನ್ನು ಕ ಲ್ಪಿ ಸಿ ಕೊ ಟ್ಟ ವ ರು ಗೋ ಪಾ ಲ ದಾ ಸ ರು. ಪುರಾಣಗಳನ್ನು ಶೋಧಿಸಿ ಪರಮಾತ್ಮನ ವಿರಾಡ್ರೂಪವನ್ನೂ ಲೋಕಗಳ ಸ್ಥಾನವನ್ನೂ ತೋರಿಸಿ, ಬ್ರಹ್ಮಾಂಡದ ಪಟವನ್ನು ಬಲು ಸುಂದರವಾಗಿರುವಂತೆ ಸಪ್ರಮಾಣವಾಗಿ ಬರೆದವರು ಗೋಪಾಲದಾಸರು. ದಾಸರು ಬರೆದ ಬ್ರಹ್ಮಾಂಡ ಚಿತ್ರವು ಆ ವಂಶೀಕರಿಂದ ಮಾನ್ಯವಾಗಿ ಅದ್ಯಾಪಿ ಅವರ ರಕ್ಷಣೆಯಲ್ಲಿದೆ. ಮಹಾಮಂತ್ರ ಮೂರ್ತಿಗಳನ್ನು ಶಿಲ್ಪಿಶಾಸ್ತ್ರಾನುಸಾರ ಬರೆದು ಮಂತ್ರದ ವರ್ಣಗಳನ್ನು ಯೋಗ್ಯಸ್ಥಾನಗಳಲ್ಲಿ ಗುರ್ತಿಸಿ, ಆವಾಹನಾದಿ ಷೋಡಶೋಪಚಾರಗಳಿಂದ ದಿನದಿನದ ಕೀರ್ತನಕಾಲದಲ್ಲಿ ಪೂಜಿಸುವದು ದಾಸರ ಪದ್ಧತಿಯಾಗಿತ್ತು. ಒಮ್ಮೆ ದಾಸರು ಒಂದು ಮೂರ್ತಿಯನ್ನು ಆವಾಹನಮಾಡಿ ಪೂಜಿಸಿದರೆಂದರೆ ಆ ಚಿತ್ರದಲ್ಲಿ ವಿಚಿತ್ರ ಶಕ್ತಿಯುಂಟಾಗಿಬಿಡುತ್ತಿತ್ತು. ಸಂತಾನಾದಿ ಇಷ್ಟಾರ್ಥಗಳನ್ನು ಪಡೆಯಬೇಕೆಂಬುವರಾಗಲಿ, ರೋಗಪೀಡಿತರಾಗಲಿ, ಪಿಶಾಚಾದಿ ಭಯಬಾಧಿತರಾಗಲಿ, ಮಂತ್ರ ಕೊಡಿರೆಂದು ದಾಸರ ಬಳಿಗೆ ಬಂದರೆ ಅವರು ತಾವು ಪೂಜಿಸಿದ ಒಂದೊಂದು ಚಿತ್ರವನ್ನು ಕೊಟ್ಟು ಕಳುಹಿಸುತ್ತಿದ್ದರು. ಆ ಜನರು ಆ ಮೂರ್ತಿಗಳನ್ನು ಪೂಜಿಸಿ ತಮ್ಮ ಇಷ್ಟಾರ್ಥಗಳನ್ನು ಪಡೆಯುತ್ತಿದ್ದರು. ಈ ಎಲ್ಲಾ ಪ್ರಕಾರದ ಸಿದ್ಧಿಗೂ ಅವರ ಮಂತ್ರೋಪಾಸನೆಯೂ ಅವರ ಮೇಲಿದ್ದ ಭಗವದನುಗ್ರಹವೂ ಕಾರಣವಾಗಿತ್ತು.



- ೫ -

ಗೋಪಾಲದಾಸರಿಗೆ ಪುರುಷರಂತೆ ಅನೇಕ ಸ್ತ್ರೀಯರೂ ಶಿಷ್ಯರಾಗಿದ್ದರೆಂದು ಗೊತ್ತಾಗುತ್ತದೆ. ಸ್ತ್ರೀಯರ ಪೈಕಿ ಹೆಳವನಕಟ್ಟೆಯ ಗಿರಿಯಮ್ಮನೆಂಬಾಕೆಯು ಪ್ರಸಿದ್ಧಳು. ಆಕೆಯು ಭಕ್ತಳಾಗಿದ್ದುದು ಮಾತ್ರವಲ್ಲದೆ, ಕವಯಿತ್ರಿಯೂ ಆಗಿದ್ದಳು. ಗೋಪಾಲದಾಸರಿಂದ ಶ್ರೀ ಕೃಷ್ಣಮಂತ್ರೋಪದೇಶ ಪಡೆದು ದಾಸರು ಕೊಟ್ಟ ಕೃಷ್ಣಪ್ರತೀಕವನ್ನು ಪೂಜಿಸುತ್ತಾ ಕೃಷ್ಣಸಾಕ್ಷಾತ್ಕಾರ ಮಾಡಿಕೊಂಡಿದ್ದಳು.

ಆ ಕಾಲದಲ್ಲಿ ರಾಣೀಬಿನ್ನೂರು ಹರಿಹರ ಹೊನ್ನಾಳಿ ಪ್ರಾಂತ್ಯಗಳಲ್ಲಿದ್ದ ವೇದವಿದ್ಯಾಪಾರಂಗತರು ನಿಯತವಾಗಿ ಗದ್ವಾಲ ಸಂಸ್ಥಾನದ ವಿದ್ವತ್ಸಭೆಗೆ ಶಿಷ್ಯಸಹಿತರಾಗಿ ಬಂದು ಸನ್ಮಾನಪಡೆಯುತ್ತಿದ್ದರು. ಪ್ರಯಾಣ ಸೌಕರ್ಯಗಳಿಲ್ಲದ ಕಾಲದಲ್ಲಿ ಕುದುರೆಗಳೇ ಪಂಡಿತರ ಪುಷ್ಪಕವಿಮಾನಗಳಾಗಿದ್ದವು. ವಿನೋದಗೋಷ್ಠಿಯಲ್ಲಿ ಪ್ರಸ್ತಾವನೆಗೆ ಬರುವಂತೆ ವಿದ್ವದಶ್ವಗಳು ಹೊಟ್ಟೆಯಲ್ಲೊಂದುಮರಿ, ಹಿಂಬಾಲಿಸಿ ಬರುವದೊಂದುಮರಿ ಎಂಬ ರೀತ್ಯಾ ಪಂಡಿತರ ಪೂಜೆ ಭೋಜನ ಸಾಮಗ್ರಿಗಳ ಕಂಟಲೆಯನ್ನು ಹೊತ್ತುಕೊಂಡು ನಡೆಯುತ್ತಿದ್ದವು. ಕಾರ್ತಿಕ ಪೌರ್ಣಿಮೆಗೆ ಗದ್ವಾಲಿಯನ್ನು ಸೇರುವ ಅವಸರಕ್ಕೆ ದೀಪಾವಳಿಯ ಭಾವನಬಿದಿಗೆಯು ವಿದ್ವಾಂಸರ ಪ್ರಯಾಣದ ಪ್ರಶಸ್ತದಿನವಾಗುತ್ತಿತ್ತು. ದೀಪಾವಳಿಯಾಗುತ್ತಲೇ ಶಿಷ್ಯಸಹಿತರಾಗಿ ಹೊರಟ ಪಂಡಿತರುಗಳು ದೇಶಪರ್ಯಟನಮಾಡಿಕೊಂಡು ಯುಗಾದಿಗೆ ಸ್ವಸ್ಥಳವನ್ನು ಸೇರುತ್ತಿದ್ದರು. ಶಿಷ್ಯರ ಸಂಖ್ಯೆ ಹೆಚ್ಚಾದಂತೆ ಪಂಡಿತರ ಪ್ರಾಶಸ್ತ್ಯವಾದರೂ ಹೆಚ್ಚುತ್ತಿತ್ತು. ಶಿಷ್ಯಸಂಭಾವನೆಯೆಂದು ವಿದ್ವತ್ಸಭೆಗಳಲ್ಲಿ ಪ್ರತ್ಯೇಕವಾಗಿ ಬರುವ ಹಣವು ಗುರುಗಳಿಗೇ ಸೇರುವ ಸಂಪ್ರದಾಯವಿದ್ದುದರಿಂದ ತತ್ಕಾಲದ ಅನುಕೂಲತೆಗಾದರೂ ದೊರೆತಷ್ಟು ಶಿಷ್ಯರನ್ನು ಕರೆದುಕೊಂಡೇ ಗುರುಗಳು ದಿಗ್ಜಯಮಾಡುತ್ತಿದ್ದರು. ಮೇಲೆ ಹೇಳಿದ ಸ್ಥಳಗಳ ಪಂಡಿತರು ಮಂತ್ರಾಲಯದ ಮಾರ್ಗವಾಗಿ ವೇಣೀಸೋಮಪುರಕ್ಕೆ ಬಂದು ದಾಸರನ್ನೂ ವ್ಯಾಸತತ್ವಜ್ಞರನ್ನೂ ಕಂಡು ಗದ್ವಾಲಗೆ ಹೋಗುತ್ತಿದ್ದರು. ಪ್ರಾಯಿಕವಾಗಿ ಸೋಮಪುರದಲ್ಲಿ ಸಭಾಯಾತ್ರಿಕರು ಸೇರುವ ದಿವಸಗಳು ಉತ್ಥಾನೆ

ಕಾದಶಿ ದ್ವಾದಶಿ ತ್ರಯೋದಶೀ ತಿಥಿಗಳಾಗಿರುತ್ತಿದ್ದವು. ಗೋಪಾಲದಾಸರ ಮತ್ತು ವ್ಯಾಸತತ್ವಜ್ಞರ ಖ್ಯಾತಿಯು ವಿದ್ವಾಂಸರುಗಳನ್ನಾಕರ್ಷಣಮಾಡುತ್ತಿತ್ತು. ಮೇಲಾಗಿ ಗೋಪಾಲದಾಸರು ಬಂದ ಪಂಡಿತರುಗಳಿಗೆ ಉಚಿತವರಿತು ಸನ್ಮಾನಕೊಡುತ್ತಿದ್ದರು. ಮೇಲೆ ಹೇಳಿದ ಸ್ಥಳಗಳ ಪಂಡಿತರಿಗೆ ಹೆಳವನಕಟ್ಟೆಯ ಗಿರಿಯಮ್ಮನ ಹೆಸರೆತ್ತಿದರಾಗುತ್ತಿರಲಿಲ್ಲ. ದಾಸಕೂಟದವರಿಂದ ಧರ್ಮ ಮಾರಣವಾಯಿತೆಂದು ಗಳಹುತ್ತಿದ್ದರು. ಹೆಂಗಸಿಗೇಕೆ ರಾಗರಾಗವಾಗಿ ಹಾಡುವ ಭಜನೆ? ಹೆಂಗಸಿಗೇಕೆ ಪ್ರತಿಮೆಯ ಪೂಜೆ? ಹೆಂಗಸು ಕವಿತ್ವನಾಡುವದಂದರೇನು? ಎಂದು ಗಿರಿಯಮ್ಮನನ್ನು ಜರಿಯುತ್ತಿದ್ದರು. ಸ್ತ್ರೀಯರಿಗೆ ಗೃಹಕಾರ್ಯನಿರ್ವಾಹ ಪತಿಸೇವಾ ಪುರಾಣಶ್ರವಣಗಳ ವಿನಾ ಹೆಚ್ಚು ಸ್ವಾತಂತ್ರ್ಯಕೊಡುವುದು ಶಾಸ್ತ್ರವಿರೋಧವೆನ್ನುತ್ತಿದ್ದರು. ಇದಕ್ಕೆ ಪ್ರತಿಯಾಗಿ ಆ ಪ್ರಾಂತ್ಯದ ಜನರು ಆಕೆಯು ರಚಿಸಿದ ದೇವರನಾಮುಗಳನ್ನು ಹಾಡುವದು, ಆಕೆಯನ್ನು ದೇವತಾಮನುಷ್ಯಳೆಂದು ತಿಳಿಯುವದು, ಆಕೆಗೆ ದೇವರು ಪ್ರತ್ಯಕ್ಷನೆನ್ನುವುದು, ಆಕೆಗೆ ಸಾಷ್ಟಾಂಗ ನಮಸ್ಕಾರಮಾಡುವುದು, ಈರೀತಿ ನಡೆದುಕೊಳುತ್ತಿದ್ದರು. ಸಕಲ ಜಾತಿಯ ಜನರೂ ಆಕೆಯ ಬಾಯಿಂದ ಬಂದಮಾತನ್ನು ವರಪ್ರಸಾದವೆನ್ನುತ್ತಿದ್ದರು. ಆಕೆಯ ಕೈಯಿಂದ ಬಂದ ವಿಭೂತಿ ಮೃತ್ತಿಕೆಗಳು ಮಹಾಜ್ವರ ಪರಿಹಾರಕವೆನ್ನುತ್ತಿದ್ದರು. ಆಕೆಯನ್ನು ಹಿಂದೆ ದೂಷಿಸುತ್ತಿದ್ದ ಪಂಡಿತರಾದರೂ ಆಕೆಯೇನಾದರೂ ಭೋಜನಕ್ಕೆ ಕರೆದರೆ ಪಾಕನೇಮವೆನ್ನದೆ ಎದುರಿಗೆ ನೀನು ಮಹಾಜ್ಞಾನಿಯೆಂದು ಶ್ಲಾಘಿಸಿ ಭೋಜನಮಾಡಿ ಬರುತ್ತಿದ್ದರು. ಆ ಪಂಡಿತರ ಬಂಧುವರ್ಗದ ಸ್ತ್ರೀಯರು ಗಿರಿಯಮ್ಮನ ಶಿಷ್ಯರಾಗಿ ನಡೆದುಕೊಳ್ಳುತ್ತಿದ್ದರು. ಗೋಪಾಲದಾಸರಿಗೆ ಈ ಕುಹಕವರ್ತನೆಗಳು ತಿಳಿಯದಿರಲಿಲ್ಲ.

ಗಿರಿಯಮ್ಮನನ್ನು ಹಿಂದುಗಡೆ ದೂಷಿಸುತ್ತಿದ್ದ ಪಂಡಿತರು ಸೋಮಪುರಕ್ಕೆ ಬಂದ ಒಂದು ಸಮಯದಲ್ಲಿ ಗೋಪಾಲದಾಸರು ವೇಣುಗೋಪಾಲ ದೇವಾಲಯದಲ್ಲಿ ಕುಳಿತು ಎಲ್ಲರ ಮನಸ್ಸಿನಮೇಲೆ ಪರಿಣಾಮಕಾರಿಯಾಗುವಂತೆ ಬಿಂಬೋಪಾಸನದಮೇಲೆ ಭಾಷಣಮಾಡಿದರು. ವ್ಯಾಸತತ್ವಜ್ಞರು ಯಾವಾಗಲೂ ದಾಸರನ್ನಗಲುತ್ತಿರಲಿಲ್ಲ. ತಮಗೆ ನಮಸ್ಕಾರಮಾಡಲು

ಬಂದವರಿಗೆ ಗೋಪಾಲದಾಸರ ಕಡೆಗೆ ಕೈತೋರಿಸುತ್ತಿದ್ದರು. ದಾಸರಿಗೆ ನಮಸ್ಕಾರಮಾಡಲು ಹಿಂದೆಗೆಯುತ್ತಿದ್ದವರು ಯತಿಗಳಾದುದರಿಂದ ವ್ಯಾಸ ತತ್ವಜ್ಞರ ಮಾತನ್ನು ಮೀರುವದಕ್ಕಾಗುತ್ತಿರಲಿಲ್ಲ. ಹೀಗಿರಲು ಸಂಧ್ಯಾ ಕಾಲವಾಯಿತೆಂದು ಎಲ್ಲರೂ ತುಂಗಭದ್ರೆಗೆ ನಡೆದರು. ಎಲ್ಲರನ್ನನುಸರಿಸಿ, ಗೋಪಾಲದಾಸರೂ ಸೋಪಾನಘಟ್ಟಕ್ಕೆ ಬಂದರು. ಪಂಡಿತರು ಒಬ್ಬರನ್ನು ಕಂಡಾಗ ಮತ್ತೊಬ್ಬರು ಹೆಚ್ಚು ಮಡಿಮಾಡಿ ತೋರಿಸುವಂತೆ ಮೂರುಮೂ ರುವೇಳೆ ಒದ್ದೆಗಳನ್ನು ಬದಲಾಯಿಸಿ ಸಂಧ್ಯಾವಂದನೆಗೆ ಕುಳಿತರು. ಗೋಪಾ ಲದಾಸರು ಬೇಕೆಂತಲೇ ವಸ್ತ್ರಾಂತರಮಾಡಿಕೊಳ್ಳದೆ ಸಂಧ್ಯಾವಂದನೆಗಾರಂ ಭಿಸಿದರು. ಇದನ್ನು ಕಂಡ ಪಂಡಿತರು ತಮ್ಮ ಸಂಧ್ಯಾವಂದನೆಯನ್ನು ಬಿಟ್ಟು ದಾಸರು ಮಡಿಯುಡಲಿಲ್ಲವೆಂದು ಗುಜಗುಟ್ಟಲಾರಂಭಿಸಿದರು. ದಾಸ ಕೂಟದವರೇ ಹೀಗೆಂದರು. ಗಿರಿಯಮ್ಮನೂ ಇದೇ ಗುಂಪಿನವಳೆಂದರು. ಎಲ್ಲವನ್ನೂ ಕೇಳಿ ದಾಸರು ನಗುತ್ತಾ ದೇವಾಲಯಕ್ಕೆ ಬಂದರು. ಸೀನಪ್ಪ ದಾಸರೂ ದಾಸಪ್ಪದಾಸರೂ ಕೀರ್ತನದ ಸಿದ್ಧತೆಯನ್ನು ನಡೆಸಿದರು. ಸ್ವಾಮಿ ಗಳ ಜಪವಾದೊಡನೆಯೇ ದಾಸರ ಕೀರ್ತನಕ್ಕಾರಂಭವಾಯಿತು. ನದಿಯಲ್ಲಿ ಮಡಿಯ ಗೊಂದಲವೇ ನಡೆದಿದ್ದುದರಿಂದ ದಾಸರು—

## ಸುಳಾದಿ

### ಧೃವತಾಳ.

ಮಡಿಮಾಡಬೇಕು ಒಳ್ಳೇ ನಡತೆ ಕಲಿಯಬೇಕು
ಎಡಹಿಮುಗ್ಗುತ ನೀರಮಡುವಿನೊಳಗೆ ಪೋಗಿ
ಬುಡುಗುಳಿಯಂತೆ ಮಿಂದು ಗುಡುಗುಡುಗುಟ್ಟುತ
ನಡುವೆ ಮಂತ್ರಗಳ ಕಡುವೇಗ ನುಡಿದು ನಾಮ
ಬಡಿದು ಮುದ್ರೆಯ ಹಚ್ಚಿ ಜಡದೇಹತೊಳೆದು
ಅಡಿಗಡಿಗೆ ಕಾಮಕ್ರೋಧ ಒಡಲೊಳು ಮಲಮೂತ್ರ
ಕ್ಷುಧಿತ ರಕ್ತಮಾಂಸ ಕಡುಘೋರ ಇಂದ್ರಿಯಗಳ
ಕೊಡದೊಳು ಮದ್ಯತುಂಬಿ ಮುಡಿಗೆ ಪೂಮಾಲೆಸುತ್ತಿ
ಕಡುಪರಿಮಳದ್ರವ್ಯ ಸುಗಂಧಲೇಪಿಸಿ

ನಡುಬೀದಿಯೊಳಗಿಟ್ಟು ಬೆಡಗು ತೋರಿಸಿನ್ನು
ಮಡಿಮಾಡಿದರದು ಮಡಿಯಾಗಬಲ್ಲದೆ ಕಂ
ಡೆಡೆಯಲ್ಲಿ ವ್ಯಾಪ್ತನಾದ ಗೋಪಾಲವಿಠಲನೆಂದು
ದೃಢನುಡಿಯನೊಮ್ಮೆನುಡಿದು ಮಡಿಮಾಡಿದವ
ಮಡಿವಂತ ಮಡಿವಂತ ಮಡಿವಂತನೋ ||೧||

ಮಟ್ಟತಾಳ.

ಮಡುವಿನೊಳಗೆ ಇದ್ದ ಕರಿರಾಜನ ನೋಡು
ಕಡುಭಲಭಕುತ ಪ್ರಹ್ಲಾದನ ನೋಡು
ಅಡವಿಯಸೇರಿದ ಧೃವರಾಯನ ನೋಡು
ಕಡುಪಾತಕಿ ಅಜಮಿಳನ ನೀನೆ ನೋಡು
ಎಡೆಯಕೊಂಡೋಡಿದ ಹನುಮಂತನ ನೋಡು
ಕಡೆಮೊದಲಿಲ್ಲದ ಮುನಿಗಳನೇ ನೋಡು
ಕಡಲಶಯನ ಗೋಪಾಲವಿಠಲನಾಮ
ನುಡಿದರಲ್ಲದೆ ಮಡಿಮಾಡಿ ದಣಿದರೆ ||೨||

ತ್ರಿಪುಟತಾಳ.

ಗುರುಮುಖವಿರಬೇಕು ಹರಿದೈವವೆನಬೇಕು
ಪರಉಪಕಾರ ಇರಬೇಕು ಪ್ರತಿಕ್ಷಣ
ಪರರು ತನ್ನವರು ಸಮರೆಂದು ತಿಳಿಯಬೇಕು
ಹಿರಿದುಹಿಗ್ಗದೆ ತಾನಸ್ವತಂತ್ರನೆನಬೇಕು
ಪರಮಾಣುಸ್ಥಳದಲ್ಲಿ ಹರಿವ್ಯಾಪ್ತನೆನಬೇಕು ಈ
ಪರಿಯಲ್ಲಿ ತಿಳಿದರೆ ಅವನೆ ಮುಕ್ತಿಯೋಗ್ಯ
ಶಿರಿರಮಣ ನಮ್ಮ ಗೋಪಾಲವಿಠಲನ
ಕರುಣಕ್ಕೆ ಪಾತ್ರನಾದವನೆ ಇದನರಿವ ||೩||

ಬಂದವರಿಗೆ ಗೋಪಾಲದಾಸರ ಕಡೆಗೆ ಕೈತೋರಿಸುತ್ತಿದ್ದರು. ದಾಸರಿಗೆ ನಮಸ್ಕಾರಮಾಡಲು ಹಿಂಡೆಗೆಯುತ್ತಿದ್ದವರು ಯತಿಗಳಾದುದರಿಂದ ವ್ಯಾಸ ತತ್ವಜ್ಞರ ಮಾತನ್ನು ಮೀರುವದಕ್ಕಾಗುತ್ತಿರಲಿಲ್ಲ. ಹೀಗಿರಲು ಸಂಧ್ಯಾ ಕಾಲವಾಯಿತೆಂದು ಎಲ್ಲರೂ ತುಂಗಭದ್ರೆಗೆ ನಡೆದರು. ಎಲ್ಲರನ್ನನುಸರಿಸಿ, ಗೋಪಾಲದಾಸರೂ ಸೋಪಾನಘಟ್ಟಕ್ಕೆ ಬಂದರು. ಪಂಡಿತರು ಒಬ್ಬರನ್ನು ಕಂಡಾಗ ಮತ್ತೊಬ್ಬರು ಹೆಚ್ಚು ಮಡಿಮಾಡಿ ತೋರಿಸುವಂತೆ ಮೂರುಮೂ ರುವೇಳೆ ಒದ್ದೆಗಳನ್ನು ಬದಲಾಯಿಸಿ ಸಂಧ್ಯಾವಂದನೆಗೆ ಕುಳಿತರು. ಗೋಪಾ ಲದಾಸರು ಬೇಕೆಂತಲೇ ವಸ್ತ್ರಾಂತರಮಾಡಿಕೊಳ್ಳದೆ ಸಂಧ್ಯಾವಂದನೆಗಾರಂ ಭಿಸಿದರು. ಇದನ್ನು ಕಂಡ ಪಂಡಿತರು ತಮ್ಮ ಸಂಧ್ಯಾವಂದನೆಯನ್ನು ಬಿಟ್ಟು ದಾಸರು ಮಡಿಯುಡಲಿಲ್ಲವೆಂದು ಗುಜಗುಟ್ಟಲಾರಂಭಿಸಿದರು. ದಾಸ ಕೂಟದವರೇ ಹೀಗೆಂದರು. ಗಿರಿಯಮ್ಮನೂ ಇದೇ ಗುಂಪಿನವಳೆಂದರು. ಎಲ್ಲವನ್ನೂ ಕೇಳಿ ದಾಸರು ನಗುತ್ತಾ ದೇವಾಲಯಕ್ಕೆ ಬಂದರು. ಸೀನಪ್ಪ ದಾಸರೂ ದಾಸಪ್ಪದಾಸರೂ ಕೀರ್ತನದ ಸಿದ್ಧತೆಯನ್ನು ನಡೆಸಿದರು. ಸ್ವಾಮಿ ಗಳ ಜಪವಾದೊಡನೆಯೇ ದಾಸರ ಕೀರ್ತನಕ್ಕಾರಂಭವಾಯಿತು. ನದಿಯಲ್ಲಿ ಮಡಿಯ ಗೊಂದಲವೇ ನಡೆದಿದ್ದುದರಿಂದ ದಾಸರು—

## ಸುಳಾದಿ

### ಧೃವತಾಳ.

ಮಡಿಮಾಡಬೇಕು ಒಳ್ಳೇ ನಡತೆ ಕಲಿಯಬೇಕು
ಎಡಹಿಮುಗ್ಗುತ ನೀರಮಡುವಿನೊಳಗೆ ಪೋಗಿ
ಬುಡುಗುಳಿಯಂತೆ ಮಿಂದು ಗುಡುಗುಡುಗುಟ್ಟುತ
ನಡುವೆ ಮಂತ್ರಗಳ ಕಡುವೇಗ ನುಡಿದು ನಾಮ
ಬಡಿದು ಮುದ್ರೆಯ ಹಚ್ಚಿ ಜಡದೇಹತೊಳೆದು
ಅಡಿಗಡಿಗೆ ಕಾಮಕ್ರೋಧ ಒಡಲೊಳು ಮಲಮೂತ್ರ
ಝುಡಿತ ರಕ್ತಮಾಂಸ ಕಡುಘೋರ ಇಂದ್ರಿಯಗಳ
ಕೊಡದೊಳು ಮದ್ಯತುಂಬಿ ಮುಡಿಗೆ ಪೂಮಾಲೆಸುತ್ತಿ
ಕಡುಪರಿಮಳದ್ರವ್ಯ ಸುಗಂಧಲೇಪಿಸಿ

ನಡುಬೀದಿಯೊಳಗಿಟ್ಟು ಬೆಡಗು ತೋರಿಸಿನ್ನು
ಮಡಿಮಾಡಿದರದು ಮಡಿಯಾಗಬಲ್ಲದೆ ಕಂ
ಜೆಡೆಯಲ್ಲಿ ವ್ಯಾಪ್ತನಾದ ಗೋಪಾಲವಿಠಲನೆಂದು
ದೃಢನುಡಿಯನೊಮ್ಮೆನುಡಿದು ಮಡಿಮಾಡಿದವ
ಮಡಿವಂತ ಮಡಿವಂತ ಮಡಿವಂತನೋ ||೧||

ಮಟ್ಟತಾಳ.

ಮಡುವಿನೊಳಗೆ ಇದ್ದ ಕರಿರಾಜನ ನೋಡು
ಕಡುಛಲಭಕುತ ಪ್ರಹ್ಲಾದನ ನೋಡು
ಅಡವಿಯಸೇರಿದ ಧೃವರಾಯನ ನೋಡು
ಕಡುಪಾತಕಿ ಅಜಮಿಳನ ನೀನೆ ನೋಡು
ಎಡೆಯಕೊಂಡೋಡಿದ ಹನುಮಂತನ ನೋಡು
ಕಡೆಮೊದಲಿಲ್ಲದ ಮುನಿಗಳನೇ ನೋಡು
ಕಡಲಶಯನ ಗೋಪಾಲವಿಠಲನಾಮ
ನುಡಿದರಲ್ಲದೆ ಮಡಿಮಾಡಿ ದಣಿದರೆ ||೨||

ತ್ರಿಪುಟತಾಳ.

ಗುರುಮುಖವಿರಬೇಕು ಹರಿದೈವವೆನಬೇಕು
ಪರಉಪಕಾರ ಇರಬೇಕು ಪ್ರತಿಕ್ಷಣ
ಪರರು ತನ್ನವರು ಸಮರೆಂದು ತಿಳಿಯಬೇಕು
ಹಿರಿದುಹಿಗ್ಗದೆ ತಾನಸ್ವತಂತ್ರನೆನಬೇಕು
ಪರಮಾಣುಸ್ಥಳದಲ್ಲಿ ಹರಿವ್ಯಾಪ್ತನೆನಬೇಕು ಈ
ಪರಿಯಲ್ಲಿ ತಿಳಿದರೆ ಅವನೆ ಮುಕ್ತಿಯೋಗ್ಯ
ಸಿರಿರಮಣ ನಮ್ಮ ಗೋಪಾಲವಿಠಲನ
ಕರುಣಕ್ಕೆ ಪಾತ್ರನಾದವನೆ ಇದನರಿವ ||೩||

ಅಟ್ಟತಾಳ.

ನಿತ್ಯಸಂಸಾರಿಗೆ ಅತ್ಯಂತ ದೂರವು
ದೈತ್ಯಗಂತು ಸ್ವಪ್ನದಲ್ಲಿ ಸಾಸ್ತಿ
ಸತ್ವ ಜೀವರಿಗೆ ಹರಿಕರುಣಮಾಳ್ಪ
ತತ್ವಾಭಿಮಾನಿದೇವತೆಗಳಿಗೆ ಪೇಳಿ
ಮೊತ್ತದೋಷಂಗಳ ಕಲಿಯಾಧೀನಮಾಡಿ
ಉತ್ತಮಕರ್ಮಂಗಳ ಮಾಡಿಸಿ
ಸತ್ಯಲೋಕಾಧಿಪನ ಕಲ್ಪಾಂತರದಲ್ಲಿ
ಸತ್ವಜೀವಿಗಳ ವಿರಜೇಲಿ ಬ್ರಹ್ಮನ ಸಹ
ಮುಕ್ತಿಯನೈದಿಪ ಶಕ್ತ್ಯನುಸಾರ
ಸತ್ಯಸಂಕಲ್ಪ ಗೋಪಾಲವಿಠಲನ
ಭೃತ್ಯರೆ ಧನ್ಯರೊ ಉತ್ತಮೋತ್ತಮರೋ ||೪||

ಆದಿತಾಳ.

ಎತ್ತಪೋದರೇನು ಎತ್ತನಿಂತರೇನು
ಚಿತ್ತಬಂದಂತೆ ಚಿಗಿದಾಡಿದರೇನು
ಚಿತ್ತದಲ್ಲಿ ಹರಿಯ ಕಾಣುವ ಭಕ್ತರಿಗೆ
ಮತ್ತೆ ಇತರ ಜನರ ಪರವೆ ಏನೊ
ಮತ್ತೆರವಿಯನೋಡಿ ಘೂಕ ಜರಿದರೇನು
ಚಿತ್ತಬಂದಪರಿ ಜನರಾಡಿದರೇನು
ಉತ್ತಮೋತ್ತಮ ನಮ್ಮ ಗೋಪಾಲವಿಠಲನ
ಚಿತ್ತಾನುಸಾರ ನಡೆದವನೆ ಧನ್ಯನೋ ||೫||

ಜತೆ.

ಆವಾವಕರ್ಮಗಳ ದೇವಗರ್ಪಿಸುವ
ಜೀವರೆ ಧನ್ಯರೊ ಗೋಪಾಲವಿಠಲ ||೧||

ಎಂಬದಾಗಿ ಹಾಡಿ ಪುಡಿಯ ನಿಜತತ್ವವನ್ನು ವಿವರಿಸಿದರು. ಸಂಧ್ಯಾವಂದನೆಗೆ ಪ್ರಾರಂಭಮಾಡುವಾಗ ಉದಕಪ್ರೋಕ್ಷಣೆಮಾಡಿಕೊಳ್ಳುತ್ತಾ

ಅಪವಿತ್ರಃ ಪವಿತ್ರೋವಾ
ಸರ್ವಾವಸ್ಥಾಂಗತೋಪಿವಾ
ಯಃಸ್ಮರೇತ್ ಪುಂಡರೀಕಾಕ್ಷಂ
ಸಬಾಹ್ಯಾಭ್ಯಂತರಶ್ಶುಚಿಃ ||೧||

ತಾ|| ಅಪವಿತ್ರನಾಗಲಿ, ಪವಿತ್ರನಾಗಲಿ, ಸಕಲಾವಸ್ಥೆಗಳನ್ನೂ ಹೊಂದಿದವನಾಗಲಿ, ಪುಂಡರೀಕಾಕ್ಷನಾದ ಪರಮಾತ್ಮನನ್ನು ಯಾವನು ಸ್ಮರಿಸುವನೋ ಅವನು ಹೊರಗೂ ಒಳಗೂ ಶುಚಿರ್ಭೂತನಾಗುವನು.

ಎಂಬದಾಗಿ ಶ್ಲೋಕವನ್ನು ಹೇಳಿಕೊಳ್ಳುವರು ಶ್ಲೋಕಾರ್ಥವನ್ನು ತಿಳಿದು ನಡೆಯುವುದಿಲ್ಲ. 'ಆಸನಪ್ರಾಣಾಯಾಮೇವಿನಿಯೋಗಃ' ಎನ್ನುತ್ತಾ ಆಸನಹಾಕಿ ಕೂಡುವುದಿಲ್ಲ; ಪ್ರಾಣಾಯಾಮವನ್ನಂತು ಕ್ರಮವರಿತು ಮಾಡುವುದಿಲ್ಲ. ಹೀಗಿದ್ದರೂ ಪರನಿಂದೆಮಾಡುವುದನ್ನು ಜನರು ಬಿಡುವುದಿಲ್ಲ.

ನಜಲೈರ್ಮಾರ್ಜನಂ ಸಂಧ್ಯಾ
ನಮಂತ್ರೋಚ್ಚಾರಣಾದಿಭಿಃ
ಸಂಧೀಯತೇ ಪರಬ್ರಹ್ಮಾ
ಸಾಸಂಧ್ಯಾಸದ್ಭಿರುಚ್ಯತೆ ||೧||

ಎಂಬರೀತ್ಯಾ ಸಂಧ್ಯಾವಂದನ ಮಾಡುವವರು ಪರಬ್ರಹ್ಮನ ಸಾಕ್ಷಾತ್ಕಾರ ಮಾಡಿಕೊಳ್ಳುವರು. ಬ್ರಹ್ಮಸಾಕ್ಷಾತ್ಕಾರಕ್ಕೆ ವಿಧಿವತ್ತಾಗಿಮಾಡುವ ಸಂಧ್ಯಾವಂದನೆಯೊಂದು ಸಾಲದೆ? ಎಂದು ಮೊದಲಾಗಿ ಸಂಧ್ಯಾಭಾಷ್ಯವನ್ನೇ ಕೀರ್ತನರೂಪದಲ್ಲಿ ಅನುವಾದಮಾಡಿದರು. ವಿಧಿವತ್ತಾಗಿ ಮಾಡುವ ಸಂಧ್ಯೆಯ ಫಲವೇನೆಂಬುದಕ್ಕೆ ಪೌರಾಣಿಕ ಆಖ್ಯಾನಗಳನ್ನು ವಿಸ್ತಾರವಾಗಿ ವಿವರಿಸಿದರು. ದಾಸರ ಅನುವಾದವನ್ನು ಕೇಳಿ ಪಂಡಿತರ ಮನಸ್ಸು ಕರಗಿತು. ತಾವು ಅವರ ನಿಂದೆಮಾಡಿದುದು ಅಯುಕ್ತವೆಂದು ಮರುಗಿದರು; ದಾಸರ ಪಾದಗಳಿಗೆರಗಿದರು.

ಗಿರಿಯಮ್ಮನನ್ನು ಬಲು ನಿಂದಿಸುತ್ತಿದ್ದ ಪಂಡಿತನೊಬ್ಬನು 'ನಸ್ತ್ರೀ ಸ್ವಾತಂತ್ರ್ಯಮರ್ಹತಿ' ಎಂಬ ಸ್ಮೃತಿವಾಕ್ಯವಿರುವಾಗ ಸ್ತ್ರೀಯರು ಗಾನಮಾಡುವುದು, ದೇವರ ಮುಂದೆ ನರ್ತನಸೇವಾ ಮಾಡುವುದು, ಕವಿತ್ವಮಾಡುವುದು; ಇಂಥಾ ಕಾರ್ಯಗಳಲ್ಲಿ ಪ್ರವೃತ್ತರಾಗುವುದು ಗರ್ಹ್ಯವಲ್ಲವೇ ಎಂದು ಪ್ರಶ್ನೆಮಾಡಿದನು.

ದಾಸರು—'ಇಷ್ಟುಮಾತ್ರಕ್ಕೇ ಸ್ತ್ರೀಯರು ಯಾವಸ್ವಾತಂತ್ರ್ಯವಹಿಸಿದಂತಾಯಿತು? ಅಥವ ಅವರಿಗೆ ಯಾವ ಸ್ವಾತಂತ್ರ್ಯವನ್ನು ಕೊಟ್ಟಂತಾಯಿತು? ಉಪನಿಷದಾದಿ ಗ್ರಂಥಗಳಲ್ಲಿ ಬ್ರಹ್ಮಜಿಜ್ಞಾಸಾಮಾಡಿದ ಸ್ತ್ರೀಯರ ಉದಾಹರಣೆಗಳಿಲ್ಲವೆ? ಪುರಾಣಗಳಲ್ಲಿ ಸುಲಭೆ ಮೊದಲಾದ ಯೋಗಿನಿಯರ ಚರಿತ್ರೆಗಳಿಲ್ಲವೆ? ವರ್ತಮಾನಕಾಲದಲ್ಲಿ ಮಧುರವಾಣಿ ರಾಮಭದ್ರಾಂಬೆಯರಂಥಾ ಕವಯಿತ್ರಿಯರ ಸಂಸ್ಕೃತಕಾವ್ಯಗಳು ರಾಜಸಭೆಗಳಲ್ಲಿ ಮಾನ್ಯವಾಗಿಲ್ಲವೆ? ಸ್ತ್ರೀಯರು ಸಂತತಿದಾಯಕರಾದ್ದರಿಂದ ಅವರ ದೇಹಗಳು ಹೆಚ್ಚಿನ ಸ್ವತಂತ್ರಕೆಲಸಗಳಿಗೆ ಅರ್ಹಗಳಲ್ಲವೆಂದು ಸ್ಮೃತಿಕಾರರು 'ನಸ್ತ್ರೀಸ್ವಾತಂತ್ರ್ಯಮರ್ಹತಿ' ಎಂದು ಬರೆದಿರುವರು. ಅಂದಮಾತ್ರಕ್ಕೇ ಸ್ತ್ರೀಯರು ದೇವರ ಭಜನೆ ಮಾಡಬಾರದೆ? ಭಕ್ತಿಪುಳಕಿತರಾಗಿ ಯಾರಮುಂದಲ್ಲ, ತಮ್ಮನ್ನು ಸೃಷ್ಟಿಸಿದ ಪರಮಾತ್ಮನ ಮುಂದೆ ನರ್ತನಮಾಡಬಾರದೆ? ಸ್ಫೂರ್ತಿಯಿಂದ ಬಂದ ಮಾತುಗಳು ಕವಿತೆಗಳಾದರೆ ತಪ್ಪೇನು? ಗಾನದ ಅಧಿದೇವತೆಯು ಸ್ತ್ರೀಯಳು. ಗಾನಾಧಿಕಾರಿಗಳು ಸ್ತ್ರೀಯರು. ಸ್ತ್ರೀಯರ ಮಂಜುಳಧ್ವನಿಯು ಪುರುಷರಿಗಿಲ್ಲ. ನೀವು ಯಾರನ್ನು ಮನಸ್ಸಿನಲ್ಲಿಟ್ಟುಕೊಂಡು ಆಕ್ಷೇಪಿಸುವಿರೋ ಆ ನಮ್ಮ ಶಿಷ್ಯಳು ಗಿರಿಯಮ್ಮನು ಸಾಮಾನ್ಯಸ್ತ್ರೀಯಳಲ್ಲ. ಆಕೆಯಂತೆ ಸಾಧನೆಮಾಡುವುದು ನಮ್ಮಂಥವರಿಗೆ ಸಾಧ್ಯವಿಲ್ಲ. ಆಕೆಯ ಭಕ್ತಿ ನಮಗಿಲ್ಲ. ಆಕೆಯನಿಂದೆಯು ಸ್ತೋತ್ರಮದ್ರೋಹವಾಗುವುದು. ಆಕೆಯನ್ನು ವಂದಿಸಿದವರು ಉದ್ಧಾರವಾಗುವಂತೆ ನಿಂದಿಸಿದವರು ನರಕಭಾಜನರಾಗುವರು. ಶ್ರೀಕೃಷ್ಣಪರಮಾತ್ಮನು ಗೋಪಿಯರ ಭಕ್ತಿಯುತವಾದ ಗಾನಕ್ಕೆ ಮೆಚ್ಚಿದಂತೆ ಮುನಿಗಳ ಶುಷ್ಕಕರ್ಮಾಚರಣೆಗೆ ಮೆಚ್ಚಲಿಲ್ಲ. ದ್ರೌಪದಿಯ ಸ್ತೋತ್ರಕ್ಕೆ ಒಲಿದುಬಂದಂತೆ ಧರ್ಮನಂದನನ ಸ್ತೋತ್ರಕ್ಕೆ ಬರಲಿಲ್ಲ. ಶ್ರೀಮದಾಚಾರ್ಯರ ಅಕ್ಕ

ಕಲ್ಯಾಣೀದೇವಿಯು ಆಚಾರ್ಯರು ತೌಲವಭಾಷೆಯಲ್ಲಿ ಹಾಡಿದ ಹಾಡುಗಳನ್ನು ಹಾಡಿ ಹಾಡಿ; ಅವರೋಕ್ಷಜ್ಞಾನಿಯೆನಿಸಿದಳು. ಪುರಂದರದಾಸರಂಥವರ ವೈರಾಗ್ಯಕ್ಕೆ ಅವರ ಪತ್ನಿ ಸರಸ್ವತೀಬಾಯಿಯು ಕಾರಣಳಾದಳು. ಶ್ರೀಪುರಂದರವಿಠಲಮುದ್ರಿಕೆಯಿಂದ ಆಕೆಯು ಮಾಡಿರುವ ಪ್ರಮೇಯಪುಂಜಗಳಾದ ದೇವರ ನಾಮುಗಳನ್ನು ಕೇಳಿರುವಿರಷ್ಟೆ! ನೀವಾದರೂ ಅಂತಹ ಸ್ತ್ರೀಯರ ಉದರದಲ್ಲೇ ಜನಿಸಿದವರಷ್ಟೆ!' ಎಂದರು.

ಹೀಗೆ ಮಹಾನುಭಾವರಾದ ಗೋಪಾಲದಾಸರ ಜೀವನಚರಿತ್ರೆಯಲ್ಲಿ ಮೂವತ್ತೇಳು ವರ್ಷಗಳು ಕಳೆದವು. ಬಾಲ್ಯದ ಕೆಲವು ವರ್ಷಗಳ ವಿನಾ ಮಿಕ್ಕ ಜೀವಿತಕಾಲವು ಮಹಾಶ್ರೀಮಂತಿಕೆಯದಾಗಿತ್ತು. ಅದೃಷ್ಟ ಹೇಳುವ ವಿದ್ಯೆಯಿಂದ ಅಗಣಿತ ಧನರಾಶಿಯು ಇವರನ್ನು ಸೇರಿತು. ದ್ರವ್ಯಬಂದಂತೆ ದಾನಮಾಡುವುದು ಇವರ ಸ್ವಭಾವವಾಗಿತ್ತು. ಈ ಪರಿಮಿತಿಯಲ್ಲಿ ಎರಡು ವೇಳೆ ಭರತಖಂಡದ ತೀರ್ಥಕ್ಷೇತ್ರಗಳ ಯಾತ್ರೆಮಾಡಿ, ಅಗಮ್ಯಸ್ಥಳಗಳನ್ನು ನೋಡಿ, ಸಂಚರಿಸಿದೆಡೆಗಳಲ್ಲಿ ಭಾಗವತಧರ್ಮವನ್ನುಪದೇಶಿಸಿದರು. ಗೋಪಾಲದಾಸರ ವೈರಾಗ್ಯವು ಎಲ್ಲವಿಹಿತ ಭೋಗಗಳ ತ್ಯಾಗವಾಗಿರಲಿಲ್ಲ. ಎಲ್ಲದರಮಧ್ಯದಲ್ಲಿದ್ದು ಎಲ್ಲವನ್ನೂ ಅನುಭವಿಸುತ್ತಿದ್ದರೂ ಅದರ ದುರಭಿಮಾನ ಬಿಡುವುದೆಂದಾಗಿತ್ತು. ಆಡಿದಂತೆ ನಡೆಯುವುದೂ, ನಡೆದಂತೆ ಉಪದೇಶ ಮಾಡುವುದೂ ಅವರ ಪದ್ಧತಿಯಾಗಿತ್ತು. ಈ ವಿಷಯದಲ್ಲಿ ವಿಜಯದಾಸರಿಗೂ ಇವರಿಗೂ ಮಾರ್ಗಭೇದವಿತ್ತು. ವಿಜಯದಾಸರೊಡನೆ ಗೋಪಾಲದಾಸರು ಸಂಚಾರಮಾಡಿದಾಗಲೂ ಇವರು ವಿಭವಮೂರ್ತಿಗಳೇ ಆಗಿದ್ದರು. ವಿಜಯದಾಸರು ದೈವಾಯತ್ತವಾಗಿ ಸಕಲವೈಭವಗಳು ದೊರೆತಿದ್ದರೂ ಅದರ ಅನುಭವಮಾಡುತ್ತಿರಲಿಲ್ಲ. ಮೇನೆ ಪಲ್ಲಕ್ಕಿಗಳಲ್ಲಿ ಕೂಡುತ್ತಿರಲಿಲ್ಲ. ಶಾಲುಸಕಲಾತಿಗಳನ್ನು ಹೊದಿಯುತ್ತಿರಲಿಲ್ಲ. ಗೋಪಾಲದಾಸರಾದರೋ ಇದಕ್ಕೆಲ್ಲಾ ಪ್ರತಿಯಾಗಿದ್ದರು. ವಿಜಯದಾಸರಿಗೆ ರಾಜಾಧಿರಾಜರು ಬಹುಮಾನಮಾಡಿದ ಶಾಲುಪೀತಾಂಬರಗಳನ್ನು ತಾವೇ ಹೊದಿಯುತ್ತಿದ್ದರು. ದಾಸರ ಮೇನೆಯಲ್ಲಿಕುಳಿತು ತಾವು ಅವರಿಗಿಂತ ಮುಂದೆ ಪ್ರಯಾಣಮಾಡುತ್ತಿದ್ದರು. ವಿಜಯದಾಸರನ್ನು ಎದುರುಗೊಳ್ಳುವ ಜನರು ಗೋಪಾಲದಾಸರನ್ನೇ ವಿಜಯ

ರಾಯರಿರಬಹುದೆಂದೇ ಭ್ರಮಿಸುತ್ತಿದ್ದರು. ಬಂದವರಿಗೆ ಗೋಪಾಲದಾಸರು ನಿಮ್ಮ ದಾಸರು ಹಿಂದೆ ಪಾದಚಾರಿಗಳಾಗಿ ಬರುತ್ತಿರುವರೆಂದು ತೋರಿಸುತ್ತಿದ್ದರು. ವಿಜಯದಾಸರು—ವಿಭವಮೂರ್ತಿಗಳಿಗೆ ಮರ್ಯ್ಯಾದೆಮಾಡಿರಿ, ನಾನು ಬಡದಾಸ, ಅವರದು ದೇವಜಾತಿ, ನನ್ನದು ಮನುಷ್ಯಜಾತಿಯೆನ್ನುತ್ತಿದ್ದರು. ಇಷ್ಟುಮಾತ್ರದಿಂದ ಗುರುಶಿಷ್ಯರಿಗೆ ವಿರೋಧವಿರಲಿಲ್ಲ. ಭಿನ್ನಜೀವ ಭಿನ್ನ ಕರ್ಮಗಳುಳ್ಳ ಜೀವರ ವಿಚಾರಗಳು ಭಿನ್ನ ಭಿನ್ನವಾಗಿರಬೇಕೆಂದು ವಿಜಯ ದಾಸರಾಡುತ್ತಿದ್ದರು.

ಒಂದು ದಿನ ಗೋಪಾಲದಾಸರು ವ್ಯಾಸತತ್ವಜ್ಞರ ಸಮುಖಕ್ಕೆ ಮೂವರು ತಮ್ಮಂದಿರನ್ನೂ ಕರೆದು, ತಮ್ಮಗಳಿರಾ, ನನ್ನ ಪೂರ್ವಜನ್ಮ ವೃತ್ತಾಂತವನ್ನು ಹೇಳುವೆನು, ಕೇಳಿರೆಂದರು. ಎಲ್ಲರೂ ಕೌತುಕದಿಂದ ದಾಸರ ಮುಂದೆ ಕುಳಿತರು. ದಾಸರು ತಮ್ಮ ಹದಿನಾಲ್ಕು ಜನ್ಮಗಳ ಅನುಭವವನ್ನು ವಿವರಿಸುತ್ತಾ—'ವಾಸನಾ ವಿಶೇಷದಿಂದ ನಾನು ಮ್ಲೇಂಛ ಕಿರಾತಜನ್ಮಗಳಲ್ಲಿ ಸಹ ಬಂದೆನು. ಭೂಪತಿಯ ಜನ್ಮತಾಳಿದಂತೆ ಭಿಕ್ಷುಕನೂ ಆದೆನು. ನಾಲ್ಕು ವಿಪ್ರಜನ್ಮಗಳಲ್ಲಿ ಮಹಾದೇವನನ್ನಾರಾಧಿಸಿದೆನು. ಆ ದೇವನ ಕೃಪೆಯಿಂದ ನನಗೆ ಹರಿಭಕ್ತಿಯುಂಟಾಯಿತು. ನಾನು ಭಜನಾರಂಭಮಾಡಿದಾಗೆಲ್ಲಾ ಮೊದಲು ಮಹಾದೇವನ ಸ್ತೋತ್ರಮಾಡಲು ಇದು ಕಾರಣ. ಪುರಂದರದಾಸರ ತಾರತಮ್ಯ ಪದ್ಧತಿಯನ್ನನುಸರಿಸಲಿಲ್ಲವೆಂದು ಜನರು ನನ್ನನ್ನಾಡಿಕೊಳ್ಳುವರು. ಇಷ್ಟದೇವತಾ ಪ್ರಾರ್ಥನೆ ಮಾಡಿ ಅನಂತರ ದೇವ ತಾರತಮ್ಯ ಚಿಂತನೆ ಮಾಡಿದರೆ ಬಾಧಕವಿಲ್ಲ. ದಾಸಪ್ಪನು (ಗುರು ಗೋಪಾಲದಾಸರು)ನನ್ನನ್ನು ಬಲು ದೊಡ್ಡವನೆಂದು ಭಾವಿಸಿ ನನ್ನ ಪೂರ್ವಜನ್ಮ ವೃತ್ತಾಂತಗಳನ್ನು ತಿಳಿಯಬೇಕೆಂದು ಬಲುವೇಳೆ ಪ್ರಯತ್ನಿಸಿದನು. ಅವನಿಗೆ ನನ್ನ ಸ್ವರೂಪವನ್ನು ತೋರಗೊಡದೆ ನಾನು ಪ್ರತಿಬಂಧಕನಾದೆನು. ಆದುದರಿಂದ ಈ ವಿವರವನ್ನೀಗ ತಿಳಿಸುವೆನು. ಒಂದೆರಡು ಜನ್ಮಗಳಲ್ಲಾದ ಬಾಹ್ಯಾಪರೋಕ್ಷವು ನನಗೇನೂ ಫಲಕಾರಿಯಾಗಲಿಲ್ಲ. ಈ ಜನ್ಮದಲ್ಲಿ ವಿಜಯದಾಸರಂಥಾ ಸ್ವರೂಪೋದ್ಧಾರಕರು ದೊರೆತು ನನಗೆ ಬಿಂಬಾಪರೋಕ್ಷವನ್ನನುಗ್ರಹಿಸಿದರು. ಪ್ರಾರಬ್ಧಕರ್ಮವನ್ನು ಪೂರಯಿಸಲು

ಇನ್ನೆರಡು ಜನ್ಮಗಳನ್ನು ತಾಳುವೆನು. ವ್ಯಾಸತತ್ವಜ್ಞರ ವಂಶದಲ್ಲಿ (ಪೂರ್ವಾಶ್ರಮದ ಮಗನ ಮಗ) ಜನಿಸಿ ಯಜ್ಞಸೋಮಯಾಜಿಯಾಗುವೆನು. ನಮ್ಮ ವಂಶವು ರಂಗಪ್ಪ(ಚಿಕ್ಕತಮ್ಮ)ನಿಂದ ಬೆಳೆಯುವ ಕಾರಣ ಬಲು ಕಾಲದಮೇಲೆ ಆತನ ಸಂತತಿಯಲ್ಲಿ ಬರುವೆನು. ನಮ್ಮ ವಂಶದವರು ಹರಿದಾಸ ವೃತ್ತಿಯನ್ನು ಬಿಟ್ಟು ವೈದ್ಯರೂ ಜ್ಯೋತಿಷ್ಕರೂ ಆಗಿ ಕ್ರಮೇಣ ಪಾಚಕ ಪರಿಚಾರಕ ವೃತ್ತಿಗಿಳಿದು ಹೀನದೀನರಾಗುವರು. ನನ್ನ ವಂಶದ ಯಾವ ಜನನಿಯು ಕುಡಿಯುವುದಕ್ಕೆ ಸಹ ಪಾತ್ರೆಗೆ ಗತಿಯಿಲ್ಲದೆ ಮಣ್ಣುಗಡಿಗೆಗಳಲ್ಲಿ ನೀರನ್ನು ಕುಡಿಯುವಳೋ ಅಂಥವಳ ಉದರದಲ್ಲಿ ನಾನು ಜನಿಸುವೆನು. ಜನಿಸಿದ ಹನ್ನೆರಡು ವರ್ಷಗಳಲ್ಲಿ ನಾನು ಭೂಸ್ಥಾಪನೆ ಮಾಡಿರುವ ನಾಲ್ಕು ಭಾಂಡ ದ್ರವ್ಯದಿಂದ ವಂಶಜರ ದಾರಿದ್ರ್ಯವನ್ನು ಪರಿಹಾರಮಾಡುವೆನು. ಭಾಗವತ ಧರ್ಮದ ಪುನರುದ್ಧಾರವಾಗಬೇಕಾದ ಆ ಕಾಲದಲ್ಲಿ ಬಹಳ ಮಹತ್ವದ ಸಂಗತಿಗಳು ನಡೆಯುವುವು. ನನ್ನ ಮರಣಾನಂತರ ಅಸ್ತಿಗಳನ್ನು ಊರು ಮುಂದಿನ ಭಾವಿಯಲ್ಲಿ ನೀವು ಗೋಪನ ಮಾಡಬೇಕು. ನಾನೇ ಆ ಭಾಂಡವನ್ನು ಗಂಗೆಗೆ ಕೊಂಡೊಯ್ಯುವೆನು. ಅಲ್ಲಿನ ತನಕ ನನ್ನ ವಂಶಜರ್ಯಾರೂ ಮಹಾಯಾತ್ರೆ ಮಾಡಬಾರದು'.ಎಂದು ಮೊದಲಾಗಿ ಆಪ್ತವಾಕ್ಯಗಳನ್ನುಪದೇಶಿಸಿದರು. ಬಾಷ್ಪಪೂರಿತನಯನರಾಗಿ ಎಲ್ಲರೂ ದಾಸರ ವಾಕ್ಯಗಳನ್ನು ಶ್ರವಣ ಮಾಡಿದರು.

ಅದ್ಯಾಪಿ ಸೋಮಪುರದಲ್ಲೂ ಉತ್ತನೂರಲ್ಲೂ ಗೊಪಾಲದಾಸರು ವಾಸಮಾಡಿದ ಮನೆಗಳಿವೆ. ಉತ್ತನೂರಿನ ಮನೆಯು ಬಲು ಶಿಥಿಲವಾಗಿದ್ದರೂ ಅದನ್ನು ಸರಿಮಾಡಿಕೊಳ್ಳುವ ಶಕ್ತಿ ವಂಶೀಕರಿಗಿಲ್ಲ. ಮನೆಯ ಒಂದು ಭಾಗದ ಆವರಣ ಬಿದ್ದುಹೋಗಿದೆ. ಅದೇ ಗೋಪಾಲದಾಸರ ಭಂಡಾರವಿರುವ ಸ್ಥಳವೆಂದು ವಂಶೀಕರು ತೋರಿಸುತ್ತಾರೆ. ಆ ಭಾಗವನ್ನು ಗದ್ವಾಲರಾಜ ಬಂಧುಗಳೊಬ್ಬರು ತಿಳಿಯದೆ ತಮ್ಮ ಬಂಗಲಿಯ ಆವರಣದಲ್ಲಿ ಸೇರಿಸಿಕೊಂಡಿದ್ದರಂತೆ. ಅವರಿಗೆ ಅದರಿಂದ ಬಲು ಬಾಧಕವಾಗಲು ಮತ್ತೆ ದಾಸವಂಶೀಕರ ವಶಕ್ಕೆ ಬಿಟ್ಟುಕೊಟ್ಟರಂತೆ. ಆ ಮನೆಯಲ್ಲಿ ಗೋಪಾಲದಾಸರು ಇಟ್ಟುಕೊಂಡಿದ್ದ ಶಿಥಿಲವಾದ ತಂಬೂರಿಯಿದೆ. ವಿಜಯ

ದಾಸರಿಂದ ಲಬ್ಧವಾದ ವಿಠಲಪ್ರತಿಮೆ ಮತ್ತು ಗೋಪಾಲದಾಸರ ದೇವರ ಪೆಟ್ಟಿಗೆಗಳಿರುವ ಒಂದು ಭಾಗವು ದೇವರ ಮನೆಯೆನಿಸಿದೆ. ವಂಶೀಕರನ್ನು ಕಾಶೀಯಾತ್ರೆಗೆ ಬರುವಿರಾ ಎಂದು ಕೇಳಿದರೆ ಗುರ್ವಾಜ್ಞೆಯಿಲ್ಲವೆನ್ನುತ್ತಾರೆ. ದಾಸರ ಅಸ್ತಿಗಳಿರುವ ಭಾವಿಯಾವುದೆಂದರೆ ಊರು ಮುಂದಿರುವ ಶಿಥಿಲ ವಾದ ಭಾವಿಯೊಂದನ್ನು ತೋರಿಸುತ್ತಾರೆ. ಭಾವಿಯನ್ನಾದರೂ ಏಕೆ ಹೂಳು ತೆಗೆದು ರಿಪೇರಿ ಮಾಡಲಿಲ್ಲವೆಂದರೆ ಹಾಗೆ ಮಾಡಕೂಡದೆಂದು ಆಜ್ಞೆಯಿದೆ ಯೆನ್ನುತ್ತಾರೆ. ಈ ಸಂಗತಿಗಳು ಓದುವವರಿಗೆ ಯಾವದೇ ಪ್ರಕಾರದ ಮಹ ತ್ವಭಾವನೆಯನ್ನುಂಟುಮಾಡದಿದ್ದರೂ ವಂಶೀಕರಿಗಾಗಲಿ ಆ ವೂರಿನವರಿ ಗಾಗಲಿ ಸಾಮಾನ್ಯ ವಿಚಾರಗಳೆನಿಸಿಲ್ಲ.

ಗೋಪಾಲದಾಸರು ತಮ್ಮ ಜೀವಿತದ ಅಂತಿಮ ಸಂವತ್ಸರದಲ್ಲಿ ಸಹ ತಿರುಪತಿಯಾತ್ರೆಯನ್ನು ಬಿಡಲಿಲ್ಲ. ನಲವತ್ತುವರ್ಷಗಳವರಾದ್ದರಿಂದ ಅವ ರದೇಹಶಕ್ತಿ ಕುಂದಿರಲಿಲ್ಲ. ತಮ್ಮಂದಿರು ಚಿಂತಿಸಿದಂತೆ ಕಾಲವಿಚಾರದಲ್ಲಿ ದಾಸರು ಚಿಂತಿಸಲಿಲ್ಲ. ಚಿತ್ರಭಾನು ಸಂವತ್ಸರದ ಬ್ರಹ್ಮೋತ್ಸವದಲ್ಲಿ ಎಂ ದೆಂದೂ -'ದೇವ! ಸ್ಯಾನ್ನಃಪುನರ್ದರ್ಶನಂ' ಎನ್ನುತ್ತಿದ್ದವರು ಅನ್ನಲಿಲ್ಲ.

ಪೋಗುವೆನು ಬರಲಾರೆ ಮರಳಿ, ಇಲ್ಲಿ
ನಾಗಗಿರಿವಾಸ ಈಶ ||ಶ್ರೀಶ|| ||ಪ||

ಎಂಬದಾಗಿ ಮಾತ್ರ ಹಾಡಿ ತಂಬೂರಿಯ ತಂತಿ ಕಡಿಯಿತೆಂದರು. ಈಪದಕ್ಕೆ ಅಂಕಿತವಿಲ್ಲವೆಂದರು. ಬೇರೆತಂತಿಯನ್ನು ಕಟ್ಟಿ ಪದಪೂರ್ತಿ ಮಾಡಬಹು ದೆಂದು ಶಿಷ್ಯನೊಬ್ಬನು ನುಡಿದನು. ಹೊಸ ತಂಬೂರಿ ಬಂದಾಗ ಹೊಸತಂ ತಿಯೆಂದು ದಾಸರು ನುಡಿದರು. ಉತ್ತನೂರಿಗೆ ಬಂದನಂತರ ವೆಂಕಟೇಶನ ದೇವಾಲಯದಲ್ಲಿ ವಾಸಮಾಡಿದರು. ಹಿರಿಯರ ಹಿಂದಿರಬೇಕೆಂದು ಮೂರು ತಿಂಗಳು ತಡವಾಯಿತೆಂದರು.* ಚಿತ್ರಭಾನು ಸಂ|| ಪುಷ್ಯ ಬಹುಳ ಅಷ್ಟಮಿಾ

---

* ಈ ಮಾತಿನ ಅಭಿಪ್ರಾಯ ಪುರಂದರದಾಸರ ಆರಾಧನೆಯ ದಿನವು ಪುಷ್ಯ ಬಹುಳ ಅಮಾವಾಸ್ಯೆಯಾಗಿದ್ದುದರಿಂದ ಆದರ ಹಿಂದೆ ಎಂಟು ದಿವಸಗಳೆಂದು. ಮೂರು ತಿಂಗಳು ತಡವಾಯಿತೆಂಬುದರ ಭಾವವಾದರೋ ಜಗನ್ನಾಥದಾಸರಿಗೆ ಆಯುರ್ದಾನಮಾಡಿದ ಅವಧಿ ಯಿಂದ ಕಳೆದುಹೋದ ಮೂರು ತಿಂಗಳು ಎಂದು ಗೊತ್ತಾಗುತ್ತದೆ.

ದಿನವು ಶನಿವಾರವಾಗಿದ್ದುದರಿಂದ ದಾಸರಮನೆಯಲ್ಲೂ ದೇವಾಲಯದಲ್ಲೂ ಪಂಚಾಮೃತಾಭಿಷೇಕ ಸಹಸ್ರನಾಮಾರ್ಚನೆಗಳೂ ನಡೆದವು. ದಾಸರು ದಾಸಪ್ಪನನ್ನು ಕರೆದು ಒಂದು ಹಿಡಿ ದರ್ಭೆಯನ್ನು ತಾರೆಂದರು. ದಾಸಪ್ಪನು ಈಗೇಕೆ ದರ್ಭೆಯೆಂದನು. ಬೇಕಪ್ಪಾ! ನಡೆಸುವಷ್ಟುನಡೆಸಬೇಕಪ್ಪಾ ಎಂದು ದಾಸರಂದರು. ದಾಸಪ್ಪನಿಗೆ ಸಂಶಯತೋರಿ ದಾಸರ ಪಕ್ಕದಲ್ಲಿ ಕುಳಿತನು. ದಾಸರು ದರ್ಭೆಯನ್ನು ಹಾಸಿಕೊಂಡು ಅದರಮೇಲೆ ಕುಳಿತರು. ಮನೆಯಲ್ಲಿ. ಅತಿಥಿಗಳ ಭೋಜನಸಮಾರಂಭದ ಮೇಲ್ವಿಚಾರಣೆಯಲ್ಲಿ ಸೀನಪ್ಪನಿದ್ದನು ಧ್ಯಾನದಲ್ಲಿ ಕುಳಿತಿದ್ದ ದಾಸರ ದೇಹದಲ್ಲಿ ಶ್ವಾಸವ್ಯಾಪಾರವು ಯಾವಾಗ ನಿಂತಿತೆಂಬುವುದು ಪಕ್ಕದಲ್ಲಿದ್ದ ದಾಸಪ್ಪನಿಗಾದರೂ ಗೊತ್ತಾಗಲಿಲ್ಲ. ಅಣ್ಣಂದಿರು ಏನುಮಾಡುತ್ತಿರುವರೋ ನೋಡೋಣವೆಂದು ಸೀನಪ್ಪ (ವರದಗೋಪಾಲದಾಸರು) ನು ಬಂದು ನೋಡಿದವನು—

ಮಾಂಜಿ — ಜಂಪೆ

ಅಣ್ಣ ಭಾಗಣ್ಣನೀ। ಕಣ್ಣಿಗೇ ಮರೆಯಾಗಿ
ಪುಣ್ಯಲೋಕವ ಸೇರಿದ್ಯಾ। ಗುರುವೇ ॥ಪ॥
ಸಣ್ಣವರು ನಾವು ಅನುಗುಣ್ಯ ನಿನ್ನಯ ಚರಣ
ವನ್ನು ಬಿಟ್ಟಿರಲಾರೆವೋ। ಗುರುವೇ ॥ಅ॥

ಚಿಕ್ಕಂದಿನಿಂದ ಬಲು ಅಕ್ಕರದಿ ನೀನೆಮಗೆ
ದಿಕ್ಕೆಂದು ನಂಬಿದ್ದೆವೋ। ಗುರುವೇ।
ಕಕ್ಕಸದ ಯಾತನೆಯ ಕರೆಕರೆಯ ಸಂಸಾರ
ಹೊಕ್ಕು ನೋಡಿನ್ನರಿಯೆವೊ। ಗುರುವೇ।
ಮಕ್ಕಳಾಟಿಕೆಮಾಡಿ ಠಕ್ಕಿಸಿ ನಮ್ಮನಿ
ಲ್ಲಿಕ್ಕಿ ಪೋಪುದನರಿಯೆವೋ। ಗುರುವೇ॥
ಪಕ್ಕಿವಾಹನ ನಿನ್ನ ಕರೆದೊಯ್ದನೇ ಅಕಟ
ದಿಕ್ಕುಗೇಡಿಗಳಾದೆವೋ। ಗುರುವೇ ॥೧॥

ಮನಸಿಗತಿಹರುಷವಾದಂಥ ಮಾತುಗಳಾಡಿ
ಕುಣಿಸಿಕುಣಿದಾಡಿಸಿದೆಯೋ। ಗುರುವೇ।
ಅನಘ ನಿನ್ನಂಥ ಅಣ್ಣನ ಜನುಮಜನುಮಕ್ಕು

ಫೆನವಾಗಿ ಬಯಸುತಿಹೆವೋ। ಗುರುವೇ।
ಕ್ಷಣಕ್ಷಣಕೆ ನೀಮಾಡಿದುಪಕಾರವನು ಸ್ಮರಿಸಿ
ಮಣಿದು ನಮೋನಮೋ ಎಂಬೆವೋ। ಗುರುವೇ ॥
ಕನಸಿನಂತಾಯ್ತು ತವಚರಿಯ ಗುಣರೂಪಂಗ
ಳೆಣಿಸೆ ಎದೆಭುಗಿಲೆಂಬುದೋ। ಗುರುವೇ ॥೨॥
ಪರಮಸುಖದಾಯಿ ಗುರುರಾಯ ನೀನಲ್ಲದಲೆ
ಪರರನಾಶ್ರೈಶರಿಯೆವೋ। ಗುರುವೇ।
ಅರಿಯದವನಲ್ಲ ನಮ್ಮಭಿಮಾನದೊಡೆಯನೇ
ಪೊರೆವಭಾರವು ನಿನ್ನದೋ। ಗುರುವೇ।
ಪರಿಪರಿಯಲೀ ನಿಮಗೆ ಪೇಳುವದೇನು ತವ
ಚರಣಕಟ್ಟಿದ್ದ ಬಿರಿದೋ। ಗುರುವೇ ॥
ವರದಗೋಪಾಲವಿಠಲನ ದಾಸಾಗ್ರಣಿಯೆ ನಾ
ನರಿಯೆ ಸೌಭಾಗ್ಯ ನಿಧಿಯೇ। ಗುರುವೇ ॥೩॥

ಎಂಬದಾಗಿ ದುಃಖದಿಂದ ಹಾಡಿದನು. ಯಾರುಯಾರನ್ನು ಏನೆಂದು ಹಾಡಿದ ರೇನು ಪಾಡಿದರೇನು, ಬಂದವರು ಇಂದಾದರೂ ಎಂದಾದರೂ ಹೋಗಲಿಕ್ಕೇ ಬೇಕಷ್ಟೆ !

ಆದ್ಯಾಪಿ ಉತ್ತನೂರಿನ ವೆಂಕಟೇಶದೇವಾಲಯದಲ್ಲಿ ಗೋಪಾಲದಾಸರು ಹಾಡಿದ ಮಂಗಳವನ್ನು ಹಾಡುತ್ತಲೇ ಸ್ವಾಮಿಗೆ ಆರತಿಯನ್ನೆತ್ತುವರು.

ಸುರಟಿ — ಛಾಪು

ಮಂಗಳಂ ಮಂಗಳಂ ದಯಾನಿಧೆ ॥ಪ॥
ನಂದನಂದನ ಶಾಮಸುಂದರ ಶುಭಕಾಯ।
ಇಂದೀವರಾಕ್ಷ ಮುಕುಂದ ಮುರಾರೇ ॥೧॥
ದೇವ ದೇವೇಶನೆ। ದೇಹಿ ಕಲ್ಯಾಣಂ।
ಶ್ರೀವರ ಶ್ರೀಕರ ಶ್ರೀ ಶ್ರೀನಿವಾಸ ॥೨॥
ರಾಜಿತವರದ ಗೋಪಾಲ ವಿಠಲಮಹಾ।
ರಾಜ ಭಕತಕಲ್ಪಭೂಜ ಸುತೇಜ ॥೩॥



ಜಗನ್ನಾಥದಾಸರು

# ಶ್ರೀ ಜಗನ್ನಾಥದಾಸರ ಚರಿತ್ರೆ

ಜಲಜೇಷ್ಟನಿಭಾಕಾರಂ
ಜಗದೀಶಪದಾಶ್ರಯಂ
ಜಗತೀತಲವಿಖ್ಯಾತಂ
ಜಗನ್ನಾಥ ಗುರುಂಭಜೇ ॥೧॥

ಜಗನ್ನಾಥದಾಸರೆಂದರೆ—ಅದ್ವೈತಮತಸ್ಥಾಪಕರಾದ ಶಂಕರಾಚಾರ್ಯರ ಪೀಠದಲ್ಲಿ ಬಂದ ವಿದ್ಯಾರಣ್ಯಸ್ವಾಮಿಗಳಂತೆ—ವಿಶಿಷ್ಟಾದ್ವೈತಮತಸ್ಥಾಪಕರಾದ ರಾಮಾನುಜಾಚಾರ್ಯರ ಪೀಠದಲ್ಲಿ ಬಂದ ವೇದಾಂತದೇಶಿಕರಂತೆ—ದ್ವೈತಮತಸ್ಥಾಪಕರಾದ ಮಧ್ವಾಚಾರ್ಯರ ಪೀಠದಲ್ಲಿ ಬಂದ ಜಯತೀರ್ಥರಂತೆ—ಪುರಂದರದಾಸರಿಂದ ಪುನರುದ್ಧಾರವಾದ ಭಾಗವತಧರ್ಮಕ್ಕೆ ನವಚೈತನ್ಯವನ್ನುಂಟುಮಾಡಿದ ಮಹಾಪುರುಷರು. ಜನಸಾಮಾನ್ಯದಲ್ಲಿ ಆಚಾರ್ಯರು ಷಟ್ಛಾಸ್ತ್ರಸಂಪನ್ನರು, ಪ್ರತಿವಾದಿ ಭಯಂಕರರು, ಅಗ್ರಪೂಜಾರ್ಹರು, ಎಂದು ಸನ್ಮಾನಿತರಾದವರು. ಹರಿದಾಸರೆಂದರೆ ತಿರಸ್ಕರಿಸುತ್ತಿದ್ದವರು. ಹರಿದಾಸರಿಗೆ ಪುರಸ್ಕಾರವಿತ್ತವರಮೇಲೆ ಸಿಟ್ಟುಮಾಡುತ್ತಿದ್ದವರು. ಹರಿದಾಸರು ಶಾಸ್ತ್ರಕ್ಕೆ ಅಪಾರ್ಥಮಾಡುವರೆಂದು ಜರಿಯುತ್ತಿದ್ದವರು. ಕಡೆಗೆ, ಕಾಲಕರ್ಮಸಂಯೋಗದಿಂದ ಸ್ವಯಂ ಹರಿದಾಸರಾದವರು.

ಕ್ರಿ. ಶ. ೧೭೨೦ರ ಸುಮಾರಿನಲ್ಲಿ ರಾಯಚೂರು ಜಿಲ್ಲಾ ಮಾನವೀ ತಾಲ್ಲೂಕು ಬ್ಯಾಗವಟ್ಟವೆಂಬಗ್ರಾಮದಲ್ಲಿ ನರಸಪ್ಪನೆಂಬ ಬ್ರಾಹ್ಮಣನು ಕುಲಕರಣಿಯಾಗಿದ್ದನು. ಆ ಕಾಲವಾದರೋ—ದೇಶವಿದೇಶಗಳ ಸಮಾಚಾರವನ್ನರಿಯದ ಕಾಲ. ನ್ಯಾಯಾನ್ಯಾಯವಿಮರ್ಶೆಗೆ ಹೆಸರಿಗಾದರೂ ಕಾನೂ

ನುಗಳಿಲ್ಲದಿದ್ದ ಕಾಲ. ಮುಸಲ್ಮಾನರು ಧರ್ಮದ ಹುಚ್ಚಿನಿಂದ ಹಿಂದೂ ಪ್ರಜೆಗಳನ್ನು ಪಶುಗಳಂತೆ ಕಾಣುತ್ತಿದ್ದ ಕಾಲ. ಇಂಥಾ ಕಾಲದಲ್ಲಿ ಜನರ ಬಾಳಿಕೆಯು ಗಂಡಾಂತರವಾಗಿತ್ತಲ್ಲದೆ ನೆಮ್ಮದಿಯದಾಗಿರಲಿಲ್ಲ.

ಕುಲಕರಣಿಕೆಯೆಂಬುವುದು ಬಹಳ ಜವಾಬ್ದಾರಿಯ ಕೆಲಸ. ಭೂತ ದಯಾಪರನೂ ಆತ್ಮಸಾಕ್ಷಿಗಂಜುವನೂ ಕುಲಕರಣಿಯಾಗಿರುವುದು ಸಾಧ್ಯ ವಲ್ಲ. ರೈತರಿಂದ ಬರಲಿ ಬರದಿರಲಿ, ಸರ್ಕಾರದ ಕಂದಾಯವನ್ನು ಕೈಯಿಂ ದಕೊಟ್ಟು ನಿದಾನವಾಗಿ ಬರಮಾಡಿಕೊಳ್ಳುವ ಎದೆಗಾರಿಕೆಯು ಕುಲಕರಣಿಗಿ ರಬೇಕು. ಅಧಿಕಾರಿಗಳು ಬಂದಾಗ ಅವರ ಆದರಾತಿಥ್ಯಮಾಡಿ ಪ್ರಸನ್ನತೆ ಯನ್ನು ಪಡೆಯುವ ಶ್ರೀಮಂತಿಕೆಯು ಕುಲಕರಣಿಗಿರಬೇಕು. ಪ್ರಸಕ್ತಿ ಬಂದಾಗ ನವಾಬನಿಗೆ ನಜರಾಣವನ್ನು ಜನರಿಂದ ವಸೂಲ್ಮಾಡಿ ಕೊಡುವ ಕಠಿಣಮನಸ್ಸು ಕುಲಕರಣಿಗಿರಬೇಕು. ಈ ಮೂರೂ ಇಲ್ಲದಿದ್ದರೆ ಕುಲಕ ರಣಿಯು ಶಕ್ತನೆನಿಸುವುದಿಲ್ಲ.

ನರಸಪ್ಪನು ಭೂತದಯಾಪರನೂ ಆತ್ಮಸಾಕ್ಷಿಗಂಜುವನೂ ಆಗಿದ್ದುದ ರಿಂದ, ಆಗಿನ ಮುಸಲ್ಮಾನ ಅಧಿಕಾರಿಗಳ ಅನುಗ್ರಹಕ್ಕೆ ಪಾತ್ರನಾಗಿರಲಿಲ್ಲ. ಇಷ್ಟೇ ಕಾರಣದಿಂದವನು ಮನೆಮಠಗಳನ್ನೂ ಭೂಮಿಕಾಣಿಗಳನ್ನೂ ಕಳೆ ದುಕೊಂಡು ದಂಡನೆಗೊಳಗಾಗಬೇಕಾಯಿತು. ಇರುವುದಕ್ಕೆ ಮನೆಯಿಲ್ಲದೆ ತಿನ್ನುವುದಕ್ಕೆ ಅನ್ನವಿಲ್ಲದೆ, ಆದವಾನಿಗೆ ಪಂಗನಾಮದ ತಿಮ್ಮಣ್ಣಯ್ಯನವರ ಬಳಿಗೆ ಬರಬೇಕಾಯಿತು.

ತಿಮ್ಮಣ್ಣಯ್ಯನವರು ಆದವಾನಿಯ ನವಾಬ ಬಸಾಲತ್ ಜಂಗನ ಮುಖ್ಯಮಂತ್ರಿಗಳಾಗಿದ್ದರು. ನವಾಬನ ರಾಜ್ಯವಿಸ್ತಾರವೂ ದಿಗ್ಜಯಕೀ ರ್ತಿಯೂ ತಿಮ್ಮಣ್ಣನವರಿಂದಾಗಿತ್ತು. ಅಯ್ಯನವರಿಗೆ ಎಷ್ಟೇ ರಾಜಾನುಗ್ರ ಹವಿದ್ದರೂ ನವಾಬನ ಬಳಿಯ ಮುಸಲ್ಮಾನ ಅಧಿಕಾರಿಗಳು ಅವರನ್ನು ದ್ವೇಷಿಸುತ್ತಿದ್ದರು. ನವಾಬನ ಮನಸ್ಸನ್ನು ಕೆಡಿಸಿ ಅಯ್ಯನವರನ್ನು ಪದಚ್ಯುತರನ್ನಾಗಿ ಮಾಡಲು ಹೊಂಚುಹಾಕುತ್ತಿದ್ದರು. ಅಯ್ಯನವರಾ ದರೋ ಅಧಿಕಾರದ ಅಸ್ಥಿರತೆಯನ್ನರಿತು, ವಿಜಯದಾಸರ ಶಿಷ್ಯರಾಗಿ ವೇಣು

ಗೋಪಾಲ ವಿಠಲಾಂಕಿತವನ್ನು ಪಡೆದು ಮಹಾ ಜ್ಞಾನಿಗಳಾಗಿದ್ದರು. ಇದೇಕಾಲದಲ್ಲಿ ಅಯ್ಯನವರ ಏಕಮಾತ್ರ ಪುತ್ರ ವಾಸಪ್ಪನನ್ನು ಬಸಾಲತ್ ಜಂಗನು ಇಸ್ಲಾಂ ಧರ್ಮಕ್ಕೆ ಸೇರಿಸಿಕೊಂಡು ತನ್ನ ಮಗಳನ್ನು ಕೊಟ್ಟು ವಿವಾಹಮಾಡಿದನು. ವಾಸಪ್ಪನ ಹೆಸರು ರಹಿಮತ್ತುಲ್ಲಾ ಖಾನನೆಂದಾಯಿತು. ವಾಸಪ್ಪನಮೇಲೆ ನವಾಬನ ದೃಷ್ಟಿ ಬೀಳಲು ಅವನ ಸೌಂದರ್ಯವು ಕಾರಣವಾಯಿತು. ಮಂತ್ರಿಕುಮಾರನೆಂದು ರಾಜಗೃಹದಲ್ಲಿ ದೊರೆತ ಪುರಸ್ಕಾರವು ಅವನನ್ನು ಭ್ರಷ್ಟಗೊಳಿಸಿತು. ಮಾಡುವುದೇನು? ರಾಜನು ಮಾಡಿದ ಕಾರ್ಯವನ್ನು ಮಂತ್ರಿಯು ಖಂಡಿಸುವ ಬಗೆ ಹೇಗೆ? ಈ ಕಾರಣದಿಂದ ಅಯ್ಯನವರ ಮನಸ್ಸು ಖಿನ್ನವಾಗಿತ್ತು. ನಿರುಪಾಯರಾಗಿ ವ್ಯಸನವನ್ನು ಮರೆಮಾಚಿಕೊಂಡು ರಾಜಸೇವೆಯಲ್ಲಿದ್ದರು.

ನರಸಪ್ಪನು ಅಯ್ಯನವರನ್ನು ಕಂಡು ತನ್ನ ದುಃಖಸಂಗತಿಗಳನ್ನು ಹೇಳಿಕೊಂಡನು. ಅಯ್ಯನವರು, ನರಸಪ್ಪಾ, ನಿನಗೆ ಲೌಕಿಕವೃತ್ತಿಯು ಆಗಿಬರುವದಿಲ್ಲ. ನೀನು ಕೇವಲ ಧಾರ್ಮಿಕಮನುಷ್ಯನಾಗಿರುವೆ. ಹರಿದಾಸನಾಗುವೆಯಾದರೆ ನಿನಗೀಗಲೇ ಮಂತ್ರೋಪದೇಶಪೂರ್ವಕ ಅಂಕಿತ ಕೊಡುವೆನು. ಇದಕ್ಕೆ ನೀನೇನೆನ್ನುವೆಯೆಂದರು. ನರಸಪ್ಪನು, ಅಷ್ಟೇ ಪರಮಾನುಗ್ರಹವಾದರೆ ಕೃತಾರ್ಥನಾದೆನೆಂದು ನಮಸ್ಕಾರ ಮಾಡಿದನು. ಅಯ್ಯನವರು 'ನರಸಿಂಹವಿಠಲ'ಎಂಬ ಅಂಕಿತವಿತ್ತು ನರಸಪ್ಪನನ್ನು ನರಸಿಂಹದಾಸರನ್ನಾಗಿ ಮಾಡಿದರು. ಮಾನವಿಯಲ್ಲಿ ಇರುವದಕ್ಕೆ ಮನೆಯನ್ನೂ ಕೆಲವು ಕೂರಿಗೆ (ನಾಲ್ಕು ಎಕರೆಗೆ ಒಂದುಕೂರಿಗೆ) ಭೂಮಿಯನ್ನೂ ಮಾಡಿಕೊಟ್ಟು ನೀನು ಅಲ್ಲೇ ನಿಶ್ಚಿಂತನಾಗಿ ಕಾಲಯಾಪನೆ ಮಾಡೆಂದರು. ಅಂದಿನಿಂದ ನರಸಿಂಹದಾಸರು ಮಾನವಿಯಲ್ಲಿ ವಾಸಮಾಡಿದರು.

ನರಸಿಂಹದಾಸರಿಗೆ ಶಾಲೀವಾಹನಶಕ ೧೬೪೯ಕ್ಕೆ ಸಲ್ಲುವ ಕೀಲಕ ಸಂವತ್ಸರದ ಶ್ರಾವಣ ಶುದ್ಧ ಬಿದಿಗೆಯ ದಿನ ಓರ್ವ ಕುವರನು ದಿಸಿದನು (ಕ್ರಿ. ೧೭೨೭). ದಾಸರು ಮಗನಿಗೆ ಶ್ರೀನಿವಾಸನೆಂದು ನಾಮಕರಣಮಾಡಿದರು. ಈ ಬಾಲಕನೇ ಮುಂದೆ ಪರಮಪ್ರಸಿದ್ಧ ಜಗನ್ನಾಥ

ದಾಸರಾದನು. ಬಾಲಕನ ತಾಯಿಯ ಹೆಸರು ಲಕ್ಷ್ಮಕ್ಕ.

ಶ್ರೀನಿವಾಸನು ಬೆಳೆದಂತೆ ಅವನ ವಿದ್ಯಾಭ್ಯಾಸವೂ ಬೆಳೆಯಿತು. ಸಂಸ್ಕೃತ ಕನ್ನಡಭಾಷೆಗಳಲ್ಲಿ ಸೀನಪ್ಪನು ಮಹಾಪಂಡಿತನೆನಿಸಿದನು. ಪಾಂಡಿತ್ಯಮಾತ್ರವಲ್ಲದೆ ಸೀನಪ್ಪನಲ್ಲಿ ಕವಿತಾಶಕ್ತಿಯು ದೈವಾಯತ್ತವಾಗಿತ್ತು. ಸಂಸ್ಕೃತದಲ್ಲಾಗಲಿ ಕನ್ನಡದಲ್ಲಾಗಲಿ ನಿಂತನಿಂತಹಾಗೆ ಶ್ಲೋಕಗಳನ್ನು ರಚಿಸಿ ಹೇಳುತ್ತಿದ್ದನು. ಇದರಿಂದ ಸೀನಪ್ಪನಲ್ಲಿ ಜನಾದರಣೆ ಬಹಳವಾಯಿತು.

ಈ ಕಾಲದಲ್ಲಿ ರಾಘವೇಂದ್ರಸ್ವಾಮಿಗಳ ಮಹಾಪೀಠದಲ್ಲಿ ವರದೇಂದ್ರತೀರ್ಥಶ್ರೀಪಾದಂಗಳವರು ಧರ್ಮಸಮ್ರಾಜ್ಯವನ್ನು ಪಾಲಿಸುತ್ತಿದ್ದರು. ಮಠದಕಾರ್ಯಸ್ಥಾನವು ಮಂತ್ರಾಲಯವಾಗಿತ್ತು. ದೇಶಾಂತರಗಳಿಂದ ನೂರಾರು ಜನರು ಬಂದು ಸ್ವಾಮಿಗಳಲ್ಲಿ ಶಾಸ್ತ್ರವ್ಯಾಸಂಗ ಮಾಡುತ್ತಿದ್ದರು. ಸೀನಪ್ಪನ ಕವಿತಾಪ್ರತಿಭೆಯು ಸ್ವಾಮಿಗಳ ಸನ್ನಿಧಿಯಲ್ಲಿ ಪ್ರಶಂಸೆಗೆಬಂದಿತು. ಸ್ವಾಮಿಗಳು, ತಮ್ಮ ಮಠದ ಶಿಷ್ಯನು ಇಂಥಾ ಪ್ರತಿಭಾಶಾಲಿಯಾಗಿರುವನೆಂಬ ಸಂತೋಷದಿಂದ, ಅವನನ್ನು ಮಂತ್ರಾಲಯಕ್ಕೆ ಕರೆದುಕೊಂಡು ಬರಬೇಕೆಂದು ನರಸಿಂಹದಾಸರಿಗೆ ಶ್ರೀಮುಖವನ್ನು ಬರೆದರು. ದಾಸರು ಗುರುಕಾರುಣ್ಯವಾಯಿತೆಂದು ಪತ್ನೀಪುತ್ರರಿಂದೊಡಗೂಡಿ ಮಂತ್ರಾಲಯಕ್ಕೆ ಬಂದರು.

ಸ್ವಾಮಿಗಳು ಸೀನಪ್ಪನನ್ನು ಹತ್ತಿರ ಕರೆದು—'ನೀನು ಮಹಾಕವಿಯಾಗಿರುವೆಯಂತೆ; ನಿನ್ನ ವಾಣಿಯನ್ನು ನಮಗಿಷ್ಟು ಶ್ರವಣಮಾಡಿಸಪ್ಪಾ!' ಎಂದರು. ಶ್ರೀನಿವಾಸನು 'ವರದೇಂದ್ರ ಪಂಚರತ್ನ' ವೆಂಬ ಹೆಸರಿನಿಂದ ಐದುಶ್ಲೋಕಗಳನ್ನು ವಿವಿಧ ವೃತ್ತಗಳಲ್ಲಿ ರಚಿಸಿ ಶ್ರೀಗಳವರಿಗೆ ಸಮರ್ಪಿಸಿದನು. ಮೊದಲ ಶ್ಲೋಕವು ವರದೇಂದ್ರರ ಮತ್ತು ವರದರಾಜಸ್ವಾಮಿಯ ಪರವಾಗಿತ್ತು. ಎರಡನೆಯದು ವರದೇಂದ್ರರ ಪರವಾಗಿದ್ದಂತೆ ರಾಘವೇಂದ್ರಸ್ವಾಮಿಗಳ ಮತ್ತು ರಾಮಚಂದ್ರದೇವರ ಪರವಾಗಿತ್ತು. ಮೂರನೆ

ಯದು ವಾಸುದೇವನ, ವಾಯುದೇವರ, ಮತ್ತು ವರದೇಂದ್ರರಪರವಾಗಿತ್ತು. ನಾಲ್ಕನೆಯದು ಮೂಲರಾಮದೇವರು ಮಠಕ್ಕೆ ಬಂದ ಕಥೆಯನ್ನು ಸೂಚಿಸುವ ಮತ್ತು ವರದೇಂದ್ರರ ಸಂಸ್ಥಾನಪಾಲನೆಯ ಚರಿತೆಯಾಗಿತ್ತು. ಐದನೆಯದು ತನಗಿರುವ ವಿದ್ಯಾಭಿಲಾಷೆಯನ್ನು ವಿಜ್ಞಾಪಿಸಿದ ಗುರುನಮಸ್ಕಾರವಾಗಿತ್ತು.

ಸೀನಪ್ಪನ ಪಾಂಡಿತ್ಯವನ್ನು ನೋಡಿ ಸ್ವಾಮಿಗಳು ಬೆರಗಾದರು. 'ಅಪ್ಪಾ! ನಿನ್ನಂಥಾ ಶಿಷ್ಯನನ್ನೇ ನಾವು ಬಯಸುತ್ತಿದ್ದೆವು. ನಿನಗೆ ನಾಳಿನಿಂದಲೇ ರಾಯರ ಸನ್ನಿಧಿಯಲ್ಲಿ ಪಾಠಾರಂಭ ಮಾಡುವೆವು. ನಿನ್ನಿಂದ ಜಗತ್ತಿನ ಕಾರ್ಯವು ಬಹಳವಾಗಿ ಆಗವುದು. ಜಗನ್ನಾಥನೇ ನಿನ್ನಲ್ಲಿ ಜಯಪ್ರದನಾಗಿ ನೆಲಸುವನು ' ಎಂದು ಆಶೀರ್ವಾದ ಮಾಡಿದರು. ಸೀನಪ್ಪನು ನಮಸ್ಕರಿಸಿ—'ಧನ್ಯೋಽಸ್ಮಿ, ಅನುಗೃಹೀತೋಽಸ್ಮಿ' ಎಂದು ಭಕ್ತಿಪುಳಕಿತನಾಗಿ ನುಡಿದನು.

ಮರುದಿನದಿಂದ ಶ್ರೀನಿವಾಸನಿಗೆ ತತ್ವಪ್ರಕಾಶಿಕಾ ಪಾಠಾರಂಭವಾಯಿತು. ಕೆಲವು ವರ್ಷಗಳಲ್ಲಿ ವ್ಯಾಸತ್ರಯದಲ್ಲಾಗಲಿ ನ್ಯಾಯಸುಧೆಯಲ್ಲಾಗಲಿ ಶ್ರೀನಿವಾಸನಿಗೆ ಸದೃಶರು ಮತ್ತೊಬ್ಬರಿಲ್ಲವೆಂಬ ಖ್ಯಾತಿಯುಂಟಾಯಿತು. ಸ್ವಾಮಿಗಳು ಮಂತ್ರಾಲಯದಲ್ಲಿರಲಿ, ಪ್ರವಾಸದಲ್ಲಿರಲಿ, ಶ್ರೀನಿವಾಸನನ್ನು ಎಡೆಬಿಡುತ್ತಿರಲಿಲ್ಲ.

ಪುಣೆಯಂಥಾ ವಿದ್ವನ್ನಗರಿಯಲ್ಲಿ ಸ್ವಾಮಿಗಳ ಪರಮಾನುಗ್ರಹದಿಂದ ಶ್ರೀನಿವಾಸನು ಪೂರ್ವೋತ್ತರ ಮೀಮಾಂಸಾ ಶಾಸ್ತ್ರಗಳಲ್ಲಿ ಅಸದೃಶನೆನಿಸಿದನು.

ವರದೇಂದ್ರರೇ ಶ್ರೀನಿವಾಸನಿಗೆ ಲಗ್ನಮಾಡಿಸಿದರು. ಇನ್ನುಮುಂದೆ ಮಾನವಿಯಲ್ಲಿದ್ದು ಪಾಠಪ್ರವಚನ ಮಾಡುತ್ತಿರಬೇಕೆಂದು ಆಜ್ಞೈಸಿದರು. ಅನಂತರ ಶ್ರೀನಿವಾಸನು ಪ್ರಖ್ಯಾತ ಶ್ರೀನಿವಾಸಾಚಾರ್ಯರೆನಿಸಿ ಮಾನವಿಯಲ್ಲಿ ನೆಲೆಸಿದನು.

ಶ್ರೀನಿವಾಸಾಚಾರ್ಯರು ದೊಡ್ಡಸ್ತಿಕೆಯನ್ನು ಬೆಳೆಸಲು ಬೇಕಾದ ಪರಾನ್ನನೇಮ ಸ್ರ್ವೀಪಾಕನೇಮ ಪರಪಾಕನೇಮ ನೈವೇದ್ಯನಿಯಮ ಗಳನ್ನೆಲ್ಲಾ ಕಟ್ಟಿಕೊಂಡರು. ತಿಮ್ಮಣ್ಣಯ್ಯನವರು ಮಾಡಿಕೊಟ್ಟ ಭೂಮಿ ಯಿಂದ ನಿರಾತಂಕವಾಗಿ ಜೀವನವಾಗುತ್ತಿದ್ದುದರಿಂದ, ಪರಾಶ್ರಯ ಮಾಡುವ ಆವಶ್ಯಕತೆಯು ಆಚಾರ್ಯರಿಗಿರಲಿಲ್ಲ. ತಂದೆತಾಯಿಗಳೂ ಮೃತ ರಾದ್ದರಿಂದ ಆಚಾರ್ಯರು ಯಾರಿಗೂ ತಲೆಬಾಗುವ ಕಾರಣವಿರಲಿಲ್ಲ. ವಿದ್ವ ನ್ಮರ್ಯಾದೆ ವೈದಿಕ ಮರ್ಯಾದೆ ಸ್ವಾಮಿಗಳ ಶಿಷ್ಯತ್ವದ ಮರ್ಯಾದೆಗಳು ಒಂದಕ್ಕೊಂದು ಸಹಾಯವಾಗಿ, ಆಚಾರ್ಯರ ದೊಡ್ಡಸ್ತಿಕೆಯು ದಿನದಿನಕ್ಕೂ ಬೆಳೆದುಬಂದಿತು. ಇವತ್ತಿಗೂ ನಿಜಾಂಕರ್ಣಾಟಕದಲ್ಲಿ ಅವಶೇಷವಾಗಿರುವ ವೈದಿಕತ್ವದ ಸ್ವವಿಷಯದಲ್ಲಿ ಬಹುವಚನ, ಪರವಿಷಯದಲ್ಲಿ ಏಕವಚನ ಪ್ರಯೋಗಗಳು ಆಚಾರ್ಯರ ಭಾಷೆಯಲ್ಲಿ ತಾನೇತಾನಾಗಿ ನೆಲೆಸಿದುವು. ವಿದ್ಯಾ ಗೌರವದಿಂದ ಅನೇಕ ಶಿಷ್ಯರು ವ್ಯಾಸಂಗಕ್ಕೆ ಬಂದುದರಿಂದ ಆಚಾರ್ಯರ ಆಚಾರ್ಯಪಟ್ಟವು ದಿಗಂತವನ್ನು ಮುಟ್ಟಿತು. ಸ್ನಾನಾನಂತರ ಮನೆಯವರ ಮತ್ತು ಶಿಷ್ಯರ ವಿನಾ, ಅನ್ಯರಿಗೆ ಆಚಾರ್ಯರೊಡನೆ ಭಾಷಣಮಾಡುವ ಅವ ಕಾಶವೂ ತಪ್ಪಿಹೋಯಿತು. ಮಾತೆತ್ತಿದರೆ ಮಡಿಮೈಲಿಗೆಗಳ ಗೊಂದಲ ಬಲವಾಯಿತು. ಪ್ರಾಕೃತಭಾಷೆಯು ಮೈಲಿಗೆಯ ಭಾಷೆಯಾಯಿತು. ಜನರ ದೃಷ್ಟಿಯಲ್ಲಿ ಆಚಾರ್ಯರು ಬಲು ದೊಡ್ಡವರಾದರು.

ಶ್ರೀನಿವಾಸಾಚಾರ್ಯರಿಗೆ ಹರಿದಾಸರೆಂದರೆ ಆಗುತ್ತಿರಲಿಲ್ಲ. ಕನ್ನಡ ಪದಗಳೆಂದರೆ ಸೇರುತ್ತಿರಲಿಲ್ಲ. ಹರಿದಾಸರಾಗಿದ್ದ ತಂದೆಗಳ ಹೆಸರನ್ನು ದಾಸಶಬ್ದಸಹಿತವಾಗಿ ಕರೆಯದೆ ನಮ್ಮ ಹಿರಿಯರು ನಮ್ಮ ಆಚಾರ್ಯರು ಎಂದು ಕರೆದುಕೊಳ್ಳಲಾರಂಭಿಸಿದರು. ಆ ಕಾಲದಲ್ಲಿ ರಾಯಚೂರು ಪ್ರಾಂ ತ್ಯವು ಹರಿದಾಸ ಭೂಯಿಷ್ಠವಾಗಿತ್ತು. ಚೀಕಲಪರಿಯಲ್ಲಿ ವಿಜಯ ದಾಸರೂ, ಕಲ್ಲೂರಿನಲ್ಲಿ ಸುಬ್ಬಣ್ಣದಾಸರೂ, ಆದವಾನಿಯಲ್ಲಿ ದಿವಾನ ತಿಮ್ಮಣ್ಣಯ್ಯನವರೂ, ಉತ್ತನೂರಿನಲ್ಲಿ ಗೋಪಾಲದಾಸರೂ, ವೇಣೀ ಸೋಮಪುರದಲ್ಲಿ ವ್ಯಾಸತತ್ವಜ್ಞರೂ ಮಹಾಪ್ರಖ್ಯಾತರೆನಿಸಿ ಅಪರೋಕ್ಷ ಜ್ಞಾನಿಗಳೆಂದು ಜನಸಾಮಾನ್ಯದ ಭಕ್ತಿಗೆ ಪಾತ್ರರಾಗಿದ್ದರು. ಜನರು

ದಾಸರಲ್ಲಿ ಭಕ್ತಿಮಾಡುತ್ತಿದ್ದಂತೆ ಆಚಾರ್ಯರುಗಳಲ್ಲಿ ಮಾಡುತ್ತಿರಲಿಲ್ಲ. ದೇವರ ನಾಮುಗಳಲ್ಲಿ ತೋರಿಸಿದ ಆದರವನ್ನು ಮಂತ್ರ ಸ್ತೋತ್ರಗಳಲ್ಲಿ ತೋರಿಸುತ್ತಿರಲಿಲ್ಲ. ಈ ವಿಧವಾದ ಜನರ ಆಚರಣೆಯು ಆಚಾರ್ಯರಿಗೆ ಬಲು ಬೇಸರವನ್ನುಂಟುಮಾಡಿತು. ಇದೇ ದಾಸರಮೇಲಣ ದ್ವೇಷಕ್ಕೂ ಕಾರಣವಾಯಿತು. ಈ ವಿಧವಾದ ಪರಿವರ್ತನೆಗೆ ವಿಜಯದಾಸರು ಮುಖ್ಯ ಕಾರಣರೆಂದರಿತು ಅವರನ್ನು ವಾಚಾಮಗೋಚರವಾಗಿ ನಿಂದಿಸತೊಡಗಿದರು. ಈ ಕೂಸೀಮಗ ದಾಸಗೆ ಅಪರೋಕ್ಷವೆ? ಇವನ ಕನ್ನಡ ಪದಗಳು ಶಾಸ್ತ್ರಾರ್ಥಗಳೆ? ಇವನ ಕುಣಿತದಿಂದ ಶ್ರೀಹರಿ ಪ್ರೀತಿಯೆ? ಎಂದು ಮಾತುಮಾತಿಗೆ ವಿಜಯದಾಸರ ದೂಷಣೆಗಾರಂಭಿಸಿದರು. ವಿಜಯದಾಸನ ಸಹವಾಸದಿಂದ ಕಲ್ಲೂರು ಸುಬ್ಬಣ್ಣಾಚಾರ್ಯರಂಥಾ ಸುಧಾಪಾಠೀಕರು ಭ್ರಷ್ಟರಾದರು! ಗೋಪಾಲದಾಸನಿಂದ ವ್ಯಾಸತತ್ವಜ್ಞರಂಥಾ ಟಿಪ್ಪಣಿಕಾರರು ಪದಚ್ಯುತರಾದರು! ಮಾಡುವದೇನು, ಕಲಿಪ್ರಭಾವವೆಂದು ಜರಿಯಲಾರಂಭಿಸಿದರು. ಈ ಕಾರಣ ಆಚಾರ್ಯರಲ್ಲಿದ್ದ ಜನರ ವಿಶ್ವಾಸ ಕಡಿಮೆಯಾಯಿತು.

ಹೀಗಿರಲು, ಶ್ರೀನಿವಾಸಾಚಾರ್ಯರನ್ನುದ್ಧರಿಸಬೇಕೆಂಬ ಸದ್ಭಾವನೆಯಿಂದ ವಿಜಯದಾಸರು ಮಾನವಿಗೆ ದಯಮಾಡಿಸಿದರು. ಅಂತರಂಗದಲ್ಲಿ ಹೇಗೇ ಇರಲಿ, ಬಹಿರಂಗದಲ್ಲಾದರೂ ಆಚಾರ್ಯರನ್ನು ಬಿಟ್ಟು ಕೆಲಸಮಾಡಬಾರದೆಂದು ಜನರು ದಾಸರ ಸ್ವಾಗತಕ್ಕೆ ಅವರನ್ನು ಕರೆದರು. ಆಚಾರ್ಯರು, ಸ್ವಾಗತಮಾಡುವುದಕ್ಕೆ ದಾಸರೇನು ಸ್ವಾಮಿಗಳೋ ಎಂದು ಪರಿಹಾಸ್ಯಮಾಡಿ, ಬಂದವರನ್ನು ಅವಮಾನಿಸಿದರು. ಆಚಾರ್ಯರೊಬ್ಬರು ಬರದಿದ್ದ ಮಾತ್ರಕ್ಕೆ ವಿಜಯದಾಸರಿಗಾಗುವ ಮರ್ಯಾದೆಗೆ ಲೋಪವಾಗಲಿಲ್ಲ. ಜನರು ಮಹೋತ್ಸವದಿಂದ ಕರೆತಂದು ಯೋಗ್ಯಸ್ಥಳದಲ್ಲಿ ದಾಸರನ್ನಿಳಿಸಿದರು.

ದಾಸರು ಯಾವ ಊರಿಗೇ ಬರಲಿ, ಪ್ರಾತರಾಹ್ನಿಕವನ್ನು ಮುಗಿಸಿ ಕೊರಳಿಗೆ ತಂಬೂರಿಯನ್ನು ಹಾಕಿಕೊಂಡು, ಭಜನೆಮಾಡುತ್ತಾ ಗ್ರಾಮಪ್ರದಕ್ಷಿಣೆ ಮಾಡುತ್ತಿದ್ದರು. ಪ್ರತಿಬಾಗಿಲಲ್ಲಿ ನಿಂತು ಆ ಮನೆಯ ಬ್ರಾಹ್ಮಣರಿಗೆ

ತಮ್ಮಲ್ಲಿ ತೀರ್ಥಪ್ರಸಾದಕ್ಕೆ ಬರಬೇಕೆಂದು ಆಮಂತ್ರಣ ಕೊಡುತ್ತಿದ್ದರು. ದಾಸರ ಜೊತೆಯಲ್ಲಿ ನೂರಾರು ಜನರಿರುತ್ತಿದ್ದರು. ಭಜನೆಯ ಧ್ವನಿ ಕೇಳಿದೊಡನೆ, ಯಾರಾದರೂ ಬಾಗಿಲಿಗೆ ಬಂದು ದಾಸರಿಗೆ ವಂದಿಸದಿರುತ್ತಿರಲಿಲ್ಲ. ಆಚಾರ್ಯರ ಬಾಗಿಲಿಗೆ ಬರುತ್ತಲೆ, ಜೊತೆಯಲ್ಲಿದ್ದವರು, -'ಸ್ವಾಮಿ, ಇದು ಶ್ರೀನಿವಾಸಾಚಾರ್ಯರ ಮನೆ'ಯೆಂದರುಹಿದರು. ಇಷ್ಟಾದರೂ ಒಳಗಿದ್ದ ಆಚಾರ್ಯರು ಎದ್ದು ಬರಲಿಲ್ಲ. ದಾಸರೇ ಅವರ ಬಳಿಗೆ ಹೋಗಿ, -'ಆಚಾರ್ಯರೇ, ತಾವು ನಮ್ಮಲ್ಲಿ ತೀರ್ಥಪ್ರಸಾದಕ್ಕೆ ಬರಬೇಕು' ಎಂದು ಆಮಂತ್ರಿಸಿದರು. ಆಚಾರ್ಯರು ಕೂತಬಳಿಯಿಂದಲುಗದೆ, ಒಳ್ಳೇದು ಎಂದು ಉತ್ತರಕೊಟ್ಟು ಕಳುಹಿಸಿದರು. ಆಚಾರ್ಯರಾಗಿ ದಾಸರಿಗೆ ಗೋಪಾಳವನ್ನು ಹಾಕಲಿಲ್ಲ. ಶಿಷ್ಯರು ಅದಕ್ಕಾಗಿ ಕಾಯಲಿಲ್ಲ.

ಆ ದಿನದ ಊಟವು ಎಂದಿಗಿಂತ ಸ್ವಲ್ಪ ಹೆಚ್ಚು ಹೊತ್ತಾಯಿತು. ಭೋಜನ ಸಮಯದಲ್ಲಿ ಮತ್ತೆ ಯಾರನ್ನೂ ಕರೆಯುವ ಪದ್ಧತಿಯಿರದಿದ್ದರೂ ವಿಜಯರಾಯರು, ಆಚಾರ್ಯರೇಕೆ ಬರಲಿಲ್ಲ? ಅವರನ್ನು ಕರೆದು ಬಾರೆಂದು ಶಿಷ್ಯನನ್ನು ಕಳುಹಿಸಿದರು. ಆಚಾರ್ಯರು ದಾಸರ ನೈವೇದ್ಯದಲ್ಲಿ ಭೋಜನಮಾಡುವದು ತಮ್ಮ ಶಿಷ್ಟಾಚಾರಕ್ಕೆ ವಿರೋಧವೆಂದು, ಜಾಗ್ರತೆ ಭೋಜನ ಮಾಡಿ ಶಯನಮಾಡಿದ್ದರು. ಕರೆಯಬಂದವನಿಗೆ—" ಆಚಾರ್ಯರಿಗೆ ಊಟ ಹೊತ್ತು ಹೋದರೆ ಹೊಟ್ಟೆಶೂಲೆ ಬರುತ್ತದೆ. ಆದ್ದರಿಂದ ಮುಂಚಿತವಾಗಿ ಅವರು ಊಟಮಾಡಿದರೆಂದು ತಿಳಿಸು, "ಎಂಬದಾಗಿ ಹೇಳಿಕಳುಹಿಸಿದರು. ದಾಸರು ಸಂಗತಿಯನ್ನು ಕೇಳಿ—" ಹಾಗೆಯೋ, ಹಾಗಿದ್ದರೆ ಹಾಗೇ ಆಗಲೆ"ಂದು ಎಲ್ಲರೊಡನೆ ಭೋಜನಕ್ಕೆ ಕುಳಿತರು. ಆ ರಾತ್ರಿ ಕೀರ್ತನಕ್ಕೆ ಬರಬೇಕೆಂದು ಕರೆದರೆ ಆಚಾರ್ಯರು ಬರಲಿಲ್ಲ.

ಇಷ್ಟುಮಾತ್ರ ಮಾಡಿದ ಭಾಗವತಾಪಚಾರವು ಪ್ರಮಾದಕ್ಕಿಟ್ಟಿತು. ಶ್ರೀನಿವಾಸಾಚಾರ್ಯರಿಗೆ ಅನೃತವಾಡಿದುದಕ್ಕೆ ತಕ್ಕಂತೆ, ಊಟ ಹೊತ್ತು ಹೋದರೆ ಹೊಟ್ಟೆಶೂಲೆಯು ನಿಜವಾಗಿಯೂ ಬರುವುದಕ್ಕಾರಂಭಿಸಿತು. ಔಷಧಸೇವನೆ ಮಾಡಿದಂತೆ ವ್ಯಾಧಿಯು ಅತಿಶಯವಾಗಿ ಬೆಳೆಯಿತು. ಆಗಾ

ಗಬರುತ್ತಿದ್ದ ಶೂಲೆಯು ನಿತ್ಯವಿಧಿಯಾಗಿ ಪರಿಣಾಮ ಶೂಲೆಯೆನಿಸಿತು. ಪಾಠಪ್ರವಚನವು ಸಾಗದಂತಾಯಿತು. ಆಚಾರ್ಯರು ದಿನದಿನಕ್ಕೆ ಕ್ಷಯಿಸುತ್ತಾ ಬಂದರು. ಹೊಟ್ಟೆಶೂಲೆಯಿಂದ ಬದುಕುವದೇ ದುಸ್ತರವೆಂದು ತೋರಿತು.

ಯಾರಿಗಾದರೂ ಸ್ವೋತ್ತಮದ್ರೋಹವು ಬಲು ಕೆಟ್ಟದ್ದು. ಇಂದ್ರದ್ಯುಮ್ನನಂಥಾ ಮಹಾರಾಜನು ಅಗಸ್ತ್ಯರಿಗೆ ಮಾಡಿದ ಅಪಚಾರದಿಂದ ಗಜಜನ್ಮತಾಳಿ ದುಃಖಪಟ್ಟನು. ನೃಗರಾಜನಂಥಾ ದಾನಶೌಂಡನು ಬ್ರಾಹ್ಮಣಶಾಪದಿಂದ ಓತೀಕೇತನಾದನು. ಗೌತಮರ ಶಾಪದಿಂದ ಇಡೀ ಬ್ರಾಹ್ಮಣರ ಕುಲವೇ ಜ್ಞಾನಶೂನ್ಯವಾಗಿ ವೇದವ್ಯಾಸಾವತಾರವಾದಲ್ಲದೆ ಉದ್ಧಾರದ ಮಾರ್ಗವನ್ನು ಕಾಣಲಿಲ್ಲ. ದೂರ್ವಾಸರ ಶಾಪದಿಂದ ತ್ರಿಲೋಕಾಧಿಪತಿಯಾದ ಇಂದ್ರನು ಪದಚ್ಯುತನಾದನು. ವಿಜಯದಾಸರ 'ಹಾಗೇಆಗಲೆ'ಂಬ ಮಾತು ಶ್ರೀನಿವಾಸಾಚಾರ್ಯರಿಗೆ ಕ್ರೂರ ಪರಿಣಾಮಶೂಲೆಯಾಗಿ ಪರಿಣಮಿಸಿತು. ಔಷಧಿಯಿಂದ ಪರಿಹಾರವಾಗದ ವ್ಯಾಧಿಯನ್ನು ದೇವರ ಸೇವೆಯಿಂದ ಕಳೆದುಕೊಳ್ಳಬೇಕೆಂದು ಆಚಾರ್ಯರು ತಿರುಪತಿಗೆ ಹೋಗಿ ಸೇವೆಮಾಡಿದರು.

ನಭಜತಿಕುಮನೀಷಿಣಾಂ ಸಇಜ್ಯಾಂ
ಹರಿರಧನಾತ್ಮಜನಪ್ರಿಯೋರಸಜ್ಞಃ ||
ಶೃತಧನಕುಲಕರ್ಮಣಾಂ ಮದೈರ್ಯೇ
ವಿದಧತಿಪಾಪ ಮಕಿಂಚನೇಷುಸತ್ಸು ||

ತಾ|| ನಾವು ಬಹುಶೃತರು, ಧನವಂತರು, ಉತ್ತಮಕುಲದವರು, ಕರ್ಮಠರು, ಎಂಬ ಮದಗಳಿಂದ ಕೂಡಿದ ಅಜ್ಞಾನಿಗಳು, ದೇವರೇ ಸರ್ವಸ್ವವೆಂದು ನಂಬಿದ ಸತ್ಪುರುಷರಿಗೆ ದ್ರೋಹಮಾಡಿ, ಭಗವಂತನನ್ನು ಪೂಜೆಯಿಂದ ಒಲಿಸುವೆವೆಂದರೆ, ಅಂಥವರ ಪೂಜೆಯನ್ನು ಬಡವರಾಧಾರಿಯಾದ ಪರಮಾತ್ಮನು ಸ್ವೀಕರಿಸುವದಿಲ್ಲ.

ಎಂಬ ಭಾಗವತೋಕ್ತಿಯಂತೆ ಆಚಾರ್ಯರ ವ್ಯಾಧಿಯು ಶ್ರೀನಿವಾಸನ ಸೇವೆಯಿಂದ ಗುಣವಾಗಲಿಲ್ಲ. ಶ್ರೀನಿವಾಸನು ಆಚಾರ್ಯರ ಸೇವೆಯನ್ನು ಸ್ವೀಕ

ರಿಸಲಿಲ್ಲ. ಆಚಾರ್ಯರು ತಿರುಪತಿಯನ್ನು ಬಿಟ್ಟು ಘಟಿಕಾಚಲಕ್ಕೆ ಬಂದರು. ವಾಯುಸ್ತುತಿ ಪುರಶ್ಚರಣೆಯಿಂದ ಕಠಿಣ ಸೇವೆಮಾಡಿದರು. ಘಟಿಕಾಚಲದ ಮುಖ್ಯಪ್ರಾಣನ ಕೃಪೆಯೂ ಆಚಾರ್ಯರಿಗಾಗಲಿಲ್ಲ. ಅನಂತರ ಆಚಾರ್ಯರು ಮಂತ್ರಾಲಯಕ್ಕೆ ಬಂದರು. ರಾಘವೇಂದ್ರಸ್ವಾಮಿಗಳ ಸೇವೆಗಾರಂಭಿಸಿದರು. ಆ ಕಾಲದಲ್ಲಿ ವರದೇಂದ್ರತೀರ್ಥರು ಪುಣೆಯಲ್ಲಿದ್ದುದರಿಂದ ಆಚಾರ್ಯರಿಗೆ ವ್ಯಾಧಿಯ ಕಾರಣವನ್ನು ತಿಳಿಸುವವರು ದೊರೆಯಲಿಲ್ಲ. ಸೇವೆಮಾಡಿ ಸಾಕಾಯಿತು. ದಿನದಿನಕ್ಕೆ ವ್ಯಾಧಿ ಬಲಿಯಿತು. ಹಿರಿಗುರುಗಳೆಲ್ಲರೂ ತನ್ನನ್ನು ಕೈಬಿಟ್ಟರೆಂದು ದುಃಖಿತರಾದರು. ಕೇವಲ ಪಾದೋದಕ ಸೇವನೆಯಿಂದ ಒಂದು ಸಪ್ತಕ ಸೇವೆಮಾಡಿದರು. ಏಳನೆಯ ರಾತ್ರಿ, ಈ ದಿನವೂ ರಾಯರ ಪ್ರಸಾದವಾಗದಿದ್ದರೆ ತುಂಗಭದ್ರಾ ಪ್ರವೇಶ ಮಾಡಿ ಪ್ರಾಣತ್ಯಾಗಮಾಡುವೆನೆಂದು ನಿಶ್ಚಯಿಸಿದರು.

ಹಂತುನಃ ಕಾಯಜಾನ್ ದೋಷಾನ್
ಆತ್ಮಾತ್ಮೀಯ ಸಮುದ್ಭವಾನ್ ||
ಸರ್ವಾನಪಿ ಪುಮರ್ಥಾಂಶ್ಚ
ದದಾತು ಗುರುರಾತ್ಮವಿತ್ ||

ಎನ್ನುತ್ತಾ—'ಶ್ರೀ ರಾಘವೇಂದ್ರಾಯನಮಃ ಶ್ರೀ ರಾಘವೇಂದ್ರಾಯನಮಃ' ಎಂದು ಜಪಿಸುತ್ತಾ ಮಹಾದ್ವಾರದಲ್ಲಿ ಮೈಮರೆದು ಮಲಗಿದರು.

ಪ್ರಭಾತವಾಗುವದೇ ತಡ, ಗಂಗಾಪ್ರವೇಶಮಾಡುವೆನೆಂದು ಶಪಥ ಮಾಡಿದ್ದ ಆಚಾರ್ಯರಿಗೆ ಒಂದು ವಿಚಿತ್ರ ಸ್ವಪ್ನವಾಯಿತು. ರಾಘವೇಂದ್ರಸ್ವಾಮಿಗಳು ನಿಜರೂಪದಿಂದ ಪ್ರತ್ಯಕ್ಷರಾಗಿ—

'ತಮ್ಮ! ನೀನು ನನಗೆ ಅನ್ಯನಲ್ಲ. ನಿನ್ನ ವ್ಯಾಧಿಯು ನನ್ನಿಂದಾಗಲಿ ಶ್ರೀಹರಿ ವಾಯುಗಳಿಂದಾಗಲಿ ಪರಿಹಾರವಾಗುವದಿಲ್ಲ. ನೀನು ಸ್ತೋತ್ತಮರ ದ್ರೋಹವನ್ನು ಗಳಿಸಿಕೊಂಡಿರುವೆ. ವಿಜಯದಾಸರೆಂದರೆ ಸಾಮಾ

ನ್ಯರಲ್ಲ. ಭೃಗುಮುನಿಗಳೇ ದಾಸರಾಯರು. ಅವರ ನೈವೇದ್ಯದಲ್ಲಿ ಭೋಜನಮಾಡದೆ ಅನ್ಯತವಾಡಿದೆ. ನಿನಗೀ ವ್ಯಾಧಿ ಪ್ರಾಪ್ತವಾಯಿತು. ವಿಜಯರಾಯರು ಚೀಕಲಪರಿಯಲ್ಲಿರುವರು. ಅವರಿಗೇ ಶರಣಾಗತನಾಗು. ಅವರೇ ನಿನ್ನನ್ನುದ್ಧರಿಸುವರು. ಮುಂದೆ ನಿನ್ನಿಂದ ಬಹುವಾಗಿ ಸರ್ವಜ್ಞರ ಸೇವೆಯಾಗುವುದು. ನೀನು ಜಗದ್ವಿಖ್ಯಾತನಾಗುವೆ. ಸಾಯುವೆನೆಂಬ ಸಾಹಸ ಬೇಡ. ನಿನ್ನ ದುಷ್ಕರ್ಮವಿಂದಿಗೆ ತೀರಿತು. ಫಲಮಂತ್ರಾಕ್ಷತೆಯನ್ನು ತೆಗೆದುಕೊ' ಎಂದು ಅನುಗ್ರಹಿಸಿ ಅದೃಶ್ಯರಾದರು.

ಆಚಾರ್ಯರಿಗೆ ಎಚ್ಚರವಾಯಿತು. ಕಣ್ಣಗತ್ತಲೆಯಿಟ್ಟು ಮೈಬೆವರಿತು. ಬುದ್ಧಿಯೋಡದೆ ನಿಶ್ಚೇಷ್ಟರಾಗಿ ಕುಳಿತರು. ಕೈಯಲ್ಲಿರುವ ಉತ್ತತ್ತಿಯನ್ನೂ ಮಂತ್ರಾಕ್ಷತೆಯನ್ನೂ ಕಂಡರು. ಸ್ವಪ್ನವೋ ಜಾಗ್ರತೆಯೋ ಎಂದು ಮೂರು ಮೂರುಬಾರಿ ಅತ್ತಿತ್ತ ನೋಡಿದರು. ಅರುಣೋದಯವಾಗುತ್ತಿರುವದನ್ನು ಕಂಡರು. ಜಾಗ್ರತನಾಗಿ ಕುಳಿತಿರುವೆನೆಂದು ನಿರ್ಧರಿಸಿದರು. ಮಂತ್ರಾಕ್ಷತೆಯನ್ನು ತಲೆಯಮೇಲೆ ಹಾಕಿಕೊಂಡರು. ಇಂದಿಗೆ ಗುರುಕೃಪೆಯಾಯಿತೆಂದರು. ಇಂದಿಗೆ ನನ್ನ ದುಷ್ಕರ್ಮ ಸವೆಯಿತೆಂದರು. ವಿಜಯರಾಯ! ಪಾಹಿ ಪಾಹಿಯೆಂದು ತಾವು ಮಾಡಿದ ಪಾಪಕ್ಕೆ ಪಶ್ಚಾತ್ತಾಪಬಡುತ್ತಾ ಕುಳಿತರು. ಇನ್ನು ಕುಳಿತು ಫಲವಿಲ್ಲವೆಂದುಕೊಂಡರು. ಏಳುವದಕ್ಕೆ ಪ್ರಯತ್ನಿಸಿ ಕುಸಿದು ಕೆಳಗೆ ಬಿದ್ದರು. ಬೀಳುತ್ತಿರುವ ಪತಿಯನ್ನುನೋಡಿ ಆಚಾರ್ಯರ ಪತ್ನಿಯು ಕೈ ಹಿಡಿದುಪಚರಿಸಿದಳು. ನದಿಗೆ ಕರೆದೊಯ್ದು ಸ್ನಾನಮಾಡಿಸಿದಳು. ತಾನೇ ಗೋಪೀಚಂದನವನ್ನು ತೆಯ್ದು ದ್ವಾದಶನಾಮಗಳನ್ನು ಬಳಿದಳು. ಮೃದುವಾಗಿ ಪಂಚಮುದ್ರೆಗಳನ್ನು ತನಗೆ ತಿಳಿದಂತೆ ಒತ್ತಿದಳು.

ರೋಗದಿಂದ ಕೃಶವಾದ ದೇಹ! ಸೇವೆಯಿಂದ ಬಳಲಿದ ಇಂದ್ರಿಯಗಳು! ನಿರಾಶೆಯಿಂದ ಸೋತ ಮನಸ್ಸು! ಏಳುದಿನಗಳ ಉಪವಾಸದಿಂದ ಕುಗ್ಗಿದ ಕಂಠಸ್ವರ! ಇಂತಹ ಸ್ಥಿತಿಯಲ್ಲೂ ಆಚಾರ್ಯರು ಕೈಸಂಜ್ಞೆಯಿಂದ ರಾಯರ ಗುಡಿಗೆ ಹೋಗಬೇಕೆಂದರು. ಪತ್ನಿಯೂ ಮಗ ದಾಮೋದರನೂ

ಪ್ರಯತ್ನದಿಂದ ಆಯಾಸವಾಗದಂತೆ ಎತ್ತಿಕೊಂಡು ಬಂದರು. ಗುರುದರ್ಶನವಾಯಿತು. ಪಾದೋದಕ ಮೃತ್ತಿಕಾ ಪ್ರಸಾದಗಳು ದೊರೆತವು. ಪತ್ನಿಯು ಉತ್ತತ್ತಿಯ ಗಂಜಿಯನ್ನು ಮಾಡಿ ಪತಿಗೆ ಪಾರಣೆಮಾಡಿಸಿದಳು. ನಾಲ್ಕಾರು ದಿವಸಗಳಲ್ಲಿ ಆಚಾರ್ಯರಿಗೆ ಸ್ವಲ್ಪ ಚೈತನ್ಯವುಂಟಾಯಿತು.

## ಆಚಾರ್ಯರ ಪ್ರಯಾಣ.

ಶ್ರೀನಿವಾಸಾಚಾರ್ಯರು ಮೇನೆಯಲ್ಲಿಕುಳಿತು ಚೀಲಕಪರಿಯ ಮಾರ್ಗವಾಗಿ ಹೊರಟರು. ಶ್ರೀಪಾದರಾಯರು ಪ್ರತಿಷ್ಠಿಸಿದ ಅಶ್ವತ್ಥನರಸಿಂಹದೇವರಬಳಿ ವಿಜಯರಾಯರು ಪ್ರದಕ್ಷಿಣೆ ಮಾಡುತ್ತಿರುವದು ಕಾಣಿಸಿತು. ಆಚಾರ್ಯರು ಮೇನೆಯಿಂದ ಕೆಳಗಿಳಿದರು. ಹೆಜ್ಜೆನಮಸ್ಕಾರ ಹಾಕುತ್ತಾ ಕಟ್ಟೆಯಬಳಿಗೆ ಬಂದರು. ದೀರ್ಘದಂಡಮಾಡಿ—ವಿಜಯರಾಯಾ ಪಾಹಿ ಪಾಹಿಯೆನ್ನುತ್ತಾ ಪ್ರಜ್ಞೆತಪ್ಪಿದಂತಾದರು. ಸಂಜ್ಞೆ ತಿಳಿದು ' ಗುಬ್ಬಿಯ ಮೇಲೆ ಬ್ರಹ್ಮಾಸ್ತ್ರವೇ ' ಎಂದು ಕುಳಿತುಕೊಂಡರು. ವಿಜಯರಾಯರು ಆಚಾರ್ಯರ ವೈದಡವಿ—'ಬಳಲಿದೆ, ಬಲು ಬಳಲಿದೆ, ಇನ್ನೇನು ನಿನ್ನ ಮೇಲೆ ರಾಯರ ಕೃಪೆಯಾಯಿತು! ನಿನ್ನ ದುಷ್ಕೃತವು ಹಿಂದಾಯಿತು. ಪ್ರಾರಬ್ಧವು ಭೋಗಿಸದೆ ಬಿಡದು. ನಿನಗಾಗಿ ನಾನು ಮಾನವಿಗೆ ಬಂದೆ. ಇಂದಿಗೆ ಶ್ರೀಹರಿಕೃಪೆ ನಿನ್ನಲ್ಲಾಯಿತು' ಎಂದುಪಚರಿಸಿದರು.

ಆಚಾರ್ಯರಿಗೆ ಏನು ಮಾತನಾಡುವುದಕ್ಕೂ ಬರದಂತಾಯಿತು. ಕಂಠರೋಧವಾಗಿ ಕಣ್ಣುಗಳಿಂದ ಪ್ರೇಮಾಶ್ರುಗಳು ಮೇರೆದಪ್ಪಿ ಹರಿದವು. ವಿಜಯರಾಯರ ಪಾದದಲ್ಲಿ ಹೊರಳಿ ಪಾದಧೂಳಿಯನ್ನು ಸವರಿಕೊಂಡರು. ಆದಿನ ಆಚಾರ್ಯರಿಗೆ ವಿಜಯರಾಯರಲ್ಲಿ ಉಪಚಾರವಾಯಿತು. –'ಆಚಾರ್ಯ, ನೀನು ನಾಳೆ ಉತ್ತನೂರಿಗೆ ಹೋಗು. * ಭಾಗಣ್ಣನು ( ಗೋಪಾಲದಾ

---

* ಗೋಪಾಲದಾಸರು ಆಚಾರ್ಯರು ಮಾಡಿದ ವಿಜಯದಾಸರ ನಿಂದೆಯನ್ನು ಕೇಳಿ ವ್ಯಸನದಿಂದ ಗುರುನಿಂದೆಯನ್ನು ಕೇಳಿದ್ದಕ್ಕೆ ಉಪವಾಸಮಾಡಿದರಂತೆ! ವಿಜಯದಾಸರು ನಾನೇ ದುಃಖಿಸದಿರುವ ವಿಷಯದಲ್ಲಿ ನೀನು ದುಃಖಿಸಲು ಕಾರಣವಿಲ್ಲ; ಎಂದಿದ್ದರೂ ಆಚಾರ್ಯರು ನಿನ್ನ ಬಳಿಗೇ ಬರುವರೆಂದು ಹೇಳಿದರಂತೆ! ಆದರಂತೆ ವಿಜಯದಾಸರು ಈಗ ಗೋಪಾಲದಾಸರ ಬಳಿಗೆ ಕಳುಹಿಸಿದರಂತೆ.

ಸರು) ನಿನ್ನನ್ನು ಎದುರುನೋಡುತ್ತಿರುವನು. ಅವನೇ ನಿನ್ನ ಸ್ವರೂಪ ಗುರುವು. ಅವನಿಂದ ನಿನಗೆ ಅಪರೋಕ್ಷವಾಗುವದು. ನೀನು ಪ್ರಖ್ಯಾತ ಹರಿದಾಸನಾಗುವೆ ' ಎಂದು ವಿಜಯರಾಯರು ಹರಸಿದರು. ಮರುದಿನ ಆಚಾರ್ಯರು ಪಾದಚಾರಿಗಳಾಗಿ ಉತ್ತನೂರಿಗೆ ಪ್ರಯಾಣಮಾಡಿದರು. ವಿಜಯದಾಯರ ಅನುಗ್ರಹದಿಂದ ಆಚಾರ್ಯರಿಗೆ ವಿಚಿತ್ರ ಶಕ್ತಿ ಹುರಿ ಗೂಡಿದಂತಾಯಿತು.

- ೨ -

ಗೋಪಾಲದಾಸರ ಚರಿತ್ರೆಯಲ್ಲಿ ತಿಳಿಸಿರುವಂತೆ ಉತ್ತನೂರೆಂಬುವುದು ಗದ್ವಾಲ ಸಂಸ್ಥಾನಕ್ಕೆ ಸೇರಿದ ಒಂದು ಗ್ರಾಮ. ಗೋಪಾಲದಾಸರಿಗೆ ಪ್ರಸನ್ನನಾದ ವೆಂಕಟಪತಿಯ ದೇವಾಲಯವು ಅದ್ಯಾಪಿ ಅಲ್ಲಿ ಕಂಗೊಳಿಸು ತ್ತಲಿದೆ. ಶ್ರೀನಿವಾಸಾಚಾರ್ಯರು ಬರುವರೆಂದರಿತು, ಗೋಪಾಲದಾ ಸರು ಬರುವರ ಕಾಲಿಗೆ ಮುಳ್ಳು ತಗಲಬಾರದೆಂದು ಗುಡಿಸುತ್ತಿದ್ದರು. ಗೋಪಾಲದಾಸರೆಷ್ಟು ಜ್ಞಾನಿಗಳಾಗಿದ್ದಾರೋ ಅಷ್ಟೇ ನೋಡುವರ ಕಣ್ಣಿಗೆ ಸಾಮಾನ್ಯ ಮನುಷ್ಯರಂತೆ ಕಾಣಿಸುತ್ತಿದ್ದರು. ಆಚಾರ್ಯರು ಉತ್ತನೂ ರಿಗೆ ಬರಲು ಎರಡುಮೂರು ದಿವಸ ಹಿಡಿಯಿತು. ಕಸವನ್ನು ಬಳಿಯುತ್ತಿ ರುವ ದಾಸರನ್ನು ನೋಡಿ, ಆಚಾರ್ಯರು, ಈ ಊರಲ್ಲಿ ಗೋಪಾಲದಾಸರ ಮನೆಯೆಲ್ಲಿದೆಯೆಂದು ಪ್ರಶ್ನೆಮಾಡಿದರು. ದಾಸರು, ಮನೆಯು ಊರೊಳ ಗಿದೆಯೆಂದುತ್ತರವಿತ್ತರು. ಆಚಾರ್ಯರು ದಾಸರ ಮನೆಗೆ ಹೋಗಿ ವಿಚಾರಿ ಸಲು, ದೇವಾಲಯದ ಬಳಿ ಗುಡಿಸುತಿದ್ದವರೇ ಗೋಪಾಲದಾಸರೆಂದು ಗೊತ್ತಾಯಿತು. -ಅಯ್ಯೋ ನನ್ನ ಅಜ್ಞಾನವೇ! ಎಂದುಕೊಳ್ಳುತ್ತಾ ಆಚಾರ್ಯರು ಹಿಂದಿರುಗಿ ಬಂದು ದಾಸರ ಪಾದಗಳಿಗೆರಗಿದರು. ದಾಸರು, -'ಬರಬೇಕು ಆಚಾರ್ಯರು, ತಮಗಾಗಿ ಮಾರ್ಗನಿರೀಕ್ಷಣೆ ಮಾಡುತ್ತಿದ್ದೆ'

ಎಂದು ಅವರೊಡನೆ ದೇವಾಲಯ ಪ್ರವೇಶ ಮಾಡಿದರು. ತಮಗೆ ರಾಯರು ಹೀಗೆ ಹೇಳಿದರಲ್ಲವೆ? ವಿಜಯದಾಸರು ಈ ಮಾತುಗಳನ್ನು ತಿಳಿಸಿದರಲ್ಲವೆ ? ಎಂದು ಅಕ್ಷರಶಃ ಅವರವರಾಡಿದ ಮಾತುಗಳನ್ನೇ ಕೇಳಿ ಆಚಾರ್ಯರ ಕುಶಲಪ್ರಶ್ನೆಮಾಡಿದರು. ಆಚಾರ್ಯರು ದಾಸರ ಮಾತನ್ನು ಕೇಳಿ ಮುಗ್ಧರಂತೆ ಕುಳಿತುಬಿಟ್ಟರು. ಸ್ವಲ್ಪ ಹೊತ್ತಿನ ಮೇಲೆ, -'ತಾವು ನನ್ನ ಸ್ವರೂಪಗುರುಗಳು. ನನ್ನ ಸಕಲಾರ್ಥವೂ ತಮ್ಮಿಂದ ಸಿದ್ಧಿಸಬೇಕು' ಎಂದು ಶರಣಾಗತರಾದರು.

ಅಪರೋಕ್ಷಜ್ಞಾನಿಗಳ ಮಹಿಮೆಯು ಇಷ್ಟೆಂದು ಸಾಮಾನ್ಯರಿಗೆ ತಿಳಿಯುವದಲ್ಲ. ಆತ್ಮಸಾಕ್ಷಾತ್ಕಾರ ಮಾಡಿಕೊಂಡವರಿಗೆ ಜನ್ಮಬಂಧನಗಳಿಲ್ಲ. ಅಂಥವರು ಜೀವನ್ಮುಕ್ತರೆನಿಸಿಕೊಳ್ಳುತ್ತಾರೆ. ಜೀವನ್ಮುಕ್ತರು ಯಾವ ಲೋಕಗಳನ್ನು ಬೇಕಾದರೂ ಸೂಕ್ಷ್ಮಶರೀರದಿಂದ ಸಂಚರಿಸಬಲ್ಲರು. ಆಲೋಚನೆ ಮಾತ್ರದಿಂದ ಎಲ್ಲರ ಮನೋಗತಗಳನ್ನೂ ತಿಳಿಯಬಲ್ಲರು. ಪ್ರಸನ್ನರಾಗಿ ಯಾರನ್ನು ಬೇಕಾದರೂ ಉದ್ಧರಿಸಬಲ್ಲರು. ಅವರಿಗೆ ಜನನ ಮರಣಗಳು ಇಚ್ಛಾಮಾತ್ರದಲ್ಲಿರುವುವು. ಪರಕಾಯಪ್ರವೇಶವನ್ನು ಕಲಿತವರೇ ವಿಚಿತ್ರ ಚರ್ಯೆಗಳನ್ನು ಮಾಡಿತೋರಿಸುವಾಗ ಬ್ರಹ್ಮವೇತ್ತರ ವಿಚಾರವನ್ನು ಹೇಳುವದೇನು ? ಸರ್ವಸಿದ್ಧಿದಾಯಕನಾದ ಗಣಾಧಿಪತಿಯೇ ಗೋಪಾಲದಾಸರಾಗಿ ಅವತರಿಸಿದನೆಂಬ ಜ್ಞಾನಿಗಳ ಅನುಭವವಿರಲು ಆ ಸರ್ವಶರಣ್ಯನ ಪ್ರಭಾವವನ್ನು ಬಣ್ಣಿಸಲು ಸಮರ್ಥರಾರು?

ದಾಸರ ಮತ್ತು ಶ್ರೀನಿವಾಸಾಚಾರ್ಯರ ಸ್ನಾನಾಹ್ನಿಕಗಳಾದವು. ಪೂಜಾನಂತರ ದಾಸರು, ಆಚಾರ್ಯರೆ! ನೈವೇದ್ಯ ವಿಷಯ ಹೇಗೆಂದರು. ಈ ಮಾತಿನಿಂದ ಆಚಾರ್ಯರು ತತ್ತರಿಸಿ ಹೋದರು. ಸ್ವಾಮಿ, ಇನ್ನು ನನ್ನನ್ನು ತಾವು ಪರೀಕ್ಷಿಸಬಾರದು. ಒಮ್ಮೆ ನೈವೇದ್ಯಕಲಾಪಕ್ಕೆ ಬಿದ್ದು ನನ್ನಗತಿ ಹೀಗಾಯಿತು. ಮತ್ತಾಬೇ ಮಾತೆತ್ತಿದರೆ ನನ್ನ ಪರಿಣಾಮವೇನಾದೀತು? ವಿದ್ಯಾಮದದಿಂದ ಮಾಡಿದ ಶಾಠ್ಯಕ್ಕೆ ಫಲಾನುಭವವಾಯಿತು. ತಾವು ನನ್ನಲ್ಲಿ ಪರಮಾನುಗ್ರಹಮಾಡಬೇಕು. ನನ್ನ ಸಾಹಸದ ಮಾತನ್ನು ಕ್ಷಮಿಸಬೇಕು. ಎಂದು ಮೊರೆಯಿಟ್ಟರು.

ದಾಸರು ನೈವೇದ್ಯ ವೈಶ್ವದೇವ ಬಲಿಹರಣಗಳನ್ನು ಮಾಡಿ, ಭಕ್ಕರಿಯೊಂದನ್ನಭಿಮಂತ್ರಿಸಿ ಆಚಾರ್ಯರಿಗೆ ಕೊಟ್ಟರು. ಆಚಾರ್ಯರಿಗೆ ಹರಿಪಾದೋದಕವು ಔಷಧವಾಗಿ, ಭಕ್ಕರಿಯು ಪಥ್ಯವಾಗಿ, ಅಂದಿನಿಂದಲೇ ಹೊಟ್ಟೆ ಶೂಲೆಬರುವುದು ನಿಂತುಹೋಯಿತು. ದಿನದಿನಕ್ಕೆ ಆರೋಗ್ಯಹೆಚ್ಚಿತು.

ಗೋಪಾಲದಾಸರು ಪ್ರತಿವರ್ಷವೂ ತಿರುಪತಿಗೆ ಬ್ರಹ್ಮೋತ್ಸವಕ್ಕೆ ಹೋಗುತ್ತಿದ್ದರು. ದಾಸರನ್ನು ಹಿಂಬಾಲಿಸಿ ನೂರಾರು ಜನರು ಪ್ರಯಾಣ ಮಾಡುತ್ತಿದ್ದರು. ದಾಸರ ಯಾತ್ರೆಯು ಗಂಟುಮೊಟ್ಟೆಗಳನ್ನು ಕುದುರೆಗಳ ಮೇಲೂ ಎತ್ತುಗಳಮೇಲೂ ಹೇರಿಕೊಂಡು ಪಾದಚಾರಿಗಳಾಗಿ ನಡೆಯುವ ಯಾತ್ರೆಯಾಗಿತ್ತು. ಯಾತ್ರಿಕನು ವಾಹನವೇರಲು ದಾಸರ ಅನುಮತಿಯಿರಲಿಲ್ಲ. ಮಾರ್ಗಕ್ರಮಣ ಮಾಡುವಾಗ ಎಲ್ಲರೂ ಭಜನೆಮಾಡಿಕೊಂಡು, ಮಧ್ಯಾಹ್ನಕಾಲಕ್ಕೆ ಒಂದುಗ್ರಾಮವನ್ನಾಗಲಿ ಪಟ್ಟಣವನ್ನಾಗಲಿ ಸೇರಬೇಕಾಗಿತ್ತು. ಯಾತ್ರೆಗೆ ಹೊರಟ ದಿನದಿಂದ ತಿರುಗಿ ಬಂದು ದೇವರ ಸಮಾರಾಧನೆ ಮಾಡುವವರೆಗೆ ಸ್ತ್ರೀಯಾಗಲಿ ಪುರುಷನಾಗಲಿ ಏಕಭುಕ್ತದಲ್ಲಿದ್ದು ಬ್ರಹ್ಮಚರ್ಯವನ್ನು ಪಾಲಿಸಬೇಕಾಗಿತ್ತು. ಇಷ್ಟು ನಿಯಮ ಪಾಲಿಸುವವರು ದಾಸರನ್ನು ಹಿಂಬಾಲಿಸುತ್ತಿದ್ದರು.

ಗೋಪಾಲದಾಸರು ಯಾತ್ರೆಗೆ ಸಿದ್ಧರಾದುದನ್ನು ನೋಡಿ, ಶ್ರೀನಿವಾಸಾಚಾರ್ಯರೂ ಜೊತೆಯಲ್ಲಿ ಹೊರಟರು. ದೇಹದಾರ್ಢ್ಯವಿರದಿದ್ದರೂ, ಗೋಪಾಲದಾಸರು ಕುದುರೆಯಮೇಲೆ ಕುಳಿತು ಪ್ರಯಾಣಮಾಡಬಹುದೆಂದರೂ, ಆಚಾರ್ಯರು ಪಾದಚಾರಿಗಳಾಗಿ ಎಲ್ಲರಂತೆ ತಾವೂ ನಡೆದರು. ನಾಮಸ್ಮರಣೆ ಮಾಡುತ್ತಾ ಬಹು ಪ್ರಯಾಸಪಟ್ಟು ಪರ್ವತಾರೋಹಣಮಾಡಿದರು. ಸ್ವಾಮಿ ಪುಷ್ಕರಿಣಿಯಲ್ಲಿ ಮಿಂದು ವೆಂಕಟಪತಿಯ ದರ್ಶನಮಾಡಿದರು. ದಾಸರ ಆಜ್ಞೆಯನ್ನು ಪಡೆದು ತಮ್ಮ ಬಿಡಾರದಲ್ಲಿ ಶಯನ ಮಾಡಿದರು.

ಬಲುಕಾಲ ವ್ಯಾಧಿಯನ್ನನುಭವಿಸಿದುದರಿಂದ ಪ್ರಾಪ್ತವಾಗಿದ್ದ ದೌರ್ಬಲ್ಯದ ಜೊತೆಗೆ ಏಕಭುಕ್ತದಿಂದ ಮಾರ್ಗಕ್ರಮಣ ಮಾಡಿದುದೂ, ಪ್ರಯಾಸ

ಪಟ್ಟು ಪರ್ವತಾರೋಹಣ ಮಾಡಿದುದೂ ಸೇರಿ ಆಚಾರ್ಯರಿಗೆ ಬಲು ಸಂಕಟವಾಗಿ ಊರ್ಧ್ವಶ್ವಾಸಕ್ಕಿಟ್ಟಿತು. ಒಂದೆರಡು ನಿಮಿಷಗಳಲ್ಲಿ ಹೃದಯವ್ಯಾಪಾರವು ನಿಂತುಹೋಯಿತು.

ಗೋಪಾಲದಾಸರು ಸ್ವಾಮಿಯ ಉತ್ಸವದ ಜೊತೆಯಲ್ಲಿ ಭಜನೆಮಾಡುತ್ತಿದ್ದು ಇದ್ದಕ್ಕಿದ್ದಹಾಗೆ ತಮ್ಮ ಬಿಡಾರಕ್ಕೆ ಬಂದು, ಆಚಾಯರು ಮೃತರಾಗಿರುವದನ್ನು ಕಂಡು ದುಃಖಿತರಾದರು. -'ಆಚಾರ್ಯ! ನಿನ್ನ ಮರಣಕ್ಕೆ ನಾನೇ ಕಾರಣನಾದೆನೇ' ಎಂದುಕೊಂಡರು.

ಅಷ್ಟರಲ್ಲಿ ವಿಜಯದಾಸರು ಸೂಕ್ಷ್ಮ ಶರೀರದಿಂದ ಬಂದು 'ಭಾಗಣ್ಣ! ನಿನ್ನ ಆಯುಸ್ಸಿನಲ್ಲಿ ಆಚಾರ್ಯನಿಗೆ ನಲವತ್ತು ವರ್ಷಗಳನ್ನು ಧಾರೆಯೆರೆದು ಬದುಕಿಸೆ'ಂದು ಆಜ್ಞೆಗೈದರು.

ಆ ಕಾಲದಲ್ಲಿ ಗೋಪಾಲದಾಸರು ಅಪಮೃತ್ಯುಪರಿಹಾರಕನೂ ಆಯುರ್ದಾತನೂ ಆದ ಧನ್ವಂತರೀರೂಪಿ ಶ್ರೀನಿವಾಸನನ್ನು—

ಕಲ್ಯಾಣಿ — ಜಂಪೆತಾಳ

ಎನ್ನ ಬಿನ್ನಪಕೇಳೋ ಧನ್ವಂತ್ರಿ ದಯಮಾಡೊ
ಸಣ್ಣವನು ಇವ ಕೇವಲ ||ಪ||

ಬನ್ನ ಬಡಿಸುವರೋಗ | ವನ್ನು ಮೋಚನಮಾಡಿ
ಚನ್ನಾಗಿ ಪಾಲಿಸುವದೋ | ಕರುಣೀ ||ಅ||

ಆರೋಗ್ಯ ಆಯುಸ್ಸು ಐಶ್ವರ್ಯವೆಂಬ ಈ
ಮೂರುವಿಧ ವಸ್ತುಂಗಳು |
ನಾರಾಯಣನ ಭಜಕರಾದವರ ಸಾಧನಕೆ
ಪೂರಣಾವಾಗಿಪ್ಪವೊ |
ಘೋರವ್ಯಭಿಚಾರ ಪರನಿಂದೆ ಪರವಿತ್ತಾಪ

ಹಾರವಾಡಿದ ದ್ರೋಪದಿ ॥
ದರಿದ್ರರಾಗುವರು ಮೂರುವಿಧದಿಂದಲೇ
ಕಾರಣನು ನೀನೆ ದುಷ್ಕರ್ಮ ಪರಿಹರಿಸೋ ||೧||

ವಸುಮತಿಯ ಮೇಲಿನ್ನು ಅಸುರ ಜನರೇ ಬಹಳ
ವಶವಲ್ಲ ಕಲಿಯ ಬಾಧೆ।
ಬಿಸಿಲಿಂದ ಪೀಡಿತವಾದ ಸಸಿಗಳಂತೆ
ಶಿಶುಗಳು ನಾವಿಪ್ಪೆವೊ।
ಅಸುರಾರಿ ನಿನ್ನ ಕರುಣಾಮೃತದ ಮಳೆಗರೆದು
ಕುಶಲದಲಿ ಪಾಲಿಸುವದು ॥
ಕೆಸರಿಂದ ಕೆಸರು ತೊಳೆದಂತೆ ಕರ್ಮದ ಪಥವು
ಅಸುನಾಥ ಹರಿಯೆ ಸಲಹೋ। ಸ್ವಾಮಿ ||೨||

ಅನ್ಯರನು ಭಜಿಸದಲೆ ನಿನ್ನನೇ ಸ್ಮರಿಸುತ್ತ।
ನಿನ್ನ ಚಿಹ್ನೆಗಳನ್ನೆ ಧರಿಸಿ।
ನಿನ್ನನಾಮೋಚ್ಚರಿಸಿ ನಿನ್ನವರನೆನಿಸಿ।
ನಿನ್ನಿಂದ ಉಪಜೀವಿಸಿ।
ಅನ್ನ ಆರೋಗ್ಯ ಅಲ್ಪವು ಆಗೆ ಅನ್ಯರಿಗೆ
ಇನ್ನು ಅಲ್ಪರಿಯಬೇಕೆ? ॥
ನಿನ್ನ ಸಂಕಲ್ಪ ಭಕತರನು ಪೋಷಿಪೆನೆಂದು।
ಘನ್ನ ಬಿರುದನ್ನು ಉಳುಹೋ। ಸ್ವಾಮಿ ||೩||

ಆದಿವ್ಯಾಧಿಗಳು ಉನ್ಮಾದ ವಿಭ್ರಮ ನಾನಾ।
ಬಾಧೆಗೌಷಧವು ನೀನೆ।
ಈದಾವ ನಿನ್ನ ಕರಕಮಲದಿಂ ಸುಧೆಗರೆದು।
ಸಾಧುಗಳ ಪಾಲಿಸುವೆ ನೀ।
ಮೋದಬಡಿಸುವೆ ನಿನ್ನ ಸಾಧಿಸುವವರಿಗೆ ಶು
ಭೋದಯಂಗಳನೆ ನೀಡಿ ॥

ಆದರಿಸಿ ಅವಗೆ ತವ ಪಾದಧ್ಯಾನವನಿತ್ತು
ಸಾಧುಗಾಳೊಳಗಿರಿಸಿ ಮೋದಕೊಡು ಸರ್ವದ ||೪||

ನಿನ್ನವರಲಿ ಇವಗೆ ಇನ್ನು ರತಿಯನೆ ಕೊಡೊ |
ನಿನ್ನವನೆಂದು ಅರಿದು |
ನಿನ್ನ ಪ್ರಾರ್ಥಿಸಿದೆ ನಾನನ್ಯರಿಗೆ ಅಲ್ಪರಿಯೆ |
ಎನ್ನ ಪಾಲಿಸುವ ಧೊರೆಯೆ |
ಎನ್ನಮಾತಲ್ಲ ಇದು ಎನ್ನಹಿರಿಯರ ಮಾತು |
ಮನ್ನಿಸಬೇಕು ಕರುಣಿ ||
ಅನ್ನಂತಗುಣಪೂರ್ಣ ಗೋಪಾಲವಿಠಲ್ಲ
ಇನ್ನಿದನೆ ಪಾಲಿಸುವದೋ | ಪ್ರಭುವೆ ||೫||

ಎಂಬದಾಗಿ ಸ್ತೋತ್ರಮಾಡಿ, ಶಾ. ೧೬೯೧ನೇ ವಿರೋಧಿ ಸಂವತ್ಸರದ ಭಾದ್ರಪದ ಶುದ್ಧ ನವಮಿಯು ದಿವಸ ತಮ್ಮ ಆಯುಸ್ಸಿನಲ್ಲಿ ನಲವತ್ತು ವರ್ಷಗಳನ್ನು ಧಾರೆಯೆರೆದರು.

ಆಚಾರ್ಯರು ನಿದ್ರೆಯಿಂದೇಳುವರಂತೆ ಚೇತರಿಸಿ ಕುಳಿತರು. ಸುತ್ತಲೂ ಜನರೇಕೆ ನೆರೆದಿರುವರೆಂದು ನೋಡಿದರು. ಪಕ್ಕದಲ್ಲಿರುವ ಗೋಪಾಲದಾಸರನ್ನು ಕಂಡು ಲಜ್ಜಿತರಾಗಿ ದೂರಸರಿದರು. ದಾಸರು ಆಚಾರ್ಯರ ತಲೆಯಮೇಲೆ ಕೈಯಾಡಿಸುತ್ತಾ, ಪರಮಾತ್ಮನನ್ನು ಸ್ಮರಿಸಿ ಆನಂದ ಪುಳಕಿತರಾದರು.

ದಾಸರ ಬಿಡಾರದಲ್ಲಿ ಯಾರೋ ಸತ್ತರೆಂಬ ವರ್ತಮಾನವಾಗಿದ್ದದು ತಪ್ಪಿ, ಸತ್ತಿಲ್ಲ, ಬದುಕಿದ್ದಾರೆಂದು ಬೀದಿಯ ತುಂಬ ಗದ್ದಲವಾಯಿತು. ಕೇಳಿದವರಿಗೆ ಉತ್ತರಕೊಡುವದು ಕಠಿಣವಾಗಿ ಒಳಗಿದ್ದವರು ಹೊರಗೇ ಬಂದುಬಿಟ್ಟರು.

ಆಚಾರ್ಯರಿಗೆ ಜನರಾಡಿಕೊಳ್ಳುವ ಮಾತು ಒಂದೊಂದೂ ವಿಪರೀತವಾಗಿ ತೋರಿತು. ಜನರಾಡುವಂತೆ ನಾನು ಮೃತನಾಗಿದ್ದೆನೆ ? ಮೃತನಾಗಿ

ದ್ದರೆ ಬದುಕಿದುದು ಹೇಗೆ? ಮಲಗಿದಾಗ ಮರಣಸಂಕಟವಾದದ್ದು ನಿಜ! ಮತ್ತೇನಾಯಿತೋ ತಿಳಿಯಲಿಲ್ಲ ಭಾಗಣ್ಣದಾಸರಿಂದ ನನ್ನ ಸ್ವರೂಪೋದ್ಧಾರವಾಗುವದೆಂದು ವಿಜಯರಾಯರು ಹೇಳಿದರು. ಅವರಿಂದ ನನ್ನ ಪರಿಣಾಮಶೂಲೆಯು ಪರಿಹಾರವಾಯಿತು. ಮಹನೀಯರಿಂದಾಗದ ಕಾರ್ಯಗಳಾವುವು? ಬ್ರಹ್ಮಣ್ಯತೀರ್ಥರು ರಾಮಶರ್ಮನನ್ನು ಬದುಕಿಸಿದರು. ವೃದ್ಧ ದಂಪತಿಗಳಿಗೆ ಸಂತಾನವಾಗಲೆಂದನುಗ್ರಹಿಸಿದರು. ಅಂಥವರ ಉದರದಲ್ಲುದಿಸಿದ ಚಂದ್ರಿಕಾಚಾರ್ಯರು ಕರ್ನಾಟಕ ಸಾಮ್ರಾಜ್ಯ ದೇವತಾಸ್ವರೂಪರೆನಿಸಿದರು. ಈಗ ಭಾಗಣ್ಣದಾಸರೇ ನನ್ನನ್ನು ಬದುಕಿಸಿರಬೇಕು. ಈ ಮಾತು ಎಂದಿಗೂ ಸುಳ್ಳಾಗಿರಲಿಕ್ಕಿಲ್ಲ. ಆದರೂ ಅವರನ್ನೇ ಒಮ್ಮೆ ಕೇಳಿಬಿಡುವೆನು.

ಆಚಾರ್ಯರು—(ದಾಸರ ಪಾದದಮೇಲೆ ತಲೆಯಿಟ್ಟು) ಗುರುಗಳೆ! ಇಷ್ಟೆಲ್ಲಾ ಜನರ ಗದ್ದಲವೇಕಾಯಿತು?

ದಾಸರು—ನಿನಗಾಗಿ ಆಯಿತು.

ಆಚಾರ್ಯ—ನಾನು ಮಾಡಿದುದೇನು?

ದಾಸರು—ಏನಿಲ್ಲ, ಮೃತನಾಗಿದ್ದುದೆ!

ಆಚಾರ್ಯ—ಮೃತನಾಗಿದ್ದರೆ ಬದುಕಿಸಿದವರಾರು?

ದಾಸರು—ವಿಜಯರಾಯರು.

ಹತ್ತಿರದಲ್ಲಿದ್ದ ಗೋಪಾಲದಾಸರ ತಮ್ಮ ಗುರುಗೋಪಾಲದಾಸರು—ಆಚಾರ್ಯರೆ, -'ನಿಮ್ಮಲ್ಲಿ ವಿಜಯರಾಯರು ಪರಮಾನುಗ್ರಹಮಾಡಿದ್ದಾರೆ. ಅಣ್ಣಂದಿರ ಆಯುಸ್ಸಿನಲ್ಲಿ ನಿಮಗೆ ನಲವತ್ತು ವರ್ಷಗಳನ್ನು ಧಾರೆಯೆರೆಸಿದ್ದಾರೆ. ವಿಜಯರಾಯರ ಆಜ್ಞೆಯಿಂದ ಅಣ್ಣಂದರು ನಿಮ್ಮನ್ನು ಬದುಕಿಸಿದ್ದಾರೆ. ಇನ್ನುಮೇಲೆ ಭಾಗವತಾಪಚಾರಕ್ಕೆ ಹೋಗಬೇಡಿರಿ. ದೈವಾಯತ್ತವಾಗಿ ದೊರೆತ ನಲವತ್ತುವರ್ಷ ಸಾಧನೆಮಾಡಿ ಭಗವದನುಗ್ರಹವನ್ನು ಸಂಪಾದಿಸಿರಿ' ಎಂಬದಾಗಿ ನುಡಿದರು.

ಆಚಾರ್ಯರು—ಈ ರಹಸ್ಯಗಳೊಂದೂ ತಿಳಿಯದ ಪಾಮರನು ನಾನು. ನನಗೆ ಮಾರ್ಗದರ್ಶಿಗಳು ತಾವು. ಈ ಗುಪ್ತವಿದ್ಯೆಯ ಅನುಭವವನ್ನು ತಾವು ನನಗೆ ಮಾಡಿಕೊಡಬೇಕು. ನನ್ನನ್ನುದ್ಧರಿಸಬೇಕು, ಎಂದು ಕಂಬ ನಿಗರೆದರು. ಗುರುಗೋಪಾಲದಾಸರ ಪಾದಗಳಿಗೆರಗಿದರು.

ಗುರುಗೋಪಾಲದಾಸರು—ಆಚಾರ್ಯರೆ! ಇದೆಲ್ಲವೂ ತಪಸ್ಸಿನಿಂದ ಬರುವದಲ್ಲ. ವಿದ್ಯದಿಂದ ಪ್ರಾಪ್ತವಾಗುವದಲ್ಲ. ಸನ್ಯಾಸಿಯಾದರೆ ತಿಳಿಯುವದಲ್ಲ. ದೇವತಾ ಉಪಾಸನೆಗಳಿಂದ ಬರುವದಲ್ಲ. ದೊಡ್ಡವರ ಕಾರುಣ್ಯವಾಗಬೇಕು. ದೊಡ್ಡವರ ಪಾದಧೂಳಿಯಲ್ಲಿ ಅಭಿಷಿಕ್ತರಾಗಬೇಕು. ದೊಡ್ಡವರೇ ಒಲಿದು ಮಾರ್ಗ ತೋರಿಸಬೇಕು. ಇಷ್ಟರಲ್ಲೇ ನಿಮಗೆ ಎಲ್ಲವೂ ಲಭಿಸುವದು. ಚಿಂತಿಸಬೇಡಿರೆಂದು ಸಂಶಯ ಪರಿಹಾರಮಾಡಿದರು.

ಆಗ ಆಚಾರ್ಯರಿಗೆ ತಮ್ಮ ಸ್ಥಾನವಾವುದೆಂದು ಗೊತ್ತಾಯಿತು. ತಮ್ಮ ಪಾಂಡಿತ್ಯದ ಬೆಲೆಯು ತಿಳಿಯಿತು. ಶಬ್ದಪಾಂಡಿತ್ಯವು ನಿಜವಾದ ಪಾಂಡಿತ್ಯವಲ್ಲವೆಂಬ ಅನುಭವವಾಯಿತು. ನಿಜವಾಗಿ ತಾನು ಪಾಮರನೆಂದೇ ತಿಳಿದರು.

ಅಧೋಽಧಃಪಶ್ಯತಃಕಸ್ಯ ಮಹಿಮಾನೋಪಚೀಯತೆ ||
ಉಪರ್ಯುಪರಿಪಶ್ಯಂತಃ ಸರ್ವಏವದರಿದ್ರತಿ ||೧||

ತಾ|| ತನ್ನಿಂದ ಕೆಳಗಿರುವವರನ್ನು ನೋಡಿದರೆ ಯಾರಿಗೆ ತಾನೇ ತಾನು ದೊಡ್ಡವನೆಂದು ಗೊತ್ತಾಗುವುದಿಲ್ಲ? ಮೇಲೆಮೇಲೆ ನೋಡುತ್ತಾಹೋದರೆ ಯಾರು ದರಿದ್ರರೆನಿಸುವದಿಲ್ಲ?

ಲೋಕದಲ್ಲಿ ಪಾಂಡಿತ್ಯಕ್ಕಾಗಿ ಪಂಡಿತರಾಗುವರನೇಕರು. ಅನುಭವಕ್ಕಾಗಿ ಪಂಡಿತರಾಗುವವರು ಕೆಲವರು. ಪಾಂಡಿತ್ಯಕ್ಕಾಗಿ ಪಂಡಿತರಾದವರು ಅನುಭವಿಗಳನ್ನು ಜರಿಯುವರು. ವಾಗಾಡಂಬರದಿಂದ ತಮ್ಮ ಪ್ರಪಂಚವನ್ನು ಸಾಗಿಸುವರು. ತೋರಿಕೆಗೆ ತಮ್ಮ ಕರ್ಮಶ್ರದ್ಧೆಯನ್ನು ಮಂಡಿಸು

ವರು. ಲೋಕವಶೀಕರಣಕ್ಕೆ ಸಹಸ್ರಾವಧಿ ಶಾಸ್ತ್ರಪಙ್ಕ್ತಿಗಳನ್ನುದಹರಿಸು ವರು. ಒಂದು ಪಙ್ಕ್ತಿಯ ಅನುಭವವನ್ನೂ ತಾವು ಮಾಡಿಕೊಂಡಿರುವದಿಲ್ಲ. ಇಂಥವರಿಗೆ ಲೋಕಮನ್ನಣೆ ಬಹಳವಾಗುವದು. ಜನರು ಪಂಡಿತರು ದೊಡ್ಡವರೆನ್ನುವರು. ಕರ್ಮಠರೆನ್ನುವರು. ನಮಸ್ಕರಿಸುವರು. ದಾನ ದಕ್ಷಿಣೆಗಳನ್ನು ಕೊಡುವರು. ಇದರಿಂದವರು ತಮ್ಮನ್ನು ತಾವೇ ಮರೆಯು ವರು. ತಮ್ಮನ್ನು ತಾವೇ ದೊಡ್ಡವರೆಂದು ತಿಳಿದುಕೊಳ್ಳುವರು. ದೊಡ್ಡ ಸ್ತಿಕೆಯ ರಕ್ಷಣೆಗೆ ಮುರಿದು ಮುದುರಿ ಕೂಡುವರು. ಇದೇ ಜೀವಿತದ ಸರ್ವಸ್ವವೆಂದು ಹಿಗ್ಗಿ ಕೆಟ್ಟುಹೋಗುವರು.

ಅನುಭವವಿಲ್ಲದ ವಿದ್ಯೆಯು ಧಾನ್ಯ ತುಂಬಿದ ಚೀಲದಂತೆ. ಅನುಭವ ವಿಲ್ಲದ ವಿದ್ಯೆಯು ಮೇಣದ ತಟ್ಟೆಯ ಹಾಡಿನಂತೆ. ಅನುಭವವಿಲ್ಲದ ವಿದ್ಯೆಯು ಪಂಚಾಂಗದಲ್ಲಿ ಬರೆದಿರುವ ಮಳೆಯಂತೆ. ಅನುಭವವಿಲ್ಲದ ವಿದ್ಯೆಯು ಕಾಗದದಲ್ಲಿ ಬರೆದ ಕಾನೂನಿನಂತೆ!

ಪಂಡಿತರೇ ಅನುಭವಿಗಳಾಗಿರುವದು ಪ್ರಪಂಚದಲ್ಲಿ ಕಂಡುಬಂದಿಲ್ಲ. ಅನುಭವಿಗಳೆಲ್ಲರೂ ಪಂಡಿತರಾಗಿರುವದೂ ಪ್ರಪಂಚದಲ್ಲಿ ಕಂಡುಬಂದಿಲ್ಲ. ಪಾಂಡಿತ್ಯವೆಂಬುವದು ಸೈನಿಕನು ಕಲಿತ ಕವಾತಿನಂತೆ. ರಣಾಂಕಣದಲ್ಲಿ ನಿಂತಾಗ ಮಾತ್ರ ಕವಾತು ಮಾಡುವೆನೆಂದರೆ ಆವನ ತಲೆಯುಳಿಯುವದಿಲ್ಲ. ಅಲ್ಲಿ ಬೇಕಾದುದು ಅನುಭವ.

ಶ್ರೀನಿವಾಸಾಚಾರ್ಯರಿಗೆ ವಿಚಾರಮಾಡುತ್ತ ಕುಳಿತಹಾಗೆಲ್ಲಾ ದಿಗ್ಭ್ರ ಮೆಯಾಯಿತು. ದೇಹಾಯಾಸದಿಂದ ಮತ್ತೆ ಶಯನಮಾಡಿದರು. ಗೋಪಾ ಲದಾಸರು ಆಚಾರ್ಯರಿಗೇನಾದರೂ ಆಹಾರವನ್ನು ತಂದುಕೊಡುವೆನೆಂದು ದೇವಾಲಯಕ್ಕೆ ಹೊರಟರು.

ಅಷ್ಟರಲ್ಲಿ ದಯಾಮಯನೂ ಭಕ್ತಬಂಧುವೂ ಆದ ಶ್ರೀನಿವಾ ಸನು ಗೋಪಾಲದಾಸರ ರೂಪದಿಂದ ದಧ್ಯೋದನವನ್ನೂ ಮುದ್ಗಾ ನ್ನವನ್ನೂ (ಪೊಂಗಲು) ಒಂದು ಗಿಂಡಿಯ ತುಂಬ ಪರಿಮಳೋದಕ

ವನ್ನೂ ತೆಗೆದುಕೊಂಡು ದಾಸರ ಬಿಡಾರಕ್ಕೆ ಬಂದನು. ಆಚಾರ್ಯರ ಬಳಿಯಲ್ಲಿ ಕುಳಿತು ಸ್ವಲ್ಪಸ್ವಲ್ಪವಾಗಿ ಈ ಆಹಾರವನ್ನು ತೆಗೆದುಕೊ; ಈ ತೀರ್ಥವನ್ನು ಪ್ರಾಶನಮಾಡು, ಎಂದು ಮುಂದಿರಿಸಿದನು. ಆಚಾರ್ಯರು ಮಡಿಯುಡಬೇಕೆಂದರು. ವೇಷಧಾರಿಯು—

ವೆಂಕಟಾಗ್ರೇಶುಚಿಕ್ಷೇತ್ರೇ ಅಶುಚಿದೋಷೋನವಿದ್ಯತೆ॥
ತಸ್ಮಾದ್ವೇಂಕಟನಾಥಸ್ಯ ಭುಕ್ತ್ಯೇಷೋಗ್ರಾಹ್ಯಉತ್ತಮಃ॥ ॥೧॥

ಎಂಬ ವಾಕ್ಯಗಳನ್ನುದಹರಿಸಿದನು.

ಗುರುವಾಕ್ಯವೆಂದು ಆಚಾರ್ಯರು ಮೆಲ್ಲಮೆಲ್ಲನೆ ಪ್ರಸಾದವನ್ನು ಸವಿದರು. ಆಹಾ! ಎಷ್ಟು ರುಚಿಯಾಗಿದೆಯೆಂದರು. ತಮ್ಮ ಜೀವಿತಚರಿತೆಯನ್ನು ಧ್ಯಾನಿಸುತ್ತಾ, ಗಿಂಡಿಯ ತೀರ್ಥವನ್ನು ಪಾನಮಾಡಿದರು, ಈಗ ನನ್ನ ದೇಹದಲ್ಲಿ ನವಚೈತನ್ಯವಂಕುರಿಸಿತೆಂದರು. ಇಂಥಾ ರುಚಿಕರವಾದ ಪ್ರಸಾದವನ್ನು ಎಂದೂ ತಿನ್ನಲಿಲ್ಲವೆಂದರು. ಇಂಥಾ ಪರಿಮಳೋದಕವನ್ನು ಕಂಡಿರಲಿಲ್ಲವೆಂದರು.

ವೇಷಧಾರಿಯು ಆಚಾರ್ಯರ ವೈದಿಕವಿ ಉಪಚಾರೋಕ್ತಿಗಳನ್ನಾಡಿದನು. ಇವತ್ತಿನಿಂದ ನಿನ್ನ ಜೀವನ ಚರಿತ್ರೆಯು ಹೊಸದಾಯಿತೆಂದನು. ಕಾರ್ಯವಿರುವದೆಂದು ಹೊರಟು ಅದೃಶ್ಯನಾದನು.

ಗೋಪಾಲದಾಸರಿಗೆ ಮಂಟಪಳ್ಳಿಯ ಬಳಿ ನಿಂತು ಸಾಕಾಯಿತು. ಭಗವನ್ನಿವೇದಿತವಾದ ಬಿಸಿಬಿಸಿ ಪ್ರಸಾದವು ದೊರೆಯುವದು ತಡವಾಯಿತು. ವಿಶೇಷಪ್ರಯತ್ನದಿಂದ ಪ್ರಸಾದವನ್ನು ಸಂಪಾದಿಸಿದರು. ಸ್ವಾಮಿ ಪುಷ್ಕರಿಣಿಯಲ್ಲಿ ಒಂದು ತಂಬಿಗೆಯ ತುಂಬ ನೀರನ್ನು ತುಂಬಿಕೊಂಡರು. ದುಡುದುಡನೆ ತಮ್ಮ ಮಂಟಪಕ್ಕೆ ಬಂದರು. ಏನು ಮಾಡಲಿ? ಹೊತ್ತಾಯಿತೆಂದು ಪಶ್ಚಾತ್ತಾಪಪಟ್ಟರು. -ಆಚಾರ್ಯ! ಈ ಪ್ರಸಾದವನ್ನು ಸ್ವಲ್ಪ ಭಕ್ಷಣೆಮಾಡಿ ನೀರು ಕುಡಿಯೆಂದರು.

ಆಚಾರ್ಯ—ಮತ್ತೇಕೆ ಪ್ರಸಾದ?

ದಾಸರು—ಅಲ್ಲವಪ್ಪಾ. ಬರೀ ಹೊಟ್ಟೆಯಲ್ಲಿರಬೇಡ. ಸ್ವಲ್ಪ ತೆಗೆದು ಕೊಂಡು ನೀರು ಕುಡಿದರೆ ಶ್ರಮಪರಿಹಾರವಾಗುತ್ತದೆ.

ಆಚಾರ್ಯ—ಈಗ ತಾವೇ ದಧ್ಯೋದನವನ್ನೂ ಮುದ್ಗಾನ್ನವನ್ನೂ ತಂದುಕೊಟ್ಟಿರಿ! ನಾನು ಭಕ್ಷಿಸಿದೆ! ತಾವೇ ಕೊಟ್ಟ ಪರಿಮಳೋದಕ ವನ್ನು ಪಾನಮಾಡಿದೆ!

ದಾಸರು—ನಾನೆಲ್ಲಿ ತಂದುಕೊಟ್ಟೆ? ನೀವೆಲ್ಲಿ ತಿಂದಿರಿ?

ಆಚಾರ್ಯ—ತಾವೇ ತಂದುಕೊಟ್ಟಿರಿ! ನಾನೇ ತಿಂದೆ!

ದಾಸರು—ಸರಿಯಾಯಿತು; ನಾನು ಈಗಲೇ ತಂದಿದ್ದೇನೆ; ನೀವು ಆಯಾಸದ ವಿಕಾರದಿಂದ ಮಾತಾಡುವಿರೋ ಏನೋ? ಸ್ವಲ್ಪ ಸಿದಾನಿಸಿ ಆರು ವದಕ್ಕೆಮುಂಚೆ ಈ ಆಹಾರವನ್ನು ತೆಗೆದುಕೊಳ್ಳಿರೆಂದು ದಾಸರು ನುಡಿದರು.

ಆಚಾರ್ಯರು—ಗುರುಗಳೇ! ಈಗ ನನಗೆ ಆಯಾಸವಿಲ್ಲ. ನವಚೈತನ್ಯವಂಕುರಿಸಿದೆ. ಬೆಟ್ಟವನ್ನಿಳಿದು ಮತ್ತೆ ಹತ್ತಿಬಂದೇನೆಂಬ ಉತ್ಸಾಹ ವಿದೆ. ನಾನು ಅನೃತವಾಡುವದಿಲ್ಲ. ನನ್ನ ಕೈಯಲ್ಲಿ ಮುದ್ಗಾನ್ನದ ಪರಿ ಮಳವಿನ್ನೂ ಹೋಗಿಲ್ಲ. ಬೇಕಾದರೆ ನೋಡಿರೆಂದು ಕೈಚಾಚಿದರು. ದಾಸರು ಆಚಾರ್ಯರ ಕೈಯನ್ನಾಘ್ರಾಣಿಸಿ, ಏನು ಭಗವನ್ಮಾಯವೆಂದು ಚಿಂತಿಸಿದರು. ಶ್ರೀನಿವಾಸನೇ ತಮ್ಮರೂಪದಿಂದ ಈ ಕಾರ್ಯಮಾಡಿದ ನೆಂದು ನಿಶ್ಚಯಿಸಿದರು. -'ಆಚಾರ್ಯ! ನೀನು ಧನ್ಯಧನ್ಯ! ನಿನಗೆ ಪ್ರಸಾ ದವನ್ನು ತಂದುಕೊಟ್ಟವನು ಶ್ರೀನಿವಾಸನು. ನಿನಗೆ ಭಗವದ್ದರ್ಶನವಾ ಯಿತು. ಅದೇ ನಿನ್ನ ಉದ್ಧಾರದ ಭಗವದ್ರೂಪ. ಆ ರೂಪಚಿಂತನೆ ಯನ್ನೇ ನೀನು ಮಾಡತಕ್ಕದ್ದು. ಬಂದವನು ನಾನಲ್ಲ. ತಂದವನು ನಾನಲ್ಲ. ಆ ರೂಪ ನನ್ನದಲ್ಲ.' ಎಂದು ಪರವಶರಾದರು.

ಆ ದಿನದ ಚರ್ಯವು ಹರಿದಾಸರ ಇತಿಹಾಸದಲ್ಲಿ ಸುವರ್ಣಾ ಕ್ಷರಗಳಿಂದ ಬರೆದಿಡುವ ಮಹಾಮಹಿಮೆಯೆನಿಸಿತು. ಆ ರಾತ್ರಿ

ಭಜನೆಯು ಎಂದಿಗಿಂತ ಅತಿಶಯವಾಗಿ ನಡೆಯಿತು. ಆ ದಿನದ ಚರಿತ್ರೆಯನ್ನು ರಸಪುಷ್ಟಿಯಾಗಿರುವಂತೆ ದಾಸರು ಕೀರ್ತನಮಾಡಿದರು. ಸಾವಿರಾರು ಯಾತ್ರಿಕರು ಪರಮಾತ್ಮನ ಮಹಿಮೆಯನ್ನು ಕೇಳಿ ಆನಂದಭರಿತರಾದರು.

## ಆಚಾರ್ಯರ ಸ್ವಪ್ನ.

ಆಚಾರ್ಯರ ಮನಸ್ಸಿನಲ್ಲಿ ಆ ದಿನದ ಚಿತ್ರವು ನೆಲೆಸಿದ್ದುದರಿಂದ ಗಾಢನಿದ್ರೆ ಬರಲಿಲ್ಲ. ಜಾಗ್ರದವಸ್ಥೆ ತಪ್ಪಿ ಸುಷುಪ್ತಿಗೆ ಬರುವ ಮಧ್ಯದಲ್ಲಿ ಆಚಾರ್ಯರಿಗೆ ಸ್ವಪ್ನದಲ್ಲಿ ಭಗವದ್ದರ್ಶನವಾಯಿತು. ಬಾಲ್ಯಪ್ರಭೃತಿ ಜನ್ಮಚರಿತ್ರೆಯು ಒಂದರ ಹಿಂದೊಂದು ಚಲಚ್ಚಿತ್ರ ಪಠದಂತೆ ಕಣ್ಣೆದುರಿಗೆ ನಿಂತಂತಾಯಿತು. ಹಿಂದೆ ಕಾಣಿಸಿದ ರಾಘವೇಂದ್ರ ಸ್ವಾಮಿಗಳ ರೂಪವು ತನ್ನನ್ನು ವಿಜಯದಾಸರ ಪಾದದಲ್ಲಿ ಸಮರ್ಪಿಸಿದಂತೆ ತೋರಿತು. ವಿಜಯದಾಸರು ಗೋಪಾಲದಾಸರ ಪಾದದಲ್ಲೂ, ಗೋಪಾಲದಾಸರು ಶ್ರೀನಿವಾಸನ ಪಾದದಲ್ಲೂ ತನ್ನನ್ನು ಒಪ್ಪಿಸಿದ ಚಿತ್ರವು ಕಾಣಿಸಿತು. ತನ್ನ ಮರಣಚಿತ್ರ ವಿಜಯದಾಸರು ಗೋಪಾಲದಾಸರಿಗೆ ಆಯುರ್ದಾನಮಾಡೆಂದು ಆಜ್ಞಾಪಿಸಿದ ಚಿತ್ರ, ಗೋಪಾಲದಾಸರು 'ಎನ್ನ ಬಿನ್ನಪ ಕೇಳು ಧನ್ವಂತ್ರಿ ದಯಮಾಡು' ಎಂದು ಹಾಡಿದ ಚಿತ್ರ, ತಾನು ಬದುಕಿದ ಚಿತ್ರ, ದಾಸರ ರೂಪದಿಂದ ಪ್ರಸಾದವಿತ್ತ ಶ್ರೀನಿವಾಸನ ಚಿತ್ರ ಎಲ್ಲವೂ ಒಂದರ ಹಿಂದೊಂದು ಕಂಗೊಳಿಸಿದವು. ಎಲ್ಲ ಚಿತ್ರಗಳಿಗಿಂತ ಶ್ರೀನಿವಾಸನು ದಾಸರ ರೂಪದಿಂದ ಬಂದ ಬಿಂಬರೂಪದ ಚಿತ್ರವು ತೇಜಃಪುಂಜವಾಗಿ ಕಾಣಿಸಿತು. ತಾನು ಹರಿದಾಸನಾಗಿ ಶ್ರೀನಿವಾಸನ ಮುಂದೆ ಕೀರ್ತನಮಾಡುತ್ತಿದ್ದಂತೆ ನೂತನ ಚಿತ್ರವೊಂದು ಹೊಳೆಯಿತು.

ವಿಜಯದಾಸರು—

ಶಂಕರಾಭರಣ — ಅಟ್ಟತಾಳ

ಧ್ಯಾನವನುಮಾಡು | ಬಿಂಬಮೂರುತಿಯ |
ಆನಂದದಲಿಕುಳಿತು | ಅಂತರಂಗದೊಳಗೆ ||ಪ||

ಸದಾಚಾರನಾಗಿ ದ್ವಾದಶ ಗುರುಗಳಿಗೆರಗಿ।
ಮುದದಿಂದ ಮೂಲಮಂತ್ರವ ಜಪಿಸಿ॥
ಹೃದಯನಿರ್ಮಲನಾಗಿ ದೇಹಸ್ಥಿತಿಯ ತಿಳಿದು।
ಪದುಮಾಸನವಹಾಕಿ ಪರಮವಿಶ್ವಾಸದಲಿ ॥೧॥

ಅಂಗಚಲಿಸದೆ ಚನ್ನಾಗಿ ದೃಢದಿಂದ।
ಕಂಗಳಮುಚ್ಚಿ ಇಂದ್ರಿಯಂಗಳ ತಿಳಿದು॥
ಮಂಗಳಶೋಭಿತಾಖಂಡ ಧ್ಯಾನವಂತ।
ರಂಗದೊಳಗೆ ಕುಳಿತು ಎಲ್ಲವನೂ ಕಾಣೊ ॥೨॥

ಭಗವದ್ರೂಪಗಳೆಲ್ಲ ಒಂದೇಸಾರಿ ಸ್ಮರಿಸಿ।
ಮಗುಳೆ ಆ ಪರಮಗುರುವಿನ ಮೂರುತಿ॥
ತೆಗೆದುವಂದನೆಮಾಡಿ ಅಲ್ಲಿಂದ ಹರುಷದಲಿ।
ಸ್ವಗುರುಬಿಂಬಮೂರ್ತಿಯಲಿ ಐಕ್ಯಚಿಂತನೆಮಾಡಿ ॥೩॥

ತಿರುಗಿಮೆಟ್ಟಿಗೆಮೂರು ವೇಗದಿಂದಲಿ ನಿನ್ನ।
ವರಮೂರ್ತಿಯಲಿ ಚಿಂತನೆಯಮಾಡು॥
ಭರದಿಂದಎಲ್ಲವ ತಂದು ಹೃದಯದಲ್ಲಿ।
ಸ್ಥಿರವಾಗಿಇಪ್ಪ ಮೂರುತಿಯನ್ನು ಕೂಡಿಸಿ ॥೪॥

ಆತನೆ ಬಿಂಬಮೂರ್ತಿಯೆಂದು ತಿಳಿದುಕೊ।
ಆ ತರುವಾಯ ನಾಡಿಗಳ ಗ್ರಹಿಸಿ॥
ಆತ್ಮೈಜಸನಕಂಡು ವಿಶ್ವಮೂರುತಿಯಲ್ಲಿ।
ಪ್ರೀತಿಯುಳ್ಳವನಾಗಿ ಪ್ರತೀಕರಿಸು ಮರುಳೆ ॥೫॥

ಜ್ಞಾನಪ್ರಕಾಶದಲಿ ಇದ್ದ ನಿನ್ನ ಹೃದಯ।
ಸ್ಥಾನದಲಿ ಅಷ್ಟದಳ ಕಮಲಮಧ್ಯ॥
ಶ್ರೀನಿವಾಸನಮೂರ್ತಿ ನಿಲಿಸಿ ಬಾಹಿರದಲ್ಲಿ।
ಏನೇನು ಪೂಜೆಯೋ ನಿಲ್ಲದಲೇಮಾಡೊ ॥೬॥

ಗುಣನಾಲ್ಕರಿಂದಲಿ ಉಪಾಸನೆಯುಮಾಡಿ।
ಕ್ಷಣಕ್ಷಣಕೆ ಶ್ರೀಹರಿಯ ಪಾದವನೋಡುತ ॥
ಅಣೋರಣಿಚೇತನ ಚೇತನಕ್ಕೆ ನಿಯಾಮಕ।
ಫಣಿಶಯನನಲ್ಲದೆ ಮತ್ತೊಬ್ಬರಿಲ್ಲವೆಂದು ॥೭॥

ಮಮತೆಯನ್ನೆ ತೊರೆದು ಮೇಲೊಂದಪೇಕ್ಷಿಸದೆ।
ಸಮವಿಷಮತಿಳಿದೊಂದೇ ಭಕುತಿಯಿಂದ ॥
ಸಮಾಧಿಗೊಳಗಾಗಿ ದೃಷ್ಟಿಸರ್ವತ್ರಾನು।
ಕ್ರಮದಿಂದಾನಂದ ಭರಿತಭಾವುಕನಾಗಿ ॥೮॥

ಈಪರಿಧ್ಯಾನಿಸಲು ದೇವಕರುಣವಾಳ್ಪ।
ಪಾಪಸಂಚಿತವು ಪ್ರಾರಬ್ಧನಾಶ ॥
ಅಪರೋಕ್ಷಿತನಾಗೋ ನಿನ್ನಯೋಗ್ಯತೆ ಎಷ್ಟೋ।
ಗೋಪಾಲವಿಜಯವಿಠಲನಲ್ಲಿ ವಾಲೈಸಿ ॥೯॥

ಎಂಬದಾಗಿ ಉಪದೇಶ ಮಾಡಿದಂತೆ ಕಾಣಿಸಿತು. ಎಚ್ಚರವಾಯಿತು.

ಆಚಾರ್ಯರು ಗೋಪಾಲದಾಸರ ಪಾದಕ್ಕೆ ನಮಸ್ಕಾರಮಾಡಿದರು. ಸ್ವಪ್ನವಾರ್ತೆಯನ್ನು ಚೂರುಚಾರು ಬಿಡದಂತೆ ನಿವೇದನಮಾಡಿದರು.

ಗೋಪಾಲದಾಸರು ಅದೇ ಬಿಂಬೋಪಾಸನೆಯ ಮಾರ್ಗವೆಂದು * ಚಕ್ರಾಬ್ಜಾದಿಕ ಮಂಡಲ ವಿಚಾರವನ್ನು ಮತ್ತಷ್ಟು ವಿಸ್ತರಿಸಿದರು. ಸ್ವಪ್ನದೃಷ್ಟ ಬಿಂಬರೂಪವನ್ನೇ ನೀನು ಉಪಾಸನೆ ಮಾಡಬೇಕೆಂದರು. ನಿನಗೆ ಅಪರೋಕ್ಷದ ಹಾದಿ ಹತ್ತಿತೆಂದರು. ಇನ್ನು ಮೇಲೆ ಸ್ಮರಿಸಿದಾಗ ಭಗವದ್ದರ್ಶನವಾದೀತೆಂದರು. ಬಾಹ್ಯದರ್ಶನವು ಅಂತರಂಗದರ್ಶನದ ಸೋಪಾನವೆಂದರು.

---

* ಇದೊಂದು ಶ್ರೀಚಕ್ರದಂತಿರುವ ಬೀಜಾಕ್ಷರಗಳಿಂದ ಕೂಡಿದ ಉಪಾಸನಾ ಚಕ್ರ. ಬ್ರಹ್ಮಾಂಡ ತತ್ವಗಳು ಇದರಲ್ಲಿ ಅಡಕವಾಗಿರುತ್ತವೆ.

'ಯಮೇವೈಷ ವೃಣುತೇ ತೇನಲಭ್ಯಃ'

ಎಂಬಂತೆ ಈ ಭಾಗ್ಯವು ತಾನಾಗಿ ಲಭಿಸಬೇಕೆಂದರು. ಪ್ರಯತ್ನಕ್ಕೆ ಸಿಲುಕುವದಲ್ಲವೆಂದರು. ಎಲ್ಲರೊಡಗೂಡಿ ಸ್ವಾಮಿ ಪುಷ್ಕರಿಣಿಯಲ್ಲಿ ಮಿಂದರು. ಗುಡಿಗೆ ಹೋಗಿ ಶ್ರೀನಿವಾಸನ ದರ್ಶನಮಾಡಿದರು. ಆನಂದ—ಆನಂದ—ವೆಂದು ನಲಿದಾಡಿದರು.

---

- ೩ -

ವಿಜಯರಾಯರು ಬಿಂಬೋಪಾಸನೆಯ 'ಧ್ಯಾನವನು ಮಾಡು' ಎಂಬ ದೇವರನಾಮವನ್ನು ಚೀಕಲಪರಿಯಲ್ಲಿ ಹಾಡಿದ ರಾತ್ರಿಯೇ ತಿರುಪತಿಯಲ್ಲಿದ್ದ ಶ್ರೀನಿವಾಸಾಚಾರ್ಯರಿಗೆ ಆ ನಾಮದ ಉಪದೇಶವು ಸ್ವಪ್ನದಲ್ಲಾಯಿತು. 'ಗೋಪಾಲ ವಿಜಯ ವಿಠಲ' ಎಂಬದಾಗಿ ಯಾವ ನಾಮದಲ್ಲೂ ವಿಜಯರಾಯರು ಅಂಕಿತ ಹಾಕಿ ಹಾಡಿಲ್ಲ. ಗುರು ಪರಮಗುರು ಎಂಬ ಮರ್ಯಾದೆಯನ್ನು ತೋರಿಸುವ ಎರಡೂ ಅಂಕಿತಗಳಿಂದ ಕೂಡಿದ ಈ ನಾಮವು ಬಲು ಅರ್ಥವತ್ತಾದದ್ದು. ಬಹು ಮಹಿಮಾಭರಿತವಾದದ್ದು. ಆಚಾರ್ಯರು ಜಗನ್ನಾಥ ದಾಸರಾದಮೇಲೆ ನಿತ್ಯವೂ ಸದಾಚಾರ ಸ್ಮೃತಿಯನ್ನು ಪಠಿಸಿದಂತೆ ಈ ಪದವನ್ನು ಪಠಿಸುತ್ತಿದ್ದರು. ಈ ಪದದ ಅರ್ಥವನ್ನು ಮನಸ್ಸಿನಲ್ಲಿಟ್ಟು ಕೊಂಡು ಹರಿಕಥಾಮೃತಸಾರದಲ್ಲವರು ಬಿಂಬೋಪಾಸನಾಕ್ರಮವನ್ನು ವ್ಯಾಖ್ಯಾನರೂಪವಾಗಿ ರಚಿಸಿರುತ್ತಾರೆ.

ದಾಸರ ಒಂದೊಂದು ದೇವರನಾಮವೂ ಕಾರಣವಿಲ್ಲದೆ ಹುಟ್ಟಿಲ್ಲ. ಸಾಧಾರಣ ಸ್ತೋತ್ರಪದಗಳಿಗೀ ನಿಯಮವಿಲ್ಲ. ದಾಸರುಗಳ ಭಾವ ಸಮಾಧಿಯಲ್ಲಿ ಸ್ವಯಂ ಸ್ಫೂರ್ತಿಯಿಂದ ಹೊರಟ ದಿವ್ಯ ನಾಮಗಳು ಶಾಸ್ತ್ರಾರ್ಥಗಳ ಕ್ರೋಡಪತ್ರಗಳಂತಿವೆ.

ಉತ್ತನೂರಿನಲ್ಲಿ ತಿರುಪತಿ ಯಾತ್ರೆಮಾಡಿ ಬಂದವರ ಸಮ್ಮೇಳನವಾಯಿತು. ದಾಸರನ್ನು ಹಿಂಬಾಲಿಸಿದವರು ದೇವರ ಸಮಾರಾಧನೆಯು ಪ್ರಸಾದವನ್ನು ಸ್ವೀಕರಿಸಿದಲ್ಲದೆ ಊರಿಗೆ ಪ್ರಯಾಣಮಾಡುತ್ತಿರಲಿಲ್ಲ. ದಾಸರು ಊರಿಗೆ ಬಂದ ಸಮಾಚಾರ ತಿಳಿದು ಐಜೀಸ್ವಾಮಿ(ವ್ಯಾಸತತ್ವಜ್ಞರು)ಗಳೂ ಉತ್ತನೂರಿಗೆ ಬಂದರು.

ವ್ಯಾಸತತ್ವಜ್ಞರು—ನೋಡಿದಿರಾ ದಾಸರೆ, ಶ್ರೀನಿವಾಸಾಚಾರ್ಯರು ಕೆಟ್ಟುಕೇಡ!

ಗೋಪಾಲದಾಸರು—ಕೆಡುವಕಾಲ ಬಂದರೆ ಅವರೇನುಮಾಡಿಯಾರು?

ಶ್ರೀನಿವಾಸಾಚಾರ್ಯರು—ಸ್ವಾಮಿಗಳವರೇ ಹೀಗಂದರೆ ನಾನೇನು ಮಾಡಬೇಕು? ತಪ್ಪುಗಳನ್ನು ಒಪ್ಪಿಕೊಳ್ಳಬೇಕು.

ವ್ಯಾಸತತ್ವಜ್ಞರು—ಆಚಾರ್ಯರೆ, ವಿನೋದದ ಮಾತಿಗೆ ಖಿನ್ನರಾಗಬೇಡಿರಿ. ನಿಮ್ಮನ್ನು ನೋಡಿ ನಮಗೆ ಪರಮಾನಂದವಾಗಿದೆ.

ಶ್ರೀನಿವಾಸಾಚಾರ್ಯರು—ಆನಂದಪಟ್ಟರೆ ಸಾಲದು ಸ್ವಾಮಿ, ಅನುಗ್ರಹಮಾಡಬೇಕು.

ಗೋಪಾಲದಾಸರು—ಅವರಾಡುವುದೆಲ್ಲಾ ಅನುಗ್ರಹದ ಮಾತುಗಳೆ!

ಗದ್ವಾಲ ಸಂಸ್ಥಾನದ ರಾಜಾರಾಮ ಭೂಪಾಲನು ವ್ಯಾಸತತ್ವಜ್ಞರ ಮತ್ತು ಗೋಪಾಲದಾಸರ ಅಚ್ಛಿನ್ನ ಭಕ್ತನಾಗಿದ್ದನು. ದಾಸರು ತಿರುಪತಿ ಯಾತ್ರೆಮಾಡಿ ಬಂದ ಸಮಾಚಾರ ತಿಳಿದು, ಆವನು ಮಹಾ ಪ್ರಸಾದಾಭಿಲಾಷೆಯಿಂದ ಉತ್ತನೂರಿಗೆ ಬಂದನು. ದಾಸರು ಮಾಡುವ ಸಮಾರಾಧನೆಯೆಂದರೆ ಮಹಾರಾಜನು ಮಾಡಿಸುವ ಸಮಾರಾಧನೆಯಾಗಿತ್ತು. ಆ ಸಮಯದಲ್ಲಿ ರಾಜನು ಬ್ರಾಹ್ಮಣರಿಗೆ ಮಾತ್ರವಲ್ಲದೆ ಸಕಲರಿಗೂ ಅನ್ನದಾನಮಾಡುತ್ತಿದ್ದನು. ಮಹಾರಾಜನ ಜೊತೆಯಲ್ಲಿ ಅವನ ರಾಣಿಯರೂ ಬಂಧುಜನರೂ ತಪ್ಪದೆ ಬರುತ್ತಿದ್ದರು.

ತಿರುಪತಿಯ ಸಮಾರಾಧನೆಯಾಯಿತು. ಮಹಾರಾಜನಿಂದಧಿಷ್ಠಿತವಾದ ಸಭೆಯಲ್ಲಿ ಗೋಪಾಲದಾಸರು ಕೀರ್ತನಾರಂಭ ಮಾಡಿದರು. ದಾಸರ

ಮೂವರು ತಮ್ಮಂದಿರು ತಾಳ ದಮ್ಮಡಿಗಳನ್ನು ಬಾರಿಸುತ್ತಾ ಆಲಾಪನೆ ಮಾಡಿದರು. ವ್ಯಾಸತತ್ವಜ್ಞರಾದಿಯಾಗಿ ಸಾವಿರಾರು ಜನರು ಕೀರ್ತನ ಶ್ರವಣಮಾಡಿದರು. ಅಂದು ಶ್ರೀನಿವಾಸಾಚಾರ್ಯರಿಗೆ ತಾವೂ ಹರಿದಾಸರಾಗಿ ಕೀರ್ತನಮಾಡಬೇಕೆಂಬ ಅಭಿಲಾಷೆಯಾಯಿತು. ದಾಸರು ಶಾಸ್ತ್ರಗಳಿಗೆ ಅಪಾರ್ಥಮಾಡುವರಲ್ಲವೆಂದು ಒಪ್ಪಿತವಾಯಿತು. ಅಗ್ರಮರ್ಯಾದೆಯು ಆಚಾರ್ಯಪಟ್ಟ ಬೇಡವಾಯಿತು. ಗೋಪಾಲದಾಸರು ಶಯನ ಮಾಡುವ ಸಮಯದಲ್ಲಿ 'ಸ್ವಾಮಿ, ನಾನೂ ಹರಿದಾಸನಾಗಬೇಕು. ನಾಮಸಂಕೀರ್ತನಮಾಡಬೇಕು. ಭಕ್ತಿಪರವಶನಾಗಿ ನರ್ತನಮಾಡಬೇಕು. ಈ ಭಾಗ್ಯವನ್ನು ತಾವು ಕರುಣಿಸಬೇಕು' ಎಂದು ಪ್ರಾರ್ಥಿಸಿದರು.

ದಾಸರು—'ನೀವು ಇದುವರಿಗೇ ದಾಸರಾಗಲಿಲ್ಲವೆ? ನಮ್ಮ ಮತವೇ ಹರಿದಾಸಮತ. ಶ್ರೀಹರಿಯೊಬ್ಬನು ಈಶ. ರಮಾಬ್ರಹ್ಮಾದಿ ಪಿಪೀಲಿಕ ಪರ್ಯಂತರ ಎಲ್ಲರೂ ದಾಸರೇ! ಹೊಸದಾಗಿ ದಾಸತ್ವ ವಹಿಸಬೇಕಾದುದೇನಿದೆ? ನಾವು ನಿಮಗೆ ಕರುಣಿಸುವ ಭಾಗ್ಯವಿನ್ನೇನುಳಿದಿದೆ? ನಿಮಗೆ ಕೊಡಬೇಕಾದುದನ್ನೆಲ್ಲಾ ವಿಜಯರಾಯರು ಕೊಡಿಸಿದರು. ಹೇಳಬೇಕಾದುದನ್ನು ಪ್ರಮಾಣಮಾಡಿದಂತೆ ಶ್ರೀನಿವಾಸನ ಸನ್ನಿಧಿಯಲ್ಲಿ ಹೇಳಿದರು. ಇನ್ನೂ ನಿಮ್ಮ ಸಂಶಯವೇನು ಹೇಳಿರೆಂದು' ಕೇಳಿದರು.

ಶ್ರೀನಿವಾಸಾಚಾರ್ಯರು, ಮತ್ತೇನಿಲ್ಲ, ದಾಸಕೂಟಕ್ಕೆ ಸೇರಬೇಕು; ಅಂಕಿತವಾಗಬೇಕು; ಅಷ್ಟೇ!

ದಾಸರು—ಇನ್ನೂ ನಿಮಗೆ ದಾಸಕೂಟದ ನಚ್ಚಿದೆಯೆಂದು ಕಾಣುತ್ತದೆ. ಎಲ್ಲರೂ ದಾಸಕೂಟದವರೇ. ಈಶಕೂಟದಲ್ಲಿ ಯಾರೂ ಇಲ್ಲ. ಅಂಕಿತದ ಶಿಷ್ಟಾಚಾರವನ್ನು ಕೇಳುವೆರಾದರೆ—ಅದು ಪಾಂಡುರಂಗನದು. ಆಗಲಿ ನೋಡೋಣ! ಎಂದು ನಿದ್ರಿತರಾದರು.

ಆಚಾರ್ಯರು ವೆಂಕಟರಮಣನ ಗುಡಿಗೆ ವಿಶ್ರಾಂತಿಗಾಗಿ ತೆರಳಿದರು. 'ಎಲ್ಲವೂ ಆಯಿತು. ಅಂಕಿತವೊಂದಾದರೆ ನಾನೂ ದಾಸನಾಗಿ ಬಿಡು

ತ್ತೇನೆ. ಗುರುಗಳ ಚಿತ್ತಕ್ಕೆ ಬರಬೇಕು. ಹರಿಯೇ ಅವರಿಗೆ ಪ್ರೇರಿಸ ಬೇಕು' ಎಂದು ನಾಮಸ್ಮರಣೆ ಮಾಡುತ್ತಾ ಶಯನಮಾಡಿದರು.

ಮಾರನೆಯ ಪ್ರಾತಃಕಾಲ ರಾಜಾರಾಮಭೂಪಾಲನು ಸ್ವಾಮಿಗಳ ಮತ್ತು ದಾಸರ ಆಶೀರ್ವಾದ ಪಡೆದು ಗದ್ವಾಲಿಗೆ ತೆರಳಿದನು. ದಾಸರು, ಆಚಾರ್ಯರನ್ನು ಸಂಬೋಧಿಸಿ, 'ನಿಮಗೆ ಪಂಢರಪುರದಲ್ಲಿ ಅಂಕಿತ ದೊರೆಯು ತ್ತದೆ. ಭೀಮರಥಿಯಲ್ಲಿ ಮುಳುಗಿದ ಕೂಡಲೇ ಕೈದಡವಿದರೆ ನಿಮಗೊಂದು ಶಿಲೆಯು ದೊರೆಯುತ್ತದೆ. ಅದರಲ್ಲಿ ನಿಮ್ಮ ಅಂಕಿತವಿರುತ್ತದೆ. ಆ ದಿನವೇ ನಿಮಗೆ ಬಿಂಬಾಪರೋಕ್ಷವಾಗುತ್ತದೆ. ಅಂದಿನಿಂದ ನೀವು ಹರಿದಾಸರಾಗು ತ್ತೀರಿ' ಎಂದು ನುಡಿದರು.

ಆಚಾರ್ಯರಿಗೆ ಮಿತಿಮೀರಿದ ಸಂತೋಷವಾಯಿತು. ಯಾತ್ರೆಮಾಡು ವವರು ಉಪವಾಸ ಹೊರಡಬೇಕಷ್ಟೆ! ಈಗಲೇ ಪ್ರಯಾಣಮಾಡಲು ನನಗಪ್ಪಣೆಯಿರುವದಷ್ಟೆ! ಎಂಬದಾಗಿ ಗುರುಗಳನ್ನು ಕೇಳಿದರು. ಗುರುಗಳು ಶುಭಮಸ್ತು ಎಂದರು. ಸ್ವಾಮಿಗಳೂ ದಾಸರೂ ಆಚಾರ್ಯರನ್ನು ಗ್ರಾಮ ಗಡಿಯತನಕ ಕಳುಹಿಸಿ ಬಂದರು.

ಆಚಾರ್ಯರಿಗೆ ಯಾವವೇಗದಿಂದ ನಡೆದೆನೆಂಬುದು ಗೊತ್ತಾಗಲಿಲ್ಲ. ಮಿಂದೆನೋ ಉಂಡೆನೋ ಉಟ್ಟೆನೋ ಒಂದೂ ತಿಳಿಯಲಿಲ್ಲ. ಎಂದಿಗೆ ಪಂಢರಪುರಿಗೆ ಹೋದೇನು? ಎಂದು ಭೀಮರಥಿಯಲ್ಲಿ ಮಿಂದೇನು? ಎಂದು ಅಂಕಿತಶಿಲೆ ದೊರೆತೀತು? ಇನ್ನೆಂದು ಆ ಪಾಂಡುರಂಗನ ದರ್ಶನವಾದೀತು? ಈ ವಿಚಾರಗಳೇ ಅವರ ಬುದ್ಧಿಕೋಶವನ್ನಾವರಿಸಿತ್ತು. ಒಂದು ಗಾವುದ ದಲ್ಲಿ ಶ್ರೀಕ್ಷೇತ್ರವಿರುವಾಗಲೇ ಹೆಜ್ಜೆನಮಸ್ಕಾರ ಹಾಕುತ್ತಾ ಹೊರಟರು. ಸ್ಫೂರ್ತಿಯಿಂದ—

ಮಧ್ಯಮಾವತಿ—ಆದಿತಾಳ

ಎಂದು ಕಾಂಬೆನು ಪಾಂಡುರಂಗಮೂರುತಿಯ |
ಇಂದುಭಾಗ ನಿವಾಸ ನರನ ಸಾರಥಿಯ ||ಪ||

ಅರುಣಾಬ್ಜೋಪಮಚಾರು ಚರಣಾಂಗುಲಿನಖರ |
ತರುಣೇಂದುಛವಿ ತಿರಸ್ಕರಿಸುವ ಪ್ರಕರ ||
ಕಿರುಗೆಜ್ಜೆ ಖಡೆಯಾನೂಪುರ ಪೆಂಡೆಶಫರ |
ತೆರಜಂಘೆ ಜಾನು ಭಾಸ್ವರ ರತ್ನ ಮುಕುರ ||೧||

ರಂಭಾಪೋಲುವಊರೂ ಪೊಂಬಣ್ಣಂಬರವ |
ಕುಂಭೀಮಸ್ತಕದೋಲ್ ನಿತಂಬಾದಿ ಪೊಳೆವ ||
ಕಂಬುಮೇಖಳ ಕಂಜಗಂಭೀರ ನಾಭಿ |
ಅಂಬುಧಿಶಾಯಿ ವಿಧಿಶಂಭು ಪೂಜಿತನ ||೨||

ಲವಕುಕ್ಷಿತ್ರಿವಳಿ ಭಾರ್ಗವಿವತ್ಸ ಉದ್ಯ |
ದ್ರವಿಪೋಲುವ ಕೌಂಸ್ತುಭ ನವ ವೈಜಯಂತಿ ||
ಸುವಿಶಾಲ ಹೃದಯದೊಳ್ ವಿವಿಧಹಾರಗಳ |
ನವನೀತಚೋರ ಶ್ರೀ ಪವಮಾನಾರ್ಚಿತನ ||೩||

ಪದಕಸರಿಗೆಯು ಜಾಂಬೂನದ ಕಂಬುಕಂಠ |
ರದನಿಕರತೆರಬಾಹು ಚದುರಭುಜಕೀರ್ತಿ ||
ಬದರಸಂಕಾಶ ಅಂಗದ ರತ್ನಕಟಕ |
ಪದುಮಾರುಣಕರವ ಮಧ್ಯದಲಿ ಇಟ್ಟವನ ||೪||

ವಿಧುಬಿಂಬೋಪಮ ಚಲ್ವವದನ ಕೆಂದುಟಿಯು |
ಭಿದುರಾಭರದನ ಇಂಗದಿರೋಲ್ಕಿರುನಗೆಯು |
ಕದಪುಕನ್ನಡಿನಾಸಾ ತುದಿಚಂಪಕಸನೆಯು |
ಉದಕೇಜಾಯತನೇತ್ರ ಯದುವಂಶೋದ್ಭವನ ||೫||

ಕಲಿತಕುಂಡಲಕರ್ಣ ಸುಲತಾಭ್ರೂಯುಗಳ |
ಲಲಿತಬಾಲಶಶಾಂಕ ತಿಲಕಾಂಕಿತಫಾಲ ||
ಅಳಿಜಾಲವೆನಿಪ ಕುಂತಳರತ್ನಖಚಿತ |
ಕಲಧೌತಮಕುಟ ದಿಗ್ವಲಯ ಬೆಳಗುವನ ||೬||

ಎಂಬದಾಗಿ ಹಾಡುತ್ತಾ ಭೀಮರಥಿಯ ಸೋಪಾನಘಟ್ಟಕ್ಕೆ ಬಂದರು. ವಿಠಲನ ಭಜನೆಮಾಡುತ್ತಿರುವ ಹರಿದಾಸರ ಮೇಳಗಳಿಗೆ ಪ್ರಣಾಮಮಾಡಿದರು. ಅಕ್ರೂರನು ಗೋಕುಲವನ್ನು ಕಂಡಾಗ—ಗೋಕುಲಕ್ಕೆ ನಮಸ್ಕಾರ, ಗೋವುಗಳಿಗೆ ನಮಸ್ಕಾರ, ವತ್ಸಗಳಿಗೆ ನಮಸ್ಕಾರ, ಗೋಪಾಲಕರಿಗೆ ನಮಸ್ಕಾರ, ಗೋಪೀಜನರಿಗೆ ನಮಸ್ಕಾರ, ಸುಧಾಮರಾಮರಿಗೆ ನಮಸ್ಕಾರ, ಶ್ರೀಕೃಷ್ಣನಿಗೆ ನಮಸ್ಕಾರವೆಂದಂತೆ, ಆಚಾರ್ಯರು—ಶ್ರೀ ಕ್ಷೇತ್ರಕ್ಕೆ ನಮಸ್ಕಾರ, ಕ್ಷೇತ್ರವಾಸಿ ಪಶುಪಕ್ಷಿಗಳಿಗೆ ನಮಸ್ಕಾರ, ನರೋತ್ತಮರಿಗೆ ನಮಸ್ಕಾರ, ಪುಂಡರೀಕಮುನಿಗೆ ನಮಸ್ಕಾರ, ಭೀಮರಥಿಗೆ ನಮಸ್ಕಾರ, ಶ್ರೀ ರುಕ್ಮಿಣೀಪತಿಗೆ ನಮಸ್ಕಾರವೆನ್ನುತ್ತಾ ಚಂದ್ರಭಾಗೆಯಲ್ಲಿ ಮುಳುಗಿದರು. ಬಲದಕಣ್ಣು ಬಲದಭುಜಗಳು ಪ್ರಸ್ಫುರಿಸಿದಂತಾಗಲು ಶುಭಸೂಚನೆಯಾಯಿತೆಂದು ತಮ್ಮ ಬಲಭಾಗದಲ್ಲಿ ತಡಿಕಿನೋಡಿದರು. ಚಚ್ಚೌಕನಾದ ತಿಲೆಯೊಂದು ಕರಗತವಾಯಿತು.

ಮೇಲಕ್ಕೆ ತೆಗೆದು ನೋಡಿದರು. ಆದಿವ್ಯ ಶಿಲೆಯಲ್ಲಿ ಬಾಲಬೋಧ ಲಿಪಿಯಲ್ಲಿ "ಜಗನ್ನಾಥವಿಠಲ" ಎಂದು ಬರೆದಿತ್ತು. ಗುರುಗಳಾಜ್ಞೆಯಂತೆ ಇದೇ ತಮ್ಮ ಅಂಕಿತವೆಂದು ತಿಳಿದರು. ಆನಂದನಿರ್ಭರರಾಗಿ, ಶಿಲೆಯನ್ನು ತಲೆಯಮೇಲಿಟ್ಟುಕೊಂಡು ಹಾಡುತ್ತಿದ್ದ ಪದವನ್ನು ಮುಂದರಿಸಿ—

ಶಠಕೂರ್ಮರೂಪಿಯ ಕಿಟಮಾನವಹರಿಯ।
ವಟುಭಾರ್ಗವಕಾಕುತ್‌ಸ್ಥ ಶಠಕಂಸದ್ವಿಷನ॥
ನಿಟಲಾಂಬಕಸಹಾಯ ಖಳಕಟಕಾರಿಭೀಮಾ।
ತಟವಾಸ ಜಗನ್ನಾಥವಿಠಲಮೂರುತಿಯ ॥೭॥

ಎಂಬ ನುಡಿಯಿಂದ ಅಂಕಿತವನ್ನು ಹಾಕಿ ಪದಪೂರ್ಣಮಾಡಿದರು.

ಇದು ಜಗನ್ನಾಥದಾಸರು ಮಾಡಿದ ಮೊದಲನೆಯ ಕನ್ನಡಪದ. ಅನಂತರ ವಿಷ್ಣುಸಹಸ್ರನಾಮವನ್ನು ಪಠಿಸುತ್ತಾ ಮಹಾದ್ವಾರದ ಬಳಿಯಲ್ಲಿ ಸ್ವಾಮಿಗೆ ಅನಂತ ಪ್ರಣಾಮಗಳನ್ನು ಮಾಡಿದರು. ಪುರಂದರದಾಸರ ಸ್ಥಳವೆನಿಸಿದ ದಿವ್ಯಸ್ತಂಭದ ಬಳಿಯಲ್ಲಿ ಪ್ರದಕ್ಷಿಣೆಮಾಡಿ ಹೆಜ್ಜೆಯಿಡುತ್ತಾ ಸ್ವಾಮಿಗೆ ಅಭಿಮುಖರಾಗಿ ನಿಂತುಕೊಂಡರು. ಭಗವದ್ರೂಪಗಳನ್ನು ಪರ

ಮಗುರುಗಳಾದ ವಿಜಯದಾಸರ ಬಿಂಬದಲ್ಲೂ, ಆ ಬಿಂಬವನ್ನು ಸ್ವಗುರುಗಳಾದ ಗೋಪಾಲದಾಸರ ಬಿಂಬದಲ್ಲೂ ಐಕ್ಯಚಿಂತನೆಮಾಡಿ, ತಮ್ಮ ಸ್ವಪ್ನ ದೃಷ್ಟವಾದ ದಿವ್ಯ ಮೂರ್ತಿಯನ್ನು ಚಿಂತಿಸಿದರು.

ಆ ಕಾಲದಲ್ಲಿ ಗುರ್ವಾಜ್ಞೆಯಾಗಿದ್ದಂತೆ ಆಚಾರ್ಯರಿಗೆ ಸ್ವಗುಣಾಚ್ಛಾದಕವಾದ ಆವರಣವು ಭೇದಿಸಿತು. ಪರಮಾಚ್ಛಾದಕ ತೆರೆಯು ತೆರೆಯಿತು.

ಭಿದ್ಯತೇ ಹೃದಯ ಗ್ರಂಥಿಃ
ಛಿದ್ಯಂತೇ ಸರ್ವ ಸಂಶಯಾಃ
ಕ್ಷೀಯಂತೇ ಚಾಸ್ಯ ಕರ್ಮಾಣಿ
ತಸ್ಮಿನ್ ದೃಷ್ಟೇ ಪರಾವರೇ ||೧||

ಎಂಬ ಉಪನಿಷದ್ವಾಕ್ಯದಂತೆ ಸೂರ್ಯದರ್ಶನವಾದರೆ ಹೇಗೋ ಹಾಗೆ ಜೀವಾಂತರ್ಗತ ಭಗವದ್ದರ್ಶನವಾಯಿತು. ಸರ್ವಸಂಶಯಗಳೂ ಪರಿಹಾರವಾದುವು. ಸಂಚಿತಾಗಾಮಿ ಕರ್ಮಗಳು ಕ್ಷಯಿಸಿದವು. ಬಿಂಬಾಪರೋಕ್ಷವಾಯಿತು. ಸಕಲ ಜಗತ್ತೂ ಕರತಲಾಮಲಕದಂತಾಯಿತು.

ಬಹಿರಂಗದಲ್ಲಾದರೋ—ಕೋಟಿಸೂರ್ಯ ಪ್ರಕಾಶನಾದ ಪಾಂಡುರಂಗನ ಪ್ರತ್ಯಕ್ಷ ದರ್ಶನವಾಯಿತು. ಆಗ ದರ್ಶನವಾದಂತೆ ಆಚಾರ್ಯರು ಸ್ವಾಮಿಯನ್ನು ಶಿರಸ್ಸಿನಿಂದ ಪಾದಪರ್ಯಂತರ ವರ್ಣನೆಮಾಡಿದರು.

ಮೋಹನ — ಆದಿತಾಳ

ಕಂಡೆಪಂಢರಿರಾಯನ। ಶ್ರೀಮನಃಪ್ರಿಯನ ||ಪ||

ಚಂಡವಿಕ್ರಮಕರ। ದಂಡಮುನಿಪಗೊಲಿ।
ದಂಡಜಾಧಿಪಪ್ರ। ಕಾಂಡಸುಪೀಠನ ||ಅ||

ಮಣಿಮಯಮಕುಟ ಮಧುಪನಮೆರ। ಪೆರೆ।
ಪಣೆಯೊಳಿಟ್ಟ ಕಸ್ತುರಿತಿಗರ ||
ವನರುಹ ಉಪಮಲೋಚನಯುಗ ಚಂಪಕನಾಸವ ।

ಕುಂಡಲದ ವಿಕಾಸವ
ಕದಪಿನ ವಿಲಾಸವ
ಮೊಗದ ಮಂದಹಾಸವ ||೧||

ಕುಂದಕೋರಕ ದಶನಾವಳಿಯು| ಬಿಂಬ|
ದಂದದಿ ಪೊಳೆವ ಅಧರಕಳೆಯು ||
ಕಂಧರತ್ರಿವಳಿ ಪುರಂದರ ಇಭಕರ ಪೋಲುವಾ |
ಭುಜಯುಗ ವಿಶಾಲವ
ಕರತಲರಸಾಲವ
ನಖರ ಮಲ್ಲಿಕಾಲವ ||೨||

ಅತಿವಿಸ್ತೃತ ವಕ್ಷಸ್ಥಳವ | ಶಿರಿ |
ಸತಿಸದನಾರ್ಕದಂದದಿ ಪೊಳೆವ ||
ರತುನ ಕೌಂಸ್ತುಭದೀಧಿತಿವಿಲಸಿತ ವೈಜಯಂತಿಯಾ |
ಉದರರೋಮ ಪಙ್ಕ್ತಿಯು
ನಾಭಿ ವಲ್ಮೀಕದಂತಿಹ
ಕುಕ್ಷಿ ತ್ರಿವಳಿಕಾಂತಿಯು ||೩||

ಮುಂಬಿಸಲಂತೆ ಕನಕಚೇಲ| ಸುನಿ
ತಂಬದಿ ಪೊಳೆವ ಗೋಲಿಯುಚೇಲ ||
ಕಂಬುಕೋಕನದವಿಡಂಬ ಮೇಖಳಬ ಕದಂಬವ |
ಊರು ಕದಳಿಸ್ತಂಭವ
ಜಾನುಗಳಿಂದು ಬಿಂಬವ
ಆಚರಿಪ ವಿಡಂಬವ ||೪||

ಮಾತಂಗಕರದ ಜಂಘೆಗಳ| ಗುಲ್ಫ|
ಜಾತಿ ಮಾಣಿಕಾಂಗುಲಿ ಸಂಘಗಳ ||
ಜ್ಯೋತಿ ಬೆಳಗೆ ಜಗನ್ನಾಥವಿಠಲನಂಘ್ರಿ ಪುಷ್ಕರ |

ಉದಿತಶತ ಭಾಸ್ಕರ
ಗಭಸ್ತಿ ತಿರಸ್ಕರ
ಸುಜನರ ಯಶಸ್ಕರ ||೫||

ಇದು ಜಗನ್ನಾಥದಾಸರ ಪ್ರಥಮನೇ ದೇವರನಾಮ. ಅನಂತರ ' ಪಾಲಿಸು ಪಂಢರಿಪುರಿರಾಯ', 'ಧನ್ಯನಾದೆ' ಎಂಬ ಎರಡು ದೇವರನಾಮಗಳನ್ನು ಹಾಡಿದರು.

ಇಂದು ಗೋಪಾಲದಾಸರ ಅನುಗ್ರಹದಿಂದ ಶ್ರೀನಿವಾಸಾಚಾರ್ಯರು ಅಪರೋಕ್ಷಜ್ಞಾನಿಗಳೆನಿಸಿ ಲೋಕವಿಖ್ಯಾತ ಜಗನ್ನಾಥದಾಸರಾದರು. ಮುದ್ರಿಕೆಯ ಹೆಸರು ರೂಢಿಗೆ ಬರುವಂತೆ ಶ್ರೀನಿವಾಸಾಚಾರ್ಯರೆಂಬ ಹೆಸರು ಕಾಲಕ್ರಮದಲ್ಲಿ ಮರೆತು ಹೋಯಿತು.

ದಾಸರು ಪಂಢರಪುರದಲ್ಲಿರುವವರೆಗೆ ನಿತ್ಯವೂ ಪಾಂಡುರಂಗನಮೇಲೆ ಹಾಡಿದ ದೇವರನಾಮಗಳು ಬಲು ಅರ್ಥವತ್ತಾಗಿವೆ. ಅವರ ಅನುಭವದ ಮಾತುಗಳಿಂದ ಭರಿತವಾಗಿವೆ.

## ವಿಠಲನು ದಾಸರಿಗೆ ಮಾಡಿದ ಔತಣ

ಜಗನ್ನಾಥದಾಸರು ಅಪರೋಕ್ಷಜ್ಞಾನಿಗಳಾದರೇನು? ಮಹಾ ಪಂಡಿತೋತ್ತಮರೆನಿಸಿದರೇನು ? ಜೊತೆಯಲ್ಲಿ ಸೇವೆಮಾಡಲು ಒಬ್ಬ ಶಿಷ್ಯನಿಲ್ಲ. ಹೊತ್ತುಗೊತ್ತಿಗೆ ಅನ್ನೋದಕಗಳಿಲ್ಲ. ನೀನಾರೆಂದು ವಿಚಾರಿಸುವ ಜನರಿಲ್ಲ. ವಾಸಮಾಡಲು ಅನುಕೂಲವಾದ ಸ್ಥಳವಿಲ್ಲ. ಮಲಗಲು ಹಾಸಿಗೆಯಿಲ್ಲ. ಬೆಳಿಗ್ಗೆ ಎದ್ದು ಭೀಮರಥಿಯಲ್ಲಿ ಸ್ನಾನಮಾಡುವದು. ಪಾಂಡುರಂಗನ ದರ್ಶನಮಾಡುವದು. ಭಜನಾನಂದದಲ್ಲಿ ಪರವಶರಾಗಿರುವದು. ಅಪರಾಹ್ನದಲ್ಲಿ ಅನುಕೂಲವಾದರೆ ತಮ್ಮ ಕೈಯಿಂದ ತಾವೇ ಒಂದಿಷ್ಟು ಅಡಿಗೆಮಾಡಿಕೊಳ್ಳುವದು. ಸ್ಥಳ ದೊರೆತಲ್ಲಿ ಶಯನಮಾಡುವದು. ಇಂತಹ ದರಿದ್ರ ದೆಶೆಯನ್ನನುಭವಿಸುತ್ತಿದ್ದರು. ಮಾನವಿಯಲ್ಲಿ ಪ್ರವಚನಾಚಾರ್ಯರಾಗಿದ್ದಾಗ ಇದ್ದ ಮೇನೆ ಪಲ್ಲಕ್ಕಿಗಳನ್ನಾಗಲಿ, ಶಿಷ್ಯ ಸೇವಕ ಪರಿವಾರವನ್ನಾಗಲಿ ಪಂಢರಪುರದಲ್ಲಿ ಬಯಸಲು ಶಕ್ಯವಿರಲಿಲ್ಲ.

ಹೀಗಿರಲು ದಾಸರು ಶ್ರೀ ಕ್ಷೇತ್ರದಲ್ಲಿ ವಾಸಮಾಡಬೇಕೆಂದಿದ್ದ ಹನ್ನೆರಡುದಿವಸಗಳ ಅವಧಿಯು ಮುಗಿಯಿತು. ಊರಿಗೆ ಪ್ರಯಾಣಮಾಡಬೇಕೆಂದು ನಿಶ್ಚಯಮಾಡಿಕೊಂಡರು.

ಆ ದಿನ ಪಾಂಡುರಂಗನು ಒಂದು ವಿಚಿತ್ರ ಚರ್ಯೆಮಾಡಿ ತೋರಿಸಿದನು. ದಾಸರು ಎಂದಿನಂತೆ ಪ್ರಾತಃಕಾಲ ದೇವಾಲಯಕ್ಕೆ ಬಂದರು. ಗರ್ಭಾಂಕಣವನ್ನು ಹೊಕ್ಕು ರುಕ್ಮಿಣೀಪತಿಯ ದರ್ಶನಮಾಡಿದರು. ನಾನಾ ಕೀರ್ತನೆ ಮಾಡುತ್ತಾ ಪ್ರಾಕಾರದಲ್ಲಿ ಪ್ರದಕ್ಷಣೆಗಾರಂಭಿಸಿದರು. ಕಪಟನಾಟಕ ಸೂತ್ರಧಾರಿಯು ಯಾತ್ರಿಕ ಬ್ರಾಹ್ಮಣವೇಷ ಧರಿಸಿ, ದಾಸರೆ, ತಾವು ನಮ್ಮಲ್ಲಿ ಭೋಜನಕ್ಕೆ ಬರಬೇಕೆಂದು ಆಮಂತ್ರಿಸಿದನು. ದಾಸರು, ನೀವು ಯಾರು? ಇರುವದೆಲ್ಲಿ? ನಮ್ಮನ್ನು ಕರೆಯುವ ಕಾರಣವೇನು? ಎಂದು ಪ್ರಶ್ನೆಮಾಡಿದರು. ಗೃಹಸ್ಥನು—ನಾನೊಬ್ಬ ಯಾತ್ರಿಕನು. ನಮ್ಮೂರು ವೈಕುಂಠಪುರದ ಅಗ್ರಹಾರ. ಇಳಿದಿರುವದು ರುಕ್ಮಿಣಿಯ ದೇವಾಲಯ. ಸತ್ಪಾತ್ರರೆಂದು ತಮ್ಮನ್ನು ಕರೆದೆನೆಂದನು. ದಾಸರು ವ್ಯಕ್ತಿಯ ತೇಜಸ್ಸನ್ನು ನೋಡಿ ತಿರಸ್ಕರಿಸಲು ಮನಸ್ಸು ಬರದೆ ಆಗಬಹುದೆಂದರು. ಎಷ್ಟು ಹೊತ್ತಿಗೆ ಬರಬೇಕೆಂದು ಕೇಳಿದರು. ವ್ಯಕ್ತಿಯು ಮಧ್ಯಾಹ್ನ ಸರಿಯಾಗಿ ಒಂದು ಘಂಟೆಗೆ ಮತ್ತೆ ಕರೆಸಿಕೊಳ್ಳದೆ ಬಂದರಾಯಿತೆಂದನು. ದಾಸರು ಅನಾಯಾಸವಾಗಿ ಪ್ರಯಾಣಕಾಲಕ್ಕೆ ಮಂಗಳ ಭೋಜನ ದೊರೆಯಿತೆಂದು ಸಂತುಷ್ಟರಾದರು. ವ್ಯಕ್ತಿಯು ತಮಗೆ ಸ್ತ್ರೀಪಾಕನೇಮವೇನಾದರುಂಟೇ ಎಂದನು. ದಾಸರು ತಮ್ಮಂಥವರಲ್ಲಿ ಯಾವ ನೇಮವೂ ಇಲ್ಲವೆಂದುಬಿಟ್ಟರು. ಹಾಗಿದ್ದರೆ ತಮ್ಮ ಭಜನೆ ನಡೆಯಲೆಂದು ವ್ಯಕ್ತಿಯು ಮಾಯವಾದನು.

ಮಧ್ಯಾಹ್ನ ಒಂದು ಘಂಟೆಗೆ ಸರಿಯಾಗಿ ತಂಬಿಗೆ ಥಾಲಿಗಳನ್ನು ಹಿಡಿದುಕೊಂಡು ದಾಸರು ರುಕ್ಮಿಣಿಯ ಗುಡಿಗೆ ಬಂದರು. ಹತ್ತೆಂಟು ಜನರು ಸಾಲಾಗಿ ಪಂಙ್ತಿಯಲ್ಲಿ ಕುಳಿತಿರುವದನ್ನು ಕಂಡರು. ಯಜಮಾನನು ದಾಸರಿಗಾಗಿ ಮೀಸಲಿಟ್ಟಿದ್ದ ಸ್ಥಳದಲ್ಲಿ ಅವರನ್ನು ಕುಳ್ಳಿರಿಸಿದನು. ಮುತ್ತೈದೆಯರು ಒಬ್ಬರಹಿಂದೊಬ್ಬರು ಸಿಸ್ತಾಗಿ ಬಡಿಸುತ್ತ ಬಂದರು. ಊಟಮಾಡುವರ ಸಂಖ್ಯೆಗಿಂತ ಬಡಿಸುವರ ಸಂಖ್ಯೆ ಹೆಚ್ಚಾಗಿ ಕಾಣಿಸಿತು. ಇಂತಹ

ಸುಂದರ ಸುಂದರಿಯರೆಲ್ಲಿಂದ ಬಂದರೆಂದು ದಾಸರಿಗೆ ವಿಸ್ಮಯವಾಯಿತು. ಕ್ಷುತ್ತು ಬಹಳವಾಗಿದ್ದುದರಿಂದ ಬುದ್ಧಿಗೆ ಹೆಚ್ಚುಕ್ಲೇಶಕೊಡದೆ, ಯಾರಾದ ರಾಗಲಿ, ಹೇಗಿದ್ದರಿರಲಿ, ಹೇಗೂ ಶಿಷ್ಟರು, ಊಟವಾದರಾಯಿದೆಂದು ತಟಸ್ಥರಾದರು. ಬಡಿಸಿದ ಪದಾರ್ಥಗಳು ಅಗಣಿತಗಳಾಗಿದ್ದವು. ಯಜಮಾನನು ಆಪೋಶನ ಹಾಕಿ ಕೃಷ್ಣಾರ್ಪಣವೆಂದನು. ದಾಸರಿಗೆ ಉಪಚಾರೋಕ್ತಿಗಳ ಸುರಿಮಳೆಯಾಯಿತು ದಾಸರು ಇಂಥಾ ಊಟವನ್ನು ಉಂಡುಕಾಣೆನೆಂದು ಯಜಮಾನನ ಧರ್ಮಶ್ರದ್ಧೆಯದ್ನು ಕೊಂಡಾಡಿದರು. ಭೋಜನವಾಯಿತು. ಎಲ್ಲರೂ ಉತ್ತರಾಪೋಶನ ತೆಗೆದುಕೊಂಡರು. ದಾಸರದೃಷ್ಟಿಗೆ ಯಾರು ಎಲ್ಲಿಹೋದರೆಂಬುವದು ತಿಳಿಯಲಿಲ್ಲ. ಕುಳಿತಿದ್ದ ಜಾಗದಲ್ಲಿ ಉತ್ತರಕ್ಷಣದಲ್ಲಿ ಎಲೆಗಳಿರಲಿಲ್ಲ. ಮುತ್ತೈದೆಯರ ಸುಳಿವಿಲ್ಲ ಯಜಮಾನನು ಮೊದಲೇ ಇಲ್ಲ. ಇದೇನು ಇಂದ್ರಜಾಲವಾಯಿತೆಂದು ಮಹಾದ್ವಾರ ಹಬಳಿಗೆ ಬಂದರು. ಯಜಮಾನನು, ದಾಸರೆ! ನಮ್ಮೂರಿನಲ್ಲಿ ನಿಮಗೆ ಬಹಳ ಶ್ರಮವಾಯಿತು. ತಮ್ಮ ಯೋಗಕ್ಷೇಮವನ್ನು ವಿಚಾರಿಸದ ನನ್ನ ತಪ್ಪನ್ನು ಕ್ಷಮಿಸಬೇಕು. ಪ್ರಸಾದವನ್ನು ಸ್ವೀಕರಿಸಬೇಕು. ಎಂಬದಾಗಿ ಸುರಗಿಯ ಮಾಲೆ ಬುಕ್ಕೀಹಿಟ್ಟು ಫೇಡೆಯು ಉಂಡೆಗಳನ್ನು ಕಟ್ಟಿದ ಗಂಟನ್ನು ದಾಸರ ಕೈಯಲ್ಲಿಟ್ಟು ಅದೃಶ್ಯನಾದನು. ದಾಸರು ಇದು ಏನೋ ವಿಚಿತ್ರ ಮಾಯವಾಗಿದೆಯೆಂದು ಮಹಾದ್ವಾರದಲ್ಲಿ ಕುಳಿತು ತಮ್ಮಲ್ಲಿ ತಾವೇ ಬಲು ಕಾಲ ತರ್ಕಿಸಿದರು. ರುಕ್ಮಿಣೀಪತಿಯ ಲೀಲೆಯಲ್ಲದೆ ಮತ್ತೆ ಬೇರೆಯಿಲ್ಲವೆಂದು ನಿರ್ಧರಿಸಿದರು. ಪ್ರಯಾಣಕಾಲದಲ್ಲಿ ಪರಮಾತ್ಮನೇ ಮಹಾಪ್ರಸಾದವಿತ್ತನೆಂದು ಆನಂದಭರಿತರಾದರು. ಭಾವಸಮಾಧಿಯಲ್ಲಿ ಲೀನರಾಗಿ ಆನಂದಬಾಷ್ಪಗಳಿಂದ ಶ್ರೀಹರಿಯ ಕಾರುಣ್ಯವನ್ನು ಕೊಂಡಾಡಿದರು. ದೇವ! ಪುರಂದರದಾಸರೊಡನೆ ವಿಚಿತ್ರಲೀಲಾವಿಭೂತಿಗಳನ್ನು ತೋರುತ್ತಾ ವಿನೋದವಮಾಡಿದ ಕಥೆಗಳನ್ನು ಕೇಳಿದ್ದೆನು. ಗೋಪಾಲದಾಸರಿಗೆ ನಿನ್ನ ಕ್ಷೇತ್ರಕ್ಕೆ ಬರಬೇಕೆಂದು ಸವಾರನಾಗಿ ಓಡಾಡಿಸಿ 'ಆಲೇನಾಹೀ' ಎಂದು ಅದೃಶ್ಯನಾದ ಮಹಿಮೆಯನ್ನು ಕೇಳಿದ್ದೆನು. ಗೋಪಾಲದಾಸರು 'ನೀಲಕುದುರೆಯನೇರಿ' ಎಂಬ ಸುಳಾದಿಯನ್ನು ಹಾಡಿದ ಕಾರಣವನ್ನು ಕೇಳಿದ್ದೆನು. ಇಂದು ಪಾಮರನಿಗೆ ಮೃಷ್ಟಾನ್ನವುಣಿಸಿ ಪ್ರಸಾದವಿತ್ತು ಪಾವನ ಮಾಡಿದ

ಚರ್ಯವನ್ನು ಪ್ರತ್ಯಕ್ಷ ಕಂಡೆನು. ನೀನು ಭಕ್ತಾನುಕಂಪಿಯಹುದು. ನೀನು ಪತಿತಪಾವನನಹುದು. ನೀನು ದಾಸರ ದಾಸನಹುದು. ಎಂಬ ದಾಗಿ ಅನಂತಪ್ರಣಾಮಗಳನ್ನು ಮಾಡಿದರು. ಮಹಾಪ್ರಸಾದವನ್ನು ತಲೆ ಯಮೇಲಿಟ್ಟುಕೊಂಡು ನಡೆದರು.

ದಾಸರು ನಿದಾನವಾಗಿ ಮಾರ್ಗಕ್ರಮಣ ಮಾಡಿದರು. ಮಳಖೇಡೆ ಯಲ್ಲಿ ಜಯತೀರ್ಥರ ದರ್ಶನಮಾಡಿದರು. ಮಂತ್ರಾಲಯದಲ್ಲಿ ರಾಯರ ದರ್ಶನಮಾಡಿ ತಮ್ಮ ವೃತ್ತಾಂತವನ್ನು ನಿವೇದನ ಮಾಡಿದರು. ವೇಣೀ ಸೋಮಪುರಕ್ಕೆ ಬರುವ ಹೊತ್ತಿಗೆ ಗೋಪಾಲದಾಸರು ವ್ಯಾಸತತ್ವಜ್ಞರೊ ಡನೆ ಜಗನ್ನಾಥದಾಸರ ನಿಮಿತ್ತವಾಗಿ ಕಾದಿರುವರೋ ಎಂಬಂತೆ ಅಲ್ಲೇ ದರ್ಶನಕೊಟ್ಟರು. ಉಭಯ ಗುರುಗಳನ್ನು ಕಂಡು ಜಗನ್ನಾಥದಾಸರು ಸಾಷ್ಟಾಂಗ ನಮಸ್ಕಾರ ಮಾಡಿದರು. ವ್ಯಾಸತತ್ವಜ್ಞರು, ನೀವೇನಪ್ಪಾ ಪಾಂಡುರಂಗನಿಂದ ಔತಣಮಾಡಿಸಿಕೊಂಡು ಬಂದವರೆಂದರು. ಗೋಪಾಲ ದಾಸರು ನೀವು ಜಗನ್ನಾಥದಾಸರಾಗಿ ವೈಕುಂಠೈಕಾದಶಿಗೆ ತಿಂಗಳಾಯಿತಷ್ಟೇ ಎಂದರು. ಕೇಳುವದೇನು? ಮೂವರೂ ಬ್ರಹ್ಮಜ್ಞಾನಿಗಳು! ಅವರ ಸಂ ಭಾಷಣೆಗಳೆಂಥವೊ, ಅವರ ಅನುಭವಗಳೆಂಥವುಗಳೋ, ಅವರಂತೆ ಬ್ರಹ್ಮ ಜ್ಞಾನಿಗಳಾದವರಿಗೆ ಗೊತ್ತು.

ಆ ಕಾಲದಲ್ಲಿ ಜಗನ್ನಾಥದಾಸರು ತಮ್ಮ ಸ್ವರೂಪೋದ್ಧಾರಕರಾದ ಗೋಪಾಲದಾಸರನ್ನು:—

ಮೋಹನ — ಅಟ್ಟತಾಳ

ಗೋಪಾಲದಾಸರಾಯ | ನಿನ್ನಯಪಾದ |
ನಾಪೊಂದಿದೆನು ನಿಶ್ಚಯ ||ಪ||

ಈ ಪೀಡಿಸುವ ತ್ರೈತಾಪಗಳೋಡಿಸಿ
ಕೈಪಿಡಿದೆನ್ನನು | ನೀಪಾಲಿಸನುದಿನ ||ಅ||

ಘೋರ ವ್ಯಾಧಿಗಳ ನೋಡಿ । ವಿಜಯರಾಯ
ಭೂರಿ ಕರುಣವಮಾಡಿ॥
ತೋರಿದರಿವರೆ ಉದ್ಧಾರಕರೆಂದಂದಿ
ನಾರಭ್ಯ ತವಪಾದ ಸಾರಿದೆ ಸಲಹೆಂದು
ಸೂರಿಜನಸಂಪ್ರೀಯ ಸುಗುಣೋದಾರ
ದುರುಳನ ದೋಷನಿಚಯುವ ।
ದೂರಗೈಸು ದಯಾಂಬುನಿಧೆ ನಿ ।
ವಾರಿಸುತ ಕರವಿಡಿದು ಬೇಗದಿ ॥೧॥

ಅಪಮೃತ್ಯುವನು ಪರಿದೆ। ಎನ್ನೊಳಗಿದ್ದ।
ಅಪಂರಾಧಗಳ ಮರೆದೆ॥
ಚಪಲಚಿತ್ತನಿಗೊಲಿದು। ವಿಪುಲಮತಿಯನಿತ್ತು
ನಿಪುಣನೆಂದೆನಿಸಿದೆ। ತಪಸಿಗಳಿಂದಲಿ॥
ಕೃಪಣವತ್ಸಲ ನಿನ್ನ ಕರುಣಕೆ
ಉಪಮೆಗಾಣೆನು ಸಂತತವು ಕಾ
ಶ್ಯಪಿಯೊಳಗೆ ಬುಧರಿಂದ ಜಗದಾ
ಧಿಪನ ಕಿಂಕರನೆನಿಸಿ ಮೆರೆದೆ ॥೨॥

ಎನ್ನ ಪಾಲಿಸಿದಂದದಿ। ಸಕಲ ಪ್ರಾ।
ಪನ್ನರ ಸಲಹೊ ವೋದಿ॥
ಅನ್ಯರಿಗೀಪರಿ ಬಿನ್ನಪ ಗೈಯೆ ಜ
ಗನ್ನಾಥವಿಠಲನ ಸನ್ನುತಿಸುವ ಧೀರ॥
ನಿನ್ನ ನಂಬಿದ ಜನರಿಗೀಪರಿ
ಬನ್ನವೇ ಭಕ್ತಾನುಕಂಪಿ ಶ
ರಣ್ಯ ಬಂದೊದಗೀ ಸಮಯದಿ ಅ
ಹರ್ನಿಶಿ ಧೇನಿಸುವೆ ನಿನ್ನನು ॥೩॥

ಎಂಬದಾಗಿ ಸ್ತೋತ್ರಮಾಡಿದರು. ಈ ಪದದಲ್ಲಿ ಜಗನ್ನಾಥದಾಸರು ತಮ್ಮ ಪೂರ್ವಚರಿತ್ರೆಯನ್ನು ಸಂಕ್ಷೇಪವಾಗಿ ಹೇಳಿಕೊಂಡಿರುತ್ತಾರೆ.

ಗೋಪಾಲದಾಸರು ಜಗನ್ನಾಥದಾಸರಲ್ಲಿ ಪರಮಪ್ರಸನ್ನರಾಗಿ—

"ಇನ್ನೇನು ನೀವು ಕೃತಕಾರ್ಯರಾದಿರಿ. ಜೀವನ್ಮುಕ್ತರೆನಿಸಿದಿರಿ. ಸ್ಥಿತಪ್ರಜ್ಞರ ಪಙ್‌ಕ್ತಿಯಲ್ಲಿ ಕುಳಿತಿರಿ. ಜನನ ಮರಣಗಳು ನಿಮ್ಮ ಅಧೀನವಾದವು. ಪರಮಾತ್ಮನ ಪ್ರಸಾದ ನಿಮಗಾಯಿತು. ನಿಮ್ಮ ಉದ್ಧಾರದ ನಿಮಿತ್ತ ನೀವು ಮಾಡಿಕೊಳ್ಳಬೇಕಾದ ಸಾಧನೆ ಪೂರ್ತಿಯಾಯಿತು. ನೀವು ಮುಂದೆ ಮಾಡಬೇಕಾದ ಕಾರ್ಯವೆಂದರೆ ಲೋಕಸೇವೆ. ನಿಮ್ಮಿಂದ ಧರ್ಮಪ್ರಚಾರವಾಗಬೇಕು. ನಿಮ್ಮಿಂದ ಪಾಮರರ ಉದ್ಧಾರವಾಗಬೇಕು. ತನ್ನಮಟ್ಟಿಗೆ ತಾನು ಉದ್ಧಾರವಾಗುವದು ದೊಡ್ಡದಲ್ಲ. ತನ್ನಿಂದ ಬಹುಜನರ ಉದ್ಧಾರವಾಗಬೇಕು. ಟೀಕಾ ಟಿಪ್ಪಣಿಗಳನ್ನು ಬರೆಯುವ ಪಂಡಿತರು ಬಹುಜನರಾದರು. ಪಾಮರರನ್ನು ಉದ್ಧರಿಸುವ ದಯಾಮಯ ದಾಸರು ದೊರೆಯಲಾರರು. ನಮ್ಮದು ಭಾಗವತ ಧರ್ಮ. ಸಕಲ ಧರ್ಮಗಳೂ ಭಾಗವತಧರ್ಮದ ಅಂಗೋಪಾಂಗಗಳು. ಭಕ್ತಿಯಿಲ್ಲದೆ ಧರ್ಮವಿಲ್ಲ. ಭಕ್ತಿಯಿಲ್ಲದೆ ಮುಕ್ತಿಯಿಲ್ಲ. ಪಾಠಪ್ರವಚನ ಪುರಾಣಗಳಿಗಿಂತ ಪರಿಣಾಮಕಾರಿಯೆಂದು ಶುಕಾಚಾರ್ಯರಂಥವರು ಕೀರ್ತನರಂಗಕ್ಕಿಳಿದರು. ನರಹರಿ ತೀರ್ಥರು ಶ್ರೀಪಾದರಾಯರು ವ್ಯಾಸರಾಯರು ವಾದಿರಾಜರು ಇವರೆಲ್ಲಾ ಯತೀಶ್ವರರಾದರೂ ವಿಶೇಷತಃ ಕೀರ್ತನದಿಂದ ಧರ್ಮಪ್ರಚಾರಮಾಡಿದರು. ಅವರ ಕಾಲವಾಯಿತು. ಇದು ನಿಮ್ಮ ಕಾಲ. ವಿಜಯರಾಯರು ನಿಮಗೆ ಬೆಂಬಲರಾಗಿರುವರು. ಅವರೇ ನಿಮಗೆ ಜಯಪ್ರದರಾಗಿರುವರು. ಪುರಂದರದಾಸರ ಲಕ್ಷಾವಧಿ ಪದ ಸುಳಾದಿಗಳು ವಿಜಯನಗರದ ನಾಶಕಾಲದಲ್ಲಿ ಅದೃಶ್ಯವಾದವು. ನೀವು ಮತ್ತೆ ಗ್ರಂಥಕರ್ತರಾಗಬೇಕು. ಪ್ರಚಾರಕರಾಗಬೇಕು. ನಿಮ್ಮ ಹೆಸರು ಮುಂದೆ ಜಯಜಯಾಕಾರವಾಗುವದು. ನಮ್ಮ ಕಾಲವು ಸಮೀಪಿಸಿತು. ನಮ್ಮ ಜನ್ಮದಲ್ಲಿ ಆರ್ಜಿಸಿದ ವಿಶೇಷ ಪುಣ್ಯವು ನಿಮ್ಮದಾಗಿರುವದು. ಚೀಕಲಪರಿಯಲ್ಲಿ ವಿಜಯದಾಸರ ದರ್ಶನಮಾಡಿ ನೀವು ಕಾರ್ಯಕ್ಷೇತ್ರದಲ್ಲಿ ನಿಲ್ಲಬೇಕು'.

ಎಂಬ ಹಿತೋಕ್ತಿಗಳನ್ನಾಡಿದರು. ಜಗನ್ನಾಥರಾಯರು ಕೈಜೋಡಿಸಿಕೊಂಡು ಮಹದಾಜ್ಞಾ, ಮಹದಾಜ್ಞಾ ಎಂದು ಪ್ರಣಾಮಮಾಡಿದರು. ವ್ಯಾಸತತ್ವ

ಜ್ಞರು ಜಯಜಯವೆಂದರು. ಗೋಪಾಲದಾಸರು ಜಗನ್ನಾಥದಾಸರನ್ನು ಬೀಳ್ಕೊಟ್ಟರು.

ಚೀಕಲಪರಿಯ ಅಶ್ವತ್ಥವೃಕ್ಷದ ಬಳಿ ವಿಜಯದಾಸರು ಬಾದರಾಯಣ ದಾಸರೇ ಮೊದಲಾದ ಶಿಷ್ಯರಿಗೆ ಉಪದೇಶಮಾಡುತ್ತಾ ಕುಳಿತಿದ್ದರು. ಮೋಹದ ಮಕ್ಕಳಂತಿದ್ದ ಮೋಹನದಾಸರು ಗಾನಮಾಡುತ್ತಿದ್ದರು. ಜಗನ್ನಾಥದಾಸರು ದೂರದಿಂದ ಹರಿದಾಸಗೋಷ್ಠಿಯನ್ನು ಕಂಡು ದೀರ್ಘದಂಡ ಮಾಡಿದರು.

ಮೋಹನ — ಅಟ್ಟತಾಳ

ರತ್ನ ದೊರಕಿತಲ್ಲಾ । ಎನಗೆ ದಿವ್ಯ ॥ಪ॥

ರತ್ನ ದೊರಕಿತು ಎನ್ನ ಜನ್ಮ ಪ
ವಿತ್ರವಾಯಿತು ಈ ದಿನದಿ ನಾ
ಯತ್ನಗೈಯುತ ಬರುತಿರಲು ಪ್ರ
ಯತ್ನವಿಲ್ಲದೆ ವಿಜಯರಾಯರೆಂಬ ॥ಅ॥

ಪಥದಿ ನಾ ಬರುತಿರಲು । ಥಳಥಳವೆಂದು ।
ಅತಿಕಾಂತಿ ಝಳಪಿಸಲು । ಬೆರಗಾಗುತ್ತ
ಅತಿಚೋದ್ಯವ ಕಾಣಲು । ಸೇವಿಸುತಿರೆ ॥
ಸತತ ಕರಪಿಡಿದಾದರಿಸಿ ಮನೋ
ರಥವ ಪೂರೈಸುತಲಿ ದಿವ್ಯ ಸ
ನ್ಮತಿಯ ಪಾಲಿಸಿ ಮೋಕ್ಷ ಸುಪಥವ
ಅತಿಶಯದಿ ತೋರುತ್ತ ಪೊರೆದ ॥೧॥

ಜ್ಞಾನವೆಂಬೋ ಪುತ್ಥಳಿ । ಕಂಬಿಯಲ್ಲಿ
ಆಣಿಮುತ್ತಿನ ಭಕ್ತೀಲಿ । ಸುಕೃತಮಾಲಾ
ನಾನಾವಿಧ ಹವಳದಲಿ । ಸೇರಿಸುತ್ತ ॥
ಪ್ರಾಣಪದಕವೆಂಬ ಮಾಲೆ ಅನು

ಮಾನವಿಲ್ಲದೆ ಕೊರಳಿಗ್ಹಾಕುತ
ಗಾನದಿಂ ಕುಣಿಯುತ್ತ ಪಾಡುತ
ದೀನಜನರುದ್ಧಾರಗೈವ ||೨||

ಶೋಧಿಸಿ ಗ್ರಂಥಗಳ | ಸುಳಾದಿಯ |
ವೋದದಿಂದಲಿ ಬಹಳ | ಕವಿತೆಮಾಡಿ |
ಸಾಧುಜನಕೆ ಸುಕಾಲ | ಆನಂದವಿತ್ತು ||

ವಾದಿಜನರಿಗೆ ಬೋಧ ಬೋಧಿಸಿ
ಮಾಧವ ಜಗನ್ನಾಥ ವಿಠಲನ
ಪಾದಕಮಲಕೆ ಮಧುಪನಂದದಿ
ಮೇದಿನಿಯೊಳ್ ತೋರುತ್ತ ಮೆರೆವ ||೩||

ಎಂಬದಾಗಿ ಸ್ತೋತ್ರಮಾಡಿದರು. ವಿಜಯರಾಯರು ಜಗನ್ನಾಥದಾಸರನ್ನು ಪಕ್ಕದಲ್ಲಿ ಕೂಡಿಸಿಕೊಂಡರು. –'ಭಾಗಣ್ಣನ ಮಾತೇ ನಮ್ಮ ಮಾತೆಂದರು. ಸರ್ವಜ್ಞರೂ ಟೀಕಾಕೃತ್ಪಾದರೂ ರಾಯರಲ್ಲಿ (ರಾಘವೇಂದ್ರರು) ಹೇಗೆ ನಿಂತು ಮಹಾಕಾರ್ಯ ಮಾಡಿದರೋ, ಹಾಗೆ ನಿಮ್ಮಲ್ಲಿ ಶ್ರೀಪಾದರಾಯರೂ ಚಂದ್ರಿಕಾಚಾರ್ಯರೂ ವಾದಿರಾಜರೂ ದಾಸರಾಯರೂ ನಿಂತು ನಡೆಸುವರು. ಭಾಗಣ್ಣನು ಮಾಡಿದ ಆಯುರ್ದಾನವು ನಿಮ್ಮ ಲೋಕಸೇವೆಗೆ ಸಹಕಾರಿಯಾಯಿತು. ನಿಮಗೆ ದುಃಖ ಪ್ರಾರಬ್ಧ ತೀರಿ ಸುಖಪ್ರಾರಬ್ಧವಾರಂಭವಾಯಿತು. ನಿಮ್ಮನ್ನು ರಾಜಾಧಿರಾಜರು ಪೂಜಿಸುವರು. ಮಠಾಧಿಪತಿಗಳು ಮನ್ನಿಸುವರು. ಜನರು ನಿಮ್ಮ ದಾಸಾನುದಾಸರಾಗುವರು. ನಿಮ್ಮ ವಾಕ್ಕಿನಲ್ಲಿ ಜಯಲಕ್ಷ್ಮಿಯು ನೆಲೆಸಿ ಕೀರ್ತಿಯನ್ನುಂಟುಮಾಡುವಳು' ಎಂದು ಅನುಗ್ರಹವಾಕ್ಯಗಳನ್ನಾಡಿದರು.

ಜಗನ್ನಾಥದಾಸರು—ವಿಜಯರಾಯರ ಚರಣಾನುಗ್ರಹವಾದಮೇಲೆ ನನ್ನ ಜನ್ಮಯಾತ್ರೆಯು ದಿಗ್ವಿಜಯವಲ್ಲವೆ ಮತ್ತೇನಾಗಬೇಕು? ಮೋಹನದಾಸರಾಡಿದ—

ವಿ ಯೆನಲು ವಿಮಲತೆಯು ।
ಜ ಎಂದವಗೆ ಜಯವು ।
ಯ ಎನಲು ಯಾಗಫಲವು ।

ಎಂಬುದರ ಪ್ರಥಮ ಫಲಭೋಗಿಯೇ ನಾನಾದೆನೆಂದರು.

ಜಗನ್ನಾಥದಾಸರ ಪ್ರಥಮ ಕೀರ್ತನವು ಚೀಕಲಪರಿಯಲ್ಲಿ ವಿಜಯ ದಾಸರ ದಿವ್ಯ ಸನ್ನಿಧಿಯಲ್ಲಾಯಿತು.

ಪರಮ ಗುರುಗಳ ಆಜ್ಞೆಯನ್ನು ಪಡೆದು ಜಗನ್ನಾಥದಾಸರು ಮಾನವಿಗೆ ಬಂದರು. ಆಚಾರ್ಯರಲ್ಲುಂಟಾದ ಬದಲಾವಣೆಯನ್ನು ನೋಡಿ ಜನರು ಆಶ್ಚರ್ಯಭರಿತರಾದರು. ಒಂದು ಕಡೆ ಶಾಸ್ತ್ರಪಾಠ, ಮತ್ತೊಂದು ಕಡೆ ಕೀರ್ತನ ರೂಪದಿಂದ ಸಕಲ ಶಾಸ್ತ್ರಾರ್ಥನಿರೂಪಣ, ಈ ರೀತಿ ದಾಸರಾಯರ ಧರ್ಮೋಪದೇಶಕ್ಕೆ ಮೊದಲಾಯಿತು. ದಾಸರಲ್ಲಿ ವ್ಯಾಸಂಗಕ್ಕೆ ನೂರಾರು ಶಿಷ್ಯಜನರು ದೇಶ ದೇಶಗಳಿಂದ ಬಂದು ಸೇರಿದರು. ಗುರುಗಳಾಜ್ಞೆಯಂತೆ ತೀರ್ಥಾಟನ ವ್ಯಾಜದಿಂದ ಧರ್ಮೋಪದೇಶ ಕಾರ್ಯದಲ್ಲಿ ದೀಕ್ಷೆಯನ್ನು ವಹಿಸಿ, ದಾಸರು ಸಂಚಾರ ಹೊರಡಲುದ್ಯುಕ್ತರಾದರು.

---

- ೪ -

## ಸುರಪುರ ಸಂಸ್ಥಾನ

ಸುರಪುರವು ಆ ಕಾಲದಲ್ಲಿ ಒಂದು ಚಿಕ್ಕ ಕರ್ನಾಟಕ ಸಂಸ್ಥಾನವಾಗಿತ್ತು. ರಾಜ್ಯದ ಉತ್ಪತ್ತಿಯು ಒಂಭತ್ತು ಲಕ್ಷಕ್ಕೆ ಮೀರಿರಲಿಲ್ಲ. ನಾಯಕ ವಂಶದ ರಾಜರು ಆ ರಾಷ್ಟ್ರವನ್ನು ಪಾಲಿಸುತ್ತಿದ್ದರು. ಸುರಪುರದ ರಾಜರು ಧರ್ಮಾತ್ಮರಾಗಿದ್ದರೆಂಬುದಕ್ಕೆ ಈಗಲೂ ಅವರು ಕೊಟ್ಟ ಜಹಗೀರುಗಳು

ಸಾಕ್ಷಿಗಳಾಗಿವೆ. ಜಗನ್ನಾಥದಾಸರ ಕಾಲದಲ್ಲಿ ವೆಂಕಟಪ್ಪನಾಯಕನು ಧೊರೆತನ ಮಾಡುತ್ತಿದ್ದನು. ನಾಯಕನು ತಿರುಪತಿಯ ಶ್ರೀನಿವಾಸನ ಭಕ್ತನಾಗಿದ್ದನು.

ಜಗನ್ನಾಥದಾಸರು ಪರಿವಾರ ಸಹಿತ ಮೊದಲು ಸುರಪುರದ ಮಾರ್ಗ ವಾಗಿ ಧರ್ಮಪ್ರಚಾರ ಕಾರ್ಯಕ್ಕೆ ಹೊರಟರು. ದಾಸರೊಡನೆ ವಿದ್ಯಾರ್ಥಿಗಳಾಗಿ ಕೆಲವರು, ಯಾತ್ರಿಕರಾಗಿ ಕೆಲವರು, ಹೀಗೆ ನೂರಾರು ಜನರಿದ್ದರು. ದಾಸರ ಸಂಚಾರವು ಮಠಪತಿಗಳ ಸಂಚಾರದಂತೆ ಅಟ್ಟಹಾಸ ಯುಕ್ತವಾಗಿತ್ತು. ದಾಸರು ಮೇನೆಯಲ್ಲೂ, ಅನುಯಾಯಿಗಳು ಕುದುರೆಗಳ ಮೇಲೂ ಪ್ರಯಾಣ ಮಾಡುತ್ತಿದ್ದರು. ದಾಸರ ಪೂರ್ವಚರಿತ್ರೆಯನ್ನೂ ಅವರು ಮಾಡುವ ಕೀರ್ತನ ವನ್ನೂ ಕೇಳಿ, ವೆಂಕಟಪ್ಪನಾಯಕನು ಬಹುವಾಗಿ ಸತ್ಕರಿಸಿ ಶಿಷ್ಯನಾದನು.

ಇದೇ ಕಾಲದಲ್ಲಿ ಒಬ್ಬಾನೊಬ್ಬ ಬಡಗೃಹಸ್ಥನು, ಹೆಂಡತಿ ಮಕ್ಕ ಳನ್ನು ಸಾಕಲಾರದಷ್ಟು ದರಿದ್ರನಾಗಿ ದಾಸರನ್ನು ಹಿಂಬಾಲಿಸಿದ್ದನು. ನಾ ಲ್ಕೆಂಟು ಮಜಲುಗಳಾದರೂ, ಇವನಾರು, ಏಕೆ ಬರುತ್ತಿರುವನೆಂಬುದು ದಾಸ ರಿಗೆ ಶ್ರುತವಾಗಿಲಿಲ್ಲ. ಒಂದು ದಿನ ತೀರ್ಥ ಸಮಯದಲ್ಲಿ ಮ್ಲಾನವದನನಾಗಿ ಹಿಂದೆ ಹಿಂದೆ ನಿಂತಿರುವದನ್ನು ನೋಡಿ, ದಾಸರು-'ನೀನಾರಪ್ಪ-' ತೀರ್ಥಕ್ಕೆ ಬಾ'ರೆಂದು ಕರೆದರು. ಬಡವನು ಇಷ್ಟು ಮಾತ್ರಕ್ಕೇ ಬಿಕ್ಕಿ ಅಳಲಾರಂಭಿಸಿ ದನು. ಸ್ವಾಮಿಾ, ನಾನು ಹೆಂಡತಿ ಮಕ್ಕಳಿಗೆ ತಂದುಹಾಕಲಾರದಷ್ಟು ದರಿ ದ್ರನಾಗಿ ತಮ್ಮನ್ನು ಹಿಂಬಾಲಿಸಿರುವ ಪಾಪಿಯೆಂದನು. ತಮ್ಮ ಜೊತೆಯಲ್ಲಿ ದ್ದರೆ ಮೊದಲು ಭುಕ್ತಿ ಅನಂತರ ಮುಕ್ತಿ ದೊರೆತೀತೆಂದು ತೊರೆದು ಬಂದಿ ರುವನೆಂದನು. ಗೃಹಸ್ಥನಾದ್ದರಿಂದ ಒಬ್ಬರನ್ನು ಯಾಚಿಸಿ ಬದುಕಿದವ ನಲ್ಲವೆಂದನು. ಮತ್ತೆ ಹೆಂಡತಿ ಮಕ್ಕಳನ್ನು ಸ್ಮರಿಸಿಕೊಂಡು, ಈ ಹೊತ್ತಿಗೆ ಅವರೇನಾಗಿರುವರೋ ಎಂದು ಪ್ರಲಪಿಸಿದನು. ದಾಸರು ಗೃಹಸ್ಥನಲ್ಲಿ ಕನಿ ಕರ ತಾಳಿ, ಅಪ್ಪಾ ನಿನಗೇನು ಬರುವದೆಂದರು. ಗೃಹಸ್ಥನು, ಸ್ವಾಮಿಾ ಕನ್ನಡ ಓದಿ ಬರೆಯುವುದಕ್ಕೆ ಬರುತ್ತದೆ. ಸಂಧ್ಯಾವಂದನ ದೇವಪೂಜಾದಿ ಮಂತ್ರಗಳು ಬರುತ್ತವೆ. ದೇವರ ನಾಮುಗಳನ್ನು ಹಾಡುವುದಕ್ಕೆ ಬರುತ್ತದೆ. ಇಷ್ಟೇ ಎಂದನು.

ದಾಸರು ಗೃಹಸ್ಥನ ಮುಖವನ್ನು ಹಾಗೇ ಸ್ವಲ್ಪ ಹೊತ್ತು ನೋಡಿದರು. ಹಿಂದಿನ ಏಳು ಜನ್ಮಗಳಲ್ಲಿ ಹುಡುಕಿದರೂ ನಿನ್ನಿಂದ ಸತ್ಪಾತ್ರದಾನವಾಗಿಲ್ಲವಲ್ಲ! ದೇವರು ನಿನಗೆ ಹೇಗೆ ಕೊಡಬೇಕೆಂದರು. ಒಳ್ಳೇದು! ನಿನ್ನ ಬಳಿಯಲ್ಲಿ ಈಗ ಏನಿದೆ ಹೇಳೆಂದರು. ಗೃಹಸ್ಥನು, ಉಟ್ಟು ಹೊದ್ದಿರುವ ಬಟ್ಟೆಗಳು, ಇದೊಂದು ಒಡಕು ಹಿತ್ತಾಳೆಯ ತಂಬಿಗೆ, ಎಂದನು. ದಾಸರು ಆ ತಂಬಿಗೆಯನ್ನೇ ಯಾರಾದರೂ ಸತ್ಪಾತ್ರರಿಗೆ ದಾನಮಾಡೆಂದರು. ತಮಗಿಂತ ಸತ್ಪಾತ್ರರು ಮತ್ತೊಬ್ಬರಿಲ್ಲವೆಂದು ಅವನು ದಾಸರ ಮುಂದೆ ತಂಬಿಗೆಯನ್ನಿಟ್ಟು ಕೃಷ್ಣಾರ್ಪಣವೆಂದನು. ದಾಸರೇ ತಂಬಿಗೆಯನ್ನು ಮಾರಿ ಸಕ್ಕರೆಯನ್ನು ತಾರೆಂದರು. ತಂದ ಸಕ್ಕರೆಯ ಜೊತೆಗೆ ಮತ್ತಷ್ಟು ಸೇರಿಸಿ ಪಾನಕ ಮಾಡಿಸಿದರು. ಗೃಹಸ್ಥನ ಕೈಯಿಂದ ವಸಂತಮಾಧವನ ಹೆಸರಿನ ಮೇಲೆ ಕೃಷ್ಣಾರ್ಪಣವೆನಿಸಿ, ಪಙ್ಕ್ತಿಯಲ್ಲಿ ಕುಳಿತವರಿಗೆ ದಾನ ಮಾಡಿಸಿದರು. ತಾವೂ ಪಾನಕವು ಬಲು ರುಚಿಯಾಗಿದೆಯೆಂದು ಸವಿದರು. ಗೃಹಸ್ಥನ ದರಿದ್ರ ಪರಿಹಾರವಾಗಲೆಂದು **ನೃಸಿಂಹ ಸುಳಾದಿಯನ್ನು** ರಚಿಸಿ ಅವನಿಗೆ ಉಪದೇಶಮಾಡಿದರು.

ಗೃಹಸ್ಥನು ಸುಳಾದಿಯ ಪಠನೆಗೆ ಆ ಪ್ರಾಂತ್ಯದ ಗುಡ್ಡಸಾಲನ್ನಾಶ್ರಯಿಸಿದನು. ಅಲ್ಲಿ **ಚಂದ್ರಿಕಾಚಾರ್ಯರಿಂದ** ಪ್ರತಿಷ್ಠಿತವಾದ ಒಂದು ಮಾರುತಿಯ ದೇವಾಲಯವಿತ್ತು. ಸಮೀಪದಲ್ಲೊಂದು ನೀರಿನ ಡೊಣೆಯೂ ಸೀತಾರಾಮ ಫಲಗಿಡಗಳೂ ಇದ್ದುವು. ಗೃಹಸ್ಥನು ದೇವರೇ ಗತಿಯೆಂದು ವಾನರನಾಥನ ಗುಡಿಯಲ್ಲಿ ವಾಸಮಾಡಿದನು. ಇದ್ದ ತಂಬಿಗೆಯೂ ಹೋದ್ದರಿಂದ ಹೊದ್ದ ಧೋತ್ರವೇ ಅವನಿಗೆ ಪಾತ್ರೆಯಾಗಿತ್ತು. ಬೆಳಗಾಗಿ ಏಳುವುದು; ಅಡವಿಯ ತುಲಸಿಯನ್ನು ತಂದಿಡುವದು; ಡೊಣೆಯಲ್ಲಿ ಮಿಾಯುವುದು; ಧೋತ್ರವನ್ನದ್ದಿ ಮಾರುತಿಯ ತಲೆಯಮೇಲೆ ಹಿಂಡಿ ಅಭಿಷೇಕವೆನ್ನುವದು; ತುಲಸಿಯ ಅರ್ಚನೆ ಮಾಡುವದು; ಸೀತಾರಾಮ ಫಲಗಳ ನಿವೇದನ ಮಾಡುವದು; ಅವನ್ನೇ ಆಹಾರ ಮಾಡಿಕೊಳ್ಳುವದು; ನಿರಂತರ ಸುಳಾದಿಯನ್ನು ಪಠಿಸುವದು. ಈರೀತಿ ಗೃಹಸ್ಥನು ಕಾಲಯಾಪನೆ ಮಾಡಿದನು. ಗೃಹಸ್ಥನ ಪುಣ್ಯಪರಿಪಾಕದಿಂದ ಸುರಪುರದ ವೆಂಕಟಪ್ಪನಾಯ

ಕನು ಬೇಟೆಯಾಡುತ್ತಾ ಆ ಗುಡ್ಡಕ್ಕೆ ಬಂದನು. ಅಲ್ಲೀ ಒಂದೆರಡುದಿನ ಯೋಗ್ಯವಾದ ಸ್ಥಳವನ್ನಾರಿಸಿ ಪಟಗೃಹದಲ್ಲಿ ವಾಸಮಾಡಿದನು. ರಾಜಧಾನಿಯಿಂದ ಕುದುರೆಯ ರಾವುತನು ರಾಜನಿಗೊಂದು ಪತ್ರವನ್ನು ತಂದೊಪ್ಪಿಸಿದನು. ಲಕ್ಕೋಟೆಯಃನ್ನೊಡೆದು ಸುನಾವಣೆ ಮಾಡುವ ಮುತ್ಸದ್ದಿಯೊಬ್ಬನಾಗಬೇಕಾಯಿತು. ಯಾರಾದರೂ ಬ್ರಾಹ್ಮಣರಿದ್ದರೆ ಕರೆತರುವಂತೆ ರಾಜಾಜ್ಞೆಯಾಯಿತು. ರಾವುತನ ಕೈಗೆ ಬಡಬ್ರಾಹ್ಮಣನು ಸಿಕ್ಕಿದನು. ಧೊರೆಯ ಬಳಿಗೆ ಬಾರೆಂದು ಕರೆದೊಯ್ದನು. ರಾಜನೇನು ಮಾಡುವನೋ ಎಂಬ ಭೀತಿ ಗೃಹಸ್ಥನಿಗಾಯಿತು. ರಾಜನು, ಬ್ರಾಹ್ಮಣನನ್ನು ನೋಡಿ ಲಕ್ಕೋಟೆಯನ್ನು ಸುನಾವಣೆ ಮಾಡೆಂದನು. ಗೃಹಸ್ಥನು ಧೈರ್ಯದಿಂದ ಪತ್ರದ ಸಂಗತಿಯನ್ನು ಓದಿ ತಿಳಿಸಿದನು. ನಾಯಕನಿಗೆ ಸಂತೋಷವಾಯಿತು. ಬ್ರಾಹ್ಮಣನನ್ನು ನೀನಾರೆಂದು ವಿಚಾರಿಸಿದನು. ಅವನು—'ಪ್ರಭೋ, ನಾನೊಬ್ಬ ಬಡವನು. ಸುರಪುರ ರಾಜ್ಯದವನು. ಜಗನ್ನಾಥದಾಸರ ಶಿಷ್ಯನು. ಅವರ ಅಪ್ಪಣೆಯುನ್ನು ಪಾಲಿಸುತ್ತಾ ಈ ಪರ್ವತದಲ್ಲಿ ನರಸಿಂಹ ಸುಳಾದಿಯನ್ನು ಪಾರಾಯಣ ಮಾಡಿಕೊಂಡಿರುವವನು' ಎಂಬದಾಗಿ ತಿಳಿಸಿದನು.

ನಾಯಕ—ನೀನು ಎಲ್ಲಿ ವಾಸಮಾಡುತ್ತೀ?

ದರಿದ್ರ—ಆ ಗುಡಿಯಲ್ಲಿ.

ನಾಯಕ—ನಿನಗೆ ಹೆಂಡರು ಮಕ್ಕಳಿರುವರೆ ?

ದರಿದ್ರ—ಇರುವರು.

ನಾಯಕ—ನಿನಗೆ ಹೊಲ ಮನೆಗಳಿರುವವೆ ?

ದರಿದ್ರ—ಇಲ್ಲ.

ನಾಯಕ—ಜುಟ್ಟು ಜನಿವಾರವಿರುವ ಬ್ರಾಹ್ಮಣರಿಗೆಲ್ಲಾ ಮಾನ್ಯವಿರುವ ನನ್ನ ರಾಜ್ಯದಲ್ಲಿ ನಿನಗೆ ಏನೂ ಇರದಿರಲು ಕಾರಣವೇನು ?

ದರಿದ್ರ—ನನ್ನ ದೌರ್ಭಾಗ್ಯ !

ನಾಯಕ—ನೀನು ವೈದಿಕನೋ-ಗೃಹಸ್ಥನೊ ?

ದರಿದ್ರ—ಗೃಹಸ್ಥ.

ನಾಯಕ—ನಮ್ಮಲ್ಲಿ ನೌಕರಿಮಾಡುವೆಯಾ ?
ದರಿದ್ರ—ಮಾಡುವೆನು.

ವೆಂಕಟಪ್ಪನಾಯಕನು ಸುರಪುರಕ್ಕೆ ಬಂದು ನನ್ನನ್ನು ನೋಡೆಂದು ಹೇಳಿ, ರಾಜಕಾರ್ಯಗೌರವದಿಂದ ಅಶ್ವಾರೂಢನಾಗಿ ಪ್ರಯಾಣಮಾಡಿದನು. ಬ್ರಾಹ್ಮಣನೂ ಒಂದು ಮಂಡಲ ಸೇವೆ ಪೂರ್ತಿಮಾಡಿ ಸುರಪುರಕ್ಕೆ ಪ್ರಯಾಣಮಾಡಿದನು. ದರಿದ್ರನಿಗೆ ಜಗನ್ನಾಥದಾಸರ ಹೆಸರಿನ ಗೌರವದಿಂದ ಸುಲಭವಾಗಿ ರಾಜದರ್ಶನವಾಯಿತು. ಮನೆಮಾನ್ಯಗಳಾದವು. ರಾಜನ ಖಾನಿಗೆಯಲ್ಲಿ ನೌಕರಿಯಾಯಿತು. ಗೃಹಸ್ಥನು ಹೆಂಡತಿಮಕ್ಕಳನ್ನು ಕರೆತಂದು ಸುರಪುರದಲ್ಲಿ ಸುಖವಾಗಿ ವಾಸಮಾಡಿದನು. ಕಾಲಕ್ರಮದಲ್ಲಿ ರಾಜಾನುಗ್ರಹದಿಂದ ಅವನು ರಾಜನ ಖಜಾನೆಯ ಮುಖ್ಯಾಧಿಕಾರಿಯಾದನು. ಅನಂತರ ಸುರಪುರದ ದಿವಾನಗಿರಿಯೂ ಆ ಬಡಬ್ರಾಹ್ಮಣನಿಗಾಯಿತು. ಮಹಾಪದವಿ ದೊರೆತರೂ ಗೃಹಸ್ಥನು ನೃಸಿಂಹಸುಳಾದಿಯ ಪಾರಾಯಣವನ್ನು ಬಿಡಲಿಲ್ಲ. ಜಗನ್ನಾಥದಾಸರ ಉಪಕಾರವನ್ನು ಮರೆಯಲಿಲ್ಲ.

## ನರಸಿಂಹಸುಳಾದಿ — ಧ್ರುವತಾಳ.

ದುರಿತವನ ಕುಠಾರಿ ದುರ್ಜನ-ಕುಲವೈರಿ
ಶರಣಾಗತ ವಜ್ರಪಂಜರ ಕುಂಜರ
ವರಸಂರಕ್ಷಕ ಜನ್ಮ ಮರಣ ರಹಿತ ಮಹಿತ
ಪರಮ ಕರುಣಾಸಿಂಧು ಭಕತ ಬಂಧು
ಸ್ವರತ ಸ್ವತಂತ್ರ ಜಗದ್ಭರಿತ ಚಿತ್ಸುಖಪೂರ್ಣ
ಹರಿಯೆ ಕ್ಷರಾಕ್ಷರ ಪುರುಷೋತ್ತಮ
ಉರುಗಾಯ ವೈಕುಂಠ ವರಮಂದಿರ ಚಂದಿರ
ತರಣಿಕೋಟಿ ಸಂಕಾಶ ವಿಮಲಕೇಶ
ಧುರದೊಳಗರ್ಜುನನ ತುರಗ ನಡೆಸಿದ ಸಂ
ಗರಭಯಂಕರ ಲೋಕೈಕವೀರ
ನರಸಿಂಹ ನಿನ್ನ ಪಾದಕ್ಕೆರಗಿ ಬೇಡಿಕೊಂಬೆ

ನೊರೆಹೊಕ್ಕ ದಾಸಗೆ ಬಂದ ಭಯವ ಪರಿ
ಹರಿಸಿ ಸೌಖ್ಯವ ಕರುಣಿಸು ದಯದಿಂದ
ಸರುವರಂತರ್ಯಾಮಿ ಲೋಕ ಸ್ವಾಮಿ
ಸ್ಮರಣೆ ಮಾತ್ರದಿ ಅಜಾಮಿಳಗೆ ಮುಕ್ತಿಯನಿತ್ತೆ
ಅರಿದೆನೋ ನೀನೀಗ ಪೊರೆವುದೆಮ್ಮ
ಸರುವಕಾಮದ ಜಗನ್ನಾಥ ವಿಠಲ ಭಕ್ತ
ಪರಿಪಾಲಕನೆಂಬ ಬಿರಿದು ನಿನ್ನದಲ್ಲವೇ ||೧||

ಮಟ್ಟತಾಳ.

ವಿಧಿಪಿತ ನೀನಲ್ಲದೆ ನಿಧಿಪತಿಗಳು ಉಂಟೆ
ಸಧನನಾಗಿ ಇಪ್ಪೆ ನಿನ್ನ ದಾಸರಿಗಾಗಿ
ಮಧುಸೂದನ ಜಗನ್ನಾಥ ವಿಠಲರೇಯಾ
ನಿಧನನೆನಿಸಿಕೊಂಡೆ ನಿನ್ನ ದ್ವೇಷಿಗಳಿಗೆ ||೨||

ರೂಪಕತಾಳ.

ಮೂರು ಲೋಕ ಸ್ವಾಮಿ ಸರ್ವಜ್ಞ ಸುಖಪೂರ್ಣ
ಪ್ರೇರಕ ಸಾಕ್ಷಿ ಕಾರಣ ಕಾರ್ಯದೋಷ ವಿ
ದೂರ ಸದ್ಗುಣಸಾಂದ್ರ ಸಜ್ಜನಾಂಬುಧಿ ಚಂದ್ರ
ಭಾರಕರ್ತ ಜಗಕೆ ನೀನಿರೆ ಎಮ್ಮಮ
ನೋರಥ ಸಲಿಸುವದೇನಸಾಧ್ಯವೊ ನಿನಗೆ
ಕ್ರೂರಮಾನವರ ಸಂಹಾರ ಮಾಡಿಸು ಗುರು
ಮಾರುತನಿಂದತಿ ಶೀಘ್ರವಾಗಿ
ನೀರಕ್ಷಿಸೆಂದು ಪ್ರಾರ್ಥಿಸುವೆ ಭಕ್ತಗೆ ಭೂರಿ
ಸಾರಭಾಗ್ಯವನಿತ್ತು ಕೃಪೆಮಾಡು ಅನುದಿನ
ಶೂರ ಜಗನ್ನಾಥವಿಠಲ ನೀನಲ್ಲದಿ
ನ್ನಾರು ಭಕ್ತರ ಕಾವ ಕಾರುಣಿಗಳು ಜಗದಿ ||೩||

## ಜಂಪೆತಾಳ.

ಪಿತನಿಂದ ನೊಂದ ಪ್ರಹ್ಲಾದನನು ಕಾಯ್ದೆ ದೇ
ವತೆಗಳಿಗೆ ಬಂದ ಭಯ ಪರಿಹರಿಸಿದೆ ದ್ರೌ
ಪದಿಯ ಮೊರೆಗೇಳಿ ದಿವ್ಯಾಂಬರವ ಕರುಣಿಸಿದೆ
ಕ್ಷಿತಿಜನಾಲಯದಿ ಬಳಲುವ ಬಾಲೆಯರ ದ್ವಾರಾ
ವತಿಗೆ ಕರೆದೊಯ್ದು ಒಲಿದವರ ಪೋಷಿಸಿದೆ ಮಾ
ರುತಿಯ ಕರದಿಂ ಬೃಹದ್ರಥನ ಕುವರನ ಕೊಲಿಸಿ
ಪೃಥುವಿಪರ ಬಿಡಿಸಿ ಪಾಲಿಸಿದೆ ಕರುಣದಲಿ ಕುರು
ಪೃತನದೋಳ್ಪಾಂಡವರ ಗೆಲಿಸಿ ಕೀರ್ತಿಯ ಪಡೆದೆ
ಶತಮೋದನಸ್ತ್ರದಿಂದಲಿ ಗರ್ಭದೊಳಗೆ ಪೀ
ಡಿತನಾದ ಶಿಶು ಪರೀಕ್ಷಿತನ ಸಂತೈಸಿದೆ
ಸಿತಿಕಂಠಗೊಲಿದು ಸಾಯಕನಾಗಿ ಮುಪ್ಪುರದ
ಸತಿಯರನು ಒಲಿಸಿ ಕೀರುತಿಯಿತ್ತೆ ಭಕ್ತನಿಗೆ
ಮಿತಿಯುಂಟೆ ನಿನ್ನ ಕರುಣಕೆ ದೇವಪತಿ ಸಾಂ
ಪ್ರತ ಬೇಡಿಕೊಂಬೆ ಬಿನ್ನಪ ಕೇಳಜಸ್ರಸಂ
ಸ್ತುತಿಪ ಭಕತರ ಮನೋರಥವ ಪೂರೈಸು ಸು
ವ್ರತನಾಮ ಶ್ರೀ ಜಗನ್ನಾಥವಿಠಲ ಭಾಗ
ವತಜನರ ಪ್ರಿಯ ನೀನೆಗತಿ ಎಮಗೆ ಇಹಪರದಿ ||೪||

## ತ್ರಿಪುಟತಾಳ

ನೀ ಸಲಹಲಿನ್ನಾರು ಮೂಲೋಕದೊಳು ಬಂದ
ಡ್ಡೈಸುವರು ಒಳಹೊರಗೆ ದಾನವ ದಿವೌ
ಕಾಸರು ನಿನಗೆ ಸಮರ್ಪಕ ಕಾರ್ಯ.ಮ
ಹಾಸುಖದಿ ನಡೆಸುವರು ನಿರುತ ಲಕ್ಷ್ಮಿ
ದಾಸಿಯೆಂದೆನಿಪಳು ನಿನ್ನರಮನೆಯಲ್ಲಿ
ದೇಶ ಕಾಲ ಗುಣ ಕರ್ಮಾದಿಗಳು ನಿನಗಾ

ವಾಸಕೆ ಯೋಗ್ಯವಾದ ಸ್ಥಾನವೆನಿಪವು
ಈ ಶಲೋಕಕೆ ಲೇಶಾಯಾಸ ಕಾಣೆನೊ ಕರು
ಣಾಸಮುದ್ರನೆ ಒಲಿದು ಎಮ್ಮ ಮನದ ಅಭಿ
ಲಾಷೆ ಪೂರೈಸೆಂದು ಬೇಡಿದೆನೋ ವೇದ
ವ್ಯಾಸ ಕೀಟಗೆ ಒಲಿದು ಕೊಟ್ಟೆ ಮಹಾಸಿಂ
ಹಾಸನವೇರಿಸಿ ನೀ ಪೊರೆದೆಯೊ ಪ
ರಾಶರಾತ್ಮಜ ನಿನ್ನ ಗುಣಗಳ ಬಣ್ಣಿಸೆ
ನಾ ಸಾಮರ್ಥನೆ ಎಂದೆಂದಿಗಾದರು ದೇವ
ನೀ ಸುಲಭನೆಂದಾಶ್ರಯಿಸಿಂದು ನಾ ಬಿ
ನ್ನೈಸಿದೆನೋ ಈ ರೀತಿಯಲ್ಲಿ ಸರು
ವಾ ಸುನಿಲಯ ಶ್ರೀ ಜಗನ್ನಾಥವಿಠಲರೇಯ
ಈಸು ಮಾತುಗಳೇಕೆ ಮನ್ಮನದ
ಆಶೆ ಪೂರ್ತಿಯಮಾಡಿ ಎಮ್ಮನು ದಯದಿ ಉ
ದಾಸಿಸದೆ ಅನುದಿನ ನೋಳ್ಪುದು ||೪||

ಅಟ್ಟತಾಳ.

ನಿಗಮ ತತಿಗಳಿಗೆ ವೇದ್ಯವಾಗದ ನಿನ್ನ
ಅಗಣಿತಮಹಿಮೆ ಲಕುಮಿ ಬೊಮ್ಮ ಭವಾ
ದಿಗಳು ತಾವರಿಯರು ಸಾಕಲ್ಯಮಂದ ಜೀ
ವಿಗಳಿಗೆ ಗೋಚರಿಸುವದೆ ನಿನ್ನ ರೂಪ
ಭಗವಂತ ನೀನೆ ದಯಾಳುವೆಂದರಿದು ನಾ
ಪೊಗಳಿದೆನೋ ಯಥಾಮತಿಯೊಳಗೆ ಲೇಶ
ಬಗೆಯದಿರೆನ್ನಪರಾಧ ಕೋಟಿಗಳ
ಜಗತೀಪತಿ ತನ್ನ ಮಗುವಿನ ತೊದಲು ಮಾ
ತುಗಳನೆ ಕೇಳಿ ತಾ ನಗುತ ಕಾಮಿತ ಬಗೆ
ಬಗೆಯಿಂದ ಪೂರ್ತಿಸಿ ಮಿಗೆ ಹರುಷದಿಂದ
ಬಿಗಿದಪ್ಪಿ ಮೋದಿಪನಲ್ಲದೆ ಶಿಶುವಿನ

ತೆಗೆದು ಬಿಸುಟು ಮತ್ತೆ ಹಗೆ ಗೊಂಬನೇನೋ ತ್ರಿ
ಯುಗನೆ ಬಿಡದೆ ಪಾಡಿ ಪೊಗಳುವ ದಾಸಗೀ
ಬಗೆ ಬಡತನವೇಕೆ ಸಂಸಾರದೊಳಗೆ ನಾ
ಲ್ಮೊಗನಯ್ಯ ಅರ್ಥ ಕಾಮುಗಳೊಳಗಿಪ್ಪ ಈ
ರ್ವಗೆ ರೂಪ ಒಂದಾಗೆ ಆವದಸಾಧ್ಯವೊ
ಗಗನ ಭೂ ಪಾತಾಳ ವ್ಯಾಪ್ತ ರೂಪಗೆ ಕರ
ಮುಗಿವೆ ಗೋಚರಿಸೆಮ್ಮ ದೃಗುಯುಗಗಳಿಗಿಂದು
ಯುಗವರ್ತ ಶ್ರೀ ಜಗನ್ನಾಥವಿಠಲ ನರ
ಮೃಗನಾಗಿ ಕಂಭದಿಂದೊಗೆದು ಬಂದೊದಗಿದೆ ||೬||

ಆದಿತಾಳ.

ಶ್ರೀ ನಿಧಿ ಪ್ರತಿ ದೇಹಂಗಳಲ್ಲಿ ಗತಿ
ನೀನಲ್ಲದೆ ಎಮಗಾರಿಹಪರದಲ್ಲಿ
ಆ ನಳಿನಭವ ಭವಾದ್ಯನಿಮಿಷರ ನಿ
ಜಾನಂದವರಿತು ಫಲಗಳ ಕೊಡುವೆ ಮ
ಹಾನುಭಾವ ಎಮ್ಮಭಿಮತ ಸಲಿಸುವ
ದೇಚ್ಛರಿ ನಿನ್ನರಸಿ ಲಕುಮಿ ಕಡೆ
ಗಾಣಳು ಪರಮೈಶ್ವರ್ಯದ ಪ್ರಾಂತ ಚಿ
ದಾನಂಡಮಯನೆ ಪ್ರಣತರ ಅಧಿಕಾ
ರಾನುಸಾರ ನಡೆಸುವ ಮುಖ್ಯ
ಪ್ರಾಣಪತಿಗೆ ನೂತನ ವಿಜ್ಞಾಪನ
ವೇನುಂಟೆನ್ನನುದಿನದಲಿ ಮಾಳ್ಪುದು
ಮಾನದ ಗುರು ಜಗನ್ನಾಥವಿಠಲ ಕರು
ಣಾನಿಧಿ ಸರ್ವದ ಸುಲಭ ನೀನಲ್ಲವೆ ||೭||

ಜತೆ

ಚಟುಲ ಕಾರ್ಯಗಳ ಸಂ। ಘಟನೆ ಮಾಡುವೆಯೊ ನಿ।
ಷ್ಕುಟಿಲ ಜಗನ್ನಾಥ। ವಿಠಲ ದೇವೋತ್ತಮ ||೮||

ದಾಸರ ಉತ್ತರಯಾತ್ರೆಯು ಹತ್ತು ಹನ್ನೆರಡು ವರ್ಷಕಾಲ ಹಿಡಿಯಿತು. ಶಾಸ್ತ್ರಪಾಂಡಿತ್ಯವೊಂದು ಕಡೆ, ಕೀರ್ತನ ವೈಖರಿಯೊಂದು ಕಡೆ, ಸೇರಿ ಉತ್ತರ ಭಾರತದಲ್ಲಿ ದಾಸರ ಖ್ಯಾತಿಯು ಬಹಳ ಪ್ರಶಂಸೆಗೆ ಬಂದಿತು. ವಿದ್ವತ್ಕೇಂದ್ರಗಳಲ್ಲಿ ಗೀರ್ವಾಣಭಾಷೆಯಲ್ಲಿ ಕೀರ್ತನಮಾಡುತ್ತಿದ್ದುದರಿಂದ ದಾಸರ ಭಾಗವತಧರ್ಮ ಪ್ರಚಾರಕ್ಕೆ ಅಲ್ಲಿ ಸಹ ಹೆಚ್ಚಿನ ಅವಕಾಶ ದೊರೆಯಿತು.

ದಾಸರು ಸಕಲ ಯಾತ್ರೆಗಳನ್ನು ಮಾಡಿ ಉತ್ತರದಿಂದ ದಕ್ಷಿಣಕ್ಕೆ ಬರುತ್ತಾ, ಗದ್ವಾಲ ಮಹಾರಾಜನ ಪ್ರಾರ್ಥನೆಯಂತೆ ಅಲ್ಲಿ ಕೆಲವು ಕಾಲ ವಾಸಮಾಡಿದರು. ಸುರಪುರದಲ್ಲಿ ತಮ್ಮ ಶಿಷ್ಯ ಹೇಗಿರುವನೋ ತಿಳಿಯಬೇಕೆಂದು ತಮ್ಮ ಆಗಮನ ವಾರ್ತೆಯನ್ನವನಿಗೆ ಹೇಳಿಕಳುಹಿಸಿದರು. ದಿವಾನಗಿರಿಯನ್ನು ಮಾಡುತ್ತಿದ್ದ ಗೃಹಸ್ಥನು ಅದುವರಿಗೆ ತಾನು ಆರ್ಜಿಸಿದ್ದ ಧನ ಸಹಿತ ಪತ್ನೀ ಪುತ್ರರನ್ನೂ ಕರೆದುಕೊಂಡು ದಾಸರ ದರ್ಶನಕ್ಕೆ ಬಂದನು. ಚರಣಾನುಗ್ರಹದಿಂದ ದೊರೆತ ಸರ್ವಸ್ವವನ್ನೂ ಸ್ವೀಕರಿಸಬೇಕೆಂದು ನಮಸ್ಕಾರಮಾಡಿದನು. ದಾಸರು ನಗುತ್ತಾ—'ರಾಯ! ನಿನ್ನ ದೇಶಾವಾರ ಆಗಲೇ ನಮಗೆ ಮುಟ್ಟಿದೆ. ಎಲ್ಲವನ್ನೂ ಇಟ್ಟುಕೊಂಡು ಪುತ್ರಪೌತ್ರ ಪರಂಪರೆಯಾಗಿ ನೀನು ಬಾಳು' ಎಂದು ಆಶೀರ್ವಾದ ಮಾಡಿದರು.* ಗೃಹಸ್ಥನು ಬಿಡದೆ ದಾಸರನ್ನು ಸುರಪುರಕ್ಕೆ ಕರೆದುಕೊಂಡು ಹೋದನು. ಪೂರ್ವಪರಿಚಿತನಾದ ಸುರಪುರದ ರಾಜನು ಆ ಸಮಯದಲ್ಲಿ ದಾಸರಿಗೆ ಆ ಕಾಲದ ೮೦೦ ವರಹ ಉತ್ಪತ್ತಿಯ ಗ್ರಾಮಗಳನ್ನು ಜಹಗೀರು ಕೊಟ್ಟನು. ದಾಸರು ಅವುಗಳನ್ನು ತಮ್ಮ ಪುರೋಹಿತ ವಂಶದವರಿಗೆ ಕಾಲಾಂತರದಲ್ಲಿ ದಾನಮಾಡಿದರು.

ದಾಸರು ಬಹುಕಾಲ ದೇಶಸಂಚಾರದಲ್ಲಿದ್ದುದರಿಂದಲೂ, ದೇಶದಲ್ಲಿ ರಾಜಕೀಯ ಪರಿಪ್ಲವಗಳು ಹೆಚ್ಚಿ ಯುದ್ಧ ಪ್ರಸಕ್ತಿಯಿದ್ದುದರಿಂದಲೂ, ಸ್ವಸ್ಥಳವಾದ ಮಾನವಿಯಲ್ಲಿ ಕೆಲವು ಕಾಲ ವಾಸಮಾಡಿದರು. ಈ ಕಾಲದಲ್ಲಿ

* ಈ ವಂಶದವರು ಈಗಲೂ ಕಲ್ಬುರ್ಗೀ ಜಿಲ್ಲೆಯಲ್ಲಿದ್ದಾರೆ.

ವರಿಗೆ ಪುತ್ರಶೋಕ ಪ್ರಾಪ್ತವಾದದ್ದು ಮಾತ್ರವಲ್ಲದೆ, ಇದ್ದ ಒಬ್ಬ ಮಗಳಿಗೂ ಮನೆ ತಪ್ಪಿತು. ಆಕೆಯು ತೌರುಮನೆಯನ್ನು ಸೇರಬೇಕಾಯಿತು. ಮಗಳ ಮನಶ್ಶಾಂತಿಗಾಗಿ ದಾಸರು ತತ್ವಸುವಾಲಿಯೆಂಬ ಸುಮಾರು ೬೦೦ ನುಡಿಗಳ ಗ್ರಂಥವನ್ನು ರಚಿಸಿ, ನಿತ್ಯಭಜನೆಗನುಕೂಲ ಮಾಡಿಕೊಟ್ಟರು. ಅಷ್ಟರಿಂದ ಆಕೆಯ ಭಕ್ತಿಯು ಬಲಿತು ಮಹಾ ಜ್ಞಾನಿಯೆನಿಸಿದಳು.

ತತ್ವಸುವಾಲಿಯ ಪದಗಳು ಎಷ್ಟು ಸರಳ ಮತ್ತು ಎಷ್ಟು ಮನಸ್ಸು ಕರಗುವಂತಿವೆಯೆಂಬುದಕ್ಕೆ ಕೆಲವು ಮಾದರಿಗಳನ್ನು ಕೆಳಗೆ ಉದಹರಿಸಿದೆ.

## ಸುವಾಲಿ

ಪತಿತನಾನಾದರೂ ಪತಿತಪಾವನ ನೀನು
ರತಿನಾಥಜನಕ ನಗಪಾಣಿ
ನಗಪಾಣಿ ನೀನಿರಲು ಇತರ ಚಿಂತ್ಯಾಕೋ ಎನಗಿನ್ನು ||೧೦||

ನಡೆನುಡಿಗಳಪರಾಧ ಒಡೆಯ ನೀನೆಣಿಸಿದರೆ
ಬಡವ ನಾನೆಂತೂ ಬದುಕಾಲೊ
ಬದುಕಲೋ ಕರುಣಾಳು ಕಡೆಬೀಳ್ವದೆಂತೋ ಭವದಿಂದ ||೧೧||

ಏಸೇಸು ಕಲ್ಪದಲಿ ದಾಸನಾ ನಿನಗಯ್ಯ
ಈಶನೀನೆಂಬ ನುಡಿ ಸಿದ್ಧ
ನುಡಿಸಿದ್ಧವಾಗಿರಲುದಾಸೀನ ಮಾಡಾಲುಚಿತಲ್ಲ ||೧೨||

ಆವ ಯೋನಿಯೊಳಿರಿಸು ಆವ ಲೋಕದೊಳಿರಿಸು
ಆವಾಗ ನಿನ್ನ ನೆನೆವಂತೆ
ನೆನೆವಂತೆ ಕರುಣಿಸೋ ದೇವಕೀಕಂದ ದಯದಿಂದ ||೧೩||

ಶಿಷ್ಟನೆಂದೆನಿಸೆನ್ನ ಭ್ರಷ್ಟನೆಂದೆನಿಸು ಸ
ರ್ವೇಷ್ಟಮೂರುತಿಯೆ ಜನರಿಂದ
ಜನರಿಂದ ನುಡಿಸಿದ್ದು ಇಷ್ಟವೇಕಾಣೋ ಎನಗಿನ್ನು ||೧೪||

ಶರಣಪಾಲಕನೆಂಬ ಬಿರಿದಿದ್ದ ಕಾರಣ
ಪೊರೆಯದಿರೆ ಎನ್ನನಗರೇನೋ
ನಗರೇನೊ ಮೂಲೋಕದರಸನಾ ನಿನ್ನ ಬಿಡೆಕಂಡ್ಯ ||೧೫||

ಪಾಪ ಪುಣ್ಯಗಳ ಅರ್ಥವನ್ನು ಯುಕ್ತಿಯುಕ್ತವಾಗಿ ವಿವರಿಸಿರುವ ನುಡಿಯನ್ನು ಓದಿದರೆ ದಾಸರ ಮನಸ್ಸು ಗೊತ್ತಾಗುತ್ತದೆ.

ಪಾಪ ಪುಣ್ಯಗಳು ಬರಲಾಪವೇ ನಿನ್ನುಳಿದು
ಪ್ರಾಪಕನು ನೀನು ಇರಲಾಗಿ
ಇರಲಾಗಿ ತಿಳಿಯದುದೆ ಪಾಪ ತಿಳಿಯುವದೇ ಮಹಾಪುಣ್ಯ

ದಾಸರ ಈ ಮಾತಿನಿಂದ ಗ್ರೀಸ್ ತತ್ವಜ್ಞಾನಿಯಾದ ಸಾಕ್ರೆಟೀಸನ "Knowledge is virtue, ignornce is vice" ಎಂಬ ಮಾತಿನ ನೆನಪಾಗುತ್ತದೆ. ದಾಸರಂತು ಇಂಗ್ಲೀಷು ಓದಿದವರಲ್ಲ; ಅವರ ಕಾಲದಲ್ಲಿ ಇಂಗ್ಲೀಷು ಶಾಲೆಗಳಿರಲಿಲ್ಲ. ಸಾಕ್ರೆಟೀಸನು ಹೀಗೆ ಹೇಳಿರುವನೆಂದು ತಿಳಿಸುವರೂ ಅವರಿಗೆ ದೊರೆತಿಲ್ಲ. ಆದರೂ ಯಾವ ದೇಶ ಯಾವ ಕಾಲ ಯಾವ ವ್ಯಕ್ತಿಗಳಲ್ಲಾಗಲಿ ಅಮರವಾದ ತತ್ವವು ಹೇಗೆ ಬುದ್ಧಿಗೋಚರವಾಗುವದೆಂಬುದನ್ನು ಇಲ್ಲಿ ನೋಡಬೇಕು.

**ವಿಧಿ ನಿಷೇಧ ಮಡಿ ಮೈಲಿಗೆಗಳನ್ನು ಕುರಿತು.**

ವಿಧಿನಿಷೇಧಗಳೆಂಬ ದಧಮಾಧಿಕಾರಿಗ।
ಲ್ಲದೆ ನಿನ್ನ ನಾಮ ಸರ್ವತ್ರ || ಸರ್ವತ್ರ ಚಿಂತಿಸುವ
ಬುಧರಿಗಿನ್ನುಂಟೇ ಜಗದೊಳು ||೩೬||

ಜಲದೊಳಗೆ ಮಿಂದು ನಿರ್ಮಲರಾದೆವೆಂದು ತ
ಮ್ಮೊಳು ತಾವೆ ಹಿಗ್ಗೀ ಸುಖಿಸುವರು || ಸುಖಿಸುವರು
ಪರಮ ಮಂಗಳ ಮೂರ್ತಿ ನಿನ್ನ ನೆನೆಯಾದೆ ||೩೭||

ಜಡಭೂತ ಜಲ ಜನರ ಮಡಿಮಾಡಲಾಯಿತೇ
ಜಡಧಿ ಮಂದಿರನ ಶುಭನಾಮ || ಶುಭನಾಮ
ಮೈಲಿಗೆಯ ಕೆಡಸಿ ಮಂಗಳವ ಕೊಡದೇನೋ ||೩೮||

ಓಡಿಹೋಗುವ ಮಡಿಯು ಮಾಡಿದಣೆಯಲಿಬೇಡ
ನೋಡು ಸರ್ವತ್ರ ಹರಿರೂಪ॥ ಹರಿರೂಪ ನೋಡಿ
ಕೊಂಡಾಡು ಮನವುಬ್ಬೀ ಸುಖಿಸುತ್ತ ॥೩೯॥

## ಚಿಂತಾತುರರಾದವರಿಗೆ ಧೈರ್ಯದ ಮಾತು

ಮನವೆ ಆಲೋಚಿಸಿಕೊ ನಿನಗಿದ್ದ ಚಿಂತೆ ನ
ಮ್ಮನಿರುದ್ಧಗಿಲ್ಲೇ ಅನುಗಾಲ॥ ಅನುಗಾಲ ಸಲಹುವ
ಬಿನುಗುಮಾನವರಾ ಬಿಡುವೋನೇ ॥೪೦॥

ಭಂಡಮನವೇ ಕೇಳು ಕಂಡಕಂಡವರಿಗಿ
ನ್ನಂಡಲೆದರೇನೂ ಪುರುಷಾರ್ಥ॥ ಪುರುಷಾರ್ಥ
ಸ್ವಾಮಿಪದ ಪುಂಡರೀಕವನೇ ನೆರೆನಂಬು ॥೪೨॥

ಅಶನವಸನಗಳೀವ ವಸುದೇವಸುತನಿರಲು
ಹುಸಿಯಾಗಿ ಬದುಕೋ ನರರೀಗೆ॥ ನರರಿಗಾಲ್ಪರಿದರೆ
ಹಸಿವಿಯಡಗುವದೇ ಎಲೆ ಜೀವಿ ॥೪೩॥

ಹಿಂದೆ ಜನ್ಮಾಂತರದಿ ತಂದು ಕೊಟ್ಟವರಾರು
ಇಂದು ಮುಂದೀವ ಧೊರೆಯಾರು॥ ಧೊರೆಯಾರು
ಎಲೆಮನವೆ ಮಂದಮತಿಯಾಗೀ ಕೆಡಬೇಡ ॥೪೪॥

## ಪೂಜಾ

ಭೂಮಂಡಲವೆ ಪೀಠ ವ್ಯೋಮಮಂಡಲ ಛತ್ರ
ಸೋಮಸೂರ್ಯರೇ ಮಹದೀಪ॥ ಮಹದೀಪ
ನಕ್ಷತ್ರಸ್ತೋಮಗಳೆ ನಿನಗೆ ಉಪದೀಪ ॥೫೬॥

ಮಳೆಯೆ ಮಜ್ಜನವು ದಿಗ್ವಲಯಗಳು ವಸನಗಳು
ಬೆಳೆವ ಬೆಳಸುಗಳೇ ನೈವೇದ್ಯ॥ ನೈವೇದ್ಯ ಜನರ
ಕಂಗಳಕಾಂತಿ ನಿನಗೇ ಆರಾರ್ತಿ ॥೫೭॥

ಭೂರುಹವ ಚಾಮರವ ಮಾಡುವೆನು ಶರಧಿ
ಘೋರ ಗರ್ಜನೆಯೇ ಮಹವಾದ್ಯ॥ ಮಹವಾದ್ಯ
ಜೀವರ ಸಾರ ಸುಸ್ವರವೇ ಸಂಗೀತ ॥೫೮॥

ಪಾತಾಳಪಾದುಕ ವಿಧಾತಲೋಕವೆ ಮುಕುಟ
ಶ್ವೇತದ್ವೀಪಗಳೇ ಒಢ್ಯಾಣ॥ ಒಢ್ಯಾಣ ವೈಕುಂಠ
ಆತಪತ್ರಗಳೇ ನಿನಗೀವೆ ॥೫೯॥

ನಡೆವುದೇ ಹರಿಯಾತ್ರೆ ನುಡಿವುದೇ ಹರಿನಾಮ
ಕುಡಿವ ನೀರುಗಳೇ ಅಭಿಷೇಕ॥ ಅಭಿಷೇಕ
ದಿನದಿನದಿ ಒಡಲಿಗುಂಬುವದೇ ನೈವೇದ್ಯ ॥೬೦॥

## ಧರ್ಮ

ತತ್ತತ್ಪದಾರ್ಥದೊಳು ತತ್ತದಾಕಾರನಾ
ಗೆತ್ತ ನೋಡಿದರೂ ಇರುತಿಪ್ಪ॥ ಇರುತಿಪ್ಪ
ಶ್ರೀಹರಿಗೆ ಭೃತ್ಯನೆಂಬುವದೇ ಬಲುಧರ್ಮ ॥೬೩॥

## ಸ್ವರ್ಗ ನರಕಗಳು

ನರಕ ಸ್ವರ್ಗಗಳೆಂಬವೆರಡು ಇಲ್ಲಿಹವು
ವಿಸ್ಮರಣೆಯೇ ನರಕ ಸ್ಮೃತಿ ಸ್ವರ್ಗ॥ ಸ್ಮೃತಿಸ್ವರ್ಗವಿರೆ
ಬಾಹ್ಯನರಕ ಭಯಕಂಜೇ ಎಂದೆಂದೂ ॥೯೪॥

## ಅಪರಾಧ

ಅಪರಾಧಿ ನಾನೆಂಬುದುಪಚಾರ ಮಾತ್ರ
ನಿನಗಪರಾಧಿಯೆಂಬೋದಿಳೆಯೋಳು॥ ಇಳೆಯೋಳು
ಇನ್ನುಂಟೆ ಅಪರಾಧಿಯೆಂಬೋದಪರಾಧ

ಇದೇ ಧಾಟಿಯಲ್ಲಿ ನವಗ್ರಹ ಸ್ತೋತ್ರ ತುಲಸೀ ಸ್ತೋತ್ರ ಶಿವ ಸ್ತೋತ್ರ ಮೊದಲಾದುವುಗಳಿವೆ. ಮಾತುಗಳು ಮನಮುಟ್ಟುವಂತೆ - ಕಣ್ಣೀರು ತರುವಂತಿವೆ.



- ೫ -

ಜಗನ್ನಾಥದಾಸರ ಕಾಲದಲ್ಲಿ ಉತ್ತರಾದಿ ಮಠದಲ್ಲಿ ಸತ್ಯಬೋಧ ತೀರ್ಥ ಶ್ರೀಪಾದಂಗಳವರು ಧರ್ಮಸಾಮ್ರಾಜ್ಯ ಪರಿಪಾಲಕರಾಗಿದ್ದರು. ಸತ್ಯಬೋಧರ ಕಾಲವೆಂದರೆ, ಶ್ರೀಮಠದ ಮಹದೈಶ್ವರ್ಯದ ಕಾಲ, ನವರತ್ನಗಳನ್ನು ಒಂಭತ್ತು ಭಂಗಾರದ ಕೊಡಗಳಲ್ಲಿ ತುಂಬಿಟ್ಟು ರಾಮಚಂದ್ರ ದೇವರಿಗೆ ರತ್ನಾಭಿಷೇಕಮಾಡುತ್ತಿದ್ದ ಕಾಲ. ತಂಜಾವೂರು, ಅನಂತಶಯನ, ಮೈಸೂರು, ಸವಣೂರು ಸಂಸ್ಥಾನಗಳಲ್ಲಿ ಮಠದ ಶಿಷ್ಯರು ದಿವಾನಗಿರಿ ಮೊದಲಾದ ಮಹಾ ಪದವಿಗಳನ್ನು ವಹಿಸಿದ್ದ ಕಾಲ. ಗಯೆಯ ಗಯಾವಾಳರಂಥಾ ಕಠಿಣಚಿತ್ತರು ದಾಸಾನುದಾಸರಾಗಿ ಶಿಷ್ಯತ್ವ ವಹಿಸಿದ ಕಾಲ. ಸತ್ಯಬೋಧರು ವ್ಯಾಸರಾಯರಂತೆ ವಿಷವನ್ನು ಅರಗಿಸಿಕೊಂಡವರು. ಅಪರರಾತ್ರಿಯಲ್ಲಿ ಸೂರ್ಯದರ್ಶನ ಮಾಡಿಸಿದವರು. ವೇದ ವಿದ್ಯಾಭಿವೃದ್ಧಿಗೆ ಲಕ್ಷಗಟ್ಟಲೆ ದ್ರವ್ಯವನ್ನು ವ್ಯಯಮಾಡಿದವರು.

ಸವಣೂರು ದಿವಾನ ಖಂಡೇರಾಯರು ಶ್ರೀಮಠದ ಶಿಷ್ಯರಾಗಿದ್ದರು. ಸವಣೂರ ನವಾಬನಂಥಾ ಪಠಾಣನು ಸ್ವಾಮಿಗಳ ಭಕ್ತನಾಗಿದ್ದನು. ಸ್ವಾಮಿಗಳು ಸಂಸ್ಥಾನ ಸಹಿತ ಸವಣೂರಲ್ಲಿರಲು ರಾಜಪ್ರಧಾನರೀರ್ವರೂ ಕಾರಣರಾಗಿದ್ದರು. ಗುರು ಮಹಾ ಸಮಾರಾಧನೆಯ ಕಾಲದಲ್ಲಿ ಶ್ರೀಗಳವರು ದೊಡ್ಡ ವಿದ್ವತ್ಸಭೆಯನ್ನು ಮಾಡಿ, ಪಂಡಿತರಾದವರಿಗೆ ವಿಶೇಷ ದ್ರವ್ಯ ದಾನಮಾಡುತ್ತಿದ್ದರು. ಜಗನ್ನಾಥದಾಸರು ಮಹಾ ಪಂಡಿತರಾಗಿದ್ದುದರ ಜೊತೆಗೆ ಹರಿದಾಸರಾಗಿ ಧರ್ಮಪ್ರಚಾರ ಮಾಡುತ್ತಿರುವ ಖ್ಯಾತಿಯನ್ನು ಕೇಳಿ, ಸ್ವಾಮಿಗಳು ಅವರನ್ನು ಪ್ರಯತ್ನಪೂರ್ವಕ ಸವಣೂರಿಗೆ ಕರೆಸಿದರು. ದಾಸರನ್ನು ಕರೆಸುವದೆಂದರೆ ಒಂದು ಸಂಸ್ಥಾನವನ್ನು ಕರೆಸಿದಂತಾಗಿತ್ತು. ಧೂಳಿ ದರ್ಶನದಲ್ಲೇ ದಾಸರು ಸ್ವಾಮಿಗಳನ್ನು:—

ಮುಖಾರಿ — ಅಟ್ಟತಾಳ

ವಾದಿವಾರಣ ಪಂಚವದನ-ಸತ್ಯ
ಬೋಧ ಸದ್ಗುರು ಜಿತಮದನ ||ಪ||

ಬಾದರಾಯಣ ರಾಮ ವೈದೇಹಿ ಚರಣಾಬ್ಜಾ
ರಾಧಕ ನಿತ್ಯಸುಮೋದವಿತ್ತು ಕಾಯೋ ||೮||

ಶ್ರೀಮಧ್ವಮತವಾರಿಧಿ ಸೋಮ| ದ್ವಿಜ|
ಸ್ತೋಮ ಸದ್ಗುಣಗಣಧಾಮ||
ಕಾಮಿತವರಕಲ್ಪ ಭೂಮಿಜ ವಿಬುಧ ಸು
ಪ್ರೇಮಿ ಸಂಯಮಿ ಕುಲೋದ್ಧಾಮ ದಯಾಸಿಧೆ||
ಗೋಮಿನೀವಲ್ಲಭನ ಪದಯುಗ
ತಾಮರಸಗಳನನುದಿನದಿ ಬಿಡ
ದೇಮನಾಬ್ಜದಿ ಭಜಿಸುತಿಪ್ಪ ಮ
ಹಾಮಹಿಮ ನಾ ತುತಿಸಬಲ್ಲೆನೆ ||೧||

ದೀನಜನರ ಬಂಧು ನಿನ್ನ| ಪದ|
ಕ್ಕಾನಮಿಸುವೆ ಸುಪ್ರಸನ್ನ||
ದಾನಮಾನಗಳಿಂದ ಜ್ಞಾನಿ ಜನರಿಗೆ ಮ
ಹಾನಂದ ಬಡಿಸುತ್ತ ಸಾನುರಾಗದಿ ನಿತ್ಯ||
ಶ್ರೀನಿಕೇತನ ಪರಮ ಕಾರು
ಣ್ಯಾ ನಿವಾಸಸ್ಥಾನವೆನಿಪ ಮ
ಹಾನುಭಾವ ಭವತ್ಪದಾಂಭೋ
ಜಾನುಗನು ಎಂದೆನ್ನ ಪಾಲಿಸು ||೨||

ಸತ್ಯಪ್ರಿಯರ ಕರಕಮಲ| ಜಾತ|
ನಿತ್ಯನಿರ್ಜಿತ ಘೋರಶಮಲ||
ಚಿತ್ತಜಪಿತ ಜಗನ್ನಾಥವಿಠಲನ
ಚಿತ್ತಾನುವರ್ತಿಗಳಾಗಿ ಸಂಚರಿಸುತ||
ಅತ್ಯಧಿಕ ಸಂತೋಷದಲಿ ಪ್ರ
ತ್ಯರ್ಥಿಗಳನುತ್ತರಿಸಿ ಮಿಗೆ ಪುರು
ಷೋತ್ತಮನೆ ಪರನೆಂದು ಡಂಗುರ
ವೆತ್ತಿ ಹೊಯ್ಸಿ ಕೃತಾರ್ಥನೆನಿಸಿದೆ ||೩||

ಎಂಬದಾಗಿ ಸ್ತೋತ್ರಮಾಡಿದರು.

ಮಹಾಸಮಾರಾಧನೆ ಮುಗಿದಮೇಲೂ ಸ್ವಾಮಿಗಳು ದಾಸರನ್ನು ಕಳುಹಿಸಲಿಲ್ಲ. ನಿರಂತರ ದಾಸರೊಡನೆ ಸ್ವಾಮಿಗಳ ಏಕಾಂತವು ಮಠದ ಪಂಡಿತರಿಗೆ ಸಹನೆಯಾಗಲಿಲ್ಲ. ಸತ್ಯಪ್ರಿಯರ ಕಾಲದಿಂದಲೂ ವಿಜಯ ದಾಸರಾದಿಯಾದ ಹರಿದಾಸರ ಯೋಗ್ಯತೆಯನ್ನು ಪರೀಕ್ಷಿಸುತ್ತಿದ್ದ ಸತ್ಯ ಬೋಧರಿಗೆ ಜಗನ್ನಾಥದಾಸರಲ್ಲಿ ಅತ್ಯಂತ ವಿಶ್ವಾಸ ಹುಟ್ಟಿತು. ಅವರು ದಾಸರಾದ ಪೂರ್ವ ಚರಿತ್ರೆಯನ್ನು ಕೇಳಿ ಪುಳುಕಿತರಾದರು. ವ್ಯಾಸರಾಯ ಮಠ ಉಡುಪೀ ಮಠಗಳಲ್ಲಿದ್ದಂತೆ, ತಮ್ಮ ಮಠದಲ್ಲೂ ಪೂಜಾಕಾಲದಲ್ಲಿ ಜಗನ್ನಾಥರಾಯರು ಮಠಕ್ಕೆ ಬಂದ ಗುರುತಿಗೋ ಎಂಬಂತೆ, ಭಾಗವತರ ಗಾನ ಪದ್ಧತಿಯನ್ನು ಆಚರಣೆಗೆ ತಂದರು. ಉತ್ತರಾದಿ ಮಠದಲ್ಲಿ ಹರಿ ದಾಸರೆಂದರೆ ಇದ್ದ ಒಂದು ಪ್ರಕಾರದ ಅನಾದರವು ಜಗನ್ನಾಥರಾಯ ರಿಂದ ನಿವಾರಣೆಯಾಯಿತು.

ಸತ್ಯಬೋಧರು ಪೂರ್ವಾಶ್ರಮದಲ್ಲಿ ಭೂವರಾಹ ಮೂರ್ತಿಯ ಉಪಾ ಸಕರಾಗಿದ್ದರು. ಅವರ ಪೂರ್ವಾಶ್ರಮದ ಹೆಸರು ರಾಮಾಚಾರ್ಯರೆಂದು. ಯತ್ಯಾಶ್ರಮಿಗಳಾಗಿ ಸಂಸ್ಥಾನ ಪಾಲಕರಾದಮೇಲೆ ಇವರ ಉಪಾಸನಾ ಕ್ರಮವು ಬದಲಾಗಬೇಕಾಯಿತು. ರಾಮಮೂರ್ತಿಯನ್ನು ಧ್ಯಾನಿಸುತ್ತಿರು ಳಿತಲೆ, ಹಿಂದೆ ಮಾಡಿದ್ದ ಉಪಾಸನೆಯ ಪ್ರಭಾವದಿಂದ ಭೂವರಾಹ ಮೂರ್ತಿಯ ದರ್ಶನವಾಗುತ್ತಿತ್ತು. ಸ್ವಾಮಿಗಳು ಇದಲ್ಲ, ರಾಮರೂಪ ದರ್ಶನವಾಗಬೇಕು, ಎಂದು ತಲೆಯನ್ನು ಅಲುಗಾಡಿಸುತ್ತಿದ್ದರು. ಪಕ್ಕ ದಲ್ಲಿದ್ದ ಜಗನ್ನಾಥದಾಸರು, ಅದೇಕೆ ? ಪೂರ್ವಾಶ್ರಮದಲ್ಲಿ ಪ್ರಸನ್ನವಾಗಿದ್ದ ರೂಪವು ಈಗ ರೂಪಾಂತರವಾಗಲಾರದು. ತಮ್ಮನ್ನು ಜಗದ್ಗುರು ಪೀಠದಲ್ಲಿ ಕೂಡಿಸಲು ಕಾರಣವಾದ ಉಪಾಸನೆಯು ಭೂವರಾಹನದು. ಶ್ರೀಗಳವರು ಶ್ರೀರಾಮನಲ್ಲಿ ಭೂವರ+ಅಹನನ್ನು ಚಿಂತಿಸಿದರಾಯಿತೆಂದರು. ಸತ್ಯ ಬೋಧರು ಕಣ್ತೆರೆದು ದಾಸರ ಕಡೆಗೆ ನೋಡಿ, ನೀವು ನಮ್ಮಲ್ಲೂ ಅಂತ ರ್ಯಾಮಿಗಳಾದಿರಾ ? ನಿಮಗೆ ನಮ್ಮ ಪೂರ್ವಾಶ್ರಮದಿಂದ ವಂದನೆಗಳೆಂದರು. ಭಗವದನುಗ್ರಹಕ್ಕೆ ಪದವಿಯೂ ಆಶ್ರಮವೂ ಹೇಗೆ ಎದುರಾದಾವು ? ಸತ್ಯಬೋಧರು ಆಶ್ರಮಕ್ಕೆ ಬಂದ ಹೊಸಪುರಿಯಲ್ಲಿ ವಿಜಯದಾಸರ ಸಮಾ ಗಮವಾಯಿತು. ಆಗ ಹರಿದಾಸರಲ್ಲೂ ಭಗವದನುಗ್ರಹವಿರುವದೆಂದು

ಗೊತ್ತಾಯಿತು. ಗೋಪಾಲದಾಸ ಸಹೋದರರು ಬಂದಾಗ ನಡೆದ ಪರೀಕ್ಷೆಯಿಂದ, ಹರಿದಾಸರು ಜ್ಞಾನಿಗಳಾಗಿರುವ ಸಂಭವವುಂಟೆಂದು ಅನುಭವಕ್ಕೆ ಬಂದಿತು. ವರ್ತಮಾನಕಾಲದಲ್ಲಿ ಜಗನ್ನಾಥದಾಸರು ಸ್ವಾಮಿಗಳೊಡನೆ ಹೆಚ್ಚು ಕಾಲವಿದ್ದುದರಿಂದ, ದಾಸರಲ್ಲಿ ಪಾಂಡಿತ್ಯವೂ ಅಪರೋಕ್ಷಜ್ಞಾನವೂ ಇರುವವೆಂದು ಗೊತ್ತಾಯಿತು.

ಜಗನ್ನಾಥದಾಸರು ಮೈಸೂರು ದೇಶದಲ್ಲಿ ಸಂಚರಿಸಬೇಕೆಂದು ಯೋಚಿಸುವ ಕಾಲಕ್ಕೆ ಸರಿಯಾಗಿ ಸವಣೂರಸಮೀಪದ ಕರ್ಜಗಿಯ ಜನರು ತಮ್ಮಲ್ಲಿಗೆ ಬರಬೇಕೆಂದು ಪ್ರಾರ್ಥಿಸಿದರು. ಕರ್ಜಗಿಯು ವರದಾತೀರದಲ್ಲಿರುವ ನಿಸರ್ಗಸುಂದರವಾದ ಒಂದು ಚಿಕ್ಕ ಊರು. ಆಗ ಆವೂರಿನಲ್ಲಿ ಘನಾಂತ ಅಧ್ಯಯನಮಾಡಿದ ಅಧ್ಯಾಪಕರೂ ಅಗ್ನಿಹೋತ್ರಿಗಳೂ ಪ್ರವಚನಾಚಾರ್ಯರುಗಳೂ ಬಹಳವಾಗಿದ್ದರು. ಇವರಿಗೆಲ್ಲಾ ಪುಣ್ಯಶ್ಲೋಕರಾದ ಖಂಡೆರಾಯರ ಆಶ್ರಯವಿತ್ತೆಂದು ಹೇಳುವ ಕಾರಣವಿಲ್ಲ. ಜಗನ್ನಾಥದಾಸರಿಗೆ ಕರ್ಜಗಿಯ ಜನರು ಅನನ್ಯಸಾಧಾರಣವಾದ ಸ್ವಾಗತ ಮಾಡಿದರು. ದಾಸಪ್ಪನೆಂಬ ಗೃಹಸ್ಥನ ಮನೆಯಲ್ಲಿ ದಾಸರ ಬಿಡಾರವಾಯಿತು.

ದಾಸಪ್ಪನು ಶಾಸ್ತ್ರವೇತ್ತನಾಗಿದ್ದರೂ ಪ್ರಾಪಂಚಿಕನಾಗಿ, ಆಚಾರಶೂನ್ಯನಾಗಿ ವೇಶ್ಯಾಲೋಲನಾಗಿದ್ದನು. ಅಂಥವನ ಮನೆಯಲ್ಲಿ ದಾಸರನ್ನಿಳಿಸಲು ಅವನ ಮನೆಯು ವಿಶಾಲವಾಗಿದ್ದುದು ಕಾರಣವಾಗಿತ್ತು. ದಾಸರು ತನ್ನ ಮನೆಗೆ ಬಂದರೂ ದಾಸಪ್ಪನು ಲಕ್ಷಿಸಲಿಲ್ಲ. ಮುಂಚಿತವಾಗಿ ಭೋಜನಮಾಡಿ ಎಂದಿನಂತೆ ವೇಶ್ಯಾಗೃಹಕ್ಕೆ ತೆರಳಿದನು. ಊರ ಜನರು ತನ್ನ ಮನೆಗೆ ದಾಸರ ಅತಿಥಿಗಳಾಗಿ ಬಂದರೂ ದಾಸಪ್ಪನು ಮನೆಗೆ ಬರಲಿಲ್ಲ. ದಾಸರಿಗೀಸಂಗತಿ ತಿಳಿಯದೇ ಹೋಗಲಿಲ್ಲ ದಾಸಪ್ಪನ ಹೆಂಡತಿ ಗುಂಡಮ್ಮನೆಂಬ ಸಾಧ್ವಿಯು ಖಿನ್ನಳಾಗಿ ಬಂದವರ ಕ್ಷೇಮಚಿಂತನೆ ಮಾಡುತ್ತಿದ್ದಳು. ದಾಸರ ರಾತ್ರಿಪೂಜಾ ಭಜನಸಿದ್ಧತೆಗಳಾದವು. ಆ ಕಾಲಕ್ಕೆ ಸರಿಯಾಗಿ ದಾಸಪ್ಪನು ತನ್ನ ಕಲ್ಲೀ ಮೀಸೆಯನ್ನು ನೇವರಿಸುತ್ತಾ, ತಾಂಬೂಲವನ್ನು ಜಗಿಯುತ್ತಾ, ತಂಬಾಕನ್ನು ಸೇವಿಸುತ್ತಾ, ಮನೆಗೆ

ಬಂದನು. ಬಂದ ಪತಿಯೊಡನೆ ಗುಂಡಮ್ಮನು, ಇದೊಂದು ದಿನವಾದರೂ ಮನೆಯಲ್ಲಿರಬಾರದೇ ಎಂದು, ಕಂಬನಿಗರೆಯುತ್ತಾ ಬೇಡಿಕೊಂಡಳು.

ದಾಸಪ್ಪನು ಯಾವ ಸಂಸ್ಕಾರ ಬಲದಿಂದಲೋ—ದೊಡ್ಡವರು ಮನೆಗೆಬಂದಿದ್ದಾರೆ. ಅದಕ್ಕೇನು ಹಾಗೆ ಆಗಲಿ. ಅವರ ಬಳಿ ಮೈಲಿಗೆಯಿಂದೇಕೆ ಕೂಡಬೇಕು? ನೀರು ಕಾಯಲಿ. ಸ್ನಾನಮಾಡಿ ಕೀರ್ತನಕ್ಕೆ ಕೂಡುತ್ತೇನೆಂದನು. ಅಲ್ಪ ಸಂತೋಷಿಯಾದ ಸಾಧ್ವಿಗೆ ಅಷ್ಟಕ್ಕೇ ಪರಮಾನಂದವಾಯಿತು. ದೊಡ್ಡವರು ಮನೆಗೆ ಬಂದದ್ದರಿಂದ ಗಂಡನಿಗೆ ಸದ್ಬುದ್ಧಿ ಬಂತೆಂದು ತಿಳಿದಳು. ನಿಮಿಷ ಮಾತ್ರದಲ್ಲಿ ಸ್ನಾನದ ಸಿದ್ಧತೆಯಾಯಿತು. ದಾಸಪ್ಪನು ಶುದ್ಧನಾಗಿ ಮಡಿಯುಟ್ಟು, ಎಂದೂ ಇಲ್ಲದ ನಾಮ ಮುದ್ರೆಗಳನ್ನು ಧರಿಸಿ, ದಾಸರೆದುರಿಗೆ ಕುಳಿತನು. ಬಂದ ಗೃಹಸ್ಥನನ್ನು ನೋಡಿ ದಾಸರ ಶಿಷ್ಯರಾದ ಪ್ರಾಣೇಶದಾಸರು,—ಗುರುಗಳೇ, ಇಂದು ನಾನು ಭಜನೆಗಾರಂಭಿಸುತ್ತೇನೆಂದರು. ಜಗನ್ನಾಥರಾಯರು ಅದಕ್ಕೇನು ಹಾಗೇ ಮಾಡೆಂದರು. ಪ್ರಾಣೇಶದಾಸರು ಪದ್ಧತಿಯಂತೆ ಯಾವ ಪದವನ್ನೂ ಹಾಡಲಿಲ್ಲ. ಕಡೆಗೆ ಪುರಂದರದಾಸರ 'ಸತತ ಗಣನಾಥ ಸಿದ್ಧಿಯನೀವ' ಎಂಬುವರ ಉಚ್ಚಾರವನ್ನೂ ಮಾಡಲಿಲ್ಲ. ದಾಸಪ್ಪನ ಕಡೆ ನಿಟ್ಟಿಸಿದ ದೃಷ್ಟಿಯಿಂದ—

ಪೂರ್ವಿ — ಆದಿತಾಳ

ಆದದ್ದಾಯ್ತಿನ್ನಾದರು ಒಳ್ಳೇ
ಹಾದಿ ಹಿಡಿಯೊ ಪ್ರಾಣೀ ||ಪ||

ಈ ದುರ್ನಡತೆಯಿಂಥ್ಹೋದರಿಹಪರದಿ
ವೋದೆಂದಿಗು ಗಾಣೀ ಪ್ರಾಣಿ ||ಅ||

ನೆಲಸತಿ ಧನದೊಳಾನವರತ
ಹುಳಾಗಿರುವೆಯಲ್ಲೋ—
ಸ್ಥಳಾಸ್ಥಳರಿಯದೆ ಕಲಾಪಮಾಡ್ಯಘ
ಕೊಳಾಗುವದು ಸಲ್ಲೋ—
ಹಲಪಿಸಿದು ವಿಧಿ ಕುಲಾಚರಣೆ ಬಿಡೆ

ಪಲಾ ತೆಗುವರಲ್ಲೋ||—
ಎಲಾ ಕೇಳು ಒಂದು ತಿಲಾಮಾತ್ರ ನೀ
ಗೆಲಾಹ ಬಗೆಯಿಲ್ಲೋ ಪ್ರಾಣೀ ||೧

ಶಿಲಾದಿವಿಗ್ರಹಥಳಾಸಿ ಹರಿಯೆಂ
ಬೈಲಾ ಕೇವಲ ಸುಳ್ಳೋ—
ಚಲಪ್ರತಿಮೆ ಪದಗಳರ್ಚಿಸದಲೆ
ಮಲಘಳಿಸಿದೆಲ್ಲೋ—
ಕಳಾ ಬಿಡದಿರೆ ಅನಿಲಾನ ಹರಿಮನೆ
ಮೊಳಾಗಿರುವದಲ್ಲೋ||
ನಳಾ ಭರತಮುಖ ಇಳಾಣ್ಮರಂದದಿ
ಭಲಾ ಎನಿಸಿಕೊಳ್ಳೋ। ಪ್ರಾಣೀ ||೨||

ಬಿಲಾಸೇರಿತಲಿ ಕೆಳಾಗಿ ತಪಿಸಲು
ಫಲಾಲೇಶತ್ತಿಲ್ಲೋ।—
ಖಳಾರಿದಿನಬಿಂದು ಜಲಾಕೊಳ್ಳೆನೆಂದು
ಛಲಾಮಾಡಲಿಲ್ಲೋ।—
ಬಲಾದರದಲಿಂತುಲಾದಿ ಸ್ನಾನ ಮೊ
ದಲಾದ ವ್ರತವೆಲ್ಲೋ||—
ಬಲಾರಿನುತ ಪ್ರಾಣೇಶವಿಠಲನ
ಬಲಾಘಳಿಸಿಕೊಳ್ಳೋ। ಪ್ರಾಣೀ ||೩||

ಎಂಬದಾಗಿ ಹಾಡಿದರು. ಜಗನ್ನಾಥದಾಸರು, -' ಇದೇನು ಯೋಗಣ್ಣ ! (ಪ್ರಾಣೇಶದಾಸರ ಹೆಸರು ಯೋಗೀಂದ್ರರಾಯರೆಂದು) ರಾಯರಮೇಲೆ ಹರಿದು ಬೀಳುತ್ತೀ ? ಗಣಪ್ಪನನ್ನೇಕೆ ಬಿಟ್ಟೆ' ಎಂದರು.

ಪ್ರಾಣೇಶದಾಸರು— ಇವತ್ತಿನ ಗಣಪತಿ ಪ್ರಾರ್ಥನೆ ಹೀಗೇ !

ಜಗನ್ನಾಥದಾಸರು—ರಾಯರಮೇಲೆ ಸಿಟ್ಟು ಬೇಡಪ್ಪಾ !

ಪ್ರಾಣೇಶದಾಸರು—ಸಿಟ್ಟೇನು ಯಥಾರ್ಥದ ಮಾತಿಗೆ ?

ದಾಸಪ್ಪ—ಹೌದು ಸ್ವಾಮಿಾ, ಅವರ ಮಾತು ಸತ್ಯ. ನನಗೆ ತಕ್ಕಂತೆ ಹೇಳಿದರು.

ಪ್ರಾಣೇಶದಾಸರು—ಹೇಳಿದಂತೆ ಮಾಡುವೆಯಾ ?

ದಾಸಪ್ಪ—ಅಪ್ಪಣೆ ಸ್ವಾಮಿಾ, ಮಾಡುವೆನು.

ಪ್ರಾಣೇಶದಾಸರು—ನಿನ್ನ ಕಲ್ಲೀವಿಾಸೆಗೇನು ಹೇಳುವೆ ?

ದಾಸಪ್ಪ—ಅದರ ಸಂಸ್ಕಾರ ನಾಳೆಯೇ ಮಾಡಿಬಿಡುವೆನು. ತಮ್ಮ ಶಿಷ್ಯ ನಾಗುವೆನು.

ಜಗನ್ನಾಥದಾಸರು—ಯೋಗಣ್ಣಾ! ನಿನ್ನ ಮಾತು ಬಲು ತೀಕ್ಷ್ಣವಾಯಿತು.

ದಾಸಪ್ಪ—ತೀಕ್ಷ್ಣವಲ್ಲ ಸ್ವಾಮಿಾ ಅವರು ಯಥಾರ್ಥವಾದಿಗಳು.

ಪ್ರಾಣೇಶದಾಸರು—ನೀನು ದಾಸನಾಗಬೇಕಾದರೆ ನಿನ್ನ ಎಲ್ಲಾ ದುರ್ಗುಣ ಗಳನ್ನೂ ಬಿಡಬೇಕು.

ದಾಸಪ್ಪ—ಬಿಡುವೆನು, ತಡವಿಲ್ಲ.

ಈ ಮಾತುಗಳನ್ನು ಕೇಳಿ ಗುಂಡಮ್ಮನು ಬಿಕ್ಕಿ ಬಿಕ್ಕಿ ಅಳಲಾರಂಭಿಸಿ ದಳು. ದೊಡ್ಡವರ ಪಾದಧೂಳಿಯಿಂದ ವಂಶಪಾವನವಾಯಿತೆಂದಳು. ಪರ ಮಾತ್ಮಾ! ಮುಂದಾದರೂ ನನ್ನ ಗಂಡನಿಗೆ ಸದ್ಬುದ್ಧಿ ಬರಲೆಂದು ಮೊರೆ ಯಿಟ್ಟಳು.

ಜಗನ್ನಾಥದಾಸರ ಕೀರ್ತನೆಗಾರಂಭವಾಯಿತು.

ಶ್ರೀರಾಗ — ಜಂಪೆತಾಳ.

ಸ್ಮರಿಸು ಸಂತತ ಹರಿಯನು ॥ ಪ ॥

ಸ್ಮರಿಸು ಸಂತತಹರಿಯ | ಕರುಣಾಳುಗಳ ಧೊರೆಯ |
ಸರಸಿಯೊಳಗಂದು ಕರಿಯ | ನರನ ಸಂಗರದೊಳಗೆ
ಕಾಯ್ದನರಿಯ | ಜಪಹೋಮ ತಪದಾನಗಳಿಗೆ ದೊರೆಯ |
ಜಗದೀಶ | ಶರಣುಹೊಕ್ಕವರ ಮರೆಯ | ಧೊರೆಯ ॥ ಅ ॥

ಎಂಬ ಪದವು ದಾಸರ ಹೀರಿಕೆಯಾಯಿತು. ಸಕಲ ಶಾಸ್ತ್ರಸಾರಭೂತವಾದ ಈ ಪದವ ಒಂದೊಂದು ಮಾತನ್ನೂ ವಿಸ್ತರಿಸುತ್ತಾ—

ತಾನೆ ಇಹಪರಸೌಖ್ಯ। ದಾನಿಗಳರಸನೆಂದು
ಸಾನುರಾಗದಿ ನಂಬಿದ । ಜನಕೆ ಸುರಧೇನು
ವಂದದಲಿ ಮೋದ। ಸಲಿಸುವ । ಮಹಾನಂದ
ಪೂರ್ಣಬೋಧ। ಪತಿಸಾಮ । ಗಾನಲೋಲ
ನಪ್ರಸಾದ । ಪಾದ ॥ ೧ ॥

ಅಣುವಿನೊಳಗಣುವಹನು । ಘನಕೆಘನ
ತಮನಹನು । ಅಣುಮಹದ್ವಯ ಲಕ್ಷಣ ।
ಕಲ್ಯಾಣಗುಣಜ್ಞಾನ ಘನಲಕ್ಷಣ । ಸಂಪೂರ್ಣ
ಮನಮುಟ್ಟಿ ಕರೆಯೆಕ್ಷಣ । ಬಂದೊದಗಿ
ಕುಣಿವಲಕ್ಷ್ಮೀವಕ್ಷನ । ಅನಪೇಕ್ಷನ ॥ ೨ ॥

ನೋಡಿ ನೋಡಿಸುತಿಹನು । ಬೇಡಿ ಬೇಡಿಸು
ತಿಹನು । ನೀಡಿ ನೀಡಿಸುವ ಪಿಡಿವ । ಪಿಡಿಸುವನು
ಮಾಡಿ ಮಾಡಿಸುವ ಬಡವ । ರೊಡೆಯ ಕೊಂ
ಡಾಡುವರ ಒಡನಾಡುವ । ಈ ಮಹಿಮೆ ।
ಗೀಡೆಂದು ಅವನುಡಿವ । ಕೆಡುವ ॥ ೩ ॥

ಚಲುವರೊಳಗತಿ ಚಲುವ । ಸುಲಭರೊಳ
ಗತಿಸುಲಭ । ಒಲಿವ ಮನಬಂದತೆರದಿ । ಗುಣ
ಕರ್ಮಕುಲಶೀಲವೆಣಿಸಮನದಿ । ಭಕುತಿಯಲಿ
ಫಲವಕೊಡೆ ತಾ ತವಕದಿ । ಶಬರಿಯುಂಜಲ
ನುಂಡ ಕರುಣಶರಧೀ । ಭರದೀ ॥ ೪ ॥

ಎಲ್ಲೆಲ್ಲಿ ನೋಡೆ ಮ । ತ್ತಲ್ಲಲ್ಲಿ ನೆಲೆಸಿಹನು । ಬಲ್ಲಿದನು
ಭಾಗ್ಯವಂತ । ನಂಬಿದರಿಗಲ್ಲದೇ ಒಲಿಯುಭ್ರಾಂತ ।
ದುಷ್ಟಜನರೊಲ್ಲ ನಿಶ್ಚಯಮಹಾಂತ । ರೊಡೆಯ
ಕೈವಲ್ಯದಾಯಕನು ಇಂಥಾ । ಪಂಥಾ ॥ ೫ ॥

ಪ್ರಾದೇಶಮಾತ್ರಸ್ಥಿತ । ಭೂದೇವಿಯರಸ
ಕಾಕೋದರಾದ್ಯಮರವ್ರಾತ । ಮಹದಾದಿದೇವ
ಅತ್ಯಂತಭೂತ । ದೊಳು ನೆಲೆಸಿ ಕಾದುಕೊಂಡಿಹ
ವಿಧಾತ । ಅಂಡತ್ರಿದಶಾಧಿಪನ ಸುತನಸೂತ ಚರಿತ ॥ ೬ ॥

ಸ್ವಗತ ಭೇದವಿಶೂನ್ಯ । ನಿಗಮಸಂಚಾರಶ್ರೀ
ಜಗನ್ನಾಥವಿಠಲರೇಯ । ತನ್ನ ಪದ । ಯುಗಳ
ನಂಬಿದರೆನೋಯ । ಗೊಡದಂತೆ ಹಗಲಿರುಳು
ಕಾಯ್ವಮಾಯಾ । ಧವನು ನಮ್ಮಗಲಿ ಸೈರಿಸನು
ಜೀಯಾ । ಧ್ಯೇಯಾ ॥ ೭ ॥

ಎಂಬ ನುಡಿಗಳನ್ನು ಹಾಡಿ ಅರ್ಥಾನುವಾದವಮಾಡಿದರು. ಅದು ಜನರ ಭಕ್ತಿಯನ್ನು ಹೆಚ್ಚಿಸಿತು. ಕಂಗಳಿಂದ ನೀರನ್ನು ತರಿಸಿತು. ದಾಸರು ಸ್ತಬ್ಧರಾದರು. ಶಿಷ್ಯರು ಸ್ತಬ್ಧರಾದರು. ಕೇಳಿದವರು ಸ್ತಬ್ಧರಾದರು. ಪ್ರಪಂಚವೇ ಸ್ತಬ್ಧವಾದಂತಾಯಿತು. ದಾಸಪ್ಪನ ವೃತ್ತಿಯು ಅವರ್ಣನೀಯವಾಯಿತು. ದಾಸರು ತನ್ನ ಉದ್ಧಾರಕ್ಕೆ ಬಂದರೆಂದರಿತನು. ಧಾರೆಯಾಗಿ ಬರುವ ಕಂಬನಿಯ ಕಣಗಳನ್ನು ಕಿರುಬೆರಳಿನಿಂದ ಮಿಡಿಯುತ್ತಾ ಸ್ಥಾಣುವಿನಂತಾದನು.

ಗುಂಡಮ್ಮನಾದರೋ — ಗಂಡನನ್ನು ನೋಡುವಳು. ದಾಸರನ್ನು ನೋಡುವಳು, ದೇವರನ್ನು ನೋಡುವಳು. ಭಕ್ತಿಪರವಶಳಾಗಿ ಅಳುವಳು. ಈ ರೀತಿ ರಾತ್ರಿಕಳೆಯಿತು. ಕೀರ್ತನವಾಯಿತು. ಎಲ್ಲಿದ್ದವರೂ ತಮ್ಮ ಗೃಹಗಳನ್ನು ಕುರಿತು ತೆರಳಿದರು. ದಾಸರು ವಿಶ್ರಮಿಸಿಕೊಂಡರು.

ದಾಸಪ್ಪನು ಹೆಂಡತಿಯನ್ನು ಕುರಿತು—ನೋಡು! ನಾಳೆ ನಾನು ಹರಿದಾಸನಾಗಿ ಬಿಡುವೆನು. ನನಗೆ ನೀನೇ ಗುರುವಾದೆಯಲ್ಲವೆ? ನಿನ್ನ ಮಾತೇ ನಾನು ದಾಸರ ಕೀರ್ತನ ಕೇಳಲು ಕಾರಣವಾಯಿತಲ್ಲವೆ? ನಿನ್ನ ನೋಟವೇ! ಆ 'ಇದೊಂದು ದಿನವಾದರೂ ಮನೆಯಲ್ಲಿರಬಾರದೇ' ಎಂದು ಕಂಬನಿದುಂಬಿ ನೋಡಿದ ನೋಟವೇ ನನಗೆ ಮಾಟವಾಯಿತಲ್ಲವೆ? ನೀನು ಪುಣ್ಯಾತ್ಮಳು; ನಾನು ಪಾಪಾತ್ಮನು. ನೀನು ಪತಿವ್ರತೆಯು; ನಾನು ನಿನ್ನ ಪ್ರೇಮದ್ರೋ

ಹಿಯು. ನಿನ್ನಿಂದ ನನ್ನ ಮನೆಗೆ ಕೀರ್ತಿ ಬಂದಿತು. ನನ್ನಿಂದ ನನ್ನ ಮನೆಗೆ ಅಪವಾದ ಬಂದಿತು. ನಿಜವಾಗಿ ನೀನು ನನ್ನನ್ನು ಕ್ಷಮಿಸುವೆಯಾ? ಎಂದು ಹೆಂಡತಿಯ ಗಲ್ಲವನ್ನು ಹಿಡಿದು, ಕರವಸ್ತ್ರದಿಂದ ಕಣ್ಣೀರೊರಸಿಕೊಳ್ಳುತ್ತಾ ಪ್ರಶ್ನೆಮಾಡಿದನು. ಗುಂಡಮ್ಮನಿಗೆ ಅದೊಂದು ಅಳುವ ದಿನವಾಗಿ ಬಿಟ್ಟಿತು. ಗಂಡನ ಭುಜದಮೇಲೆ ತಲೆಯಿಟ್ಟು

ಗುಂಡಮ್ಮ—ನೀವು ಹೀಗೆನ್ನಬಾರದು. ನನ್ನನ್ನು ಕ್ಷಮೆಬೇಡಬಾರದು. ನೀವು ನನ್ನ ಗುರುವು. ನನ್ನ ಸರ್ವಸ್ವವು.

ದಾಸಪ್ಪ—ಈ ಸದ್ಗುಣದ ಮಾತಿಗೇ ನಾನು ನಿನ್ನನ್ನು ಗುರುವೆನ್ನುವದು. ನಿಜವಾಗಿ ನನ್ನನ್ನು ಕ್ಷಮಿಸಿರುವೆಯಾ?

ಗುಂಡಮ್ಮ—ರಾಮರಾಮ! ಕೇಳಬಾರದ ಮಾತು! ನಿದ್ರೆಗೆಟ್ಟರೆ ನಿಮ್ಮ ಮೈಗಾಗುವದಿಲ್ಲ; ಸ್ವಲ್ಪಹೊತ್ತು ವಿಶ್ರಮಿಸಿಕೊಳ್ಳಿರಿ.

ಗುಂಡಮ್ಮನು ಗಂಡನಿಗೆ ಹಾಸಿಗೆಯನ್ನು ಸಿದ್ಧಪಡಿಸಿದಳು. ಎದುರಿಗಿದ್ದರೆ ಗಂಡನು ಮತ್ತೆ ಮರಗುವನೆಂದು ಕಣ್ಮರೆಯಾದಳು. ದಾಸಪ್ಪನು—ಏನು ಮಾತಾಡಿದರು ದಾಸರು! 'ಆದದ್ದಾಯ್ತಿನ್ನಾದರು ಒಳ್ಳೇ ಹಾದಿ ಹಿಡಿಯೊ ಪ್ರಾಣಿ!' ಎಂಥಾ ಹಿತೋಪದೇಶವಿದು? ಎಲ್ಲಿಂದ ಬಂದರೀ ಸದ್ಗುರುಗಳು?, ಎನ್ನುತ್ತಾ, ತನ್ನ ತಪ್ಪುಗಳೊಂದೊಂದನ್ನೂ ನೆನೆಸಿಕೊಳ್ಳುತ್ತಾ, ಹೆಂಡತಿಯ ಶಾಂತಿಗುಣವನ್ನು ಮೆಚ್ಚಿಕೊಳ್ಳುತ್ತಾ, ಸ್ವಲ್ಪ ಹೊತ್ತು ಹೊರಳಾಡಿದನು. ಹೆಂಡತಿಯು ಸುಪ್ರಭಾತದ ಉದಯರಾಗವನ್ನು ಹಾಡುತ್ತಾ ಮನೆಗೆಲಸಮಾಡುತ್ತಿರುವದು ಕಾಣಿಸಿತು. ಬೆಳಗಾಗುತ್ತಿರುವದನ್ನು ಕಂಡು ಹಾಸಿಗೆಯಿಂದೆದ್ದು ಕುಳಿತನು. ನಾಪಿತನನ್ನು ಕರೆಸಿ ದೀಕ್ಷಾವಿಸರ್ಜನೆಮಾಡಿಸಿಕೊಂಡನು. ತನ್ನ ವೇಶ್ಯೆಗೆ ಕಡೆಯ ಮಾತನ್ನು ಹೇಳಿದನು. ನಿನಗೆ ಬೇಕಾದುದನ್ನು ಬೇಡೆಂದನು. ಆ ಗುಣವಂತೆಯು ತಾವೇ ಪರಗತಿಯ ಮಾರ್ಗವನ್ನು ಕಾಣುವಿರಾದರೆ ತಮ್ಮ ಕೈಹಿಡಿದ ನನ್ನ ಗತಿಯೇ ಸಾಗಬೇಕೆಂದಳು. ನನಗೂ ಸದ್ಗುರುಗಳನ್ನು ತೋರಿಸಿರೆಂದಳು. ಗುರುಗಳ ಕೀರ್ತನಕೇಳಿ ನಾನೂ ನಿಜವಾದ ದೇವದಾಸಿಯಾಗುವೆನೆಂದಳು. ಇನ್ನು

ಮುಂದೆ ಪಾಪಕೃತ್ಯದಿಂದ ಜನ್ಮವನ್ನು ಅಪವಿತ್ರಗೊಳಿಸುವ ಪಾಪಿ ನಾನಲ್ಲವೆಂದಳು.

ದಾಸಪ್ಪನು ಸ್ನಾನಮಾಡಿ ನೂತನ ಯಜ್ಞೋಪವೀತವನ್ನು ಧರಿಸಿ ಮಂತ್ರೋಪದೇಶಕ್ಕೆ ಸಿದ್ಧನಾಗಿ ಕುಳಿತನು. ವೇಶ್ಯೆಯು ಮುತ್ತೈದೆಯರಿಗೆ ಮರದ ಬಾಗಿನ ಕೊಡುವೆನೆಂದು ಸಿದ್ಧತೆ ಮಾಡಿಕೊಂಡಳು. ದಾಸಪ್ಪನ ಮನೆಯು ತಳಿರುತೋರಣಗಳಿಂದಲಂಕೃತವಾಯಿತು.

ದಾಸಪ್ಪನ ಮುಖವನ್ನು ನೋಡಿದ ಜನರು ಕಂಡವರಿಗೆಲ್ಲಾ ಕಲ್ಲೀ ವಿಲಾಸೆಯ ಕಥೆಯನ್ನು ಕಥನಮಾಡತೊಡಗಿದರು.

ಜಗನ್ನಾಥದಾಸರು ಬಗಲುಬಂದನ್ನು ತೊಟ್ಟುಕೊಂಡು ಲಪ್ಪಾಟಿಯನ್ನು ಸುತ್ತಿಕೊಂಡು, ಬುಟ್ಟಿಯು ತುಂಬ ತುಲಸಿಪುಷ್ಪಗಳನ್ನು ತೆಗೆದುಕೊಂಡು, ಶಿಷ್ಯರ ಸಹಿತ ಮನೆಗೆ ಬಂದರು. ಪ್ರಾಣೇಶದಾಸರು ದಾಸಪ್ಪನ ಮುಖವನ್ನು ಬಿರಿಬಿರಿ ನೋಡಿದರು. ಜಗನ್ನಾಥದಾಸರು—ಏನು ಹತವಾದಿ ಗೃಹಸ್ಥನೆಂದರು. ಹತವಾದಿಯೇನು? ಹೇಗಾಗಬೇಕೋ ಹಾಗಾದನೆಂದು ಪ್ರಾಣೇಶದಾಸರು ನುಡಿದರು. ದಾಸಪ್ಪನಿಗೆ ಪ್ರಾಣೇಶದಾಸರ ಮಾತು ಬಲು ಆಪ್ಯಾಯನವಾಯಿತು.

ಜಗನ್ನಾಥದಾಸರು ತುಳಸೀದಳಗಳನ್ನು ಆರಿಸಿಟ್ಟು, ಸ್ನಾನಮಾಡಿದರು. ಗುರುಗಳನ್ನನುಸರಿಸಿ ಸರ್ವರ ಸ್ನಾನಾಹ್ನಿಕಗಳಾದವು. ದಾಸರು ದಾಸಪ್ಪನನ್ನು ಕರೆದು "ಶ್ರೀದವಿಠಲ" ಮುದ್ರಿಕೆಯನ್ನು ಮಂತ್ರೋಪದೇಶಪೂರ್ವಕ ಅನುಗ್ರಹಿಸಿದರು. ದಾಸಪ್ಪನ ದಾಸತ್ವವು ಮದುವೆಮನೆಯುತ್ಸವದಂತಾಯಿತು. ಆ ದಿನದ ಭಜನ ಕೀರ್ತನಗಳು ಅಭೂತಪೂರ್ವಗಳಾದವು. ದಾಸಪ್ಪನ ಹೆಸರು ಕರ್ಜಗೀ ದಾಸರೆಂದು ಪ್ರಖ್ಯಾತವಾಯಿತು. ಕರ್ಜಗೀದಾಸರಾಯರು ಸ್ವಲ್ಪಕಾಲದಲ್ಲಿ ಗುರುಗಳಿಗೆ ತಕ್ಕ ಶಿಷ್ಯರೆನಿಸಿ ಅಪರೋಕ್ಷಜ್ಞಾನಿಗಳ ಪಙ್ಕ್ತಿಯಲ್ಲಿ ಕುಳಿತರು.



- ೬ -

# ಜಗನ್ನಾಥದಾಸರು ಮತ್ತು ಮೈಸೂರು.

ದಾಸರು ಹರಿಹರೇಶ್ವರನ ಮೇಲೆ ಮಾಡಿರುವ ಸ್ತೋತ್ರದಿಂದ ಅವರು ಹರಿಹರದ ಮಾರ್ಗವಾಗಿ ಮೈಸೂರು ಸೀಮೆಯನ್ನು ಪ್ರವೇಶಿಸಿರಬೇಕೆಂದು ಕಾಣುತ್ತದೆ. ಆ ಕಾಲದಲ್ಲಿ ಟಿಪ್ಪೂಸುಲ್ತಾನನು ಮೈಸೂರರಸರನ್ನು ಮೂಲೆಗೆ ಕೂಡಿಸಿ ರಾಜ್ಯವಾಳುತ್ತಿದ್ದನು. ಅಧಿಕಾರಿಗಳ ರಹದಾರಿಯಿಲ್ಲದೆ ಪ್ರವಾಸಿಗಳು ಮೈಸೂರು ರಾಜ್ಯವನ್ನು ಪ್ರವೇಶಿಸಲು ಅಪ್ಪಣೆಯಿರಲಿಲ್ಲ. ಫೌಜದಾರ ವೆಂಕಟಸುಬ್ಬಯ್ಯನೆಂಬ ಶ್ರೀರಂಗಪಟ್ಟಣದಲ್ಲಿದ್ದ ಅಧಿಕಾರಿಯ ಸಹಾಯದಿಂದ ದಾಸರ ಸಂಚಾರವು ಸುಗಮವಾಯಿತು. ಮಾಡುವದೇನು? ಒಂದು ಕಡೆ ಹೈದರಾಬಾದಿನ ಹಜರತ್ತರು, ಒಂದು ಕಡೆ ಆದವಾನಿಯ ಖಾನರು, ಒಂದು ಕಡೆ ಸವಣೂರಿನ ಪಠಾಣರು, ಒಂದು ಕಡೆ ಮೈಸೂರು ಸುಲ್ತಾನರು, ಹೀಗೆ ಕರ್ನಾಟಕದ ಚತುರ್ದಿಕ್ಕುಗಳೂ ಮುಸಲ್ಮಾನರ ಅಂಕೆಯಲ್ಲಿದ್ದವು. ಇವರಿವರ ಪರಸ್ಪರ ವೈರ, ಇವರ ಮೇಲೆ ಮರಾಟಿಗರ ವೈರ, ಇವರೆಲ್ಲರ ಮೇಲೆ ಸರ್ವಭಕ್ಷಕರಾದ ಬ್ರಿಟಿಷರ ಸವಾರಿ ! ಇಂಥಾ ಪರಿಸ್ಥಿತಿಯಲ್ಲೂ ದಾಸರ ತೀರ್ಥಾಟನೆಯಾಗಬೇಕು; ಧರ್ಮಪ್ರಚಾರವಾಗಬೇಕು; ಗ್ರಂಥರಚನೆಯಾಗಬೇಕು.

ದಾಸರು ಬೇಲೂರು ಮೇಲುಕೋಟೆ ಮೊದಲಾದ ಕ್ಷೇತ್ರಗಳ ದರ್ಶನ ಮಾಡಿ ಶ್ರೀರಂಗಪಟ್ಟಣದಲ್ಲಿ ವೆಂಕಟಸುಬ್ಬಯ್ಯನ ಮನೆಯಲ್ಲಿ ಬಂದಿಳಿದರು. ಟಿಪ್ಪುವಿನಬಳಿ ಪೂರ್ಣಯ್ಯನವರು ಮುಖ್ಯಾಧಿಕಾರಿಯಾಗಿದ್ದರು. ದಿವಾನಗಿರಿಯ ಸರ್ವಾಧಿಕಾರವಿರದಿದ್ದರೂ ಜನರು ಅವರನ್ನು ದಿವಾನರೆಂದು ಕರೆಯುತ್ತಿದ್ದರು. ಸುಲ್ತಾನನು ಅಯ್ಯನವರನ್ನು ಚಿಚಾ ಎಂದು ಕರೆಯುತ್ತಿದ್ದನು.

ಹೈದರನ ಮರಣಕಾಲದಲ್ಲಿ ಪೂರ್ಣಯ್ಯನವರ ಸಹಾಯವಿರದಿದ್ದರೆ ಟಿಪ್ಪುವು ಮೈಸೂರು ಸುಲ್ತಾನನಾಗುತ್ತಿರಲಿಲ್ಲ. ಟಿಪ್ಪುವು ಸುಲ್ತಾನನಾಗದಿದ್ದರೆ ಮೈಸೂರು ನೇಪಾಳ ಭೂತಾನ ದೇಶಗಳಂತೆ ಸ್ವತಂತ್ರ ಸಂಸ್ಥಾನವಾಗಿರುತ್ತಿತ್ತು. ಈಗಿನ ನಾಲ್ಕರಷ್ಟು ವಿಸ್ತಾರವುಳ್ಳ ಮದ್ರಾಸಾಧಿಪತ್ಯಕ್ಕೆ

ಸಮಾನವಾದ ಅಖಂಡ ಕರ್ನಾಟಕವಾಗಿರುತ್ತಿತ್ತು. ಮೈಸೂರಿಗೆ ಕೊಡಗು ಅನಂತಶಯನಗಳಂಥಾ ಆಶ್ರಿತ ಸಂಸ್ಥಾನಗಳಿರುತ್ತಿದ್ದುವು.

ಪೂರ್ಣಯ್ಯನವರು ಧರ್ಮಾಭಿಮಾನಿಗಳೂ ವಿದ್ಯಾಪಕ್ಷಪಾತಿಗಳೂ ಆಗಿದ್ದರು. ಅನೇಕ ವಿದ್ವಜ್ಜನರು ಅವರ ಆಶ್ರಯದಲ್ಲಿದ್ದರು. ಪಂಡಿತರ ಪ್ರಾಬಲ್ಯದಿಂದ ದಾಸರಿಗೆ ಪೂರ್ಣಯ್ಯನವರಲ್ಲಿ ಪ್ರವೇಶವಿರಲಿಲ್ಲ. ಅಯ್ಯನವರು ಶಿಷ್ಟಾಚಾರ ಸಂಪನ್ನರಾಗಿದ್ದರು. ಕಚೇರಿಯಿಂದ ಬಂದೊಡನೆ ಸ್ನಾನಮಾಡಿ ಪಂಡಿತರೊಡನೆ ವಿವಿಧಮತ ಪ್ರಕ್ರಿಯೆಗಳ ಪರಾಮರ್ಶ ಮಾಡುತ್ತಿದ್ದರು. ತುಲನಾತ್ಮಕ ವಿಚಾರ ಸರಣಿಯು ಅಯ್ಯನವರಗೀಳಾಗಿತ್ತು. ಆರಬ್ಬೀ ಪಾರ್ಶೀ ಭಾಷೆಗಳ ಪರಿಶ್ರಮ ಅಯ್ಯನವರಿಗೆ ಬಹಳವಾಗಿತ್ತು. ಇಸ್ಲಾಂ ಧರ್ಮದ ಪಾಂಡಿತ್ಯನೋಡಿ ಮೌಲ್ವಿಗಳು ಅಯ್ಯನವರಿಗೆ ತಲೆಬಾಗುತ್ತಿದ್ದರು. ಜಗನ್ನಾಥದಾಸರ ಪೂರ್ಣಯ್ಯನವರ ಪರಿಚರ್ಯ ಮಾಡಬೇಕೆಂಬ ಅಭಿಲಾಷೆಗೆ ಸಮಯ ಸನ್ನಿವೇಶಗಳೊದಗಿರಲಿಲ್ಲ. ದಾಸರಾಗಿ ಮುಂದರಿದು ಅಯ್ಯನವರನ್ನು ಕಾಣಲಿಲ್ಲ.

ಫೌಜುದಾರನ ಮನೆಯ ನಿತ್ಯಕೀರ್ತನದ ವರದಿಯು ಪೂರ್ಣಯ್ಯನವರಿಗೆ ತರಂಗ ತರಂಗವಾಗಿ ತಿಳಿಯುತ್ತ ಬಂತು. ವೆಂಕಟಸುಬ್ಬಯ್ಯನು ದಾಸರ ಕೀರ್ತನವೈಖರಿಯನ್ನೂ ಪಾಂಡಿತ್ಯವನ್ನೂ ಅಯ್ಯನವರಿಗೆ ತಿಳಿಸಿದನು. ಅವರನ್ನು ಒಂದು ದಿನವಾದರೂ ಕೀರ್ತನಕ್ಕೆ ಬರಬೇಕೆಂದು ಕರೆದನು.

ಪೂರ್ಣಯ್ಯನವರ ಸಮೀಪವರ್ತಿ ಪಂಡಿತರು—ಕೀರ್ತನದಲ್ಲೇನಿದೆ? ಕನ್ನಡ ಹಾಡುಗಳಿಂದ ಕಲಿಯಬೇಕಾದ ಶಾಸ್ತ್ರಾರ್ಥವೇನಿದೆ? ದಾಸರೆನಿಸಿದವರ ಪಾಂಡಿತ್ಯವೆಷ್ಟಿದ್ದೀತು? ಪಾಮರರೂ ಸ್ತ್ರೀಶೂದ್ರರೂ ಕೇಳುವ ಕೀರ್ತನವನ್ನು, ಪೂರ್ಣಯ್ಯನವರು ಕೇಳಬೇಕೆ? ಎಂದು ಮೊದಲಾಗಿ ಅಯ್ಯನವರ ಮನಸ್ಸನ್ನು ತಿರುಗಿಸಿದರು.

ವೆಂಕಟಸುಬ್ಬಯ್ಯನು, ಜಗನ್ನಾಥದಾಸರು ಇತರ ದಾಸರಂತಲ್ಲ; ಒಮ್ಮೆ ಕೇಳಿನೋಡಿದರೆ ಗೊತ್ತಾದೀತೆಂದು ಮೇಲೆ ಮೇಲೆ ಅಯ್ಯನವರನ್ನು ಕರೆದನು. ಲೌಕಿಕ ದಾಕ್ಷಿಣ್ಯದಿಂದ ಎಂದಾದರೂ ಬರುವೆನೆಂದವರು ಆಶ್ವಾಸವಿತ್ತರು.

ಜಗನ್ನಾಥದಾಸರಾದರೋ—ಸಾಯಂಸಂಧ್ಯಾವಂದನ ಮಾಡಿ ರಾತ್ರಿ ಒಂಬತ್ತು ಘಂಟೆಯೊಳಗೆ ಕೀರ್ತನವನ್ನು ಮುಗಿಸಿಬಿಡುತ್ತಿದ್ದರು. ಭೋಜನಾನಂತರ ಕೀರ್ತನ ಮಾಡುವ ಅಶ್ಲಾಘ್ಯ ಪದ್ಧತಿ ದಾಸರಲ್ಲಿರಲಿಲ್ಲ. ಜನರ ಮನೋವೃತ್ತಿಯನ್ನನುಸರಿಸುವವರು ಅವರಾಗಿರಲಿಲ್ಲ.

ಒಂದುದಿನ ಪೂರ್ಣಯ್ಯನವರು ರಾತ್ರಿ ಭೋಜನಮಾಡಿ ತಾಂಬೂಲವನ್ನು ಸವಿಯುತ್ತಾ, ದೀವಟಿಗೆಯನ್ನು ಹಿಡಿಸಿಕೊಂಡು ಫೌಜುದಾರನ ಮನೆಗೆ ಬಂದರು. ಅಷ್ಟುಹೊತ್ತಿಗೆ ದಾಸರು ಕೀರ್ತನ ಮುಗಿಸಿ ಶಯನ ಮಾಡಿದ್ದರು. ಪಸಾರೆಯಲ್ಲಿ ಕೆಲಸಮಾಡುತ್ತಿದ್ದ ಫೌಜುದಾರನು ದಿವಾನರು ಬಂದರೆಂದು ಜಗ್ಗನೆದ್ದು ದಾಸರ ಬಳಿಗೆ ಬಂದನು. ಪೂರ್ಣಯ್ಯನವರು ಫೌಜುದಾರನ ದಿಂಬಿಗೆ ಕುಳಿತರು. ವೆಂಕಟಸುಬ್ಬಯ್ಯಾ ಎಂದು ಕೂಗುತ್ತಾ—ದಾಸರು ವಿಶ್ರಮಿಸಿಕೊಂಡಿದ್ದಾರೆ ತೊಂದರೆಕೊಡಬೇಕಾದ್ದಿಲ್ಲವೆಂದು ಹೇಳಿದರು. ಎಷ್ಟಾದರೂ ಫೌಜುದಾರಿಯು ತಾಬೇದಾರಿ. ದೊರೆತ ಸಮಯವನ್ನು ಕಳೆದುಕೊಳ್ಳಬಾರದೆಂಬ ಕವಕವ!

ಫೌಜುದಾರ—ದಾಸರೆ! ದಾಸರೆ! ದಿವಾನರು ಬಂದಿದ್ದಾರೆ. ಒಳ್ಳೇ ಸಮಯ! ಒಂದೇ ಪದ, ಸ್ವಲ್ಪ ಅರ್ಥಾನುವಾದ ಮಾಡಿದರೆ ಸಾಕು.

ದಾಸರು—ಅದ್ಯಾವ ದಿವಾನರೊ ?

ಫೌಜುದಾರ—ಪೂರ್ಣಯ್ಯನವರು ! ಯಜಮಾನರು !

ದಾಸರು—ನಮ್ಮ ದಿವಾನ ಮಲಗಿ ತಾಸು ಹೊತ್ತಾಯಿತು. ನಿಮ್ಮ ದಿವಾನ ನಾಳೆ ಬಂದರೆ ಬರಲಿ.

ಫೌಜುದಾರ—ಇಲ್ಲಿ ದೊಡ್ಡವರು ಬಂದಿದ್ದಾರೆ. ಸ್ವಲ್ಪ ಲೌಕಿಕ ನೋಡಬೇಕು. ಏಳಬೇಕು.

ದಾಸರು—ಮಂಗಳ ಹಾಡಿದಮೇಲೆ—ದೇವರಿಗೆ ಶಯನೋತ್ಸವ ಮಾಡಿಸಿದಮೇಲೆ ಮತ್ತೆಲ್ಲಿಯ ಕೀರ್ತನೆ? ತಿಂದು ತೇಗಿ ತಾಂಬೂಲ ಜಗಿಯುತ್ತಾ ಕೇಳುವುದಕ್ಕೆ ಕೀರ್ತನವು ಗಾಯನವಲ್ಲ.

ವೆಂಕಟಸುಬ್ಬಯ್ಯನಿಗೆ ಧರ್ಮಸಂಕಟಕ್ಕಿಟ್ಟಿತು. ದಾಸರು—ದೊಡ್ಡವರು; ಮೇಲಾಗಿ ಗುರುಗಳು. ಪೂರ್ಣಯ್ಯನವರು ಮೇಲ್ಪಟ್ಟ ಅಧಿಕಾರಿಗಳು; ಎಂದೂ ಬಂದವರಲ್ಲ. ಮಾಡುವದೇನು? ಏನು ಹೇಳಬೇಕು?

ಚಾಣಾಕ್ಷರಾದ ಪೂರ್ಣಯ್ಯನವರು ಏನೋ ಅಸಂದರ್ಭವಿರಬೇಕೆಂದು ತಿಳಿದರು. ವೆಂಕಟಸುಬ್ಬಯ್ಯನನ್ನು ಕರೆದು—ದಾಸರಿಗೆ ತೊಂದರೆ ಕೊಡಬೇಡ ; ಮತ್ತೊಮ್ಮೆ ನಾನೇ ಬರುತ್ತೇನೆ; ಭೋಜನಾನಂತರ ಕೀರ್ತನೆ ಕೇಳುವದು ಮರ್ಯಾದೆಯಲ್ಲ ; ನೀನಿದಕ್ಕಾಗಿ ಸಂಕೋಚಪಡಬೇಡ, ಎಂದು ಹೇಳಿ ವೀಳ್ಯಪಾಣಿಗಳಾಗಿ ತೆರಳಿದರು.

ಕೆಲವು ದಿವಸಗಳನಂತರ ದಾಸರು ದಕ್ಷಿಣಯಾತ್ರೆಗಾಗಿ ಪ್ರಯಾಣ ಬೆಳೆಸಿದರು. ಪುರಂದರ ವಿಜಯದಾಸರುಗಳು ಸಂಚರಿಸಿದ ಕ್ಷೇತ್ರಗಳಲ್ಲಿ ಸಂಚರಿಸಿದರು. ಕ್ಷೇತ್ರ ಮೂರ್ತಿಗಳನ್ನು ದಿವ್ಯ ಪದಗಳಿಂದ ಕೊಂಡಾಡಿದರು. ಅನಂತಶಯನದ ಮಾರ್ಗ ಹಿಡಿದು ಉಡುಪಿಗೆ ಬಂದರು.

ಅಷ್ಟಮಠಾಧಿಪತಿಗಳು ದಾಸರ ಯೋಗ್ಯತೆಯನ್ನರಿತು ಅವರಿಗೆ ಉಚಿತ ಸನ್ಮಾನಮಾಡಿದರು. ದಾಸರು ಅಪರೋಕ್ಷಜ್ಞಾನಿಗಳು, ಅನೇಕ ಅತಿ ಮಾನುಷ ಮಹಿಮೆಗಳನ್ನು ತೋರಿಸಿದವರು, ಅಪ್ರತಿಮ ಪಂಡಿತರು, ಎಂದು ಮೊದಲಾಗಿ ಲೋಕವಾರ್ತೆಯು ವ್ಯಾಪಿಸಿತು. ಕೃಷ್ಣಮಠದ ರಾಜಾಂಗಳದಲ್ಲಿ ಮಠಾಧಿಪತಿಗಳು ದಾಸರ ಕೀರ್ತನ ಶ್ರವಣಮಾಡಿದರು. ವಾದಿರಾಜರ ಗ್ರಂಥಗಳಿಗೆ ವ್ಯಾಖ್ಯಾನಮಾಡುತ್ತಿರುವರೋ ಎಂಬಂತೆ ಪ್ರತಿ ಪದಗಳನ್ನು ಹಾಡಿ, ಅನುವಾದ ಮಾಡುವದು ಸಾವಿರಾರು ಜನರಿಗೆ ಆನಂದವಾಯಿತು. ಕವಿಗಳು ದಾಸರ ಕೀರ್ತನ ಕೇಳಿದರೆ ಮೂಕನು ವಾಚಾಳನಾಗುವನು, ಕುಂಟನು ನಡೆಯುವನು ಎಂದು ಕವಿತೆಮಾಡಿ ಹೇಳಿದರು. ಯತೀಶ್ವರರು ಜಯಜಯಕಾರ ಮಾಡಿದರು.

ಉಡುಪಿಯಂಥಾ ಕ್ಷೇತ್ರದಲ್ಲಿ ಆ ಕಾಲದಲ್ಲೂ ಕುಹಕಿಗಳಿರದಿರಲಿಲ್ಲ. ಬೆಳಕಿದ್ದ ಬಳಿ ಕತ್ತಲೆಯಿರುವದೆಂಬ ಮಾತು ಸುಳ್ಳಲ್ಲ. ನಾಲ್ವರು ಕುಹಕರು ಓರ್ವ ಮೂಕನನ್ನು ಕೀರ್ತನರಂಗದಲ್ಲಿ ದಾಸರೆದುರಿಗೆ ಕುಳ್ಳಿರಿಸಿದರು. ಮಠಾಧಿಪತಿಗಳ ಮಧ್ಯೆ—ಮಹಾವಿದ್ವಾಂಸರ ಮಧ್ಯೆ ಇವನನ್ನೂ ಕೂಡಿಸಿದ

ವರಾರೆಂದು ಜನರು ಆಕ್ಷೇಪಿಸಿದರು. ಕೀರ್ತನಸ್ವಾರಸ್ಯದಲ್ಲಿ ಯಾರೂ ಉತ್ತರ ಕೊಡಲಿಲ್ಲ. ಅಷ್ಟರಲ್ಲಿ ದಾಸರು ಅವನು ಅಲ್ಲೇ ಇರಬೇಕೆಂದರು. ಕೀರ್ತನವಾಯಿತು. ಮಂಗಳ ಹಾಡುವುದಕ್ಕೆ ಪೂರ್ವದಲ್ಲಿ ದಾಸರು ಮೂಕನನ್ನು ಕುರಿತು—

ದಾಸರು—ಏನಪ್ಪಾ, ಕ್ಷೇಮವೆ ?

ಮೂಕ—ಚರಣಾನುಗ್ರಹದಿಂದ ಕ್ಷೇಮ.

ದಾಸರು—ಇಷ್ಟು ದಿನ ನೀನೇಕೆ ಮಾತಾಡಲಿಲ್ಲ ?

ಮೂಕ—ಅದು ನನಗೆ ಗೊತ್ತಿಲ್ಲ.

ಇದೆಂಥಾ ದಾಸರ ಪರಮಾನುಗ್ರಹವೆಂದು ಜನರು ಆಶ್ಚರ್ಯಭರಿತರಾದರು. ಮೂಕನನ್ನು ಸಭಾ ಮಧ್ಯದಲ್ಲಿ ಕರೆತಂದು ಕೂಡಿಸಿದ ನಾಲ್ವರೂ ಸಮೀಪದಲ್ಲಿದ್ದರು. ಅವರ ಕಡೆಗೆ ದಾಸರು ತಿರುಗಿದರು.

ದಾಸರು—ಏನಪ್ಪಾ ನಾಲ್ವರೂ ಕ್ಷೇಮವೆ ?

ನಾಲ್ವರೂ—(ಮಾತಾಡಲು ಪ್ರಯತ್ನಿಸಿ ಬರದೆ ಭಯದಿಂದ ಕಣ್ಣೀರು ಸುರಿಸುತ್ತಾ ಕೈ ಸಂಜ್ಞೆಯಿಂದ) ಇಲ್ಲ !

ದಾಸರು—ಹೀಗೇಕಾದಿರಿ ?

ನಾಲ್ವರು—(ಅಪರಾಧ ಕ್ಷಮಿಸಬೇಕೆಂದು ಸನ್ನೆಮಾಡಿ ನಮ್ಮ ಅಪರಾಧ ! (ಅಕ್ಷರದಲ್ಲಿ)

ಒಳ್ಳೇದು ! ನಿಮಗೀ ಪಾಪವಿಮೋಚನೆಯಾಗಬೇಕಾದರೆ ಮಧ್ವಸರೋವರದಲ್ಲಿ ಒಂದು ಸಪ್ತಾಹ ಸ್ನಾನಮಾಡಿ ಕೃಷ್ಣಸೇವೆ ಮಾಡಬೇಕು. ಜನರುಂಡ ಪತ್ರಾವಳಿಯನ್ನು ತೆಗೆಯಬೇಕು. ಇನ್ನುಮೇಲೆ ಶ್ರೀ ಕೃಷ್ಣನನ್ನು ಪರೀಕ್ಷಿಸಬಾರದು. ತಿಳಿಯಿತೆ ? ಎಂದರು. ಪ್ರಾಣೇಶದಾಸರು ಜನರ ಕಡೆ ನೋಡಿ—ಪುರಂದರದಾಸರ

ಅಂದುಂಟು ಇಂದಿಲ್ಲ | ವೆನದಿರಿದಾಸರ
ಮುಂದಾಡುತ್ತೈದಾನೆ | ಪುರಂದರವಿಠಲ ||ಮಾನಿಸ||

ಎಂಬ ದೇವರನಾಮವನ್ನು ಹಾಡಿ ದಾಸರ ಪರೀಕ್ಷೆಮಾಡಬೇಡಿರೆಂದರು.

ಜಗನ್ನಾಥದಾಸರ ಮಹಿಮೆಯು ಅಗಾಧವಾದುದು. 'ಗಾಳಿ ಬಂದಾಗ ತೂರಿಕೊಳ್ಳಿರೋ' ಎಂಬಂತೆ ಮಹಾತ್ಮರು ಅವತಾರವಾಡಿದಾಗ ಅವರಿಂದ ಉದ್ಧಾರವಾಗುವವರು ಬಹಳ. ಅವರ ನಿಂದೆಯಿಂದ ಫಲಾನುಭವ ಮಾಡುವವರೂ ಬಹಳ.

ಜಗನ್ನಾಥದಾಸರು ಉಡುಪಿಯಿಂದ ಸುಬ್ರಹ್ಮಣ್ಯಕ್ಕೂ ಅಲ್ಲಿಂದ ಮತ್ತೆ ಮೈಸೂರು ಸೀಮೆಗೂ ಬಂದರು. ಇಷ್ಟರಲ್ಲಿ ಕೆಲವು ವರ್ಷಗಳೇ ಕಳೆದು ರಾಜ್ಯಪರಿವರ್ತನವಾಗಿತ್ತು. ಟಿಪ್ಪೂಸುಲ್ತಾನನು ಮಡಿದು ಶ್ರೀ ಕೃಷ್ಣರಾಜ ಒಡೆಯರು III ಮಹಾರಾಜರಾಗಿದ್ದರು. ಪೂರ್ಣಯ್ಯನವರು ದಿವಾನರಾಗಿದ್ದರು. ಹಿಂದೆ ಬಂದಾಗ ಬಹುಮುಖದಿಂದ ದಾಸರು ಮಹಿಮರೆಂದು ಕೇಳಿದ್ದರೂ ಅವರ ದರ್ಶನಲಾಭವಾಗಲಿಲ್ಲವೆಂಬ ಚಿಂತೆ ಪೂರ್ಣಯ್ಯನವರಿಗಿತ್ತು. ಅದರ ನಿವಾರಣೆಗೋ ಎಂಬಂತೆ, ಅಯ್ಯನವರು ಮಹಾರಾಣಿ ಲಕ್ಷಮ್ಮಣ್ಣಿಯವರಲ್ಲಿ ವಿಜ್ಞಾಪಿಸಿ, ದಾಸರಿಗೆ ರಾಜಯೋಗ್ಯವಾದ ಸ್ವಾಗತಮಾಡಿಸಿ ತಮ್ಮ ಮನೆಯಲ್ಲಿಳಿಸಿಕೊಂಡರು.

ಅತ್ತ ರಾಣಿವಾಸದ ಅಮ್ಮನವರು ಪ್ರತಿನಿತ್ಯವೂ ದಾಸರನ್ನು ಅರಮನೆಗೆ ಕರೆಸಿಕೊಂಡು ಅವರಿಂದ ಕೀರ್ತನಶ್ರವಣ ಮಾಡಿದರು. ಬಹುಕಾಲ ಹೈದರಲ್ಲಿ ಟಿಪ್ಪೂಸುಲ್ತಾನರ ಆಕ್ರಮಣದಿಂದ ಕೈತಪ್ಪಿದ್ದ ರಾಜ್ಯವು ಭಗವತ್ಕೃಪೆಯಿಂದ ಪುನಃ ಪ್ರಾಪ್ತವಾಗಿ ಸತ್ಕಥಾಶ್ರವಣಕ್ಕೆ ಅನುಕೂಲವಾಯಿತೆಂದರು. ಜಗನ್ನಾಥದಾಸರಂಥಾ ಸತ್ಪುರುಷರ ಪಾದಧೂಳಿಯಿಂದ ರಾಜಗೃಹವು ಪಾವನವಾಯಿತೆಂದರು. ಅವರ ದಿವ್ಯೋಪದೇಶದಿಂದ ಧನ್ಯರಾದೆವೆಂದು ಅನೇಕ ಧನಕನಕವಾಹನಾದಿ ಮರ್ಯಾದೆಗಳನ್ನು ಮಾಡಿದರು. [ದಾಸರು ಅರಮನೆಗೆ ಬಂದ ಜ್ಞಾಪಕಾರ್ಥವಾಗಿ ಭಜನ ಪದ್ಧತಿಯನ್ನೇರ್ಪಡಿಸಿದರು. ಅದ್ಯಾಪಿ, ಆ ಪದ್ಧತಿಯಲ್ಲಿ ಎಷ್ಟೋ ವ್ಯತ್ಯಾಸವಾಗಿರಬಹುದಾಗಿದ್ದರೂ, ಧರ್ಮಾತ್ಮರಾದ ಮೈಸೂರು ರಾಜರ ಅರಮನೆಯಲ್ಲಿ ನಿತ್ಯ ಭಜನೆಯು ನಡೆದು ಬರುತ್ತಿದೆ. ಇದನ್ನು ನೋಡಿದರೆ ದಾಸರ ವರ್ಚಸ್ಸವೆಂಥಾದ್ದಾಗಿತ್ತೆಂಬುದರ ಕಲ್ಪನೆಯಾಗುತ್ತದೆ.]

ಇವತ್ತಿನ ದಿನದಲ್ಲಿ ಆ ಧರ್ಮಾತ್ಮರಾದ ಮಹಾರಾಣಿ ಲಕ್ಷಮ್ಮಣ್ಣಿಯವರಿಲ್ಲ. ಅಭಿನವ ಭೋಜರೆನಿಸಿದ ಕೃಷ್ಣರಾಜ ಒಡೆಯರಿಲ್ಲ. ಜಗನ್ನಾಥ

ದಾಸರು ಮೊದಲೇ ಇಲ್ಲ. ಲಕ್ಷ್ಮಮ್ಮಣ್ಣಿಯವರು ಕೊಟ್ಟ ಮೇನೆಯೊಂದು ಮಾನವಿಯಲ್ಲಿ ದಾಸರ ಗುಡಿಯಲ್ಲಿದೆ. ಮೈಸೂರನ್ನು ಮಾನವಿಯಲ್ಲಿ ಜ್ಞಾಪಿಸುತ್ತಿದೆ.

ಜಗನ್ನಾಥದಾಸರು ತಮ್ಮ ಮನೆಯಲ್ಲಿಳಿದಿದ್ದರೂ, ಅರಮನೆಯಲ್ಲಿ ನಿತ್ಯ ಕೀರ್ತನಗಳಾದರೂ, ಪೂರ್ಣಯ್ಯನವರಿಗೆ ಶ್ರವಣಲಾಭವಾಗಲಿಲ್ಲ. ರಾಜ್ಯವ್ಯವಸ್ಥೆಯ ಜವಾಬ್ದಾರಿಯು ಬಲು ದೊಡ್ಡದಾಗಿದ್ದುದರಿಂದ ಅವರ ಪ್ರತಿ ನಿಮಿಷವೂ ಬಹು ಅಮೌಲ್ಯವಾಗಿರುತ್ತಿತ್ತು. ವಿಸ್ತಾರವಾದ ತೊಟ್ಟಿಯ ಮನೆಯು ದಿವಾನರದಾಗಿದ್ದುದರಿಂದ ದಾಸರಿಳಿದಿದ್ದ ಭಾಗವೇ ಪ್ರತ್ಯೇಕವಾಗಿತ್ತು. ಅರಮನೆಯಿಂದ ಶಿಾಸಾಲವಾಜಿಮಾ ಬರುತ್ತಿದ್ದುದರಿಂದ ದಾಸರ ಯೋಗಕ್ಷೇಮವು ಮಹಾರಾಣಿಯವರದಾಗಿತ್ತು. ಭೋಜನಕ್ಕೆ ಕುಳಿತಾಗ ಮಾತ್ರ ಪೂರ್ಣಯ್ಯನವರು ಎಲ್ಲಾ ಗೃಹಕೃತ್ಯಗಳ ವಿಚಾರವಮಾಡುತ್ತಿದ್ದರು.

ಒಂದು ಮಧ್ಯಾಹ್ನ!—'ದಾಸರು ಮನೆಯಲ್ಲಿ ಬಂದಿಳಿದಿದ್ದರೂ ಅವರ ಪಙ್ಕ್ತಿಲಾಭ ನಮಗಾಗಿಲ್ಲ. ನೈವೇದ್ಯನೇಮ ತಿಳಿದಲ್ಲದೆ ಅವರನ್ನು ಕರೆಯುವಂತಿಲ್ಲ. ಕೀರ್ತನ ಮಾಡಿಸುವುದಕ್ಕೆ ಸಮಯವಾಗಿಲ್ಲ. ಒಂದುದಿನ ಅವರನ್ನು ಭೋಜನಕ್ಕೆ ಕರೆಯಬೇಕು, ಕೀರ್ತನವಮಾಡಿಸಬೇಕು. ಅಪ್ಪಣೆ ಕೊಡಬೇಕು. ಈ ವಿಷಯದಲ್ಲಿ ನಿಯಮಸ್ಥ ಆಚಾರ್ಯರುಗಳ ಅಭಿಪ್ರಾಯವೇನೆಂದು' ಪೂರ್ಣಯ್ಯನವರು ಕೇಳಿದರು.

ಪಂಡಿತರುಗಳು—' ಅವರ ನೈವೇದ್ಯದಲ್ಲಿ ನಾವು ಸೇರುವದು ಸಾಧ್ಯವಲ್ಲ. ಸನ್ನಿಹಿತವಾಗಿರುವ ಏಕಾದಶಿಯದಿನ ಕೀರ್ತನ ಮಾಡಿಸಿದರೆ ನೈವೇದ್ಯ ಕಲಾಪವಿರುವದಿಲ್ಲ. ರಾಯರಿಗೆ ಹೇಗೋ ಹಾಗೆ ನಮಗೂ ದಾಸರ ಪಙ್ಕ್ತಿಲಾಭವಾಗಬೇಕು. ಪ್ರಸಾದ ಭಾಗಿಗಳಾಗಿ ಅವರು ಬಂದರೆ ಎಲ್ಲರಿಗೂ ಸಂತೋಷ' ವೆಂದರು. ಪೂರ್ಣಯ್ಯನವರು ಸಂಭಾವನೆಯೋ! ಎಂದರು. ಸಂಭಾವನೆ ತಾರತಮ್ಯಾನುಸಾರ ನಡೆಯಬೇಕು. ಶ್ರೀಪಾದಪುತ್ರರೂ ಮನೆತನಸ್ಥ ಆಚಾರ್ಯರೂ ವಿದ್ವಾಂಸರೂ ಆದರೆ ಆ ಮರ್ಯಾದಾ ಬೇರೆ. ಸಾಧಾರಣ ವೈದಿಕರಾಗಿ ಪುರಾಣ ಹೇಳುವರಾದರೆ ಆ ಮರ್ಯಾದಾ ಬೇರೆ. ದಾಸರು

ವೈದಿಕರೂ ಅಲ್ಲ, ಗೃಹಸ್ಥರೂ ಅಲ್ಲ. ಕೀರ್ತನ ಮಾಡುವದರಿಂದ ಅವರ ಮರ್ಯಾದಾ ಒಂದು ಪ್ರಕಾರದಿಂದಾಗಬೇಕು. ಅರಮನೆಯಲ್ಲಾದ ಸಂಭಾವನೆ ರಾಯರಿಂದಲೇ ಆಗಿದೆ. ಅಲ್ಲಿ ಕೀರ್ತನ ಮಾಡುವದಕ್ಕೂ ಇಲ್ಲಿ ಮಾಡುವದಕ್ಕೂ ವ್ಯತ್ಯಾಸವಿದೆ. ಇಷ್ಟುಮಂದಿ ವಿದ್ವಾಂಸರು ಕೇಳುವದೇ ದಾಸರಿಗೆ ಸಂಭಾವನೆ. ಯದೃಚ್ಛಾಲಾಭ ಸಂತುಷ್ಟಿಯು ಬ್ರಾಹ್ಮಣನಿಗಿರಬೇಕು. ತಾರತಮ್ಯವರಿತು ರಾಯರು ನಡೆಸಬೇಕು, ಎಂದು ಪಂಡಿತರ ಸಲಹೆಯಾಯಿತು. ಪೂರ್ಣಯ್ಯನವರು ಪ್ರಮಿತರಾದವರು ಗೊತ್ತಾಗಿ ಹೇಳಿರೆಂದು ಮತ್ತೆ ನುಡಿದರು. ಧರ್ಮಾಧಿಕಾರಿಗಳೆನಿಸಿದ್ದ ಸತ್ಯವರಹಾಚಾರ್ಯರೆಂಬುವರು—ಇದು ಛಳಿಗಾಲ; ದಾಸರಿಗೆ ವಸ್ತ್ರಬಹುಮಾನವೂ ಆಗಬೇಕು. ಒಂದು ಒಳ್ಳೇ ಮಂಡ್ಯದ ಥಾವಳಿ, ಅನಿರುದ್ಧಪ್ರದ್ಯುಮ್ನ ಸಂಕರ್ಷಣ ವಾಸುದೇವ ನಾರಾಯಣ ಎಂಬ ಪಂಚಮೂರ್ತಿಗಳ ಪ್ರೀತ್ಯರ್ಥವಾಗಿ ಐದು ರೂಪಾಯಿ; ಕೊಟ್ಟರಾಯಿತೆಂದರು.

ಪೂರ್ಣಯ್ಯನವರಿಗೆ ಆಚಾರ್ಯರ ಸಲಹೆಯು ತೃಪ್ತಿಯೆನಿಸಲಿಲ್ಲ. ಏಕಾದಶಿಯ ದಿನವೇ ಕೀರ್ತನವಾಗಲೆಂದು ನಿಶ್ಚಯ ಮಾಡಿದರು.

ಪ್ರಾಣೇಶದಾಸರು ದಾಸರಾಯರ ಪೂಜಾ ಪೆಟ್ಟಿಗೆಯನ್ನು ಕೀರ್ತನಕ್ಕೆ ಅಣಿಮಾಡಿದ ಹಚಾರದಲ್ಲಿ ಮಂಡಿಸಿದರು. ತಂಬೂರಿ ತಾಳದಮ್ಮಡಿಗಳವರು ತಮ್ಮ ಸ್ಥಳದಲ್ಲಿ ಕುಳಿತರು. ಸುತ್ತುಗಟ್ಟಿದ್ದ ಪಂಡಿತ ವೃಂದದೊಡನೆ ಪೂರ್ಣಯ್ಯನವರು ಸಭೆಯನ್ನಲಂಕರಿಸಿದರು. ವ್ಯವಧಾನ ಸಿಕ್ಕಿದಾಗ ಬಿಡಬಾರದೆಂದು ಕಾದಿದ್ದ ಆಚಾರ್ಯರೊಬ್ಬರು ಯಾವದೋ ಕಗ್ಗಂಟು ವಾಕ್ಯವನ್ನು ವಿಮರ್ಶೆಗೆ ತೆಗೆದರು. ಒಬ್ಬೊಬ್ಬರೂ ಪಾಂಡಿತ್ಯವನ್ನು ಸೂರೆಗೊಳಿಸುತ್ತಾ ಮೊದಲೇ ಕ್ಲಿಷ್ಟವಾಗಿದ್ದ ವಾಕ್ಯವನ್ನು ಮತ್ತಷ್ಟು ಕಗ್ಗಂಟು ಮಾಡಿದರು. ದಾಸರು ಮಣೆಯಮೇಲೆ ಕುಳಿತು ಶ್ರೀರಂಗದ ರಂಗನಾಥನನ್ನು ಚಕ್ರಾಬ್ಜ ಮಂಡಲದ ಮೇಲೆ ಚಿತ್ರಿಸಿ ಅಲಂಕರಿಸಿದರು. ಪೂರ್ಣಯ್ಯನವರು ವಾಕ್ಯಾರ್ಥವನ್ನು ಅಲ್ಲಿಗೇ ಸಾಕುಮಾಡಿ ಕೀರ್ತನವಾಗಲೆಂದರು. ದಾಸರು ಗುರುದೇವತಾ ಪ್ರಾರ್ಥನೆ ಮಾಡಿ—

ಕಾಂಬೋದಿ — ಆದಿತಾಳ

ಪಿಂಡಾಂಡದೊಳಗಿಹ | ಗಂಡನ ಕಾಣದೆ
ಮುಂಡೇಯರಾದರು ಈ | ಪಂಡಿತರೆಲ್ಲ ||ಪ||

ಎಂಬ ಪುರಂದರ ದಾಸರ ಪದವನ್ನು ಪೀಠಿಕೆ ಮಾಡಿಕೊಂಡು ಕೀರ್ತನಕ್ಕಾರಂಭಿಸಿದರು. ಪದಗರ್ಭವನ್ನು ಕೇಳಿದ ಪಂಡಿತರು ರುಷ್ಟರಾದರು. ತತ್ಕಾಲದಲ್ಲಿ ಪೂರ್ಣಯ್ಯನವರು ದಾಸರೇನು ಹೇಳುವರೋ ಪೂರ್ತಿ ಕೇಳಿ ಮಾತಾಡಿರೆಂದು ಮುಂದರಿವವರನ್ನು ನಿವಾರಿಸಿದರು. ದಾಸರು ಪಿಂಡಾಂಡ ಬ್ರಹ್ಮಾಂಡ ವಿಷಯಗಳನ್ನೂ, ಪಿಂಡಾಂಡದಲ್ಲಿ ಗಂಡನಾದ ಬ್ರಂಹಾಂಡ ನಾಯಕನ ವ್ಯಾಪ್ತಿ ಮತ್ತು ಪ್ರಾಪ್ತಿ ವಿಚಾರಗಳನ್ನೂ ಜಿಜ್ಞಾಸ ಮಾಡುತ್ತಾ, ಪಂಡಿತರು ಕಗ್ಗಂಟು ಮಾಡಿದ್ದ ವಾಕ್ಯವನ್ನು ಸುಲಭವಾಗಿ ಸಿದ್ಧಾಂತ ಮಾಡಿದರು. ಗೋಪಾಲ ದಾಸರ—

ಕಾಂಬೋದಿ — ಆದಿತಾಳ.

ಬ್ರಾಂತಿಬಿಡದೋ ಭಾಗ್ಯಪುರುಷನೆ| ದುರ್ವಿಷಯ ಮರೆದು
ಶಾಂತಚಿತ್ತನಾಗುವತನಕ | ಏಪ್ರಾಣಿ ನಿನ್ನ ||ಪ||

ಕಾಲಕಾಲಕೆ ಹರಿಕಥಾಶ್ರವಣ | ಗುರುಗಳ ಮುಖದಿ |
ಹೇಳಿದ್ದೇ ಹೇಳುತ್ತಾ ಕೇಳುತ್ತ| ಮನನಮಾಡುತ್ತಾ |
ಕೇಳಿದಂತೆ ಧ್ಯಾನವಮಾಡುತ್ತ| ಮಾಡಿದ್ದನುಭವಕೆ ||
ಮೇಲಾಗಿ ಬಂದೊದಗುವತನಕ| ಏಪ್ರಾಣಿ ನಿನ್ನ ||೧||

ಪಾಂಚಜನ್ಯ ಅರಿಪಾಣಿ ಸರ್ವೇಶ| ತದ್ರಾಣಿ ಲಕುಮಿ |
ಅಂಚೆ ಗಮನವಾಯ್ವಾಣೀ ಭಾರತಿ| ಭುಜಂಗಪತಿ |
ಪಂಚಾನನ ಖಗಸುತ್ರಾಮುಕಾಮ| ಈಬಗೆ ತರತಮ ||
ಪಂಚಭೇದವ ತಿಳಿಯುವತನಕ| ಏಪ್ರಾಣಿ ನಿನ್ನ ||೨||

ಪೂರಕರೇಚಕ ಕುಂಭಕದಿಂದಲಿ| ಹೃದಯಸ್ಥ ಭೌತಿಕ |
ಮಾರುತ ಜೈಸಿ ಅಣಿಮಾದಿಸಿದ್ಧಿ| ಅಷ್ಟಾಂಗಯೋಗ |

ಧಾರಣನಾಗಿ ನಿಸ್ಸಂಗದಿಚರಿಸಿ। ಭಾರತಿಪತಿಯಾದ ಸ॥
ಮೀರನ ಒಲಿಮೆಯು ಆಗುವತನಕ। ಏಪ್ರಾಣಿ ನಿನ್ನ ॥೩॥

ಅಂಶಿ ಅಂಶಾವೇಶಾಧಿಷ್ಠಾನ। ಅಂತರ್ಯಾಮಿಗಳ।
ಸ್ವಾಂಶರಹಿತತ್ಯಂತಾ ಭೇದವ। ರೂಪಗಳನೆ ತಿಳಿದು।
ಕಂಸಾರಿಯು ಕರುಣವನೇ ಬಲಮಾಡಿ। ಹಿಂಸೆಗಳೀಡಾಡಿ॥
ಹಂಸೋಪಾಸಕನಾಗುವತನಕ। ಏಪ್ರಾಣಿ ನಿನ್ನ ॥೪॥

ಹಂಚುಪಾಟಿಕ ಸಮದರ್ಶಿಯೆನಿಸಿ। ಶೀತೋಷ್ಣವ ಸಹಿಸಿ।
ಸಂಚಿತ ಆಗಾಮಿಗಳನು ದಹಿಸಿ। ಇಂದ್ರಿಯಗಳ ಜೈಸಿ।
ಪಂಚವೃತ್ತಿ ತನುಮನವಶಕರಿಸಿ। ಧ್ಯಾನದೊಳಗೆ ಹರಿ॥
ಮಿಂಚಿನಂದದಿ ಪೊಳೆಯುವತನಕ। ಏಪ್ರಾಣಿ ನಿನ್ನ ॥೫॥

ವಿಷಯಿ ವಿಷಯಗಳಿರವನ್ನೇ ತಿಳಿದು। ವಶವಾಗದನ್ಯ।
ವಿಷಯಗಳೆಂಬುವದನ್ನು ನೆರೆತಿಳಿದು। ದುರಾಶೆ ತೊರೆದು।
ಹಶಿವು ತೃಷೆಗಳ ಹಗಲಿರಳು ಮರೆದು। ಹರಿದಾಸರ ಬೆರೆದು॥
ಕುಶಲವಾರ್ತೆಯ ಕೇಳುವತನಕ। ಏಪ್ರಾಣಿ ನಿನ್ನ ॥೬॥

ಸ್ವಾತಂತ್ರ ಅಸ್ವತಂತ್ರವೆಂಬುದನು। ವಿವೇಕದಿ ತಿಳಿದು
ಸ್ವಾತಂತ್ರಮುಖ್ಯನು ಹರಿಯೆಂದು। ಧ್ಯಾನಕ್ಕೆ ತಂದು।
ಸ್ವಾತಂತ್ರ ನಾನಲ್ಲವೋ ಎಂದು। ಆಪ್ತನು ನೀನೆಂದು॥
ವ್ಯಾಪ್ತದರ್ಶಿಯಾಗುವತನಕ। ಏಪ್ರಾಣಿ ನಿನ್ನ ॥೭॥

ಸಕಲೇಂದ್ರಿಯಗಳಿಂದಲಿ ಹರಿಸೇವೆ। ಮಾಡಿ ಭಕುತಿಯಲಿ।
ಕಕುಲಾತಿಯು ಹಗಲಿರಳು ಬಿಡುತಲಿ। ಮುಖ್ಯದಿಂದಲಿ।
ಲಕುಮಿಪತಿ ಗೋವಿಂದನ ಮೂರುತಿಯ। ನೆನೆಯುತ್ತನಿರುತ
ಸುಖನಿಷ್ಠನೆಂದರಿಯುವತನಕ। ಏಪ್ರಾಣಿ ನಿನ್ನ ॥೮॥

ಬಿಂಬಭಾವಕ್ರಿಯ ದ್ರವ್ಯಾದ್ವೈತವ। ತಿಳಿದು ಸರ್ವಗತ।
ಬಿಂಬನು ಮಮಸ್ವಾಮಿ ಗೋಪಾಲವಿಠಲ। ನಲ್ಲದಿನ್ನಿಲ್ಲ।

ಎಂಬದರಿತು ಅನ್ಯಸ್ವಾತಂತ್ರ್ಯವ ಜರಿದು। ಸರ್ವವ್ಯಾಪಾರದಿ॥
ಬಿಂಬಕ್ರಿಯುವ ಕಾಂಬುವತನಕ। ಏಪ್ರಾಣಿ ನಿನ್ನ ॥೯॥

ಎಂಬ ಪದವನ್ನು ಹಾಡಿ, ಮಾತುಮಾತಿಗೆ ಬ್ರಹ್ಮಸೂತ್ರಗಳು,ತತ್ವಪ್ರಕಾಶಿಕಾ, ಅಣುವ್ಯಾಖ್ಯಾನ, ನ್ಯಾಯ ಸುಧಾ, ವ್ಯಾಸತ್ರಯಗಳು, ಉಪನಿಷದ್ವಾಕ್ಯಗಳು, ಭಗವದ್ಗೀತಾದಿಗಳನ್ನುದಹರಿಸಿ, ಪ್ರೇಮರಸದಲ್ಲಿ ಬೆರೆದು ತಾವು ಪರವಶರಾಗಿ, ಕುಳಿತವರನ್ನು ಪರವಶಗೊಳಿಸಿ ಹರಿವಾಣ ಸೇವೆಯಕಾಲಕ್ಕೆ ಕೀರ್ತನವನ್ನು ಮುಗಿಸಿದರು.

ಪಂಡಿತಾಗ್ರಣಿಗಳು ದಾಸರ ಪಾಂಡಿತ್ಯಾದಿ ಗುಣಗಳಿಗೆ ದಾಸರಾಗಿ, ಕುಹಕ ವೃತ್ತಿಗಳಿಗೆ ಕ್ಷಮೆಬೇಡಿ, ಪಾದಾಕ್ರಾಂತರಾದರು.

ಪೂರ್ಣಯ್ಯನವರ ಆನಂದವು ಮಿತಿಮೀರಿತು. ಒಂದು ಸಾವಿರ ವರಹಗಳಿಂದ ಪೂರ್ಣವಾದ ಹರಿವಾಣವನ್ನು ಮುಂದಿಟ್ಟು ದಿವ್ಯ ಶಹಲು ಜೋಡಿಯನ್ನು ಹೊದಿಸಿ ಸಾಷ್ಟಾಂಗ ನಮಸ್ಕಾರ ಮಾಡಿದರು.

ದಾಸರು—ರಾಯರೇ! ನಿಮ್ಮ ಸಂಕಲ್ಪಕ್ಕೆ ವಿರೋಧವಾಯಿತು. ನನ್ನ ಯೋಗ್ಯತೆಗೆ ಈ ಮರ್ಯಾದೆಯಲ್ಲ.

ಪೂರ್ಣಯ್ಯ—ಹಾಗೆನಬಾರದು. ನನ್ನ ಬಡಸೇವೆಯನ್ನು ಸ್ವೀಕರಿಸಬೇಕು.

ದಾಸರು—ಸಂಕಲ್ಪವು ಒಂದು ಮಂಡ್ಯದ ಛಾವಳಿ, ಐದು ರೂಪಾಯಿ! ಅಲ್ಲವೆ?

ಪೂರ್ಣಯ್ಯ—(ಹೆದರಿ) ತಾವು ಅಪರೋಕ್ಷಜ್ಞಾನಿಗಳು! ನಾನು ಸಂಕಲ್ಪಮಾಡಿದ್ದು ನಿಜ! ನನ್ನನ್ನು ಕ್ಷಮಿಸಬೇಕು.

ದಾಸರು—ನನಗೆ ಮರ್ಯಾದೆ ಮಾಡುವಿರಾದರೆ ನಿಮ್ಮ ಸಂಕಲ್ಪದಂತಾಗಬೇಕು. ಜ್ಞಾನಕ್ಕೆ ಮರ್ಯಾದೆ ಮಾಡುವಿರಾದರೆ ಶ್ರೀಮದಾಚಾರ್ಯರಿಗೆ ಮಾಡಬೇಕು.

ಪೂರ್ಣಯ್ಯನವರು ಮತ್ತೆ ಮತ್ತೆ ಕ್ಷಮೆ ಬೇಡಿ ದಾಸರ ಅನುಗ್ರಹಕ್ಕೆ ಪಾತ್ರರಾದರು.

ಪಂಡಿತರು ರಂಗವಲ್ಲಿಯ ಚಿತ್ರವನ್ನು ನೋಡಿ, ಇದರ ರಹಸ್ಯವೇನೆಂದು ಕೇಳಿದರು. ದಾಸರು, ಇದು ಉಪಾಸನಾ ಚಕ್ರ; ಮೂರ್ತಿಯು ಶ್ರೀರಂಗನಾಥನದೆಂದರು.

ಪೂರ್ಣಯ್ಯನವರು* ಆಭರಣವೇಕಿಲ್ಲವೆಂದರು. ದಾಸರು ಇವತ್ತು ಶ್ರೀರಂಗದ ರಂಗನಿಗೆ ಶ್ರೀತುಲಸೀ ಮಾಲೆಯೇ ಸರ್ವಾಭರಣವೆಂದರು.

---

- ೭ -

ಜಗನ್ನಾಥದಾಸರು ತೀರ್ಥಯಾತ್ರೆಯನ್ನು ಪೂರೈಸಿ ಮಾನವಿಗೆ ಬಂದ ನಂತರ ದೊಡ್ಡ ಪ್ರಮಾಣದ ಸಂಚಾರವನ್ನು ಕೈಗೊಳ್ಳಲಿಲ್ಲ. ಪ್ರಸ್ಥಾನತ್ರಯಗಳೆಂದು ಪ್ರಸಿದ್ಧವಾದ ಗೀತಾ ಬ್ರಹ್ಮಸೂತ್ರಗಳು ದಶೋಪನಿಷತ್ತುಗಳನ್ನು ಕನ್ನಡ ಪದ್ಯಗಳಾಗಿ ಮಾಡಿದರೆಂಬ ಪ್ರತೀತಿ ಬಹಳವಿದ್ದರೂ ಗುರುತಿಗೆ ಒಂದು ಪದ್ಯವಾದರೂ ಉಪಲಬ್ಧವಾಗಿಲ್ಲ [illegible] ಬ್ರಹ್ಮಸೂತ್ರಗಳ ವಿವರಣೆಯು, ಸೂತ್ರಕ್ಕೊಂದರಂತೆ ಮಾಡಿದರೆಂಬ ಭಾಮಿನೀಷಟ್ಪದಿಗಳಲ್ಲಿ ಕೆಲವು, ಲೇಖಕನ ಶಿಥಿಲವಹಿಗಳಿಂದ ದೊರೆಯುತ್ತವೆ. ಜಗನ್ನಾಥದಾಸರು ಮಾಡಿದವೆಂಬ ಶಿರಿನಾಮೆಯಿದ್ದರೂ ಅಂಕಿತದ ಪದ್ಯ ದೊರೆಯದಿರುವುದರಿಂದ ಪ್ರಕಟಿಸಲು ಯೋಚನೆಯಾಗಿದೆ. ಇದರಂತೆ ಗೀತೆಯ ಮತ್ತು ಉಪನಿಷತ್ತುಗಳ ಹಾಡಾಗಿದೆ. ಮಾನವಿಯಲ್ಲಿ ವಿಚಾರಿಸಿದರೆ ದಾಸರ ಒಂದೂ ವಹಿಯಿಲ್ಲ. ಜಗನ್ನಾಥ ವಿಠಲಾಂಕಿತ ಮಧುವರ್ಣದ ಶಿಲೆಯು ಐವತ್ತು ವರ್ಷಗಳ ಹಿಂದೆ ಹಿಂದೂ ಮುಸಲ್ಮಾನರ ಹೋಳೀ ಜಗಳದಲ್ಲಿ ಹೋಯಿತೆಂದು ಹೇಳುತ್ತಾರೆ. ಈಗ ಮಾನವಿಯಲ್ಲಿ ನೋಡುವ ವಸ್ತುಗಳೆಂದರೆ—ನೈಸೂರರಸರು ಕೊಟ್ಟ ಮೇನೆ, ಅವರು ಒರಗಿ ಕೂಡುತ್ತಿದ್ದ ಸ್ತಂಭ, ಮತ್ತು ದಾಸರ ತಂಬೂರಿ.

---

*ಇದರ ಪರೀಕ್ಷೆಯನ್ನು ಕಾಲಾಂತರದಲ್ಲಿ, ಒಂಟೆಯ ಸವಾರರನ್ನು ಕಳುಹಿಸಿ ಆ ದಿನ ರಂಗನಾಥನ ಆಭರಣಗಳನ್ನು ಒಪ್ಪಕ್ಕೆ ಕೊಟ್ಟಿದ್ದಂತೆಯೂ ಶ್ರೀ ತುಲಸೀ ಮಾಲಾ ಮಾತ್ರ ಆಭರಣವಾಗಿದ್ದಂತೆಯೂ ವರ್ತಮಾನ ತರಿಸಿಕೊಂಡರು.

ದಾಸರು ರಚಿಸಿದ ತಂತ್ರಸಾರವು ಕೆಳಕಂಡಂತಿದೆ.

ಪದ — ಜಂಪೆತಾಳ

ಪಾಹಿ ಪಂಕೇರುಹೇಕ್ಷಣ ಸರ್ವಕಾಮದ
ಪಾಹಿಪದ್ಮಾಲಯ ನಿಕೇತನ ಸದಾ॥ ಪಾಹಿಪಾಹಿ ॥ಪ॥

ಜಯತು ಚತುರಾನನಭವೇಂದ್ರಾದಿ ಬುಧವಿನುತ
ಜಯತು ಚತುರಾನನ ರಮಾವಲ್ಲಭ ।
ಜಯತು ಸಂಪೂರ್ಣಚಿತ್ಸುಖಮಯ ಸುಗುಣನಿಲಯ
ಜಯತು ಜನ್ಮಾದಿಕಾರಣ ದೋಷಹಾ ॥೧॥

ಕಮಲಾಕ್ಷ ಪರಮಸಂಭ್ರಮದಿಂದ ಲಕ್ಷ್ಮಿಕರ
ಕಮಲದಿಂ ಸೇವೆಗೊಳುತಿರಲು ಆಗ ॥
ಅಮರನಿವಹಾರಾಧ್ಯ ಕಮಲಾಸನನು ಬಂದು
ನಮಿಸಿ ಬಿನ್ನೈಸಿದನು ತನ್ನ ಪಿತಗೆ ॥೨॥

ಆವ ದೇವೋತ್ತಮನು ಆವಾವ ಗುಣಗಳಿಹ
ವಾವಾವಶಬ್ದ ವಾಚ್ಯಾವರೀತಿ ॥
ಈ ವಿಚಾರವನು ಪೇಳೆನಲು ನಗುತ ರಾ ।
ಜೀವಸಂಭವಗೆ ಇಂತೆಂದು ನುಡಿದ ॥೩॥

ವನಜಸಂಭವ ಕೇಳು ನಾನೆ ಸರ್ವೋತ್ತಮನು
ಎನಗನಂತಾನಂತ ಮಂಗಳಗುಣ ॥
ಪ್ರಣವ ವಾಚ್ಯನು ನಾನು ಅಷ್ಟವರ್ಣೋಪೇತ
ಪ್ರಣವದ ವಿಚಾರವನು ಪೇಳ್ವೆ ನಿನಗೆ ॥೪॥

ಸಾದರದಿ ಕೇಳು ಅಕಾರ ಉಕಾರ ಮಕಾರ
ನಾದಬಿಂದು ಘೋಷಶಾಂತತಿಶಾಂತರು ॥
ಈ ದಿವ್ಯವರ್ಣದಲಿ ವಿಶ್ವತೈಜಸ ಪ್ರಾಜ್ಞ
ವೋದಮಯತುರ್ಯಾತ್ಮ ಅಂತರಾತ್ಮ ॥೫॥

ಪರಮಾತ್ಮ ಜ್ಞಾನಾತ್ಮನೆಂಬಷ್ಟರೂಪದಿಂ
ದಿರುತಿಹೆಸು ವೇದಾದಿಯಲಿ ಸರ್ವದಾ ||
ಪರಮಋಷಿಗಳು ಈ ಮಹಾಮಂತ್ರ ಜಪಮಾಡಿ ಮು
ತ್ಪುರವನೈದುವರು ಸತ್ವರದಿಂದಲಿ ||೬||

ವಾರಿರುಹ ಸಂಭವನೆ ಕೇಳಕಾರದಲಿ ಹದಿ
ನಾರು ಅಚ್ಚುಗಳು ಜನಿಸಿದವು ಕ್ರಮದಿ ||
ಚಾರು ಅಜ ಆನಂದ ಇಂದ್ರೇಶ ಮೊದಲಾದ
ಈರೆಂಟು ಮೂರ್ತಿಗಳು ವಿಶ್ವಜನಿತ ||೭||

ಉ, ಮ, ನಾದ, ಬಿಂದು, ಘೋಷಗಳಿಂದ ಕಚಟತಪ
ವಿಮಲವರ್ಗಗಳು ಪುಟ್ಟಿದವು ಐದು ||
ಕಮಲಭವ ಕೇಳು ತೈಜಸಪ್ರಾಜ್ಞತುರ್ಯ ಆ
ತುಮ ಅಂತರಾತ್ಮ ಮೂರ್ತಿಗಳಿಂದಲಿ ||೮||

ಪಂಚವಿಂಶತಿರೂಪ ಅಭಿವ್ಯಕ್ತವಾದವು ವಿ
ರಿಂಚಿ ಕೇಳ್ ಶಾಂತಿಯಿಂ ಯರಲವಗಳು ||
ಸಂಚಿಂತಿಸತಿ ಶಾಂತದಿಂದ ಶಷಸಹಳ ಕೇಳ್
ಪಂಚಾಕ್ಷರಂಗಳು ಜನಿಸಿದಾವು ||೯||

ಪರಮಾತ್ಮ ಜ್ಞಾನಾತ್ಮರೂಪದಿಂ ಒಂಭತ್ತು
ನಿರುಪಮ ಮೂರ್ತಿಗಳು ಶೋಭಿಸಿದವು ||
ಪರಮೇಷ್ಠಿ ನಾರಾಯಣಾಷ್ಟಾಕ್ಷರ ಮಂತ್ರ
ಒರೆದೆ ನಿನಗಾನುಸಾಂಗೋಪಾಂಗದಿ ||೧೦||

ತಾರಗತ ಅಷ್ಟವರ್ಣಂಗಳಿಂ ಓಂನಮೋ
ನಾರಾಯಣಾಯ ಎಂಬೀ ಮಂತ್ರವು ||
ಚಾರು ಅಷ್ಟಾರ್ಣತದ್ವಾಚ್ಯ ಮೂರ್ತಿಗಳೆಂಟು
ಸಾರ ವಿಶ್ವಾದಿ ಪ್ರಣವಸ್ಥ ಭಿನ್ನ ||೧೧||

ಓಂಭೂಃ ಓಂಭುವಃ ಓಂಸ್ವಃ ಓಂಮಹಃ
ಓಂಭೂರ್ಭುವಸ್ಸುವಃ ಈ ವ್ಯಾಹೃತೀ ||

ಅಂಬುಜೋದ್ಭವ ಪ್ರಣವದಾದಿ ನಾಲ್ವರ್ಣದಿಂ
ಸಂಭವಿಸಿತೀ ಮಂತ್ರ ಸುಲಭದಿಂದ ||೧೨||

ತನಯ ಕೇಳೀ ಮಂತ್ರಗತ ನಾಲ್ಕುರೂಪಗಳು
ಅನಿರುದ್ಧ ಪ್ರದ್ಯುಮ್ನ ಸಂಕರುಷಣ ||
ಅನಘ ಶ್ರೀವಾಸುದೇವನ ಮೂರ್ತಿ ಚಿಂ
ತನೆಮಾಡು ಈ ವ್ಯಾಹೃತಿಯುಲಿ ಬಿಡದೆ ||೧೩||

ನಿಗಮಾದಿ ಮೊದಲು ನಾಲ್ವರ್ಣದಿಂ ಓಂನಮೋ
ಭಗವತೇ ವಾಸುದೇವಾಯ ಎಂಬ ||
ಯುಗಳಾಕ್ಷರಾತ್ಮಕ ಮಂತ್ರಪ್ರತಿಪಾದ್ಯ
ಭಗವದ್ರೂಪಗಳ ಪೇಳುವೆನು ನಿನಗೆ ||೧೪||

ಕೇಶವ ನಾರಾಯಣ ಮಾಧವ ಗೋವಿಂದ
ಕ್ಲೇಶನಾಶನವಿಷ್ಣು ಮಧುಸೂದನ ||
ಶ್ರೀಶ ಶ್ರೀತ್ರಿವಿಕ್ರಮನು ವಾಮನ ಶ್ರೀಹೃಷೀ
ಕೇಶಾಂಬುರುಹನಾಭ ದಾಮೋದರ ||೧೫||

ತೃತಿಯ ಆವರ್ತ್ಯ ಅಷ್ಟಾರ್ಣದಿಂ ಮೂರು ವ್ಯಾ
ಹೃತಿಯಿಂದ ದ್ವಿಷಡಕ್ಷರೆರಡರಿಂದ ||
ಚತುರಾಸ್ಯ ಕೇಳು ಗಾಯಿತ್ರಿ ಉತ್ಪನ್ನವಾ
ಯಿತು ಕೇಶವಾದಿ ಕೃಷ್ಣಾಂತರೂಪ ||೧೬||

ವಿತತವಾದವು ಪುರುಷಸೂಕ್ತ ಗಾಯಿತ್ರಿಯಿಂ
ದತುಳ ಈ ಪುರುಷಸೂಕ್ತದಲಿ ವೇದ ||
ತತಿಗಳುದಿಸಿದವು ನಿಗಮ ಬ್ರಹ್ಮಸೂತ್ರ ಭಾ |
ರತ ಪಂಚರಾತ್ರ್ಯಾದಿ ಆಗಮಗಳು ||೧೭||

ಶತಕೋಟಿ ಮೂಲರಾಮಾಯಣ ಪುರಾಣಗಳು
ಸ್ಮೃತಿಸಮೂಹಗಳು ಪುರಾಣಂಗಳು ||
ಇತರ ವೈದಿಕ ಸುಶಬ್ದಗಳು ಜನಿಸಿದವು ಸಂ |
ತತವಾಚ್ಯ ನಾನು ಸಂದೇಹವಿಲ್ಲ ||೧೮||

ಉದಯಿಸುವ ರವಿಯವೋಲ್ಕಾಂತಿ ಜ್ಞಾನಾನಂದ
ಮೊದಲಾದ ದಿವ್ಯಗುಣಮಯ ಶರೀರ ||
ಸುದರುಶನ ದರ ಗದಾಂಬುಜಗಳಾಯುಧವೆನಗೆ
ತ್ರಿದಶಗಣವೇಯ ಸರ್ವೇಶ ನಾನು ||೧೯||

ಇದ್ದೆಸೆಯಲೆನ್ನ ಸೇವಿಪರು ಶ್ರೀಭೂದೇವಿ
ಕೃದ್ಧೋಲ್ಕ ವಿಶ್ವಕೇಶವ ಮತ್ಸ್ಯಕಾದಿ ||
ಮದ್ರೂಪಗಳ ಮಧ್ಯಗನು ನಾನು ಬ್ರಹ್ಮಫಣಿ
ಪಾದ್ಯರತಿಭಕ್ತಿ ಸೇವ್ಯನು ಸಮರ್ಥ ||೨೦||

ಅರಿದರವರ ಭಯಾಂಕಿತ ಚತುರ್ಭುಜನನಾ
ಲ್ಕೆರಡು ರೂಪಂಗಳು ಪ್ರದೀಪವರ್ಣ||
ಸರುವಾಭರಣ ವಿಭೂಷಿತವಾದ ಮದ್ರೂಪ
ನಿರುತವೇಯವು ಮುಮುಕ್ಷುಗಳಿಂದಲಿ ||೨೧||

ತಾರ ನಾರಾಯಣಾಷ್ಟಾಕ್ಷರವು ವ್ಯಾಹೃತಿಯು
ಈರಾರುವರ್ಣ ಗಾಯಿತ್ರಿಮಂತ್ರ ||
ಸಾರಮಾತೃಕ ಪುರುಷಸೂಕ್ತ ವೈಷ್ಣವಗಳಿವು
ನೀರಜಾಸನ ಕೇಳು ಮಹಮಂತ್ರವು ||೨೨||

ಸೀತಾರಮಣ ಮೂಲರಾಮನತಿಹರುಷದಲಿ
ಧಾತಗುಪದೇಶಿಸಿದ ನೀತೆರದಲಿ||
ಪ್ರೀತಿಯಿಂದಲಿ ದ್ವಾದಶಾವರ್ತಿ ಪಠಿಸೆ ಶೀ
ಷಾತಪತ್ರನು ಕಾಮಿತಾರ್ಥವೀವ ||೨೩||

ಕರುಣಾಬ್ಧಿ ವಸುಧೇಂದ್ರರಾಯರ ಕೃಪಾಬಲದಿ
ವಿರಚಿಸಿದೆ ನೀ ಗ್ರಂಥಪದರೂಪದಿ ||
ಅರಸಿಕರು ನಿಂದಿಸಲು ಕುಂದಾವುದಿದಕೆ ಭಾ
ಸ್ಕರನುದಯ ಘೂಕ ದೂಷಿಸುವ ತೆರದಿ ||೨೪||

ಧರ್ಮಾರ್ಥಕಾಮಮೋಕ್ಷಗಳೀವ ಗ್ರಂಥವಿದು
ನಿರ್ಮಾಣಮಾಡಿಸಿದ ರಾಮಚಂದ್ರ ||

ಭರ್ಮಗರ್ಭಗೆ ಒಲಿದು ಪೇಳಿದ ಮಹಾಮಂತ್ರ
ಮರ್ಮಗಳನರಿತು ಜಪಿಸುವನು ಧನ್ಯ ||೨೬||

ಮಂಗಳ ರಮಾಪತಿಗೆ ಮಂಗಳ ದೃಹಿಣಿಪತಿಗೆ
ಮಂಗಳ ದಶಪ್ರಮತಿ ಮುನಿಮಾನ್ಯಗೆ ||
ಮಂಗಳ ಶಿವೇಂದ್ರಾದಿ ಸುರನಿಕರ ಪೂಜ್ಯನಿಗೆ
ಮಂಗಳ ಜಗನ್ನಾಥವಿಠಲಯ್ಯಗೆ ||೨೭||

ಇಪ್ಪತ್ತರೇಳೆನಿಪ ಪದಗಳೆಂಬತಿ ವಿಮಲ
ಪುಷ್ಪಮಾಲಿಕೆ ಮೂಲರಾಮನಡಿಗೆ ||
ಅರ್ಪಿಸಿದನೀ ಸುಮನದಾಮವನು ದಿನದಲ್ಲಿ
ಒಪ್ಪದಿಹದೇ ಬುಧರ ಮಸ್ತಕದಲಿ ||೨೭||

ಜಗನ್ನಾಥದಾಸರು ರಚಿಸಿದ ಮೊತ್ತವಾದ ಗ್ರಂಥಗಳಲ್ಲಿ ಹರಿಕಥಾಮೃತಸಾರ ವೊಂದು ಕನ್ನಡ ತೆಲುಗು ಬಾಲಬೋಧಲಿಪಿಗಳಲ್ಲಿ ಮುದ್ರಿತವಾಗಿ ಪ್ರಚಾರ ದಲ್ಲಿದೆ. ದೇವದೈತ್ಯರತಾರತಮ್ಯಸಂಧಿಗಳು, ಪದಾರ್ಥಗಳಲ್ಲಿ ಭಗವದ್ರೂಪ ವರ್ಣನೆಯ ಸಂಧಿಗಳು, ಜ್ಞಾಪಕದಲ್ಲಿ ನಿಲ್ಲುವದು ಶ್ರಮಸಾಧ್ಯವಾದ್ದರಿಂದ ಅವುಗಳನ್ನು ಬಿಟ್ಟುಮಿಕ್ಕ ಪದ್ಯಗಳು ನಿರಂತರ ಪಠನೆಗೆ ಅರ್ಹಗಳಾಗಿವೆ.

ಶ್ರೀದಾಸರವರ ಹರಿಕಥಾಮೃತಸಾರವನ್ನಾಸ್ವಾದಿಸುತ್ತಾ ಕರ್ಜಗಿಯ ದಾಸಪ್ಪದಾಸರು ಮೈಮರೆದು—

ಸಾರವೆಂದರೆ ಹರಿಕಥಾಮೃತ
ಸಾರವೆಂಬುವದೆಮ್ಮ ಗುರುವರ
ಸಾರಿದಲ್ಲದೆ ತಿಳಿಯದೆನುತ ಮಹೇಂದ್ರನಂದನನ||
ಸಾರಥಿಯ ಬಲಗೊಂಡು ಸಾರಾ
ಸಾರಗಳ ನಿರ್ಣೈಸಿ ಪೇಳ್ದನು
ಸಾರನಡೆವ ಮಹಾತ್ಮರಿಗೆ ಸಂಸಾರವೆಲ್ಲಿಹದೋ ||೩||

ದಾಸವರ್ಯರ ಮುಖದಿನಿಂದು ರ
ಮೇಶನನು ಕೀರ್ತಿಸುವ ಮನದಭಿ
ಲಾಷೆಯಲಿ ವರ್ಣಾಭಿಮಾನಿಗಳೊಲಿದು ಪೇಳಿಸಿದ||

ಈ ಸುಲಕ್ಷಣ ಕಾವ್ಯದೊಳು ಯತಿ
ಪ್ರಾಸಗಳಿಗೆ ಪ್ರಯತ್ನವಿಲ್ಲದೆ
ಲೇಸುಲೇಸೆನೆ ಶ್ರಾವ್ಯವಾದುದು ಕುರುಹು ಕವಿಗಳಿಗೆ ||೪||

ಪ್ರಾಕೃತೋಕ್ತಿಗಳೆಂದು ಬರಿದೆ ಮ
ಹಾಕೃತಘ್ನರು ಜರಿವರಲ್ಲದೆ
ಸ್ವೀಕೃತವಮಾಡದಲೆ ಬಿಡುವರೆ ಕುರುಹೆ ಕವಿಗಳಿಗೆ||
ಶ್ರೀಕೃತೀಪತಿಯಮಲ ಗುಣಗಳು
ಈಕೃತಿಯೊಳುಂಟಾದ ಬಳಿಕಿದು
ಪ್ರಾಕೃತವೆ? ಸಂಸ್ಕೃತದ ಸಡಗರವೇನು ಸುಗುಣರಿಗೆ||೫||

ಎಂಬ ಪದ್ಯಗಳನ್ನು ಫಲಸ್ತುತಿಯಲ್ಲಿ ಬರೆದಿರುತ್ತಾರೆ. ಮತ್ತು ಹಾಗೆಯೇ ಮುಂದರಿಯುತ್ತಾ—

ಸತಿಯರಿಗೆ ಪತಿಭಕುತಿ, ಪತ್ನಿಯ
ವ್ರತ ಪುರುಷರಿಗೆ, ಹರುಷ ನೆಲೆಗೊಂ
ಡತಿ ಮನೋಹರವಾಗಿ ಗುರುಹಿರಿಯರಿಗೆ ಜಗದೊಳಗೆ||
ಸತತ ಮಂಗಳವೀವ ಬಹಳ ಸು
ಕೃತಿಗಳೆನಿಸುತ ಸುಲಭದಿಂ ಸ
ದ್ಗತಿಯ ಪಡೆವರು ಹರಿಕಥಾಮೃತಸಾರವನು ಪಠಿಸೆ ||೨೧||

ಎಂಬ ಮಾತುಗಳನ್ನಾಡಿದ್ದಾರೆ.

ಜಗನ್ನಾಥದಾಸರು ಹರಿಕಥಾಮೃತಸಾರವನ್ನು ತಮ್ಮ ಎಂಭತ್ತನೇ ವಯಸ್ಸಿನಲ್ಲಿ ಬರೆದರಂತೆ! ಬರೆಯುವ ಕಾಲದಲ್ಲಿ ವೃದ್ಧಾಪ್ಯದಿಂದ ಜೋಲು ಬಿದ್ದಿದ್ದ ಹುಬ್ಬುಗಳು ಕಣ್ಣಿಗೆ ಮರೆಯಾಗಿದ್ದರೆ ಶಿಷ್ಯರು ಎತ್ತಿಹಿಡಿಯುತ್ತಿದ್ದರಂತೆ! ತಾಡಾವಾಲೆಯಮೇಲೆ ಘಂಟೆಯಿಂದ ಕರಕರನೆ ಬರೆಯುತ್ತಾ ಇದ್ದಕ್ಕಿದ್ದಹಾಗೆ ಕೈನಿಲ್ಲಿಸಿ ದಾಸರು ನಕ್ಕರಂತೆ! ಶಿಷ್ಯರು ಕಾರಣವೇನೆಂದು ಕೇಳಿದರಂತೆ! ದಾಸರು—"ಅಪ್ಪಾ! ತತ್ವಾಭಿಮಾನಿ ದೇವತೆಗಳು ಈ ಗ್ರಂಥವನ್ನು ಬರೆಸುತ್ತಿದ್ದಾರೆ. ವರ್ಣಾಭಿಮಾನಿ ದೇವದೇವಿಯರು ನಾನು

ತಾನೆಂದು ಮುಂದೆ ಬಂದು ನಿಲ್ಲುತ್ತಿದ್ದಾರೆ! ನಗವೆ ಏನುಮಾಡಲಿ?" ಎಂಬು ದಾಗಿ ಹೇಳಿದರಂತೆ!

ಈ ಮಾತು ಅತಿಶಯೋಕ್ತಿಯಲ್ಲ. ನಿರಂತರ ತತ್ವಾಭ್ಯಾಸ ಮಾತ್ರ ಕಾಭ್ಯಾಸ ಮಾಡುವರಿಗಿದು ಹೊಸವಿಷಯವಲ್ಲ. ಮಂತ್ರೋಪಾಸಕರಿಗೆ ಧ್ಯಾನ ಶ್ಲೋಕಗಳಲ್ಲಿ ಉಕ್ತವಾದ ಭಗವನ್ಮೂರ್ತಿಯು ಕಣ್ಣೆದುರಿಗೆ ನಿಲ್ಲು ವದು ಸಹಜ ಧರ್ಮವಾಗಿದೆ. ಶಾಸ್ತ್ರವನ್ನು ನಂಬವರಾಗಬೇಕು. ಉಪಾಸ ಕರಾಗಬೇಕು. ಎರಡೂ ಇಲ್ಲದವರಿಗೆ ಈ ಮಾತು ಅರ್ಥವಾಗುವುದಿಲ್ಲ.

ಹರಿದಾಸರ ಮನಸ್ಸು ಎಷ್ಟು ಉದಾರವಾದುದೆಂಬುದಕ್ಕೆ ಕೆಳ ಕಂಡ ಎರಡೇ ಪದ್ಯಗಳ ನಿದರ್ಶನ ಸಾಕು:—

ಸರ್ವದೇಶವು ಪುಣ್ಯದೇಶವು
ಸರ್ವಕಾಲವು ಪರ್ವಕಾಲವು
ಸರ್ವಜೀವರು ದಾನಪಾತ್ರರು ಮೂರು ಲೋಕದೊಳು||
ಸರ್ವ ಮಾತುಗಳೆಲ್ಲ ಮಂತ್ರವು
ಸರ್ವ ಕೆಲಸಗಳೆಲ್ಲ ಪೂಜೆಯು
ಶರ್ವವಂದನ ವಿಮಲ ಮೂರ್ತಿಧ್ಯಾನವುಳ್ಳವಗೆ ||೪||X

ಆವಕುಲದವನಾದೊಡೇ ನಿ
ನ್ನಾವ ದೇಶದೊಳಿದ್ದೊಡೇ ನಿ
ನ್ನಾವ ಕರ್ಮವ ಮಾಡಲೇನಿನ್ನಾವಕಾಲದಲಿ||
ಶ್ರೀವರನ ಸರ್ವತ್ರದಲಿ ಸಂ
ಭಾವಿಸುತ ಪೂಜಿಸುತ ಮೋದಿಪ
ಕೋವಿದರಿಗುಂಟೇನೊ ಭಯದುಃಖಾದಿದ್ವಂದಗಳು ||೪||Xiii

ಜಗನ್ನಾಥ ದಾಸರ ಹರಿಕಥಾಮೃತಸಾರವನ್ನು ನೋಡಿ ಪ್ರಾಣೇಶ ದಾಸರು:-

ಶಿಖದಲ್ಲಿದ್ದ ಪೀಯೂಷ
ಸುಖದಿ ಪಿತೃಗಳುಂಡರು
ಅಕಟಕಾಣಾರೀ ನರರೆಂದೂ ತಂಗಿ ನೋಡಿದೇನೇ||

ಪ್ರಕಟ ಗ್ರಂಥಶೋಧಿಸಿ
ಯುಕುತಿಂದ್ಹರಿಕಥಾಮೃತ
ಸಕಲರಿಗುಣಿಸೀ ಸುಖಿಸುವರೇ ತಂಗಿ ನೋಡಿದೇನೇ ||೨||

ಎಂಬದಾಗಿ ದಾಸರ ಸ್ತೋತ್ರಪದ ಮಾಡಿದ್ದಾರೆ.

ಕರ್ಜಗಿಯ ದಾಸಪ್ಪದಾಸರು ಶ್ರೀ ದಾಸರಾಯರಲ್ಲಿ ಭಕ್ತಿಮಾಡುವ ಜನರ ಪಠಣೆಗೆ ಯೋಗ್ಯವಾಗಿರುವಂತೆ ಕೆಳಕಂಡ ದೇವರನಾಮವನ್ನು ರಚಿಸಿರುತ್ತಾರೆ.

ಪೂರ್ವಿ — ರೂಪಕತಾಳ

ಸಂಗಸುಖವ ಬಯಸಿ ಬದುಕಿರೋ
ರಂಗನೊಲಿದ ಭಾಗವತರ ||ಪ||

ಪುಟ್ಟಿದಾರಭ್ಯ ಪರಮ| ವೈಷ್ಣವಾಧ್ಯಕ್ಷರೆನಿಸಿ
ಶಿಷ್ಟಸದಾಚಾರದಲ್ಲಿ ನಿಷ್ಠರಾಗಿ ನಿತ್ಯ ಮುದ್ದು
ಕೃಷ್ಣ ಕೀರ್ತನೆಯಪಾಡುತಾ| ಕಾಮ್ಯಕರ್ಮ
ಬಿಟ್ಟು ಭಕುತಿಯನ್ನು ಮಾಡುತಾ| ನೇಮದಿಂದ
ತುಷ್ಟಿಗೈಸಿ ಖಳರ ಕಾಡುತಾ|| ಬಂದಲಾಭ|
ನಷ್ಟತುಷ್ಟಿಗಳನು ಒಡಂ| ಬಟ್ಟ ಬಗೆಯಪೇಳಲೆಷ್ಟು ||೧||

ಭೂತದಯಾಶೀಲರಾದ| ನೀತ ಗುರುದ್ವಾರ ಜಗ
ನ್ನಾಥವಿಠಲಂಕಿತವನು| ಪ್ರೀತಿಯಿಂದ ಪಡೆದು ಸಂ|
ಗೀತ ವೃತ್ತಪದಸುಳಾದಿಯ| ಪೇಳಿ ಪ್ರೇಮಾತಿಶಯದಿ
ಮಧುವಿರೋಧಿಯ| ಒಲಿಸಿಕೊಂಡು
ಪೂತರಾದ ಜನರ ಬಾಧೆಯ| ದೂರಮಾಡಿ||
ಖ್ಯಾತರಾಗಿಹರು ಪುಶಿಯ| ಮಾತಿದಲ್ಲ ವಿಚಾರಿಸಲ್ಲ ||೨||

ಮೇದಿನಿಯೊಳಗುಳ್ಳ ಗಂ| ಗಾದಿ ತೀರ್ಥಪತಿಗಳಿವರ
ಕಾದುಕೊಂಡಿಹರು ಬಿಡದೆ| ಸ್ವಾದಿರಾಜೇಂದ್ರರ ಪ್ರ|
ಸಾದದಿಂದ ಹರಿಕಥಾಮೃತ| ಸಾರತತ್ವ|
ಸಾಧು ಜನರಿಗಾಗಿ ಪ್ರಾಕೃತ |ದಿಂದ ಪರ|

ಮಾದರದಲಿ ಪೇಳೆದುಷ್ಕೃತ | ದೂರಮಾಡಿ||
ಮೋದಿಸುವರಿಗೆಣೆಯಾಗಾಣೆ ಶ್ರೀದವಿಠಲನಾಣೆ ||೩||

ಜಗನ್ನಾಥದಾಸರ ಜೀವಿತದಲ್ಲಿ ಎಂಭತ್ತೆರಡು ವರ್ಷಗಳಾದವು. ಬಾಲ್ಯ ಪ್ರಭೃತಿ ನಲವತ್ತೆರಡು ವರ್ಷಗಳು ವಿದ್ಯಾಭ್ಯಾಸ ಪಾಠ ಪ್ರವಚನದಲ್ಲಿ ಕಳೆದವು. ಉಳಿದ ನಲವತ್ತು ವರ್ಷಗಳು ದಾಸಾರ್ಯರ ಆಜ್ಞೆಯಂತೆ, ಗ್ರಂಥರಚನೆ ದೇಶಸಂಚಾರ ಧರ್ಮಪ್ರಚಾರಗಳಲ್ಲಿ ಕಳೆದವು. ಗಹನ ತತ್ವಗಳು ಸುಲಭ ಕನ್ನಡ ದೇವರನಾಮ ಸುಳಾದಿಗಳಲ್ಲಿ ರಚಿತವಾದವು. ಕನ್ನಡ ವಾಙ್ಮಯದ ಗೌರವವು "ಸಂಸ್ಕೃತದಲಿನ್ನೇನು ?" ಎಂಬಷ್ಟು ವೃದ್ಧಿಯಾಯಿತು. ದಾಸರು ತಮ್ಮ ಜನ್ಮದ ವ್ಯಾಪಾರವಾಯಿತೆಂದರು.

ಶಾಲೀವಾಹನ ಶಕ ೧೬೩೨ನೇ ಶುಕ್ಲಸಂವತ್ಸರದ ಭಾದ್ರಪದ ಶುದ್ಧ ನವಮಿಗೆ ಗೋಪಾಲದಾಸರು ವಿಜಯದಾಸರ ಆಜ್ಞೆಯಂತೆ ತಿರುಪತಿಯಲ್ಲಿ ಜಗನ್ನಾಥದಾಸರಿಗೆ ನಲವತ್ತು ವರ್ಷ ಆಯುರ್ದಾನ ಮಾಡಿದ ಅವಧಿಯು ಮುಗಿಯಿತು. ವೃದ್ಧಾಪ್ಯದಲ್ಲಿ ಸಮೀಪದಲ್ಲಿರಬೇಕೆಂದು ಪ್ರಾಣೇಶದಾಸರೂ ದಾಸಪ್ಪದಾಸರೂ ಮಾನವಿಗೆ ಬಂದರು. ದಾಸರು ದೃಢಾಂಗರಾಗಿದ್ದುದನ್ನು ನೋಡಿ ಯಾರೂ ನಿರ್ಯಾಣ ಕಾಲದ ಯೋಚನೆ ಮಾಡಲಿಲ್ಲ. ದಾಸರು ತಮ್ಮ ಪರಮಾವಧಿಯನ್ನು ಯಾರಿಗೂ ತಿಳಿಸಲಿಲ್ಲ.

ಭಾದ್ರಪದ ಶುದ್ಧ ನವಮಿಯ ದಿವಸ, ನಡೆಸಿಕೊಂಡು ಬಂದ ಪದ್ಧತಿಯಂತೆ ಆಯುರ್ದಾನದ ದಿನವೆಂದು ಸತ್ಪಾತ್ರರನ್ನು ಕರೆದು ಮೃಷ್ಟಾನ್ನ ಭೋಜನ ಮಾಡಿಸಿದರು. ಮುಂಚಿತವಾಗಿ ಭಜನೆಗೆ ಸಿದ್ಧವಾಗಲೆಂದು ಪ್ರಾಣೇಶದಾಸರಿಗೆ ಹೇಳಿದರು.

ಸಾಯಂಸಂಧ್ಯೆಯಾಯಿತು. ಸ್ತೋತ್ರಪಠನೆಯಾಯಿತು. ಜಗನ್ನಾಥದಾಸರು "ಸತತಗಣನಾಥ ಸಿದ್ಧಿಯನೀವ" ಎಂಬ ಉಗಾಭೋಗವನ್ನು ಹಾಡಿದರು. ಮಿಕ್ಕ ದೇವತಾ ಪ್ರಾರ್ಥನೆಗಳನ್ನು ಪ್ರಾಣೇಶದಾಸರೂ ದಾಸಪ್ಪನವರೂ ಹಾಡಿದರು. ಪದ್ಮಾಸನಾಸೀನರಾಗಿ ದಾಸರು ಲಯಚಿಂತನೆ ಮಾಡುತ್ತಾ ಕುಳಿತರು. ದಾಸರೇಕೆ ಕಣ್ಣುಮುಚ್ಚಿಕುಳಿತರೆಂಬ ಕಲ್ಪನೆ ಯಾರಿಗೂ ಆಗಲಿಲ್ಲ. ದೇವತಾಪ್ರಾರ್ಥನೆಯ ಪೂರ್ವರಂಗ ಮುಗಿದರೂ

ದಾಸರು ಕಣ್ಣು ಬಿಡಲಿಲ್ಲ. ಎಲ್ಲರೂ ತಟಸ್ಥರಾಗಿ ದಾಸರಲ್ಲಿ ನೆಟ್ಟದೃಷ್ಟಿಯುಳ್ಳವರಾಗಿ ಕುಳಿತರು.

ಬ್ರಹ್ಮವೇತ್ತೃರಿಗಾಗುವಂತೆ ದಾಸರ ನೇತ್ರಿಯು ಸಿಡಿಯಿತು. ಅದೇನೆಂದು ಪ್ರಾಣೇಶದಾಸರು ನೋಡುವಷ್ಟರಲ್ಲಿ ದಾಸರ ನಿರ್ಯಾಣವಾಯಿತೆಂಬ ಗದ್ದಲವಾಯಿತು. ಕಣ್ಣು ತೆರೆಯಲಿಲ್ಲ. ಮುಖದಂದವು ಕೆಡಲಿಲ್ಲ. ಕೈಯ್ಯಲ್ಲಿದ್ದ ತಂಬೂರಿಯು ಕದಲಲಿಲ್ಲ. ಜನರು ದಾಸರಾಯರು ನಮ್ಮನ್ನಗಲಿದರೇ—ಪರದೇಶಿಗಳಾದೆವೇ—ಎಂದು ದುಃಖಿತರಾದರು.

ಮನಸ್ಸನ್ನು ಸಮಸ್ಥಿತಿಗೆ ತಂದುಕೊಂಡು, ಗಂಟಲನ್ನು ಸರಿಪಡಿಸಿಕೊಂಡು, ಉದ್ವೇಗವನ್ನಡಗಿಸಿಕೊಂಡು ಕರ್ಜಗೀ ದಾಸರು—

ಮುಖಾರಿ — ಜಂಪೆತಾಳ

ತೆರಳಿದರು ಶ್ರೀಜಗನ್ನಾಥದಾಸಾರ್ಯರು |
ಶಿರಿಪತಿಯ ಸ್ಮರಿಸಿ ಹರಿಪುರಕೆ ಹರುಷದಲಿ ||ಪ||

ಪರಶುಕ್ಲವತ್ಸರದ ಭಾದ್ರಪದಸಿತಪಕ್ಷ
ಹರಿವಾರ ನವಮಿಯಲ್ಲಿ
ಸುರಸಿದ್ಧಸಾಧ್ಯ ಸನ್ಮುನಿಗಣಾರ್ಚಿತಪಾದ
ಹರಿಯಪರನೆಂದೆನುತಲಿ
ಧರಣಿಯನು ತ್ಯಜಿಸಿ ಬಹುಮಾನಪೂರ್ವಕವಾಗಿ
ಬೆರೆದು ಸುರಸಂದಣಿಯಲಿ||
ಪರಮಾರ್ಥವೈದಿ ಮನ ಹರಿಯಪಾದದಲಿಟ್ಟು |
ಪರವಿಷ್ಣುದೂತ ವೈಮಾನಿಕರ ಒಡಗೂಡಿ ||೧||

ಅತಿ ಪ್ರೇಮಿಗಳು ಹಸನ್ಮುಖರು ದಯಬೀರುವರು |
ಖತಿದೂರರಿವರು ಜಗದಿ
ಮಿತಿವಿಗಾರಿ ಶ್ರೀಹರಿಯ ಕಥೆನಾನಪರಿಯಲ್ಲಿ
ಅತಿಶಯದಿ ಪೇಳಿ ಇಹಕೆ
ಸತತವೂ ಶರಣರ್ಗೆ ಗತಿಯಾಗುವಂತೆ ಸ
ತ್ಪಥವಿಡಿಸಿ ಕರುಣದಿಂದ ||
ಹಿತವಂತರೆನಿಸಿ ಸಮ್ಮತವಾಗಿ ಸರ್ವರಿಗೆ
ಮತಿದೋರಿಕೊಟ್ಟು ಸದ್ಗತಿಗೋಸುಗವಾಗಿ ||೨||

ಆಚರಣೆಯಲಿ ಒಂದರಗಳಿಗೆ ಬಿಡದೆ ಬಲು
ಖೇಚರಾರೂಢ ಹರಿಯ
ಸೋೃಚಿತಾರಾಧನೆಯ ಮಾಡಿ ಮರೆಯದಲೆ ಮಹಾ
ವೈಚಿತ್ರ್ಯವನ್ನು ತೋರಿ।
ಈ ಚರಾಚರದಿ ಸಂಗೀತ ಸಾಹಿತ್ಯದಲಿ
ಪ್ರಾಚುರ್ಯವಂತರೆನಿಸಿ॥
ಆ ಚತುರ್ದಶ ಭುವನಪತಿ ಶ್ರೀದವಿಠಲನ
ಯೋಚನೆಯ ಬಿಡದೆ ಮಂಗಳ ಶಬ್ದವಾದ್ಯದಿಂ ॥೩॥

ಎಂಬುದಾಗಿ ಹಾಡಿದರು.

ಶ್ರೀ ಜಗನ್ನಾಥ ದಾಸರು ವಾಸಮಾಡುತ್ತಿದ್ದ ಮನೆಯು ಈಗ ದಾಸರ ದೇವಾಲಯವಾಗಿದೆ. ಯಾವ ಸ್ತಂಭಕ್ಕೆ ದಾಸರು ಕೂಡುತ್ತಿದ್ದರೋ ಅದನ್ನು ದಾಸರ ಸನ್ನಿಧಾನವೆಂದು ಮುಖವಾಡವಿಟ್ಟು ಪೂಜಿಸುತ್ತಿದ್ದಾರೆ. ಪ್ರತಿ ಭಾದ್ರಪದ ಶುದ್ಧ ನವಮಿಯಲ್ಲಿ ದಾಸರ ಆರಾಧನೆ ನಡೆಯುತ್ತಿದೆ. ರಥೋತ್ಸವವಾಗುತ್ತಿದೆ. ಸಾವಿರಾರು ಭಕ್ತ ಜನರು ಉತ್ಸವದಲ್ಲಿ ಭಾಗಿಗಳಾಗಿ ದಾಸರ ಪದಗಳನ್ನು ಹಾಡುತ್ತಾರೆ ಈಚೆಗೆ ಲಿಂಗಸೂಗೂರು ವಕೀಲ ಹನುಮಂತರಾಯರು ನೂತನ ರಥ ನಿರ್ಮಾಣ ಮಾಡಿಸಿದ್ದಾರೆ. ದಾಸರಾಯರು ಸಹ್ಲಾದರಾಯನ ಅವತಾರವೆಂಬ ಆಪ್ತವಚನಗಳಿವೆ. ಪ್ರಹ್ಲಾ ಸಹ್ಲಾದರ ಅವತಾರ ಭೂತರೆನಿಸಿದ ರಾಘವೇಂದ್ರಸ್ವಾಮಿಗಳ ಮತ್ತು ಜಗನ್ನಾಥ ದಾಸರ ಮಂತ್ರಾಲಯ ಮಾನವಿಗಳು ಭಾವಿಕರ ಕಾಶಿ ಪ್ರಯಾಗಗಳಾಗಿವೆ. ಪ್ರಾಣೇಶದಾಸರು:—

ಕಾಶಿ ಪ್ರಾಯಾಗ ವಾರಣಾಸಿಗಿಂದಧಿಕವಾದ
ದಾಸರಾಯರಿಪ್ಪಸ್ಥಾನವು। ತಂಗಿ ನೋಡಿದೇನೇ।
ನಾಶವಾಗೋದಘವಾನ। ಮಾಸಲಾಗುವದು ಶ್ರೀ ಪ್ರಾ
ಣೇಶವಿಠಲ್ಲ ಕೈಸೇರುವ। ತಂಗಿ ನೋಡಿದೇನೇ ॥೩॥

ಎಂಬುದಾಗಿ ಹಾಡಿರುತ್ತಾರೆ.

"ಪುಣ್ಯಾನಿಮಾ೯ ಪರಮ ಭಾಗವತಾ೯ಸ್ಮರಾಮಿ." ಎಂಬಂತೆ ಭಾಗವತೋತ್ತಮರ ನಾಮಸ್ಮರಣೆ ಮಾಡಿದವರು ಧನ್ಯರು, ಮಾನ್ಯರು, ಕೃತಕೃತ್ಯರು.

---

# ಮಹೀಪತಿರಾಯರು

---

ಮಹೀಪತಿರಾಯರ ಹೆಸರು ಪ್ರಾಯಶಃ ಮರೆತ ಹೆಸರೆಂದು ಹೇಳ ಬೇಕು. ವಿಜಾಪುರ ಜಮಖಂಡಿ ಪ್ರಾಂತ್ಯಗಳಲ್ಲಿ ಇವರ ಜ್ಞಾಪಕವಿದ್ದಷ್ಟು ಧಾರವಾಡ ದೇಶದಲ್ಲಿಲ್ಲ. ಮೈಸೂರ ಕನ್ನಡಿಗರಿಗೆ ಇವರ ಹೆಸರು ಕೇಳಿ ಸಹ ಗೊತ್ತಿಲ್ಲ. ರಾಯರು ಮಹಾಮಹಿಮರು, ಯೋಗಿಗಳು, ಸಾವಿರಾರು ಸುಂದರ ದೇವರ ನಾಮಗಳನ್ನು ಹಾಡಿದವರು. ಇವರ ವಂಶದಲ್ಲಿ, ತಂಬೂರಿಯವರು ಲೆಕ್ಕಣಿಕೆಯವರು ಎಂದು ಎರಡು ವಿಭಾಗವಾಗಿ ಆಯಾ ಪೀಳಿಗೆಯವರು ಅದೇ ಕ್ರಮದಲ್ಲಿ ಶ್ರೇಯೋವಂತರಾಗಿ ಬೆಳೆದಿದ್ದಾರೆ.

ಬೆಳಗಾಂವಿ ಜಿಲ್ಲಾ ಅಥಣೀ ತಾಲ್ಲೂಕಿಗೆ ಸೇರಿದ ಐಗಳಿ ಗ್ರಾಮವು ಮಹೀಪತಿರಾಯರ ಪೂರ್ವಜರು ವಾಸವಾಗಿದ್ದ ಸ್ಥಳ. ರಾಜದಂಡದಿಂದ ಹಿರಿಯರು ಕುಲಕರಣಿಕೆ (ಶಾನುಭೋಗತನ) ಯನ್ನು ಕಳೆದುಕೊಂಡು ವಿಜಾಪುರದಲ್ಲಿ ಭಿಕ್ಷಾವೃತ್ತಿಯಿಂದ ಜೀವನ ಮಾಡಿದರು. ರಾಯರು ಸಂಸ್ಕೃತ ಕನ್ನಡ ಉರ್ದು ಪಾರ್ಶಿ ಭಾಷೆಗಳಲ್ಲಿ ಪಂಡಿತರಾಗಿ ಪುರಾಣದಿಂದ ಕೆಲವು ಕಾಲ ಪ್ರಸಿದ್ಧಿ ಪಡೆದರು. ಕಲೆಕ್ಟರ ಕಛೇರಿಯಿಂದ ಬರುವ ಮಾರ್ಗದಲ್ಲಿರುವ ನೃಸಿಂಹ ದೇವಾಲಯವೇ ರಾಯರ ಪುರಾಣದ ಕಟ್ಟೆ. ಕಛೇರಿಯು ಬಾದಶಹರ ಅರಮನೆಯಾಗಿತ್ತು. ಗೋಳಗುಮ್ಮಟ ಮಶೀದಿಗಳು ಮತ್ತು ಕೆಲವು ಗೋರಿಗಳು ಆ ಸಾಮ್ರಾಜ್ಯದ ಅವಶೇಷಗಳು. ವಿಜಾಪುರದ ಬಾದಶಹರು ಇತರ ಮುಸಲ್ಮಾನರಾಜರಂತೆ ಹಿಂದೂ ಧರ್ಮದ್ವೇಷಿಗಳಾಗಿರಲಿಲ್ಲವಂತೆ. ಕೆಲವು ಹಿಂದುಗಳನ್ನು ಧರ್ಮಾಂತರ ಮಾಡಿದ ಮಾತ್ರಕ್ಕೇ, ಹಿಂದುಗಳಲ್ಲಿ ಕೆಲವರು ರಾಜ ಜನಾಂಗಕ್ಕೆ ಸೇರುವೆವೆಂದು ಧರ್ಮಾಂತರವಾದ ಮಾತ್ರಕ್ಕೇ, ಮುಸಲ್ಮಾನ ಅಧಿಕಾರಿಗಳು ಕೆಲವು ಹಿಂದೂ ದೇವಾಲಯಗಳನ್ನು ಮಸೀತಿಗಳಾಗಿ ರೂಪಾಂತರ ಮಾಡಿದ ಮಾತ್ರಕ್ಕೇ, ಎಲ್ಲಾ ಕಳಂಕಗಳನ್ನೂ ರಾಜಮನೆತನಕ್ಕೆ ಕೊಡುವದು ಯೋಗ್ಯವಲ್ಲವೆಂದು ಉದಾ

ರಭಾವನೆಯು ಹಿಂದೂಗಳು ಹೇಳುತ್ತಾರೆ. ಈ ಬಗೆಯ ಸವಿನುಡಿಗಳಿಂದ ಹಿಂದೂ ಮುಸಲ್ಮಾನರ ವೈರ ಪರಿಹಾರವಾಗುವುದಾದರೆ ಆಗಲಿ. ಗತ ಗೋಷ್ಠಿಯಿಂದೇನು?

ಒಂದುದಿನ ಮಹಮುದ್ ಶಹನೆಂಬ ಬಾದಶಹನು ಮೇನೆಯಲ್ಲಿ ಕುಳಿತು ಊರೊಳಗೆ ಬರುತ್ತಿದ್ದನು. ಹಿಂದುಮುಂದಣ ಕುದುರೇ ಸವಾರರು ನರಸಿಂಹ ದೇವಾಲಯದಲ್ಲಿ ಪುರಾಣ ಶ್ರವಣಕ್ಕೆ ನೆರೆದಿದ್ದ ಜನರ ಮಧ್ಯದಲ್ಲಿ ಮಾರ್ಗಮಾಡಿಕೊಂಡು ಹೋಗುವುದರಲ್ಲಿ ಗಡಿಬಿಡಿಯಾಯಿತು. ಅದು ಬಾದಶಹನ ದೃಗ್ಗೋಚರವಾಯಿತು. ಬಾದಶಹನು—— ಅಲ್ಲೇನು ನಡೆಯುತ್ತಿದೆ, ಆ ಜನಕ್ಕೆ ತೊಂದರೆ ಮಾಡದೆ ನಡೆಯಿರಿ, ಎಂದು ಹೇಳಿದನು. ಸವಾರರಿಂದ—ಅಲ್ಲಿ ಹಿಂದೂಜನರ ಪುರಾಣವಾಗುತ್ತಿದೆ, ನೂರಾರು ಜನ ಗಂಡಸರು ಹೆಂಗಸರು ಎಲ್ಲಾ ಸೇರಿದ್ದಾರೆ, ಎಂದು ಉತ್ತರ ಬಂದಿತು. ಇದನ್ನು ಕೇಳಿ ನವಾಬನು ಮೇನೆಯನ್ನು ನಿಲ್ಲಿಸಿದನು. ಹಿಂದುಗಳಲ್ಲಿ ಪ್ರಮುಖರಾದವರು ನವಾಬನಿಗೆ ಬಂದು ಮುಜರೆ ಮಾಡಿದರು. ತಮ್ಮ ಕೊರಾಣದ ಪಠಣೆಯಾದಂತೆ ನಮ್ಮ ಜನರ ಪುರಾಣವಿಲ್ಲಿ ನಡೆಯುತ್ತಿದೆ; ಆದಕಾರಣ ಇಷ್ಟು ಉತ್ಸವವಾಗಿದೆ, ಎಂದು ಉತ್ತರವಿತ್ತರು. ಬಾದಶಹನು ಸಂತುಷ್ಟನಾಗಿ ನಿಮ್ಮ ಶಾಸ್ತ್ರೀ ಮಹಾರಾಜರು ನಮಗೂ ಪುರಾಣ ಹೇಳುವರೋ ಎಂದು ಪ್ರಶ್ನೆಮಾಡಿದರು. ಅಷ್ಟರಲ್ಲಿ ರಾಯರೇ ಪುರಾಣ ಮುಗಿಸಿ ನವಾಬನನ್ನು ವಂದಿಸಿ, ಹೇಳಬಲ್ಲೆನೆಂದರು. ಬಾದಶಹನು, ಆಗಲಿ, ನಾನು ನಿಮ್ಮ ಹಿಂದೂ ಜನರ ಪುರಾಣ ಕೇಳುತ್ತೇನೆ; ನಿಮ್ಮನ್ನು ವಾಡೆಗೆ ಕರೆಸಿಕೊಳ್ಳುತ್ತೇನೆ; ಎಂದು ಮೇನೆಗೆ ಆಜ್ಞೆಯಿತ್ತನು. ಮುಸಲ್ಮಾನ ಪ್ರಭುವು ಪುರಾಣಶ್ರವಣ ಮಾಡುವನೆಂಬ ಸಂತೋಷ ಹಿಂದುಗಳಿಗಾಯಿತು.

ಸ್ವಲ್ಪಾವಧಿಯಲ್ಲಿ ಬಾದಶಹನು ತನ್ನ ರಾಜಕಾರ್ಯಗಳನ್ನು ಮುಗಿಸಿ ಪುರಾಣಿಕರನ್ನು ಕರೆತರುವಂತೆ ಆಜ್ಞೆಮಾಡಿದನು. ಅಂದೇ ಮಹೀಪತಿ ರಾಯರಿಗೆ ಮೇನೆಯಲ್ಲಿ ಕುಳಿತು ರಾಜದರಬಾರಿಗೆ ಹೋಗುವ ಯೋಗ ಪ್ರೊದಗಿತು. ದೊಡ್ಡ ದೊಡ್ಡ ಅಧಿಕಾರಿಗಳೂ ಮೌಲ್ವಿಗಳೂ ಪಂಡಿತರೂ ದುಭಾಷಿಗಳೂ ರಾಜಾಗಮನಕ್ಕೆ ಪೂರ್ವದಲ್ಲಿ ಸಿದ್ಧರಾಗಿ ಕಾದಿದ್ದರು. ರಾಜಾ

ಗಮನವಾದ ಕೂಡಲೇ ಭದ್ರಪೀಠದಲ್ಲಿದ್ದ ಪುರಾಣೀಕರ ವಿನಾ ಮಿಕ್ಕವರು ಮುಜರೆ ಮಾಡಿದರು. ಪುರಾಣಕ್ಕೆ ಕೂಡುವ ಸ್ಥಳವು ಎತ್ತರವಾಗಿದ್ದು ಹಿಂದೂ ಪದ್ಧತಿಯಂತೆ ಕಾಯಿ ಕರ್ಪೂರ ಧೂಪ ದೀಪಗಳಿಂದ ಸಜ್ಜಾಗಿತ್ತು. ವ್ಯಾಸಪೀಠದಲ್ಲಿದ್ದ ರಾಯರು ಮಂಗಳಾರತಿ ಮಾಡಿ ಶ್ರೀಗಣೇಶಾಯ ನಮಃ ಎಂದೇ ಪುರಾಣವನ್ನು ಪಾರಸೀ ಭಾಷೆಯಲ್ಲಿ ಪ್ರಾರಂಭಿಸಿದರು. ಒಂದು ದಿನ ಸ್ವಲ್ಪ ಹೊತ್ತು! ಬಾದಶಹನು ಪುರಾಣ ಕೇಳಬಹುದೆಂದಿದ್ದರೆ ಅದು ರಾಜವಾಡೆಯಲ್ಲಿ ನಿತ್ಯವಿಧಿಯಾಗಿ ಬಿಟ್ಟಿತು. ರಾಯರ ಭಾಷಾ ಮಾಧುರ್ಯ, ಪುರಾಣದ ವಿಷಯ ಗಾಂಭೀರ್ಯಗಳಿಂದ ನವಾಬನು ಸುಪ್ರೀತನಾದನು. ಭಾಗವತ ಭಾರತ ರಾಮಾಯಣಗಳು ಒಂದಾಗುತ್ತಲೊಂದು ನಡೆದು ಮಹಾ ಮಂಗಳಗಳಾಗಿ ಬ್ರಾಹ್ಮಣರಿಗೆ ಮಾತ್ರವಲ್ಲ, ಹಿಂದುಗಳಿಗೆ ಮಾತ್ರವಲ್ಲ, ಮುಸಲ್ಮಾನರಾದಿಯಾಗಿ ಸಕಲ ಜನಗಳಿಗೆ ಸಮಾರಾಧನೆಗಳಾದವು. ಬಾದಶಹನ ಪ್ರೇಮವು ಮಹೀಪತಿರಾಯರಮೇಲೆ ಬಹಳವಾಯಿತು. ಅನರ್ಘ್ಯ ವಸ್ತ್ರಾಭರಣಗಳು ರಾಯರ ಪೆಟಾರಿಗಳನ್ನು ಸೇರಿದವು. ಇಷ್ಟರಿಂದಲೇ ರಾಯರ ರಾಜಕೀಯ ಪೂರ್ತಿಯಾಗಲಿಲ್ಲ. ರಾಯರನ್ನು ಬಿಟ್ಟಿರುವದು ನವಾಬನಿಗೆ ಸಾಧ್ಯವಾಗಲಿಲ್ಲ. ನವಾಬನ ಖಾಸಗೀ ಖಜಾನೆದಾರ ಪದವಿಯೇ ರಾಯರಿಗೆ ಪ್ರಾಪ್ತವಾಯಿತು. ಖಜಾನೆದಾರ ಪದವಿಯೆಂದರೆ ಸಣ್ಣ ಪುಟ್ಟ ಅಧಿಕಾರವಲ್ಲ. ರಾಯರಿಗದು ಮಹಾಪದವಿಯೆನಿಸಲಿಲ್ಲ. ಕೋಟ್ಯಾಂತರ ಹಣದ ಲೆಕ್ಕಪತ್ರಗಳ ವ್ಯವಸ್ಥೆಯು ಆಳುಚಾಕರಿಯಾಯಿತು. ಬಲು ಜವಾಬ್ದಾರಿಯಾಗಿಬಿಟ್ಟಿತು. ಪದವಿಗೆ ತಕ್ಕಂತೆ ರಾಜವಾಡೆ, ಬಾಗಿಲಲ್ಲಿ ನೂರಾರು ಕುದುರೆಗಳ ಪಹರೆ, ಆನೆಯ ಮಹಲು ಮೇನೆ ಪಲ್ಲಕ್ಕಿಗಳ ಸಡಗರವೆಲ್ಲಾ ರಾಯರ ಭಾಗ್ಯವಾಯಿತು. ಆ ಕಾಲದ ರಾಜ್ಯಾಧಿಕಾರಿಗಳ ವಸತಿಗಳು ಹೇಗಿದ್ದವೆಂಬುದಕ್ಕೆ ವಿಜಾಪುರದ ಅವಶೇಷಗಳು ಸಾಕ್ಷಿಯಾಗಿವೆ. ಎಷ್ಟು ಕೋಟಿ ಖರ್ಚುಮಾಡಿ ಆ ಶಿಲಾಮಯ ಕಟ್ಟಡಗಳನ್ನು ಕಟ್ಟಿಸಿದರೋ, ದುಡ್ಡು ಕೊಟ್ಟೇ ಕಟ್ಟಿಸಿದರೋ, ಅಧಿಕಾರ ದರ್ಪಕ್ಕೊಳಗಾದ ಜನರು ಕಟ್ಟಿದರೋ ಊಹಿಸಲು ಸಾಧ್ಯವಿಲ್ಲದಂತಿದೆ. ಮಹಾ ವಜೀರನನ್ನು ಬಿಟ್ಟರೆ ಎರಡನೇ ಅಧಿಕಾರವೇ ಮಹೀಪತಿರಾಯರದಾಯಿತು. ಸೈನಿಕರ ತನಖಾಗಳು (ತಿಂಗಳ ಸಂಬಳಗಳು) ಕಾಲಕಾಲಕ್ಕೆ ಸರಿಯಾಗಿ ದೊರೆಯುತ್ತಿದ್ದುದರಿಂದ—

ದಂಡಿಗೆ ಸರಬರಾಯಿ ಮಾಡಿದ ವರ್ತಕರಿಗೆ ಖಜಾನೆದಾರನ ಬಾಗಿಲು ಕಾಯು ವದು ತಪ್ಪಿ ಸಲೀಸಾಗಿ ಹಣ ದೊರೆಯುತ್ತಿದ್ದ ಕಾರಣ ನವಾಬನಿಗೆ ಮೆಚ್ಚಿಕೆ ಯಾದಂತೆ ರಾಯರ ಆಡಳಿತವು ಮುಸಲ್ಮಾನ ಅಧಿಕಾರಿಗಳಿಗೂ ತೃಪ್ತಿಕರ ವಾಯಿತು. ರಾಯರ ಮನೆಯಲ್ಲಿ ಅಂತರಂಗ ಬಹಿರಂಗಗಳಿರಲಿಲ್ಲ; ಮುಸ ಲ್ಮಾನ ಅಧಿಕಾರಿಗಳಂತೆ ಜನಾನಾಸಡಗರವಿರಲಿಲ್ಲ. ಯಾವಾಗಲೂ ಯಾರಿ ಗೂ ರಾಯರ ಭೇಟಿಯು ತ್ರಾಸದಾಯಕವಾಗಿರಲಿಲ್ಲ. ಪುರಾಣದ ಅಕ್ಕಿ ಯಿಂದ ಜೀವಿಸುವದು ತಪ್ಪಿ ಮರ್ಯಾದೆಯಿಂದ ಜೀವನಮಾಡುವ ಭಾಗ್ಯ ದೊರೆಯಿತೆಂಬಷ್ಟೇ ತೃಪ್ತಿ ರಾಯರಿಗಿತ್ತು. ಬಾದಶಹನ ರಾಣಿವಾಸದಲ್ಲೂ ರಾಯರಿಗೆ ತಡೆಯಿರಲಿಲ್ಲ. ಬಾದಶಹನಿಗೆ ಹೇಗೋ ರಾಣಿಯರಿಗೂ ರಾಯ ರನ್ನು ಕಾಣದಿದ್ದರೆ, ರಾಯರು ಹೇಳುವ ಕಥೆಗಳನ್ನು ಕೇಳದಿದ್ದರೆ ದಿನವು ಸುದಿನವಾಗುತ್ತಿರಲಿಲ್ಲ. ರಾಯರು ಮಾತ್ರ—ಇದು ಮೂರುದಿನದ, ಭಾಗ್ಯ ನಾಯಿಯ ತಲೆಯಮೇಲಣ ಬುತ್ತಿ, ಎನ್ನುತ್ತಿದ್ದರು. ತಮ್ಮ ಬಡಜೀವ ನದ ಪದ್ಧತಿಯನ್ನು ರಾಯರು ಬಿಡಲಿಲ್ಲ ಅದೇ ಸಜ್ಜೆಯ ಭಕ್ಕರಿ, ಅದೇ ನುಚ್ಚು, ರಾಯರ ಮೃಷ್ಟಾನ್ನವಾಗಿತ್ತು. ಖರ್ಚು ಕಳೆದುಳಿದ ಧನವನ್ನು ರಾಯರು ಬಡ ಜನರಿಗೆ ದಾನಮಾಡುತ್ತಿದ್ದರು.

## ನುಂಗನುಂಗಿಯರು

ವಿಜಾಪುರದಲ್ಲಿ ಶಹಾನುಂಗ ಶಹಾನುಂಗಿ ಎಂಬ ಹೆಸರಿನ ಅಣ್ಣತಂಗಿ ಯರು ದಿಗಂಬರರಾಗಿ ಸಂಚರಿಸುತ್ತಿದ್ದರು. ಇವರು ಸೂಫೀಪಂಥದವ ರಾಗಿ ಒಳ್ಳೇ ಯೋಗಾಭ್ಯಾಸಿಗಳೆನಿಸಿದ್ದ ಕಾರಣ ಇವರನ್ನು ಹಿಂದೂಮುಸ ಲ್ಮಾನರೆಲ್ಲಾ ಭಕ್ತಿಯಿಂದ ಕಾಣುತ್ತಿದ್ದರು. ರಾಯರು ಖಜಾನೆಯ ಕೆಲ ಸದ ಜೊತೆಗೆ ಬಾದಶಹನು ಹೇಳಿದ ಕೆಲಸಗಳನ್ನೆಲ್ಲಾ ಮಾಡಬೇಕಾಗಿತ್ತು. ಆ ಕಾಲದಲ್ಲಿ ಬೇಗಂತಲಾವ್ ಎಂಬ ಕೆರೆಯ ಕಾಮಗಾರಿ ನಡೆದಿತ್ತು. ರಾಜಾಜ್ಞೆಯಿಂದ ರಾಯರು ಆ ಕೆರೆಯ ಕೆಲಸ ಎಷ್ಟುಮಟ್ಟಿಗೆ ನಡೆದಿದೆ ಯೆಂದು ಆಗಾಗ ನೋಡಿ ಬರುತ್ತಿದ್ದರು. ಶಹಾನುಂಗನು ಎಲ್ಲಿರುವನು, ಎಲ್ಲಿ ಊಟಮಾಡುವನು, ಎಲ್ಲಿ ಮಲಗುವನು, ಯಾರಿಗೂ ಗೊತ್ತಾಗುತ್ತಿರ ಲಿಲ್ಲ. ಜನರು ಮಾತ್ರ ಅವನು ಊಟವೇ ಮಾಡುವುದಿಲ್ಲವೆಂದು ಹೇಳುತ್ತಿ

ದ್ದರು. ಅವನ ಬಾಯಿಂದ ಒಳ್ಳೇಮಾತು ಬಂದರೆ ಜನರ ಕಲ್ಯಾಣವಾಗುತ್ತಿತ್ತು. ಕೆಟ್ಟ ಮಾತು ಬಂದರೆ ಜನರಿಗೆ ಕೆಡಕೂ ಆಗುತ್ತಿತ್ತು. ಆದ್ದರಿಂದ ಅಣ್ಣತಂಗಿಯರನ್ನು ಯಾರೂ ಮಾತಾಡಿಸಲು ಹೆದರುತ್ತಿದ್ದರು.

ಒಂದುದಿನ ರಾಯರು ಕೆರೆಯನ್ನು ನೋಡಿಕೊಂಡು ರಾಜವಾಡೆಗೆ ಬರುತ್ತಿದ್ದಾರೆ. ಕೋಟೆಯ ಕಂದುಕದ ಬಳಿ ನುಂಗನು ನಿಂತಿದ್ದಾನೆ. ರಾಯರ ಮೇನೆಯನ್ನು ನೋಡಿ ನಗುತ್ತಿದ್ದಾನೆ. 'ಅರೇ ಬೇಟಾ ಅರೇ' ಎಂದು ಕರೆಯುತ್ತಿದ್ದಾನೆ. ಮೇನೆಯೂ ನುಂಗನ ಬಳಿಯಲ್ಲೇ ಹಾದು ಹೋಗುತ್ತಿದೆ. ಅವನ ಮಾತನ್ನು ಯಾರೂ ಲಕ್ಷಿಸಿಲ್ಲ. ರಾಯರ ಗಮನವೂ ಅವನ ಕಡೆಗಾಗಿಲ್ಲ. ಹೀಗೆ ಒಂದು ಬಾರಿಯಲ್ಲ—ಅನೇಕ ಬಾರಿ ನಡೆದಿದೆ. ಕಡೆಗೆ ಒಂದುದಿನ ನುಂಗನು ಮೇನೆಯನ್ನು ಹಿಡಿದು ನಿಲ್ಲಿಸಿದ್ದಾನೆ. ಅದೇ 'ಅರೇ ಬೇಟಾ ಅರೇ' ಎಂದು ಕರೆದಿದ್ದಾನೆ. ರಾಯರ ಕೈಹಿಡಿದಿದ್ದಾನೆ.

ರಾಯರು ನುಂಗನನ್ನು ನೋಡಿ ಹೆದರಿದರು. ಮೇನೆಯಿಂದಿಳಿದರು. ನನ್ನಿಂದ ಏನಾಗಬೇಕೆಂದು ನುಂಗನನ್ನು ಕೇಳಿದರು. ಅವನು ನಿನ್ನ ಕೈಯಲ್ಲಿ ಏನಿದೆಯೆಂದು ಕೇಳಿದನು. ರಾಯರು ಸಿಕ್ಕಾ (ಮೊಹರುಂಗುರ) ಇದೆಯೆಂದು ಹೇಳಿದರು. ನುಂಗನು ಅದನ್ನೇ ತಾರೆಂದನು. ರಾಯರು ಏನು ಹೇಳುವುದಕ್ಕೂ ತೋರದೆ ಸಿಕ್ಕಾವನ್ನು ನುಂಗನ ಕೈಗೆ ಕೊಟ್ಟರು. ನುಂಗನು ಉಂಗುರವನ್ನು ತೆಗೆದುಕೊಂಡು ಓಡಿದನು. ಸರ್ಕಾರೀ ಉಂಗುರ, ಮೊಹರುಂಗುರವೆಂದು ಕೂಗಿದಷ್ಟೂ ವೇಗವಾಗಿ ಓಡಿದನು. ರಾಯರು ಕರ್ತವ್ಯಮೂಢರಾಗಿ ಅತ್ತಿತ್ತ ನೋಡುತ್ತಾ ಅವನ ಬಳಿ ಓಡಿದರು. ಹತ್ತಿರ ಬಂದದ್ದು ಕಂಡು ನುಂಗನು ಉಂಗುರವನ್ನು ಕಂದುಕದಲ್ಲೊಗೆದನು. 'ಸಿಕ್ಕಾ! ಸಿಕ್ಕಾ!' ಎಂದು ಗಹಗಹಿಸಿ ನಕ್ಕನು. ನುಂಗಿಯೂ ಬಂದಳು. ಅದೇನೆಂದಳು. ಅದೇ 'ಸಿಕ್ಕಾ ಸಿಕ್ಕಾ' ಎಂದು ನುಂಗನು ಮತ್ತೆ ಚಪ್ಪಾಳೆ ತಟ್ಟಿ ನಕ್ಕನು. ನುಂಗಿಯೂ ಹಾಗೆಯೇ ನಕ್ಕಳು. ರಾಯರ ಮುಖಕ್ಕೆ ಕೈ ತಿರುಗಿಸಿ 'ಸಿಕ್ಕಾ' ಎಂದು ಮತ್ತೆ ನಕ್ಕಳು.

## ಧರ್ಮಸಂಕಟ

ರಾಯರಿಗಿದು ಧರ್ಮಸಂಕಟವಾಯಿತು. ಹುಚ್ಚನೊಡನೆ ಏನುಮಾಡಬಲ್ಲರು? ದಂಡಿಸಬಲ್ಲರೆ? ಸತ್ಪುರುಷನೆಂಬ ಭಯ! ದಂಡಿಸಿ ಫಲ?

ಹಿಂದೊಮ್ಮೆ ಬಾದಶಹನ ಜನಾನಾಕ್ಕೂ ನುಂಗನು ನುಗ್ಗಿದ್ದನಂತೆ! ರಾಣಿಯರು ಗಾಬರಿಗೊಂಡರಂತೆ! 'ಮೌತ್ಕಾಫೌಣ್, ಮೌತ್ಕಾಫೌಣ್' ಎಂದು ಹೊರಟು ಹೋದನಂತೆ! ರಾಜನ ಮನೆಯಲ್ಲಿ 'ಮೌತ್ಕಾಫೌಣ್' ಅಂದರೆ ಹೆಣದ ವಾಸನೆಯೆಲ್ಲಿ ಬರಬೇಕು? ಈ ಮಾತಿನ ಅರ್ಥವನ್ನು ಯಾರು ಹೇಗೆ ಮಾಡಿಕೊಳ್ಳಬೇಕು. ಏನೋ ಹುಚ್ಚ! ಹೋಗಲಿ, ಎಂದು ಎಲ್ಲರೂ ಸುಮ್ಮನಾದರಂತೆ. ಪ್ರಕೃತ ರಾಯರ ಸುತ್ತಲೂ ಜನರು ನೆರೆದು - ಏನು ರಾವ್ ಸಾಹೇಬ್, ಏನು ರಾವ್‌ಸಾಹೇಬ್, ಎಂದು ಕೇಳಲಾರಂಭಿಸಿದರು. ಜನರನ್ನು ನೋಡಿದಂತೆಲ್ಲಾ ನುಂಗನುಂಗಿಯರ ಚಪ್ಪಾಳೆಗಳು ಬಲವಾದವು. ಯಾರಿಗೂ ಭಯ. ನೋಡುವರಿಗೊಳ್ಳೇ ನೋಟ!

ರಾಯರ ಪದವಿ ದೊಡ್ಡದು. ಗುಂಪಿನಲ್ಲಿ ಖಿನ್ನರಾಗಿ ನಿಲ್ಲುವದು ಯೋಗ್ಯವಲ್ಲ. ಯಾರನ್ನಾದರೂ ಮುಳುಗಿಸಿ ತೆಗೆಸುವದು ಉಚಿತವಲ್ಲ. ಮೊಹರಿಲ್ಲದೆ ಅರಮನೆಗೆ ಹೋಗುವದೂ ಸರಿಯಲ್ಲ. ಮೊಹರುಂಗರ ಕಳೆದು ಹೋಗವದೆಂದರೆ ಒಂದು ಪ್ರಕಾರದ ಅಪಶಕುನ. ಮಾಡವದೇನು? ರಾಯರು ನುಂಗನ ಕೈಹಿಡಿದು ಯಾರಿಂದಾದರೂ ಆ ಉಂಗುರವನ್ನು ಮುಳುಗಿಸಿ ತೆಗೆಸಲೇ ಎಂದು ಕೇಳಿದರು. ನುಂಗನು ನಕ್ಕನು. ಸರ್ಕಾರೀ ಉಂಗುರ! ನಗುವ ವಿಚಾರವಿದಲ್ಲ! ದಯಮಾಡಿ ಅಪ್ಪಣೆಕೊಡೆಂದರು. ನುಂಗನು ರಾಯರ ಮುಖವನ್ನು ದಿಟ್ಟಿಸಿ ನೋಡಿದನು. ಅವರ ಮನಸ್ಸಿನಲ್ಲಾದ ವಿಚಾರಗಳನ್ನು ಗ್ರಹಿಸಿದನು. ಆಗೇ ನುಂಗೀ ಎಂದು ಕರೆದನು. ಆ 'ಸಿಕ್ಕಾ' ತಾರೆಂದು ಕಂದುಕದ ಕಡೆ ಕೈಚಾಚಿದನು. ನುಂಗಿಯು ನೀರಿನಲ್ಲಿ ಧುಮುಕಿದಳು. ಒಂದು ಬೊಗಸೆಯ ತುಂಬಾ ಸಿಕ್ಕೆಗಳನ್ನು ತಂದು ಸುರಿದಳು. ರಾಯರಿಗೆ ವಿಸ್ಮಯವಾಯಿತು. ಮನಸ್ಸಿನಲ್ಲಿ ಕಳವಳವಾಯಿತು. 'ನಿನ್ನ ಸಿಕ್ಕಾ ನೀನು ಆರಿಸಿಕೋ' ಎಂದು ನುಂಗನು ನುಡಿದನು. ಎಲ್ಲವೂ ಒಂದರಂತೆ ಮತ್ತೊಂದಿದೆ. ಯಾವದನ್ನು ಆರಿಸಿಕೊಳ್ಳಬೇಕು? ಇದೇನೋ ಜನ್ಮದಲ್ಲಿ ದೊಡ್ಡ ಪರಿವರ್ತನದ ಕಾಲಬಂತೆಂದು ರಾಯರು ತರ್ಕಿಸಿದರು. ನುಂಗನೇ ಒಂದು ಸಿಕ್ಕಾವನ್ನು ತೆಗೆದು—ಇದೇ ನಿನ್ನ ಸಿಕ್ಕಾ! ತೆಗೆದುಕೊ, ಎಂದು ಮೂಸಿನೋಡಿ—'ಮೌತ್ಕಾಫೌಣ್, ಮೌತ್ಕಾಫೌಣ್'; ಬಿಸಾಡು ಬಿಸಾಡು ಎನ್ನುತ್ತಲೇ ಗುಂಪಿನೊಳಗೆ ನುಗ್ಗಿ ಎಲ್ಲಿಗೋ ಹೊರಟುಹೋದನು. ರಾಯ

ರಿಗೆ ಎದೆಯೊಡೆಯಿತು. ಬಾದಶಹನಿಗೆ ಈ ಸಂಗತಿ ತಿಳಿಯಿತು. ಅವನೂ— ಮರಾಠರ ಧಾಳಿಯೊಂದುಕಡೆ, ಔರಂಗಜೇಬನ ಹಗೆತನವೊಂದುಕಡೆ, ನುಂಗನ ಮಾತಿನ ಅರ್ಥವೇನೋ ಎಂದು ಚಿಂತಾತುರನಾದನು. ರಾಯರ ಕನಸ್ಸು ಮನಸ್ಸುಗಳಲ್ಲಿ ನುಂಗನು ತಾನೇತಾನಾದನು.

ಮಹೀಪತಿರಾಯರು ದಿಗಂಬರನ ಮಾತಿನ ಅರ್ಥವನ್ನು ಅವನಿಂದಲೇ ತಿಳಿಯಬೇಕೆಂದು ಬಯಸಿದರು. ಅವನೆಲ್ಲಿರುವನೋ ಕರೆತರುವಂತೆ ದೂತರನ್ನು ಕಳುಹಿಸಿದರು. ಅವನು ಸಿಗಲಿಲ್ಲ. ಯಾರಿಂದಲೂ ಅವನ ವಾರ್ತೆ ತಿಳಿಯಲಿಲ್ಲ.

ಒಂದು ಸಂಧ್ಯಾಕಾಲ. ರಾಯರು ಬೇಗಂತಲಾವಿನ ದಾರಿಯಲ್ಲಿ ಒಬ್ಬರೇ ಪಾದಚಾರಿಗಳಾಗಿ ನಡೆಯುತ್ತಿದ್ದಾರೆ. ಹೆಜ್ಜೆಹೆಜ್ಜೆಗೆ ನಿಲ್ಲುತ್ತಿದ್ದಾರೆ. ನುಂಗನ 'ಮೌತ್ಕಾಫಾಣ್' ವಾಕ್ಯದ ಭಾವವೇನಿರಬೇಕೆಂದು ಗುಣಿಸುತ್ತಿದ್ದಾರೆ. ಕತ್ತಲೆಯಾಗುತ್ತಿದೆ. ದೀವಟಿಗರಿಲ್ಲ. ಕೆಸರುಬಳಿದ ಮೈಯಿಂದ ನುಂಗನು ಎತ್ತಲಿಂದಲೋ ಬರುತ್ತಿದ್ದಾನೆ. 'ಅರೇಬೇಟಾ ಅರೇ' ಎಂದು ಕರೆಯುತ್ತಿದ್ದಾನೆ. ರಾಯರು ಧ್ವನಿ ಬಂದಕಡೆ ತಿರುಗಿದರು. ಅದೇ ನುಂಗನೇ ಹೌದೆಂದು ನಿಶ್ಚಯಮಾಡಿದರು. ಅವನ ಪಾದಗಳಿಗೆರಗಿ, ನಿನ್ನ ಮಾತಿಗೆ ಅರ್ಥವೇನೆಂದು ಕೇಳಿದರು. ನುಂಗನು—'ಅದಕ್ಕೆ ಅದೇ ಅರ್ಥ! ನೀನು ಅಧಿಕಾರ ಬಿಡು. ಸಾರವಾಡದಲ್ಲಿ ಭಾಸ್ಕರಸ್ವಾಮಿಗಳಿಗೆ ಮೊರೆಯಿಡು. ಆಮೇಲೆ ಗೊತ್ತಾಗುವದು ಅದರ ಸುಖ' ವೆಂದನು.

ರಾಯರು, ಭಾಸ್ಕರಸ್ವಾಮಿಯೇಕೆ? ಯಾರೇಕೆ? ನೀನೇ ನನ್ನ ಗುರುವಾಗೆಂದರು. ನುಂಗನು—ನೀನು ಹಿಂದು, ನೀನು ಬ್ರಾಹ್ಮಣ, ನಿನಗೆ ಅಲ್ಲೇ ಆಗಬೇಕು ಉಪದೇಶ, ಗುರಿ ಒಂದೇ, ಮಾರ್ಗಬೇರೆ, ತಿಳಿಯಿತೇ ಎಂದು ನಡೆದೇಬಿಟ್ಟನು.

ರಾಯರಿಗೆ ಆರಾತ್ರಿ ಕಲ್ಪಶತವಾಯಿತು. ವಿಚಾರಗಳು ಒಂದರಹಿಂದೆ ಒಂದು ತರಂಗಗಳಂತೆ ಬಂದವು. ಪುರಾಣ ಕಥೆಗಳೊಂದೊಂದನ್ನೂ ತಮ್ಮ ಅನುಭವದೊಡನೆ ಒರೆಹಚ್ಚಿದರು. ಅಧಿಕಾರಬಿಡುವದೇ ಸರಿ; ಭಾಸ್ಕರಸ್ವಾಮಿಗಳನ್ನು ಕಾಣುವದೇ ಸರಿ; ನುಂಗನು ಮಹಾಪುರುಷ; ಅವನೊಬ್ಬ

ಅವಧೂತ; ಅವನು ಹೇಳುವ ಸುಖವನ್ನು ಈ ಜನ್ಮದಲ್ಲೇ ಅನುಭವಿಸ ಬೇಕು; ಎಂಬುದು ರಾಯರ ನಿಶ್ಚಯವಾಯಿತು.

ಮಾರನೇ ರಾತ್ರಿ ಬಹಳ ಹೊತ್ತಾದಮೇಲೆ ಬಾದಶಹನನ್ನು ಕಾಣ ಬೇಕೆಂದು ರಾಯರು ರಾಜವಾಡೆಗೆ ಬಂದರು. ಬಲವತ್ತರವಾದ ರಾಜಕಾರ್ಯ ವಿರಬೇಕೆಂದು ದೂತರು ನವಾಬನ ಅಂತಃಪುರಕ್ಕೆ ರಾಯರನ್ನು ಕರೆದೊಯ್ದ ರು. ಬಾದಶಹನು(Files)ನೋಡಿ ಕೈಬರಹಮಾಡಿಟ್ಟವನು:-'ಏನು ರಾವ್ ಸಾಹೇಬ್ ಈ ಅವೇಳೆಯಲ್ಲಿ ಬಂದಿರಿ, ಅವಸರದ ಕಾರ್ಯವೇನಿದೆ' ಎಂದು ತಿವಾಸಿಯಲ್ಲಿ ಕುಳಿತನು. ರಾಯರು— ಅವಸರದ ಕಾರ್ಯವಿರುವಕಾರಣ, ಮನಸ್ಸು ನಿಲ್ಲದ ಕಾರಣ, ಈ ವೇಳೆಯಲ್ಲಿ ಏಕಾಂತದಲ್ಲಿ ಕಾಣಲು ಬಂದೆ, ನನ್ನ ತಪ್ಪನ್ನು ಕ್ಷಮಿಸಬೇಕು ಎಂದು ಖುರ್ನಿಷ್ ಮಾಡಿದರು. ಬಾದಶ ಹನು — ನಿಮ್ಮಲ್ಲಿ ತಪ್ಪಿಲ್ಲ, ನಿಮ್ಮಂಥ ಆಪ್ತರು ನನಗೆ ಮತ್ಯಾರಿಲ್ಲ. ನೀವು ಯಾವಾಗಲೂ ಬರಬಹುದು. ಬೇಕಾದ್ದು ಕೇಳಬಹುದು, ಎಂದನು. ರಾಯರ ಬಾಯಿಂದ ಮುಂದೆ ಮಾತು ಬರದಂತಾಯಿತು; ಬಾದಶಹನು ಮುಖವನ್ನು ನೋಡಿದಂತೆಲ್ಲಾ ಮಾತೆತ್ತಲು ಲಜ್ಜೆಯಾಯಿತು; ಏನೂಇಲ್ಲ- ಏನೂಇಲ್ಲ-ಎನ್ನುವದರಲ್ಲೇ ಕಾಲ ಕಳೆಯಿತು.

ಬಾದಶಹ—ರಾವ್ ಸಾಹೇಬ್, ನಿಮ್ಮ ಮನಸ್ಸು ನನಗೆ ಗೊತ್ತಾ ಯಿತು. ಯಾರು ನಿಮ್ಮಮೇಲೆ ದೂರು ಹೇಳಿದರೂ ನಾನು ಕೇಳುವ ದಿಲ್ಲ. ನಾನಿರುವತನಕ ನಿಮ್ಮ ಅಧಿಕಾರಕ್ಕೆ ಚ್ಯುತಿಯಿಲ್ಲ. ಈಗ ಲಾದರೂ ಏನು? ಹೇಳಿ.

ರಾಯರು—ಮಹಾಪ್ರಭೋ, ಅದೇನೂ ಅಲ್ಲ, ಆ ಚಿಂತೆ ನನಗಿಲ್ಲ. ನುಂಗನ ಮಾತು, ತಿಳಿಸಲು ಬಂದೆ.

ಬಾದಶಹ—ಆ ಹುಚ್ಚನ ಮಾತೇನು? ಅವನಾಡುವದೇನಿದ್ದರೂ ಅದೇ 'ಮೌತ್ಕಾಫೌಣ್'ತಾನೆ?

ರಾಯರು—ಲಾಲಿಸಬೇಕು, ಅವನನ್ನು ಹುಚ್ಚನೆನ್ನುವ ಹಾಗಿಲ್ಲ. ಸಿಕ್ಕಾ ಗಳನ್ನು ತರಿಸಿ ಸುರಿಸಿದಾಗಲೇ ನನಗೆ ಆಶ್ಚರ್ಯವಾಯಿತು. ನನ್ನನ್ನು ಅಧಿಕಾರ ಬಿಡು, ಭಾಸ್ಕರಸ್ವಾಮಿಗಳ ಶಿಷ್ಯನಾಗು, ಎಂದು ಹೇಳು

ತ್ತಾನೆ. ಅದು ನನ್ನ ಮನಸ್ಸಿಗೆ ಬಹಳ ಹತ್ತಿಬಿಟ್ಟಿದೆ. ಆದ್ದರಿಂದ ನನಗೆ ಅಪ್ಪಣೆಯಾಗಬೇಕು.

ಬಾದಶಹ—ಹಿಂದುಗಳು ನೀವು ಬಲು ಭಯಸ್ಥರು. ನಂಗನ ಮಾತು ನಿಮಗೆ ಗುರುವಾಕ್ಯವಾಗಿದ್ದರೆ ಸ್ವಾಮಿಜಿಯವರಿಗೆ ಶಿಷ್ಯರೂ ಆಗಿ ಅಧಿಕಾರವನ್ನೂ ಮಾಡಬಾರದೇಕೆ? ಇಷ್ಟೇತಾನೇ ಇದಕ್ಕೇಕೆ ಚಿಂತೆ?

ರಾಯರು, ಮತ್ತೆ ಉತ್ತರ ಬೆಳೆಸಲು ಧೈರ್ಯವಾಗದೆ, ಮತ್ತೊಮ್ಮೆ ಕಾಣುತ್ತೇನೆ; ಅವೇಳೆಯಲ್ಲಿ ತೊಂದರೆಕೊಟ್ಟಿದ್ದಕ್ಕೆ ಕ್ಷಮಿಸಬೇಕು; ಎಂದು ಖುರ್ನಿಷ್‌ಮಾಡಿ, ಮನೆಗೆ ಬಂದರು.

## ಭಾಸ್ಕರಸ್ವಾಮಿಗಳು

ಭಾಸ್ಕರಸ್ವಾಮಿಗಳು ಆ ಕಾಲದ ಯೋಗಿಗಳಲ್ಲಿ ರಾಜಯೋಗಿಗಳು. ಕರ್ನಾಟಕ ಮಹಾರಾಷ್ಟ್ರ ದೇಶಗಳಲ್ಲೆಲ್ಲಾ ಅವರ ಶಿಷ್ಯರು ಹೇರಳವಾಗಿದ್ದರು. ಸಾರವಾಡವು ಒಂದು ಕಾಡು ಹಳ್ಳಿಯಾದರೂ ಸ್ವಾಮಿಗಳ ಕಾಲದಲ್ಲಿ ಗುರುದರ್ಶನಕ್ಕೆ ಬರುವವರಿಗೆ ಯಾತ್ರಾಸ್ಥಳವಾಗಿತ್ತು. ಸಿಂದಿಗಿ ಜಕ್ಕಪ್ಪಯ್ಯನವರೂ ರುಕ್ಮಿಣಿ ಪಂಡಿತರೂ ಸ್ವಾಮಿಗಳ ಪರಮಾನುಗ್ರಹಕ್ಕೆ ಪಾತ್ರರಾಗಿ ಮಹಾಸಾಧಕರಾಗಿದ್ದರು. ಲೌಕಿಕವನ್ನು ತ್ಯಜಿಸಿ ಯೋಗಿಗಳಾಗಿದ್ದರೂ ಭೋಗಿಜನರ ಕಾಟ ಭಾಸ್ಕರಯೋಗಿಗಳಿಗೆ ತಪ್ಪುತ್ತಿರಲಿಲ್ಲ ಸತ್ಪುರುಷರೆಂದಕೂಡಲೇ ಪರಿಪರಿಯ ಬೇಡಿಕೆಗಳಿಂದ ಬರುವ ಜನರು ಬಹಳ. ತಿರಸ್ಕರಿಸಬೇಕೆಂದರೆ ಅವರಿಗೆ ದಯೆ ಬಹಳ. ಪುರಸ್ಕರಿಸಿದರೆ ತಪೋಭಂಗ ಬಹಳ. ಕೆಲವು ಯೋಗಿಗಳು ಪುಣ್ಯಲೋಭದಿಂದ ಭೋಗಿಜನರು ಬಂದರೆಂದರೆ ಬೈಯುವುದು ಮಾತಾಡದಿರುವುದು ಅವರಿಗೇ ಅವಿಶ್ವಾಸ ಬರುವಂತೆ ಮಾಡುವುದು ಹೀಗೆಲ್ಲಾ ವರ್ತಿಸಿಬಿಡುತ್ತಾರೆ. ಉದಾರಮನಸ್ಕರಾಗಿದ್ದರೆ ತಮಗೆ ಸ್ವಲ್ಪಬಾಧಕವಾದರೂ ತಾಳಿಕೊಳ್ಳುತ್ತಾರೆ. ಭಾಸ್ಕರಸ್ವಾಮಿಗಳ ದಯೆಯು ಜನರ ಜಾತ್ರೆಗೆ ಕಾರಣವಾಗಿತ್ತು.

ಷಹಾನುಂಗ ನುಂಗಿಯರಿಗೆ ಭಾಸ್ಕರಸ್ವಾಮಿಗಳಲ್ಲಿ ಬಹಳ ವಿಶ್ವಾಸ. ಯೋಗದಲ್ಲಿ ಮತ ಪಂಥಗಳಿಗೆ ಸ್ಥಾನವಿರುವದಿಲ್ಲ. ವರ್ಣಾಶ್ರಮಗಳ

ಕಟ್ಟಿ ಅವರನ್ನು ಬಾಧಿಸುವದಿಲ್ಲ. ಆರ್ಯಸಂಸ್ಕೃತಿಯ ಯೋಗವಿದ್ಯೆಯೇ ಪರ್ಷಿಯಾ ದೇಶದಲ್ಲಿ ಸೂಫೀಪಂಥವಾಗಿ ಪೈಗಂಬರರ ಇಸ್ಲಾಮಿಗೆ ಅಂಗ ಭೂತವಾಯಿತು. ಸೂಫೀಪಂಥಿಗಳಲ್ಲಿ ಪ್ರಾಯಶಃ ಮತಛಲವಿರುವದಿಲ್ಲ. ಆದುದರಿಂದ ನುಂಗನುಂಗಿಯರು ಭಾಸ್ಕರಸ್ವಾಮಿಗಳ ಆದರಕ್ಕೆ ಪಾತ್ರರಾಗಿದ್ದರು. ಅಂತೆಯೇ ವೀರಶೈವ ಮತಸ್ಥರಿಗಾದರೂ ಸ್ವಾಮಿಗಳಲ್ಲಿ ಭಕ್ತಿ ಬಹಳವಾಗಿತ್ತು. ಎಲ್ಲ ಮತೀಯ ಸಾಧಕರಿಗೂ ಸ್ವಾಮಿಗಳು ಆಶ್ರಯದಾತರಾಗಿದ್ದರು. ವರ್ಣಾಶ್ರಮ ತತ್ವಗಳಲ್ಲಿ ಪೂಜ್ಯ ಭಾವನೆಯಿದ್ದುದರಿಂದ ಮಹೀಪತಿರಾಯರಿಗೆ ನುಂಗನು ಸ್ವಯಂ ಗುರುವಾಗದೆ ಭಾಸ್ಕರ ಸ್ವಾಮಿಗಳ ಬಳಿಗೆ ಹೋಗಬೇಕೆಂದು ಮಾರ್ಗ ತೋರಿಸಿದುದು.

ಅತ್ತ ಮಹೀಪತಿರಾಯರಿಗೆ ಅಧಿಕಾರದಲ್ಲಿ ಬಲು ಜುಗುಪ್ಸೆ ಹುಟ್ಟಿತು. ಬಾದಶಹನು ತಮ್ಮನ್ನು ಸಂತೋಷದಿಂದ ನಿವೃತ್ತಿಗೊಳಿಸಲು ತಕ್ಕ ಹಂಚಿಕೆಗಳನ್ನೇ ಯೋಚಿಸತೊಡಗಿದರು. ಅದೇ ಸಮಯದಲ್ಲಿ ಬಾದಶಹನ ಚಿಕ್ಕ ರಾಣಿಯು ತನ್ನ ತಮ್ಮನಿಗೆ ಯೋಗ್ಯ ಅಧಿಕಾರ ಕೊಡಬೇಕೆಂದು ಒತ್ತಾಯ ಪಡಿಸುತ್ತಿದ್ದಳು. ಲಷ್ಕರೀಖಾತೆಯಲ್ಲಿ ದೊಡ್ಡ ಪದವಿ ಸಿಗಬೇಕೆಂದರೆ ಶತ್ರುಗಳು ಬಹಳವಾಗಿದ್ದುದರಿಂದ ಯೋಗ್ಯತೆಯ ಅವಶ್ಯಕತೆ ಹೆಚ್ಚಾಗಿತ್ತು. ಖಜಾನೆದಾರ ಪದವಿಯು ಕೇವಲ ಲೆಕ್ಕಾಚಾರ ಪ್ರಾಮಾಣಿಕತೆಗಳಿಂದ ಸಾಗುವದಾಗಿದ್ದ ಕಾರಣ ಆ ಪದವಿಗೆ ಸ್ಪರ್ಧಿಸುವರು ವಿರಳರಾಗಿದ್ದರು. ರಾಯರು ನಿಮ್ಮ ತಮ್ಮನಿಗೇ ಕೊಡಿಸುವದಾದರೆ ತಮ್ಮ ಪದವಿಯನ್ನು ಸಂತೋಷದಿಂದ ಬಿಟ್ಟುಕೊಡುವದಾಗಿ ಚಿಕ್ಕರಾಣಿಯೊಡನೆ ಪ್ರಸ್ತಾಪಿಸಿದರು. ಆಕೆಗೆ ಬೇಕಾಗಿದ್ದುದೂ ಅಷ್ಟೇ! ದಾಕ್ಷಿಣ್ಯಪರನಾದ ಬಾದಶಹನು ರಾಣಿಯ ಸಲಹೆಗೆ ಮನಸೋತನು. ರಾಯರನ್ನು ಬಹಳವಾಗಿ ಉಪಚರಿಸಿ ಬೇಕಾದ ಖಿಲ್ಲತ್ತುಗಳನ್ನೂ ಕೊಟ್ಟು ಅಧಿಕಾರ ಶೃಂಖಲೆಯಿಂದ ವರನ್ನು ಬಿಡುಗಡೆ ಮಾಡಿದನು.

ರಾಯರು ಅಧಿಕಾರವನ್ನು ಬಿಟ್ಟಮೇಲೆ ನುಂಗನುಂಗಿಯರ ದರ್ಶನ ಮಾಡಿದರು. ಸರ್ವಸ್ವವನ್ನೂ ಬಡಜನರಿಗೆ ದಾನಮಾಡಿ ಸಾರವಾಡಕ್ಕೆ ಹೊರಡುವಾಗ ನುಂಗನು ರಾಯರ ಬೆನ್ನು ಛಪ್ಪರಿಸಿ, ನೋಡುವಿ, ಮುಂದೆ 'ಮೌತ್ಕಾಫಾಣ್' ಎನ್ನುತ್ತಲೇ ಪದಕ್ರಮಣ ಮಾಡಿದನು.

ಮಹೀಪತಿರಾಯರು ನಮಸ್ಕಾರಮಾಡುತ್ತಲೇ ಭಾಸ್ಕರಸ್ವಾಮಿಗಳು ನಕ್ಕರು. ನಿಮ್ಮ ಗುರು "ಶಹಾನುಂಗ" ನಾನಲ್ಲವೆಂದರು. ನಮ್ಮಲ್ಲಿ ನಿಮಗೆ ಅಭ್ಯಾಸ ಮಾತ್ರ ಎಂದರು. ರುಕ್ಮಿಣಿಪಂಡಿತರೂ ಸಿಂದಗೀಜಕ್ಕಪ್ಪಯ್ಯನವರೂ ರಾಯರ ಸಹಾಧ್ಯಾಯಿಗಳಾದರು. ನಾಲ್ಕಾರು ವರ್ಷಗಳ ಅಭ್ಯಾಸದಲ್ಲಿ ಯಾರಿಗೂ ಸಾಧ್ಯವಾಗದ ವಜ್ರಯೋಗ ಲಂಬಿಕಾಯೋಗಗಳು ರಾಯರಿಗೆ ಸಿದ್ಧಿಸಿದವು. ಪೂರ್ವಜನ್ಮಗಳಲ್ಲಿ ಮಾಡಿದ ಯೋಗದ ಫಲವಿದೆಂದು ಸ್ವಾಮಿಗಳು ರಾಯರಿಗೆ ಜನ್ಮಾಂತರಗಳ ಜ್ಞಾಪಕಮಾಡಿಕೊಟ್ಟರು. ಆದ್ದರಿಂದಲೇ ಅರ್ಜುನನ ಸಂಶಯ ಪರಿಹಾರಾರ್ಥವಾಗಿ ಶ್ರೀಮದ್ಭಗವದ್ಗೀತೆಯಲ್ಲಿ ಶ್ರೀ ಕೃಷ್ಣಪರಮಾತ್ಮನು:—

ಪಾರ್ಥನೈವೇಹನಾಮುತ್ರ ವಿನಾಶಸ್ತಸ್ಯ ವಿದ್ಯತೇ
ನಹಿ ಕಲ್ಯಾಣಕೃತ್ಕಶ್ಚಿದ್ದುರ್ಗತಿಂ ತಾತ ಗಚ್ಛತಿ ॥೪೦॥

ಪ್ರಾಪ್ಯ ಪುಣ್ಯಕೃತಾನ್ ಲೋಕಾನುಷಿತ್ವಾ ಶಾಶ್ವತೀಸ್ಸಮಾಃ
ಶುಚೀನಾಂ ಶ್ರೀಮತಾಂಗೇಹೇ ಯೋಗಭ್ರಷ್ಟೋಽಭಿಜಾಯತೇ ॥೪೧॥

ಅಥವಾ ಯೋಗಿನಾಮೇವ ಕುಲೇ ಭವತಿ ಧೀಮತಾಂ
ಏತದ್ಧಿ ದುರ್ಲಭತರಂ ಲೋಕೇಜನ್ಮಯದೀದೃಶಂ ॥೪೨॥
ತತ್ರ ತಂ ಬುದ್ಧಿಸಂಯೋಗಂ ಲಭತೇಪೌರ್ವದೇಹಿಕಂ
ಯತತೇ ಚ ತತೋಭೂಯಃ ಸಂಸಿದ್ಧೌ ಕುರುನಂದನ ॥೪೩॥ vi

ಎಂಬದಾಗಿ ಉಪದೇಶಿಸಿರುವ ವಾಕ್ಯಗಳು ಪ್ರಕೃತವಿಚಾರದಲ್ಲಿ ಹೊಂದಿಕೆಯಾಗಿರುವವು. ಜನ್ಮಾಂತರ ಸಂಸ್ಕಾರವಿರದಿದ್ದರೆ ನಾಲ್ಕಾರು ವರ್ಷಗಳಲ್ಲಿ ಮಹೀಪತಿರಾಯರು ಇಷ್ಟು ದೊಡ್ಡ ಸಿದ್ಧಿಗಳನ್ನು ಪಡೆಯುತ್ತಿರಲಿಲ್ಲ. ಜನ್ಮಾಂತರ ಶಾಸ್ತ್ರವು ಸತ್ಯವಾಗಿರದಿದ್ದರೆ ಸ್ವಲ್ಪಾವಧಿಯಲ್ಲಿ ಯೋಗಸಿದ್ಧಿಯು ಸಾಧ್ಯವಾಗುತ್ತಿರಲಿಲ್ಲ. ಈಶ್ವರನನ್ನೇ ಒಪ್ಪದ ಬೌದ್ಧಾದಿಮತೀಯರು ಸಹ ಜನ್ಮಾಂತರಗಳುಂಟೆಂದು ಬುದ್ಧಿಯಿಂದಲೇ ತರ್ಕಿಸಿ ನಂಬಿರುವಾಗ ಈಶ್ವರನನ್ನೂ ಒಪ್ಪಿ ಜನ್ಮಾಂತರಗಳನ್ನೊಪ್ಪದಿರುವದೆಂಥಾ ತಿಳಿಗೇಡಿತನ!

"ಯೋಗಶ್ಚಿತ್ತವೃತ್ತಿನಿರೋಧಃ" ಎಂಬ ಸೂತ್ರಾರ್ಥದಂತೆ, ಮನಸ್ಸಿನ ವೃತ್ತಿಯನ್ನು ತಡೆಯುವದಕ್ಕೆ ಯೋಗವೆಂದು ಅರ್ಥವಾಗುತ್ತದೆ. ಸಂಬಂಧಗೊಳಿಸುವದೆಂದು ಯೋಗಶಬ್ದದ ಮತ್ತೊಂದು ಅರ್ಥ. ಅಥವಾ-ಭಕ್ತಿಯೋಗ (ಭಕ್ತಿಯೆಂಬ ಉಪಾಯ) ಜ್ಞಾನಯೋಗ (ಜ್ಞಾನವೆಂಬ ಉಪಾಯ) ಕರ್ಮಯೋಗ (ಕರ್ಮವೆಂಬ ಉಪಾಯ) ಎಂಬರ್ಥದಿಂದ ಯೋಗಶಬ್ದಕ್ಕೆ ಉಪಾಯವೆಂದೂ ಮಗದೊಂದು ಅರ್ಥವಾಗುತ್ತದೆ. ನಿರೋಧಗೊಳಿಸುವದೆಂದರೆ ಬರಿದು ಮಾಡುವದಲ್ಲ. ಮನಸ್ಸು ಬರಿದಾಗುವದಲ್ಲ. ವೃತ್ಯಂತರಗಳಲ್ಲಿರುವದನ್ನು ತಡೆದು ಒಂದು ವಸ್ತುವಿನಲ್ಲಿ ಕೇಂದ್ರೀಕರಿಸುವದು ಮಾತ್ರ. ಆಸನಗಳನ್ನು ಹಾಕುವದರಿಂದ ದೇಹ ಶುದ್ಧಿ ದೇಹ ಸ್ವಾಧೀನಗಳೆರಡೂ ಆಗುತ್ತವೆ. ಶ್ವಾಸವನ್ನು ನಿಯಮನಮಾಡುವುದರಿಂದ ಚಿತ್ತಶುದ್ಧಿ ಚಿತ್ತೈಕಾಗ್ರತೆಗಳೆರಡೂ ಉಂಟಾಗುತ್ತವೆ. ಹೀಗೆ ಶುದ್ಧವಾದ ದೇಹದಿಂದ ಏಕಾಗ್ರವಾದ ಮನಸ್ಸಿನಿಂದ ಆತ್ಮಸಾಕ್ಷಾತ್ಕಾರ ಮಾಡಿಕೊಳ್ಳುವದು ಸುಲಭವಾದ ಉಪಾಯ. ಈ ಉಪಾಯವೇ ಯೋಗ. ಇಂತಹ ಉಪಾಯದಿಂದ ಸಾಧಕರು ಸುಲಭವಾಗಿ ಆತ್ಮಸಾಕ್ಷಾತ್ಕಾರಮಾಡಿಕೊಂಡು ಮುಕ್ತರಾಗಲೆಂದು ಪತಂಜಲಿಮಹಾಮುನಿಗಳು ಬಹುದೊಡ್ಡಯೋಗಶಾಸ್ತ್ರವನ್ನು ಬರೆದು ಮಹೋಪಕಾರ ಮಾಡಿರುವರು.

ಯೋಗವನ್ನುಮತತ್ರಯದ ಆಚಾರ್ಯರುಗಳೂ ಖಂಡಿಸಿರುವರೆಂದು ಅವಿಚಾರಿಗಳು ಭಾವಿಸುವರು. ಶಂಕರಾಚಾರ್ಯರಿಗಿಂತ ರಾಮಾನುಜಾಚಾರ್ಯರೂ ಅವರಿಗಿಂತ ಮಧ್ವಾಚಾರ್ಯರೂ ಯೋಗವನ್ನು ಕಟುತರವಾಗಿ ಖಂಡಿಸಿರುವರೆಂದು ಹೇಳುವ ವಾದದಲ್ಲಿ ಅರ್ಥವಿಲ್ಲ. ಮೂವರೂ ಯೋಗದ ಯಾವ ಭಾಗವನ್ನು ಖಂಡಿಸಿರುವರೆಬುದನ್ನು ನಿದಾನವಾಗಿ ವಿಚಾರಿಸಿದರೆ ಅಪಾರ್ಥವಾಗುವದಿಲ್ಲ. ವಜ್ರೋಳಿ ಮೊದಲಾದ ಯೋಗಗಳನ್ನು ಸ್ವಾಧೀನಪಡಿಸಿಕೊಂಡವರು ಭೋಗಿಗಳಾಗಿ ಅತ್ಯಾಚಾರ ಅನಾಚಾರ ಅನೀತಿಗಳನ್ನಾಚರಿಸಿರುವದನ್ನು ಕಂಡು, ಆ ಬಗೆಯ ಯೋಗವನ್ನವರು ಖಂಡಿಸಿದರಲ್ಲದೆ ಬ್ರಹ್ಮಸಾಕ್ಷಾತ್ಕಾರಕ್ಕೆ ಅನುಕೂಲವಾದ ಯೋಗವನ್ನವರು ಖಂಡಿಸಿಲ್ಲ. ಯೋಗವು ಅಂಥಾತುಚ್ಛವಾದ ವಿದ್ಯೆಯಾಗಿದ್ದರೆ ಶ್ರೀ ಕೃಷ್ಣನು ಗೀತೆಯ ಆರನೇ ಅಧ್ಯಾಯದ ಕೊನೆಯಲ್ಲಿ:—

ತಪಸ್ವಿಭ್ಯೋಽಧಿಕೋಽಯೋಗೀ
ಜ್ಞಾನಿಭ್ಯೋಽಪಿಮತೋಽಧಿಕಃ
ಕರ್ಮಿಭ್ಯಶ್ಚಾಧಿಕೋಽಯೋಗೀ
ತಸ್ಮಾದ್ಯೋಗಿಭವಾರ್ಜುನ ॥೪॥

ಎಂಬದಾಗಿ ಉಪದೇಶಿಸುತ್ತಿರಲಿಲ್ಲ.

ಬೌದ್ಧಮತದ ಪ್ರಾಬಲ್ಯಕಾಲದಲ್ಲಿ ಯೋಗದ ದುರುಪಯೋಗವೂ ಒಂದುಕಡೆ ಆಗುತ್ತಿತ್ತು. ಬುದ್ಧದೇವನು ಒಂದಾದರೂ ಗ್ರಂಥವನ್ನು ಬರೆಯದಿದ್ದರೂ ಆತನ ಅನುಯಾಯಿಗಳಲ್ಲಿ ಬಲು ಭಿನ್ನಪಂಥಗಳಾದವು. ಭಿಕ್ಷುಭಿಕ್ಷುಕಿಯರ (Monks & nuns) ವಿಹಾರಗಳು ಅಕ್ಷರಶಃ ವಿಹಾರ ಸ್ಥಾನಗಳಾದವು. ಧರ್ಮದ ಕವಚದಲ್ಲಿ "ಸೌಗತ ಭಿಕ್ಷುಪುಪರದಾರಾನಾಕ್ರಮತ್ಸ್ವಪಿ ಈರ್ಷಾಮಲಂ ನಕಾರ್ಯಂ" ಎನ್ನುವವರಿಗೆ ಉಪದೇಶವು ಅಧೋಗತಿಗಿಳಿಯಿತು. ಅಂತೆಯೇ ಯೋಗವೂ ಭೋಗ ಸಾಧನೆಗೆ ಅಂಗಭೂತವಾಯಿತು. ಯಾವ ಇಂದ್ರಿಯದಿಂದ ಯಾವ ಕಾರ್ಯ ಮಾಡಿಸ್ಸುವುದು ಅಸಾಧ್ಯವೋ ಅಂಥಾದ್ದನ್ನು ಅಭ್ಯಾಸ ಬಲದಿಂದ ಮಾಡಿ ತೋರಿಸಿದವರು ಮಹಾಪುರುಷರೆಂದು ಕರೆಸಿಕೊಂಡರು. ಅಂಥವರು ನೀತಿಯನ್ನು ಮೀರಿ ನಡೆದರೂ ಅದನ್ನು ಪಾಪವೆಂದು ನಿಂದಿಸುವ ಧೈರ್ಯ ಜನತೆಯಲ್ಲಿ ತಪ್ಪಿಹೋಯಿತು. ವಜ್ರಯೋಗವನ್ನೇ ದೃಷ್ಟಾಂತವಾಗಿಟ್ಟುಕೊಂಡರೆ ಅದು ಜನನೇಂದ್ರಿಯ ಶಕ್ತಿಯನ್ನು ಹೆಚ್ಚಿಸುವ ಉಪಾಯವೆನ್ನಬೇಕು. ಮತ್ತಷ್ಟು ಸ್ಪಷ್ಟಪಡಿಸಿದರೆ ಪ್ರಾಣರಸವನ್ನು ತಡೆದಿಟ್ಟುಕೊಳ್ಳುವದು ಬಿಟ್ಟು ಮತ್ತೆ ಸೇದಿಕೊಳ್ಳುವದು ಈ ಎರಡೂ ವಜ್ರೋಳಿಯ ಫಲವೆನ್ನಬೇಕು. ಈ ಶಕ್ತಿಯನ್ನು ಪಡೆದವರು ಭೋಗಿಗಳಾದರೆ ಕೇಳುವದೇನು? ಅವರ ಅನೀತಿಯನ್ನು ತಡೆಯುವದು ಹೇಗೆ ಸಾಧ್ಯ? ವಜ್ರೋಳಿಯ ಜೊತೆಗೆ ಪರಕಾಯ ಪ್ರವೇಶವೂ ಸ್ವಾಧೀನವಾಯಿತೆಂದರೆ ಯಾವ ದೇಹವನ್ನು ಬೇಕಾದರೂ ಸೇರಬಹುದು, ಮನಬಂದವರೊಡನೆ ಮನಬಂದಂತೆ ಭೋಗಿಸಬಹುದು. ಇದೇ ಯೋಗದ ಮಹಾಫಲವಾಗಿದ್ದರೆ ಇಷ್ಟು ಮಾತ್ರಕ್ಕೆ ಯೋಗಶಾಸ್ತ್ರದ ಉಪದೇಶವಾಗಿದ್ದರೆ ಯೋಗವು ಅತ್ಯಂತ ಗರ್ಹ್ಯವೇಸರಿ. ಇಂತಹ ಅತಿವರ್ತನೆಗಳನ್ನು ಖಂಡಿಸುವುದಕ್ಕಾಗಿ ಆಚಾರ್ಯರು

ಗಳು ಯೋಗವನ್ನು ಖಂಡಿಸಿದರಲ್ಲದೆ ಸಾತ್ವಿಕ ಯೋಗವನ್ನವರು ಖಂಡಿಸ ಲಿಲ್ಲ. "ಯಮನಿಯಮಾದಿ ಅಷ್ಟಾಂಗಯೋಗ ನಿರತರಾದ" ಎಂದು ಮೊದ ಲಾದ ವಕ್ಕಣೆಯಿಂದ ಯಾವ ಪೀಠಾಧಿಪತಿಗಳಿಗೂ ವಿಜ್ಞಾಪನ ಪತ್ರ ಬರೆ ಯುವ ರೂಢಿ ಇಂದಿಗೂ ಇರುವದನ್ನು ನೋಡಿಯಾದರೂ ಮತತ್ರಯದ ಆ ಚಾ ರ್ಯ ರು ಗ ಳು ಯೋಗ ವಿರೋಧಿಗಳಲ್ಲವೆಂಬುದನ್ನು ತಪ್ಪದೇ ನಂಬಬೇಕು.

ನಾಟಕ ಸರ್ಕಸ್ ಮೊದಲಾದ ಪ್ರಯೋಗ ಮಾಡಿ ತೋರಿಸುವಂತೆ ಈಗೀಗ ಆಸನ ಪ್ರಾಣಾಯಾಮಗಳ ಪ್ರಯೋಗಮಾಡಿ ತೋರಿಸುವವರನ್ನು ಜನರು ನೋಡಿರಬಹುದು. ಆಸನಗಳನ್ನು ಹಾಕುವದರಿಂದುಂಟಾಗುವ ಅವರ ಅಂಗಸೌಷ್ಟವ ದೇಹಕಾಂತಿ ದೃಷ್ಟಿಪಾಟವ ಮೊದಲಾದುವುಗ ಳನ್ನು ನೋಡಿ ಆಶ್ಚರ್ಯಪಟ್ಟಿರಬಹುದು. ಪ್ರಾಣಾಯಾಮದ ಫಲವೆಂದು ದಿವಸಗಟ್ಟಲೆ ಮಣ್ಣಿನಲ್ಲಿ ಹುದುಗಿದ್ದು ಮೇಲೆಬರುವದನ್ನು ನೋಡಿ ನಾವೂ ಪ್ರಾಣಾಯಾಮವನ್ನು ಕಲಿಯಬೇಕೆಂದು ಅಪೇಕ್ಷಿಸಿರಬಹುದು. ಇಷ್ಟು ಮಾತ್ರವೇ ಯೋಗಫಲವಲ್ಲ. ಇದು ಯೋಗದ ಆಭಾಸಫಲ ಮಾತ್ರ. ಜ್ಞಾನಿಗಳು ಇದನ್ನು ಯೋಗವೆಂದು ಎಂದೂ ಕರೆಯುವುದಿಲ್ಲ.

ಯೋಗೀಯುಂಜೀತ ಸತತಂ ಆತ್ಮಾನಂ ರಹಸಿಸ್ಥಿತಃ
ಏಕಾಕೀಯತ ಚಿತ್ತಾತ್ಮಾ ನಿರಾಶೀರಪರಿಗ್ರಹಃ ॥೧೦॥

ಶುಚೌದೇಶೇಪ್ರತಿಷ್ಠಾಪ್ಯ ಸ್ಥಿರಮಾಸನಮಾತ್ಮನಃ
ನಾತ್ಯುಚ್ಛ್ರಿತಂ ನಾತಿನೀಚಂ ಚೇಲಾಜಿನಕುಶೋತ್ತರಂ ॥೧೧॥

ತತ್ರೈಕಾಗ್ರಂಮನಃ ಕೃತ್ವಾಯತ ಚಿತ್ತೇಂದ್ರಿಯಕ್ರಿಯಃ
ಉಪವಿಶ್ಯಾಸನೇಯುಂಜ್ಯಾತ್ ಯೋಗಮಾತ್ಮವಿಶುದ್ಧಯೇ ॥೧೨॥

ಸಮಂಕಾಯ ಶಿರೋಗ್ರೀವಂ ಧಾರಯನ್ನಚಲಂಸ್ಥಿರಃ
ಸಂಪ್ರೇಕ್ಷ್ಯ ನಾಸಿಕಾಗ್ರಂ ಸ್ವಂ ದಿಶಶ್ಚಾನವಲೋಕಯನ್ ॥೧೩॥

ಪ್ರಶಾಂತಾತ್ಮಾವಿಗತಭೀಃ ಬ್ರಹ್ಮಚಾರಿವ್ರತೇಸ್ಥಿತಃ
ಮನಸ್ಸಂಯಮ್ಯಮಚ್ಚಿತ್ತೋ ಯುಕ್ತ ಆಸೀತಮತ್ಪರಃ ॥೧೪॥

ಯುಂಜನ್ನೇವಂ ಸದಾತ್ಮಾನಂ ಯೋಗೀನಿಯತಮಾನಸಃ
ಶಾಂತಿಂನಿರ್ವಾಣಪರಮಾಂ ಮತ್ಸಂಸ್ಥಾಮಧಿಗಚ್ಛತಿ ||೧೫||

ಎಂಬಂತೆ ಯಾವನು ಯೋಗಮಾಡುವನೋ ಅವನೇ ಯೋಗಿಯೆನಿಸುವನು. ಯೋಗಿಯು ತ್ಯಾಗಿಯಾಗಿರಬೇಕು. ಯೋಗಿಯು ಮಂತ್ರೋಪಾಸಕನಾಗಿರಬೇಕು. ಅವನ ಮಂತ್ರೋಪಾಸನೆಗೆ ಆಸನ ಪ್ರಾಣಾಯಾಮಗಳು ಸಾಧನವಾಗಿರಬೇಕು. ಆಸನ ಪ್ರಣಾಯಾಮಗಳು ಮಂತ್ರೋಪಾಸನೆಯಲ್ಲಿ ದೇಹ ಮನಸ್ಸುಗಳು ಸ್ವಾಧೀನವಾಗಿರುವಷ್ಟು ಅಭ್ಯಾಸವಾಗಿದ್ದರೇ ಸಾಕು. ಹೆಚ್ಚಿನ ಸಿದ್ಧಿಗಳು ಪ್ರಾಪ್ತವಾಗಿದ್ದರೆ ತಪ್ಪಲ್ಲ. ಪ್ರಾಪ್ತವಾಗಿರದಿದ್ದರೆ ಬಾಧಕ ಮೊದಲೇ ಅಲ್ಲ.

ಆದ್ದರಿಂದಲೇ ಮಹೀಪತಿರಾಯರು ಪ್ರಯೋಗ ಪಟುಗಳನ್ನು ನೋಡಿ—

ಬೆಹಾಗ್ – ಝಾಪುತಾಳ

ವಾಸುದೇವನಾಶ್ರಯಿಸದ ಉಪಾಸನ್ಯಾತಕೆ
ಧ್ಯಾಸ ಬಲಿಯದಿಹ ಮಿಗಿಲಭ್ಯಾಸವ್ಯಾತಕೆ ||ಪ||

ಎಂಬ ಪಲ್ಲವಿಯನ್ನು ಪದಗರ್ಭವಾಗಿಟ್ಟು ಐದು ನುಡಿಗಳ ಕೆಳಕಂಡ ಪದವನ್ನು ಹಾಡಿರುತ್ತಾರೆ.

ಹೃದಯಶುದ್ಧವಾಗದೆ ಉದಯಸ್ನಾನವ್ಯಾತಕೆ
ಬದಿಯಲಿಹ ಸುವಸ್ತು ಕಾಣದ ಜ್ಞಾನವ್ಯಾತಕೆ
ಉದರಕುದಿಯು ಶಾಂತಿಹೊಂದದ ಸಾಧನವ್ಯಾತಕೆ
ಬುಧರ ಸೇವೆಗೊದಗದಲಿಹ ಸ್ವಧನವ್ಯಾತಕೆ ||೧||

ಭಾವನೆಲೆಯುಗೊಳ್ಳದಲಿಹ ಭಕುತಿಯಾತಕೆ
ಕಾವನಯ್ಯನ ಕಾಣದಲಿಹ ಯುಕುತಿಯಾತಕೆ
ದೇವದೇವನ ಸೇವೆಗಲ್ಲದ ಶಕುತಿಯಾತಕೆ
ಹೇವಹೆಮ್ಮೆಯಳಿಯದಲಿಹ ವಿರಕ್ತಿಯೇತಕೆ ||೨||

ತತ್ವದನೆಲೆ ತಿಳಿಯದಿಹ ವಿದ್ವತ್ವವೇತಕೆ
ಸತ್ವಗುಣವಿಚಾರವಿಲ್ಲದಿಹ ಕವಿತ್ವವೇತಕೆ

ಚಿತ್ತಶುದ್ಧನಾಗದಿಹ ಮಹತ್ವವೇತಕೆ
ವಿತ್ತದಾಶೆತ್ತೊರೆಯದ ಸಿದ್ಧಿಯೇತಕೆ ||೩||

ನೀತಿಮಾರ್ಗವರಿಯದವನ ರೀತಿಯೇತಕೆ
ಮಾತಿನಮಿತಿಯಿಲ್ಲದವನ ಪ್ರೀತಿಯೇತಕೆ
ರೀತಿ ಆದರವಿಲ್ಲದಮೃತ ಊಟವೇತಕೆ
ಜ್ಯೋತಿ ತನ್ನೊಳರಿಯದ ಯತಿತ್ವವೇತಕೆ ||೪||

ಮನವು ಸ್ಥಿರಗೊಳ್ಳದವನ ಶ್ರವಣವೇತಕೆ
ನೆನೆವು ನೆಲೆಗೊಳ್ಳದಿದ್ದರೆ ಮನನವೇತಕೆ
ತನುವಿನಲ್ಲಿ ಘನವಕಾಣದ ಅನುಭವ್ಯಾತಕೆ
ದಾನಿ ಮಹೀಪತಿಸ್ವಾಮಿಯ ಕಾಣದ ಜನ್ಮವೇತಕೆ ||೫||

---

ರಾಯರು ಮಧ್ವಮತಸ್ಥರಾದರೂ ಮಾಧ್ವತತ್ವಗಳನ್ನು ವಿಸ್ತರಿಸಿ ಪದಗಳನ್ನು ಹಾಡಿಲ್ಲ. ಇತರ ದಾಸರ ಪದಗಳಂತೆ ಇವರ ಪದಗಳಲ್ಲಿ ಪೌರಾಣಿಕ ವರ್ಣನೆಗಳಿಲ್ಲ. ಇವರ ಪದಗಳಲ್ಲಿರುವದೆಲ್ಲಾ ಯೋಗದ ಅನುಭವಗಳು. ಹರಿದಾಸಸಾಹಿತ್ಯದಲ್ಲಿ ಶರಣರ ವಚನ ಶಾಸ್ತ್ರದ ಧೋರಣೆಯನ್ನು ಕಾಣಬೇಕೆಂದರೆ ಮಹೀಪತಿರಾಯರ ಪದಗಳಲ್ಲಿ.

ಹವ್ಯಕವ್ಯಗಳಲ್ಲಿ ರಾಯರು ನಾವು ತಿಳಿದಿರುವ ಮತದ ಕಟ್ಟಿನಂತೆ ನಡೆಯುತ್ತಿರಲಿಲ್ಲ. ವೈದಿಕನಿಂದೆಗೆ ರಾಯರು ಅಂಜುತ್ತಿರಲಿಲ್ಲ. ಒಮ್ಮೆ ಹೇಗಾಯಿತೆಂದರೆ:—

ರಾಯರ ಮನೆಯಲ್ಲಿ ಪಿತೃಶ್ರಾದ್ಧ. ಮಠಾಧಿಕಾರಿಯನ್ನು ಪೌರೋಹಿತ್ಯಕ್ಕೆ ಕರೆದರು. ಆಚಾರ್ಯರು ಎಷ್ಟು ಹೊತ್ತಿಗೆ ಬರಬೇಕೆಂದು ಕೇಳಿದರು. ನೀವು ಉಂಡು ಹತ್ತು ತಾಸಿಗೆ ಬಂದರಾಯಿತೆಂದು ರಾಯರೆಂದರು. ಹತ್ತು ತಾಸೆಂದರೆ ಸಾಯಂಕಾಲದ ನಾಲ್ಕು ಘಂಟೆ. ಆಚಾರ್ಯರು—ಶ್ರಾದ್ಧವೆಂದು ಹೇಳುವಿರಿ; ಉಂಡು ಬರುವದು ಹೇಗೆ? ಇದೇನು ಹೊಸ ಸಂಪ್ರದಾಯ? ನಾನು ನೇಮದಿಂದಲೇ ಬರುತ್ತೇನೆ; ಅದ ಹೊತ್ತಾಗಲಿ; ಎಂದರು. ರಾಯರು—ಶ್ರಾದ್ಧ ನಮ್ಮಪ್ಪಂದು; ಮಾಡುವವ ನಾನು; ನಿಮಗ್ಯಾತರ ಕಾಳಜಿ; ಉಂಡೇಬರ್ರಿ; ತಾಂಬೂಲಾ ಜಗೀತಾನೂ ಬರ್ರಿ; ಎಂದರು.

ಪುರೋಹಿತರಿಗಿದು ವಿಪರೀತವೆನಿಸಿತು. ದೊಡ್ಡರಾಯ, ಮೇಲೆ ಯೋಗಾಭ್ಯಾಸಿ, ದಡ್ಡನೆನ್ನುವಹಾಗಿಲ್ಲ ಎಲ್ಲಾ ತಿಳಿದವ; ದಕ್ಷಿಣೆಯ ಜೊತೆಗೆ ಧೋತ್ರದ ಜೋಡೂ ಬರುತ್ತದೆ. ಧೋತ್ರ ನನಗೆ, ದಕ್ಷಿಣೆ ಮಠಕ್ಕೆ. ಎಂದು ರಾಯರು ಹೇಳಿದ ಹೊತ್ತಿಗೇ ಹೇಳಿದ್ದಂತೆಯೇ ಬಂದಿಳಿದರು. ರಾಯರ ದಿವಾನಖಾನೆಯಲ್ಲಿ ಜಕ್ಕಪ್ಪಯ್ಯನವರೂ ರುಕ್ಮಿಣಿ ಪಂಡಿತರೂ ಬೆಳಗಿನಿಂದ ತಾಂಬೂಲ ಜಗಿಯುತ್ತಾ ತಂಬಾಕು ಹಾಕುತ್ತಾ ಮಾತಾಡುತ್ತಿದ್ದರು. ಇಬ್ಬರಿಗೂ ಆಹ್ನಿಕದ ಮಾತಿರಲಿ, ಸ್ನಾನವೇ ಆಗಿರಲಿಲ್ಲ. ಆಚಾರ್ಯರು ಬಂದದ್ದು ನೋಡಿ ರಾಯರು ಸ್ನಾನಮಾಡಿದರು. ಪೂಜೆಯೂಯಿತು. ಶ್ರಾದ್ಧದ ಸಿದ್ಧತೆಯಾಯಿತು. ಆಚಾರ್ಯರು ಸಂಕಲ್ಪ ಮಾಡಿಸಿ ಆಯಾ ಸ್ಥಾನಗಳಿಗೆ ಬ್ರಾಹ್ಮಣರೆಲ್ಲ, ಬರಲಿ, ಅಂದರು. ರಾಯರು ಬರುವದೆಲ್ಲಿಂದ—ಒಳಗೇ ಇದ್ದಾರೆ—ಬರುತ್ತಾರೆಂದರು. ಅಯ್ಯನವರನ್ನೂ ಪಂಡಿತರನ್ನೂ ಹೆಸರು ಹಿಡಿದು ಕೂಗಿದರು. ಇಬ್ಬರೂ ಇದ್ದಂತೆಯೇ ಮಣೆಯ ಮೇಲೆ ಬಂದು ಕುಳಿತರು. ಆಚಾರ್ಯರಿಗೆ ಈ ಧರ್ಮಲಂಡತನ ಸಹಿಸಲಿಲ್ಲ.

ಆಚಾರ್ಯ—ಏನು ರಾಯರೆ, ಹೀಗೂ ಉಂಟೆ? ಬ್ರಾಹ್ಮಣರು ಸ್ಮಾರ್ತರೇ ಆಗಲಿ, ಅದರ ಆಕ್ಷೇಪ ನಾನು ಮಾಡುವುದಿಲ್ಲ ಶ್ರಾದ್ಧದ ದಿನ! ಒಂದಿಷ್ಟು ಮಡಿ ಮೈಲಿಗೆ ಬೇಡವೆ? ಸ್ನಾನ ಸಹ ಬೇಡವೇ ಬ್ರಾಹ್ಮಣರಿಗೆ ?

ರಾಯರು—ಆಚಾರ್ಯರು ಸಿಟ್ಟಾಗಬಾರದು. ಬ್ರಾಹ್ಮಣರ ಗುಣದೋಷವೆಣಿಸುವುದು ನನ್ನ ಕೆಲಸವಲ್ಲ. ಅವರೇನೆನ್ನುವರೋ ಕೇಳೋಣ!

ಅಯ್ಯನವರು—ಆಚಾರ್ಯರು ಕೇಳಿದ್ದು ಸರಿ; ನೋಡಿ, ಈಗಲೇ ನಾನು ತೀರ್ಥಭಾವಿಯಲ್ಲಿ ಸ್ನಾನಮಾಡಿ ಬಂದೆ. ಅದಕ್ಕೆ ರಾಮೇಶ್ವರನೇ ಸಾಕ್ಷಿ. ಹಾದಿಯುದ್ದಕ್ಕೂ ನೀರು ಸೋರಿದೆ. ಹೆಜ್ಜೆಗಳ ಗುರುತಿದೆ. ನನ್ನ ಜಟೆಯನ್ನು ಹಿಂಡುತ್ತೇನೆ. ನೀರು ಬರುತ್ತಿದೆ ನೋಡಿ.

ಆಚಾರ್ಯರಿಗೆ ಎಲ್ಲವನ್ನೂ ನೋಡಿ ಆಶ್ಚರ್ಯವೆನಿಸಿತು. ದೊಡ್ಡವರ ವಿಚಾರ ಮಾತಾಡಿದ್ದೇ ಅನುಚಿತವೆನಿಸಿತು. ಶ್ರಾದ್ಧಕರ್ಮವೂ ಪೂರ್ತಿ

ಸಿತು. ಸೂರ್ಯದರ್ಶನ ಕಾಲಕ್ಕೆ ಚಂದ್ರೋದಯವಾಗಿತ್ತು. ರಾಯರು ಆಚಾರ್ಯರನ್ನು ಕರೆದು—ಕಾಲಾತೀತವಾಗಿಲ್ಲ ನೀವೂ ಸೂರ್‍ಯದರ್ಶನಮಾಡಿರೆಂದರು. ರಾಯರು ಮಾಡಿದ್ದು ಚಂದ್ರದರ್ಶನ. ಆಚಾರ್ಯರಿಗಾದದ್ದು ಸೂರ್ಯದರ್ಶನ. ಮನೆಯಲ್ಲಿ ದೀಪದರ್ಶನ. ಇದು ಶ್ರಾದ್ಧ! ವಿಚಿತ್ರ ಶ್ರಾದ್ಧ!

ಇದರಿಂದ ತಿಳಿಯಬೇಕಾದುದಿಷ್ಟೆ. ಅಧಿಕಾರಿಗಳಲ್ಲಿ—ವಿಧಿನಿಯತರು, ವಿಧ್ಯನಿಯತರು, ಸ್ವೇಚ್ಛಾನಿಯತರು; ಎಂಬುದಾಗಿ ಮೂರು ಬಗೆಯವರಿರುತ್ತಾರೆ. ವಿಧ್ಯನಿಯತರ ಪ್ರಸ್ತಾಪವಿಲ್ಲಿಲ್ಲ. ಏನಿದ್ದರೂ ಸ್ವೇಚ್ಛಾನಿಯತರದು. ಈ ಬಗೆಯವರು ಬಹು ಜನ್ಮಗಳಲ್ಲಿ ಬಹುಕಾಲ ವಿಧಿಬದ್ಧರಾಗಿ ನಡೆದು ಮೇಲ್ತರಗತಿಗೆ ಹೋಗಿರುತ್ತಾರೆ. ಇವರಿಗೆ ಸಾಮಾನ್ಯರ ನಿಯಮಗಳು ನಿಯಮಗಳಾಗುವುದಿಲ್ಲ. ಲೋಕಸಂಗ್ರಹಾರ್ಥವಾಗಿ ಇವರು ಕರ್ಮಗಳನ್ನು ಮಾಡಿದರೆ ಮಾಡಬಹುದು. ಬಿಟ್ಟರೆ ಬಿಡಬಹುದು. ಮೇಲ್ಕಂಡ ಮೂರು ಜನರೂ ದೊಡ್ಡತರಗತಿಯವರಾದ್ದರಿಂದ ನಮ್ಮ ಅಳತೆಗೆ ಸಿಗುವರಲ್ಲ. ಇವರ ಸ್ಥಾನ ಮಾನ ತಿಳಿಯದೆ ಇತರರು ಅನುಕರಣ ಮಾಡುವುದೂ ಅಲ್ಲ. ಅರ್ಥವತ್ತಾದ ಲೋಕಾಚಾರವನ್ನು ಬಿಡುವುದು ವಿಹಿತವಲ್ಲ.

ಮೇಲೆ ಹೇಳಿದ ತೀರ್ಥ ಭಾವಿ ಈಗಲೂ ಇದೆ. ಭಾವಿಕರು ಅದನ್ನು ಮಹಾತೀರ್ಥವೆಂದು ತಿಳಿಯುತ್ತಾರೆ. ಅದೇ ರಾಮೇಶ್ವರ ದೇವಾಲಯವೂ ಇದ್ದೇ ಇದೆ.

ಮಹೀಪತಿರಾಯರಿಗೆ ಅಕ್ಕನಲ್ಲಿ ಬಲು ಗೌರವ. ಆಕೆ ರಾಯರ ಗೃಹಕೃತ್ಯದ ಒಡತಿಯಾಗಿ ಅ ಭ್ಯಾ ಗ ತ ರ ಆರಾಧನೆ ಮಾಡುತ್ತಿದ್ದಳು. ರಾಯರಿಗೆ ಈರ್ವರು ಗಂಡು ಮಕ್ಕಳು. ದೇವರಾಯನು ಹಿರಿಯ. ಕೃಷ್ಣರಾಯನು ಕಿರಿಯ. ಇಬ್ಬರಿಗೂ ರಾಯರ ಮಕ್ಕಳೆಂಬ ಗೌರವದ ವಿನಾ ಹೆಸರಾದ ವಿದ್ವತ್ತ್ವವಿರಲಿಲ್ಲ. ಆದ್ದರಿಂದ ಸ್ವತಂತ್ರ ಜೀವನ ಮಾಡುವ ಶಕ್ತಿ ಇರಲಿಲ್ಲ. ಅಕ್ಕನಿಗೆ ಮಕ್ಕಳ ಗತಿಯೇನೆಂಬ ಯೋಚನೆ ಬಹಳ. ಆಕೆಯೇ ಕೇಳಿದಳು—'ತಮ್ಮಾ ಮಹೀ, ನೀನೇನೋ ದೊಡ್ಡವನಾದಿ, ಮಕ್ಕಳನ್ನು ಮಾತ್ರ ಕಾಡುಪಾಲು ಮಾಡಿದಿ' ಎಂದು. ರಾಯರು ಅದ್ಯಾಕವ್ವಾ

ಹೀಗನ್ನಿ, ಅವರಿಗೇನಾಗಬೇಕು ಹೇಳು, ಅಂದರು. ಆಗಬೇಕೇನು? ಅವರನ್ನೂ ನಿನ್ನ ಹಾಂಗೇ ಮಾಡಬೇಕು, ಅಂದಳು. ರಾಯರು ನಕ್ಕು, ನನ್ನ ಮಕ್ಕಳು ನನ್ನ ಹಾಂಗೇ ಯಾಕೆ ನನಗಿಂತ ಅಧಿಕರೂ ಆಗುವರು; ಅವರೂ ಯೋಗಿಗಳೇ; ಅವರಿನ್ನೂ ಸುಪ್ತಾವಸ್ಥೆಯಲ್ಲಿದ್ದಾರೆ; ಇಷ್ಟರಲ್ಲೇ ವ್ಯಕ್ತಾವಸ್ಥೆಗೆ ಬರುತ್ತಾರೆ; ನೀನೇ ನೋಡುವಿಯೆಂದರು. ರಾಯರ ಅನುಗ್ರಹ ಬಲದಿಂದ ಕಾಲಾಂತರದಲ್ಲಿ ಉಭಯ ಪುತ್ರರೂ ಪ್ರಖ್ಯಾತ ಯೋಗಿಗಳೇ ಆಗಿ ಕವಿಗಳೂ ಆದರು. ಈರ್ವರೂ ಹಾಡಿದ ಯೋಗಸಂಬಂಧ ಪದಗಳು ವಂಶೀಕರ ಬಳಿಯಲ್ಲಿ ಹೇರಳವಾಗಿವೆ.

ರಾಯರಮನೆಯಲ್ಲಿ ಅಧಿಕಾರದಲ್ಲಿದ್ದಾಗಿನ ಖರ್ಚೇ ವಿರಕ್ತರಾಗಿ ಕಾಖಂಡಿಕೆಯಂಥಾ ಕುಗ್ರಾಮದಲ್ಲಿದ್ದರೂ ನಡೆಯುತ್ತಿತ್ತು. ತಿಂಗಳಾಗುತ್ತಲೇ ಮನೆಗೆ ಸಾಮಾನು ಕೊಟ್ಟ ವರ್ತಕನು ಪಟ್ಟಿಯನ್ನು ಕೊಟ್ಟೊಡನೆ ಅವನನ್ನು ತಿರುಗಿಸದೆ ತಮ್ಮ ಗಾದಿಯ ಕೆಳಗೆ ಕೈಹಾಕಿ ಅವನ ಹಣವೆಷ್ಟೋ ಅಷ್ಟನ್ನು ತೆಗೆದುಕೊಡುತ್ತಿದ್ದರು. ಒಮ್ಮೊಮ್ಮೆ ಸಾವಕಾರನಿಗೆ ಹೆಚ್ಚು ಹಣ ದೊರೆತು ಅವನು ಅದನ್ನು ವಾಪಸು ತೆಗೆದುಕೊಳ್ಳಬೇಕೆನ್ನುತ್ತಿದ್ದನ. ರಾಯರು, 'ಕೈಮೀರಿದ್ದೆಲ್ಲಾ ಕೃಷ್ಣಾರ್ಪಣ' ಎಂಬ ಪುರಂದರದಾಸರ ವಾಕ್ಯವನ್ನುದಹರಿಸಿ ಅದು ನಿನ್ನದೇ ಎಂದು ಬಿಡುತ್ತಿದ್ದರು. ವರ್ತಕನಿಗೆ ಹೆಚ್ಚು ಹಣ ದೊರಕಿತೆಂಬ ಸಂತೋಷ. ಆದರೆ ಅವನಲ್ಲಿ ನಿಲ್ಲುತ್ತಿರಲಿಲ್ಲ. ಏನಾದರೂ ಧರ್ಮಕಾರ್ಯಗಳಿಗೆ ಅದು ವಿನಿಯೋಗವಾಗಿಬಿಡುತ್ತಿತ್ತು. ವರ್ತಕನಂತೆ ಆ ಊರ ಗೌಡನಿಗೂ ರಾಯರ ಬಳಿ ಹಣವೆಲ್ಲಿ ಬಂತು, ಹೇಗೆ ಬಂತು ಎಂಬ ವಿಚಾರ. ಈರ್ವರೂ ರಾಯರಮನೆಯ ಕೆಲಸಗಾರನ ಸ್ನೇಹಮಾಡಿದರು. ಎಲವೋ, ನಿಮ್ಮ ರಾಯರು ಗಾದಿಯ ಕೆಳಗೆ ಎಷ್ಟು ಹಣವಿಟ್ಟಿದ್ದಾರೆಂದು ಕೇಳಿದರು. ಅವನು, ನಮ್ಮ ರಾಯರ ಬಳಿ ಹಣವೆಲ್ಲಿ ಬರಬೇಕು? ದಿನವಹಿ ಬಳಿಯುವವನು ನಾನು, ಹಾಸುವವನು ನಾನು, ಎಂದನು.

ಗೌಡನಿಗೆ ರಾಯರ ಆಳು ಮನುಷ್ಯ ಒಳ್ಳೇ ಭೋಳೆಯವನೇ ಸಿಕ್ಕಿದ್ದಾನೆಂದೆನಿಸಿತು. ಅವನಿಗೆ ಹಣದ ಆಶೆ ಬಹಳ. ರಾಜಾನುಗ್ರಹಪಡೆದು ದೊಡ್ಡ ದೇಶಮುಖನೆಂದೆನಿಸಿಕೊಂಬ ಆಶೆಯೂ ಬಹಳ. ಯಾವದಕ್ಕೂ ಮೊದಲು

ಹಣ ಬೇಕಷ್ಟೆ! ರಾಯರು ಖಜಾನೆದಾರರಾಗಿದ್ದ ಕಾರಣ ಬಹಳ ಹಣವನ್ನು ಸಂಗ್ರಹಿಸಿ ಕೂಡುವ ತಿವಾಸಿಯು ಕೆಳಗೆ ಇಟ್ಟುಕೊಂಡಿರುವರೆಂದು ಅವನು ತರ್ಕಿಸಿದನು. ರಾಯರು ಅಜಾತಶತ್ರುಗಳೆಂಬುವದೂ, ಅವರ ಮನೆಯು ಯಾರಿಗೂ ಮುಕ್ತದ್ವಾರವೆಂಬುವದೂ ಅವನಿಗೆ ಗೊತ್ತು. ಬೇಕಾದಷ್ಟು ಹಣವೆಲ್ಲಿಂದ ಬಂತೆಂದು ರಾಜದಂಡಕ್ಕೆ ರಾಯರನ್ನು ಗುರಿಮಾಡಲು ಗೌಡನಿಗೆ ಧೈರ್ಯವಿರಲಿಲ್ಲ. ಬಾದಶಹನ ಅನುಗ್ರಹ ರಾಯರಮೇಲೆ ಬಹಳವಾಗಿದ್ದುದರಿಂದ ತನ್ನ ಪರಿಣಾಮ ನೆಟ್ಟಗಾಗಲಾರದೆಂಬ ತಿಳಿವು ಗೌಡನಿಗಿತ್ತು. ಈ ಪರಿಸ್ಥಿತಿಯಲ್ಲಿ ರಾಯರ ಶಿಷ್ಯನೆಂದು ಸೋಗುಹಾಕಿ ರಾಯರ ಭಂಡಾರವನ್ನು ದೋಚಿಬಿಸಬೇಕೆಂದು ಗೌಡನು ದುರಾಲೋಚನೆ ಮಾಡಿದನು. ಮರುದಿನದಿಂದಲೇ ರಾಯರ ಭಜನ ಗೋಷ್ಠಿಯಲ್ಲಿ ಶಿಷ್ಯನಾಗಿ ಗೌಡನು ಸೇರಿಕೊಂಡನು. ಗೌಡನ ಮುಖನೋಡಿ ರಾಯರು—ಗೌಡನು ನಮ್ಮ ಶೋಧನೆಗೆ ಬಂದಿದ್ದಾರೆಂದು ನಕ್ಕರು. ಜೇಕೆಂದೇ ಗೌಡನಿಗೆ ತಮ್ಮ ಮನೆಯ ಸರ್ವಾಧಿಪತ್ಯವನ್ನೂ ವಹಿಸಿದರು. ರಾಯರ ಮರ್ಮಭೇದಕವಾದ ಮಾತುಗಳಿಂದ ಗೌಡನು ಒಮ್ಮೆ ಗಾಬರಿಗೊಳ್ಳುವನು. ಅವರ ಸರಳಸ್ವಭಾವ ನೋಡಿ ಮತ್ತೊಮ್ಮೆ ಧೈರ್ಯತಾಳುವನು. ರಾಯರೊಬ್ಬರ ವಿನಾ ಗೌಡನ ಮನಸ್ಸು ಯಾರಿಗೂ ತಿಳಿಯಲಿಲ್ಲ.

ಮಹೀಪತಿರಾಯರು ಗುರು ಜಯಂತ್ಯುತ್ಸವವನ್ನು ಬಹು ವಿಜೃಂಭಣೆಯಿಂದ ಪ್ರತಿವರ್ಷ ನಡೆಸುತ್ತಿದ್ದರು. ಸ್ವಯಂ ಗಾಯಕರಾಗಿದ್ದುದರಿಂದ ಗಾನವೇತ್ತರಿಗೆ ರಾಯರು ಉದಾರಾಶ್ರಯ ಕೊಡುತ್ತಿದ್ದರು. ಅಗ್ರಸ್ಥಾನವೇ ವೈದಿಕ ಪಂಡಿತರಿಗೆ ದೊರೆಯುತ್ತಿದ್ದುದರಿಂದ ಸುತ್ತುಮುತ್ತಣ ವಿದ್ವಾಂಸರು ಉತ್ಸವ ಕಾಲದಲ್ಲಿ ಸನ್ಮಾನಿತರಾಗುತ್ತಿದ್ದರು. ರಾಯರು ಎಲ್ಲ ವ್ಯವಸ್ಥೆಯನ್ನೂ ಗೌಡನಿಗೆ ವಹಿಸಿದರು. ಪ್ರತಿವರ್ಷದ ಯಾದಿಯಂತೆ ಹಣದ ಗಂಟೇ ಗೌಡನ ಕೈಗೆ ಸಿಕ್ಕಿತು. ಉತ್ಸವಾಂಗವಾಗಿ ಮನೆಯುಸಾರಣೆ ಕಾರಣೆ ಮಾಡಿಸುವಾಗ ಗೌಡನು ಮನೆಯನ್ನೆಲ್ಲಾ ಬಹುತರವಾಗಿ ಶೋಧಿಸಿದನು. ಅಭ್ಯಾಸಕ್ಕೆ ಕೂಡುತ್ತಿದ್ದ ಸ್ಥಳದಲ್ಲಿ ಯಾರಿಗೂ ಪ್ರವೇಶವಿರದಿದ್ದ ಕಾರಣ ಅಲ್ಲೀ ಗುಪ್ತಧನವಿರಬೇಕೆಂದೂ ಆ ಮನೆಯಲ್ಲಿ ಇಲಿ ಹೆಗ್ಗಣಗಳ

ಬಿಲಗಳಿರುವಕಾರಣ ಚೆನ್ನಾಗಿ ಅಗೆಸಿ ಸರಿಮಾಡಿಸಬೇಕೆಂದೂ ರಾಯರನ್ನು ಕೇಳಿ, ಎಂಟಾನೆಂಟು ದಿನ ಆ ಚಿಕ್ಕ ಮನೆಯೊಂದರ ಕೆಲಸಮಾಡಿಸಿ ನಿರಾಶನಾದನು. ಗೌಡನಿಗೆ ಹಣ ಮಾತ್ರ ಎಲ್ಲೂ ದೊರೆಯಲಿಲ್ಲ. ರಾಯರು ಕೆಲಸಕ್ಕೆ ಮೆಚ್ಚಿಕೆಯನ್ನು ತೋರಿಸುವ ನೆವದಲ್ಲಿ—''ಗೌಡರೆ, ನಿಮ್ಮ ಕೈವಾಡದಿಂದ ನಮ್ಮ ಮನೆಯನ್ನು ಶೋಧಮಾಡುವ ಇಲಿ ಹೆಗ್ಗಣಗಳ ಸಂತಾನವೇ ಅಡಗಿಹೋಯಿತು, ನಿಶ್ಚಿಂತೆಯಾಯಿತು'' ಎಂದರು. ಉತ್ಸವ ಮುಗಿದು ಬಂದ ಜನರೆಲ್ಲಾ ಪ್ರಯಾಣ ಮಾಡಿದರು. ಅಯ್ಯನವರನ್ನೂ ಪಂಡಿತರನ್ನೂ ಕಳುಹಿಸಲು ಹೋಗಿದ್ದ ರಾಯರು ಒಬ್ಬರೇ ಕತ್ತಲೆಯಲ್ಲಿ ಮನೆಗೆ ಬರುವಾಗಲೂ ಅಚ್ಛಿನ್ನ ಭಕ್ತನಂತೆ ಗೌಡನು ಹಿಂಬಾಲಿಸಿದ್ದನು. ಅವನಿಗೆ ಇದಕ್ಕಿಂತ ರಾಯರನ್ನು ಹೆದರಿಸಿ ಕೇಳಲು ಸಮಯ ಮತ್ತೊಂದು ದೊರೆಯುವುದಿಲ್ಲವೆನಿಸಿತು. ಹಿಂದೆ ಬರುತ್ತಿದ್ದವನು ಒಂದು ಹೆಜ್ಜೆ ಮುಂದೆ ಬಂದು ರಾಯರ ಕೈಯನ್ನು ಗಟ್ಟಿಯಾಗಿ ಹಿಡಿದನು. 'ಹಣವೆಲ್ಲಿದೆ ಹೇಳಿ, ಹೇಳದಿದ್ದರೆ ಬಿಡುವುದಿಲ್ಲ' ಎಂದನು. ರಾಯರು—'ಗೌಡರೆ, ನೀವು ನಮ್ಮ ಭಜನ ಗೋಷ್ಠಿಗೆ ಸೇರಿದ ದಿನವೇ ನಿಮ್ಮ ಮನಸ್ಸು ನನಗೆ ಗೊತ್ತಾಯಿತು. ಅದಕ್ಕೇ ಸರ್ವ ಸ್ವಾತಂತ್ರ್ಯವನ್ನೂ ನಿಮಗೆ ವಹಿಸಿದೆನು. ನೀವು ಛಲಮಾಡಿ ಫಲವಿಲ್ಲ. - 'ನಿಮ್ಮ ಕೈವಾಡದಿಂದ ನಮ್ಮ ಮನೆಯನ್ನು ಶೋಧಮಾಡುವ ಇಲಿ ಹೆಗ್ಗಣಗಳ ಸಂತಾನವೇ ಅಡಗಿಹೋಯಿತು' ಎಂಬ ನನ್ನ ಮಾತು ನಿಮಗೆ ಶಾಪವಾಯಿತು. ಮುಂದೆ ಮಾತನಾಡಿದರೆ ನಿಮ್ಮ ಪರಿಣಾಮ ನೆಟ್ಟಗಾಗಲಿಕ್ಕಿಲ್ಲ. ನಡೆಯಿರಿ' ಎಂದು ಜ ಬ ರಿ ಸಿ ಬಿ ಟ್ಟ ರು. ಆ ದುರ್ದೈವಿಯು ಮರುಮಾತಾಡುವ ಧೈರ್ಯವಿಲ್ಲದೆ, ಮತ್ತೆ ಎದುರಿಗೆ ಬರಲು ಮುಖವಿಲ್ಲದೆ, ಇದ್ದ ಗೌರವವನ್ನೂ ಕಳೆದುಕೊಂಡು ಕಾಲಾಂತರದಲ್ಲಿ ಮಹಾ ವ್ಯಾಧಿಪೀಡಿತನಾಗಿ ಮೃತನಾದನು. ಅವನ ಸಂತತಿಯು ಈ ಹೊತ್ತಿನವರೆಗೂ ದತ್ತಕವಾಗಿ ಬೆಳೆದು ಬರುತ್ತಿರುವುದರ ವಿನಾ ದೊಡ್ಡವರ ವಿಕೋಪದಿಂದ ಔರಸವಾಗಿ ಬೆಳೆಯುತ್ತಿಲ್ಲ.

ರಾಯರು ರಚಿಸಿದ ಸಾವಿರಾರು ದೇವರನಾಮಗಳು ಈಗಲೂ ಕಾಖಂಡಿಕೆಯಲ್ಲಿ ವಂಶೀಕರ ಬಳಿಯಲ್ಲಿವೆ. ಅವುಗಳ ಶೋಧಮಾಡಿ ಮುದ್ರಿಸಿ ಪ್ರಚಾರಗೊಳಿಸುವ ಕಾಲವಿನ್ನೂ ಬಂದಿಲ್ಲ. ವಂಶೀಕರು ಉತ್ಸವದ ಸಹಾ

ಯಕ್ಕೆ ವಿಜಾಪುರ ಜಮಖಂಡೀ ಪ್ರಾಂತಗಳಲ್ಲಿ ಸಂಚಾರ ಬಂದಾಗ ರಾಯರ ಪದಗಳನ್ನು ಹಾಡುತ್ತಾರೆ. ಆಗ ಜನರಿಗೆ ಮಹೀಪತಿರಾಯರ ಪುಣ್ಯಸ್ಮರಣೆಯಾಗಿ ಅಷ್ಟಕ್ಕೇ ತಟಸ್ಥವಾಗುತ್ತದೆ. ವಂಶೀಕರ ಬಾಯಿಂದ ಬಂದ ಎರಡು ಹಾಡುಗಳನ್ನು ಕೇಳಿದಾಗ ಸುಮನೋಹರವಾಗಿ ಕಂಡುಬಂದಕಾರಣ ಅವನ್ನು ಮಾದರಿಗಾಗಿ ಕೆಳಗೆ ಕೊಡಲಾಗಿದೆ.

ಸೌರಾಷ್ಟ್ರ — ಜಂಪೆತಾಳ

ಅರ್ಥಿಯಾಗಿದೆ ಬನ್ನಿ ಅರಿತುನೋಡುವ ಗುರುಮೂರ್ತಿಯಿಂದ
ನಿರುತವಾಗಿ ಪೂರ್ಣಬೆರೆತುಕೂಡುವ ಬನ್ನಿ ಗುರ್ತಿನಿಂದ ॥ ಪ ॥

ಸೂರ್ಯನಿಲ್ಲದೆ ಸುಪ್ರಕಾಶ ತುಂಬಿದೆ ಹೇಳಲೇನ
ತುರಿಯಾವಸ್ಥೆಯಲ್ಲಿ ಬೆರೆದುಕೂಡಿದ ಜ್ಞಾನಿಬಲ್ಲ ಖೂನ ॥
ಬರಿಯ ಮಾತನಾಡಿ ಹೊರೆಯ ಹೇಳುವದಲ್ಲ ಅರಿವಸ್ಥಾನ
ಪರಿಯಾಯದಿಂದಲಿ ಪರಿಣಮಿಸಿನೋಡು ಪರಮಪ್ರಾಣ ॥ ೧ ॥

ಚಂದ್ರನಿಲ್ಲದೆ ಬೆಳದಿಂಗಳು ಬಿದ್ದಿದೆ ಬಲುಬಾಳ।
ಇಂದ್ರಾದಿಗಳೆಲ್ಲ ಹರುಷದಿ ನೋಡುವರು ಸರ್ವಕಾಲ
ಸುಂದರವಾದ ಸುವಸ್ತು ಒಳಗೊಂದಚಲ
ಸಾಂದ್ರವಾಗಿ ಸುಖತುಂಬಿ ಬೆಳಗುತಿದೆ ತಳಥಳ ॥ ೨ ॥

ಮನದಕೊನೆಯಲಿದ್ದ ಘನಸುಖನೋಡಿರಿ ನೆನೆದು ಬೇಗ
ನಾನೀನೆಂಬುವ ಮಾತು ಏನುತಾಳುವದಲ್ಲ ರಾಜಯೋಗ ॥
ಅನುಭವಿಗಳಿಗಿದು ಅನುಕೂಲವಾಗುವದು ಬ್ರಹ್ಮಭೋಗ
ಜ್ಞಾನಿಮಹೀಪತಿ ತಾನೆತಾನಾದ ಸದ್ಗುರುವಿನ ॥ ೩ ॥

ಭೀಮಪಲಾಸ್

ರೋಧಿಸಿನೋಡಿರೋ ಸದಾ। ಬೋಧದ ನಿಜಬೋಧ ॥ ಪ ॥
ಶೋಧಿಸಿನೋಡಿ ಸದ್ಗುರು ಕೃಪೆಯಿಂದ। ಸಾಧನಕಿದು ಬಲು ಆನಂದ ॥ಅ॥
ಭೇದಿಸಿನೋಡುವದಿದೆ ತನ್ನಿಂದ। ಆದಿ ಅನಾದಿ ಸಹಜಾನಂದ ॥ ೧ ॥

ತಂತುವಿಡಿದು ಆದರಂತೆ ತಾನೋಡಿ| ಎಂತೆಂತಿಹ ನಿಜ ಅಂತೇಕೂಡಿ|
ಅಂತರಾತ್ಮದ ಅನುಭವ ಬೆರೆದಾಡಿ| ಸಂತತ ಸದಮಲ ಸುಖ ಸೂರ್‍ಯಾಡಿ ||೨||

ವಿಹಿತಕೆ ವಿಹಿತಾಗುವ ಸುಪಥ| ದ್ವೈತಾದ್ವೈತಕಿದೇರಹಿತ
ಮಹಮಹಿಮರ ಆನಂದಭರಿತ| ಮಹೀಪತಿಮನೋನ್ಮನದ ಸುವಸ್ತು ||೩||

ಈ ಎರಡೂ ಪದಗಳಲ್ಲಿರುವಂತೆ ರಾಯರ ನೂರಾರು ಪದಗಳಲ್ಲಿರುವ ಗುಹ್ಯಾರ್ಥ ವನ್ನು ಬಿಡಿಸಿ ಮುದ್ರಿಸಿದರೆ ಅಭ್ಯಾಸಿಗಳಿಗೆ ಯೋಗಶಾಸ್ತ್ರದ ಒಂದು ಕೈಪಿಡಿ ಯಾಗುವದರಲ್ಲಿ ಸಂಶಯವಿಲ್ಲ.

ಈಗೀಗ ನಮ್ಮಲ್ಲಿ ಉದ್ದಾಮ ಕನ್ನಡಸಾಹಿತಿಗಳು ತಲೆಯೆತ್ತುತ್ತಿದ್ದಾರೆ. ತಮ್ಮನ್ನು ಅನ್ಯರೆಂದು ದ್ವೇಷಿಸಿ ದೂಷಿಸುವವರ ಜೋಳಿಗೆಗೆ ಕೈ ಹಾಕುತ್ತಿದ್ದಾರೆ. ರಸವಿಲ್ಲದ ಮಾತಿನಲ್ಲಿ ರಸಹುಟ್ಟಿಸಿ ತೋರಿಸಿಕೊಡುತ್ತಿದ್ದಾರೆ. ತಮ್ಮದು ತಮಗೇ ತಿಳಿಯದೆ ಅನ್ಯರಿಂದ ತಿಳಿದರೂ ಆದರಮೇಲೆ ತಮ್ಮ ವಾಚಾಳತ್ವದಿಂದ ವಿಜೃಂಭಿಸುತ್ತಿರುವರ ನಡುವೆ ನಗೆಗೀಡಾಗುತ್ತಿದ್ದಾರೆ. ಈಗಿನ ನೂತನ ಸಾಹಿತಿಗಳಿಗೆ ತಮ್ಮನ್ನೂ ತಮ್ಮದನ್ನೂ ಬಿಟ್ಟರೆ ಅನ್ಯಗತಿಯಿಲ್ಲವೆಂದವರು ಬಡಬಡಿಸುತ್ತಿದ್ದಾರೆ. ಪರಿಸ್ಥಿತಿ ಹೀಗಿರುವದನ್ನರಿತು ಅನೇಕ ಸಾಹಿತಿಗಳ ಮಧ್ಯದಲ್ಲಿ ಒಬ್ಬಿಬ್ಬರಾದರೂ ಯಾವದೇ ಬಗೆಯ ದ್ವೇಷದೂಷಣೆಗಳಿಗೆ ಅವಕಾಶವಿರದ ಹರಿದಾಸ ಸಾಹಿತ್ಯದಕಡೆಗೆ ತಮ್ಮ ದೃಷ್ಟಿಯನ್ನು ಬೀರಲೆಂದು ಜ್ಞಾಪಿಸುವ ಕಾಲವೀಗ ಬಂದಿದೆ. ಯಾರು ಬೇಕಾದರೂ ಸುಲಭವಾಗಿ ಬರೆದು ಸೇರಿಸಲು ಸಾಧ್ಯವಿರದ—ವೃತ್ತವಾಗಿ ಪದ್ಯವಾಗಿ ಪದವಾಗಿ ಛಂದೋಬದ್ಧವಾಗಿರುವ ಸಹಜಸುಂದರ ಸಾಹಿತ್ಯದಲ್ಲಿ ಅಂಥವರು ಮನವಿಟ್ಟು ಶೋಧನೆಗೆ ಹೊರಟರೆ ಮಹದುಪಕಾರವಾಗುವದರಲ್ಲಿ ಸಂಶಯವಿಲ್ಲ. ದಾಸಸಾಹಿತ್ಯವೆಂದರೆ,—ಅದೇ ಶಂಖಚಕ್ರ, ಅದೇ ತ್ರಿಶೂಲ ಡಮರುಗಗಳ ವರ್ಣನೆಯ ಸ್ತೋತ್ರಪದಗಳ ಸಾಹಿತ್ಯಮಾತ್ರವಲ್ಲ. ಪುರಾಣಕಥೆಗಳಿಂದ ಕೀರ್ತನಕಾರರ ಹೊಟ್ಟೆಹೊರಿಸುವ ಸಾಹಿತ್ಯವಲ್ಲ. ಮಾನವರ ಹೆಂಗರುಳಿಗೆ ತಾಕಿ ಅವರನ್ನು ಕರಗಿಸಿ ಮೃದುಗೊಳಿಸುವ ಸಾಹಿತ್ಯ. ಬೇಕಾದ ನೀತಿಪದಗಳು, ಬೇಕಾದ ಲೋಕಾನುಭವಗಳು, ಯೋಗ ವಿಚಾರಗಳು, ಎಲ್ಲವನ್ನೂ ಸುಲಭವಾಗಿ ಬರೆದಿಟ್ಟಿರುವ ಸಾಹಿತ್ಯ. ಜನರನ್ನು ಏರ

ಪೇರು ಮಾಡಿರದೆ, ಪವಾಡಗಳ ಮಾತಿರದೆ, ಕಾಲದ ಅಭಿರುಚಿ ಕಾಲದ ಭಾವನೆಗಳಿಗೆ ತಕ್ಕ ಮಾತಿರುವ ಪದಸುಳಾದಿಗಳನ್ನೇ ಆರಿಸಿದರೆ, ದಾಸ ಸಾಹಿತ್ಯದಲ್ಲಿ ಈಗಲೂ ಕಳೆದುಳಿದಿರುವದು ಬಹಳವೆಂದೇ ಕಂಡುಬರುತ್ತದೆ. ಅಂತಹ ಒಬ್ಬೊಬ್ಬ ದಾಸರ ಗ್ರಂಥಗಳ ಸಂಗ್ರಹವನ್ನು ಬೇರೆ ಬೇರೆಯಾಗಿ ಮುದ್ರಿಸಿದರೇ ಇಪ್ಪತ್ತಕ್ಕಿಂತ ಹೆಚ್ಚು ಸಂಖ್ಯೆಯ ಯೋಗ್ಯ ಪಠ್ಯಪುಸ್ತಕಗ ಳಾಗುವದರಲ್ಲಿ ಅನುಮಾನವಿಲ್ಲ. ಕನ್ನಡ ಸರಸ್ವತಿಯ ಉಡಿದುಂಬಿ ಸೇವೆ ಯಾಗುವದರಲ್ಲಿ ಸಂದೇಹವಿಲ್ಲ.

ಮಹೀಪತಿರಾಯರಿಗೆ ಬ್ರಾಹ್ಮಣರು ಮಾತ್ರವಲ್ಲದೆ ಮುಸಲ್ಮಾನರೂ ಲಿಂಗಾಯಿತರೂ ಅನೇಕರು ಶಿಷ್ಯರಂತಿದ್ದರು. ರಾಯರ ಅಕ್ಕನೂ ಅತ್ತಿಗೆ ತುಕ್ಕವ್ವನವರೂ ಎಡೆಬಿಡದೆ ಸೇವಿಸುತ್ತಿದ್ದ ಭಕ್ತರುಗಳು. ಇವರಿಬ್ಬರ ಜೊತೆಗೆ ಲಿಂಗಾಯಿತ ಮುರುಡಪ್ಪನೆಂಬಾತನೊಬ್ಬ. ಹಿರಿಯರಾದುದರಿಂದ ಅಕ್ಕ ಅತ್ತಿಗೆಯರಿಗೆ ರಾಯರಮೇಲೆ ಅಧಿಕಾರ ಬಹಳ. ಸತ್ಪುರುಷರು ಪವಾಡಗಳನ್ನು ಮಾಡಿ ತೋರಿಸುವರು, ನಮ್ಮ ಮಹೀಪತಿ ಒಂದೂ ಮಾಡ ಲೊಲ್ಲ; ಮಾಡಿದರೆ ನೋಡಬೇಕು; ಎಂದು ಆ ಹಿರಿಯರ ಬಯಕೆ. ರಾಯರ ದೃಷ್ಟಿಯಲ್ಲಿ ಅತಿಮಾನುಷ ಮಹಿಮೆಗಳು ಹಾವಾಡಿಗರ ಆಟ. ಆದ್ದರಿಂದ ಅದು ಅವರಿಗೆ ಇಷ್ಟವಾಗಿರಲಿಲ್ಲ. ಮಾಡಬೇಕೆಂದರೆ ಕಷ್ಟವೂ ಆಗಿರಲಿಲ್ಲ. ರಾಯರು ಅಂಥಾ ಕಾರ್ಯಗಳನ್ನು ಮತಸ್ಥಾಪಕರು ಮಾಡಿ ಜನಗಳನ್ನು ಒಲಿಸಿ ಕೊಳ್ಳಬೇಕೆನ್ನುತ್ತಿದ್ದರು. ಈ ಮಾತು ಆ ಹೆಂಗಳೆಯರಿಗೆ ಹೇಗೆ ತೃಪ್ತಿ ಯನ್ನುಂಟು ಮಾಡಬೇಕು ?

ಹೀಗಿರಲು ರಾಯರ ಶಿಷ್ಯ ಮುರುಡಪ್ಪನ ಹೆಂಡತಿಗೆ ಸನ್ನಿಪಾತ ಜ್ವರ ಪ್ರಾಪ್ತವಾಯಿತು. ಔಷಧಗಳಿಂದ ಗುಣವಾಗದೆ ಅದರಿಂದ ಆಪತ್ಕಾಲ ಸನ್ನಿಹಿತವಾಯಿತು. ಹೆಂಡತಿಯ ಸೇವೆಯಲ್ಲಿ ಮುರುಡಪ್ಪನಿಗೆ ರಾಯರ ಮನೆಗೆ ಬರಲು ಅವಕಾಶ ತಪ್ಪಿತು. ರಾಯರ ಅಕ್ಕನೂ ತುಕ್ಕವ್ವನವರೂ ಆಗಾಗ ರೋಗಿಯನ್ನು ನೋಡಿಬರುತ್ತಿದ್ದರು. ಪಾಪ ಬಡವ, ಮಕ್ಕಳು ಮಂದಿಗ! ಚಟ್ಟ ಭಕ್ತರಿಗೂ ಪರದಾಟ ಬಂತೆಂದು ಮರುಗುತ್ತಿದ್ದರು. ರೋಗಿಗೆ ಅಸ್ವಾಸ್ಥ್ಯವಸ್ಥೆಯಾಗಿದೆಯೆಂದು ಹೆಂಗಳೆಯರೀರ್ವರೂ ಛಡಪಡಿಸಿ ದರು, ರಾಯರು ಆಗಲೇ ಅಭ್ಯಾಸದಿಂದ ಬಹಿರ್ಮುಖರಾಗಿ ಮನೆಯ ಒಳಗೆ

ಬಂದರು. ಏನಕ್ಕಾ ಬಲು ಭಡಪಡಿಸುವಿರಿ, ಎಂದರು. ತುಕ್ಕವ್ವನವರು. ಇನ್ನೇನು ಇಷ್ಟುಹೊತ್ತಿಗೆ ಮುರುಡಪ್ಪನ ಹೆಂಡತಿ ಸತ್ತಿದ್ದಾಳು ಎಂದರು, ರಾಯರು—ಸತ್ತರೆ ಸಾಯಲಿ ಬಿಡು, ಸತ್ತರೆ ಬದುಕುತ್ತಾಳೆ; ಬದುಕಿದರೆ ಸಾಯುತ್ತಾಳೆ; ಎಂದರು. ಅಕ್ಕನಿಗೀ ಮಾತು ಅರ್ಥವಾಗಲಿಲ್ಲ. ಮಹೀ! ಸಾಕು ಬಿಡು ನಿನ್ನವಗಟ ; ಸುಟ್ಟಿತು ನಿನ್ನಯೋಗ ; ಮನೇಮಗನಿಗಿಂತ ಹೆಚ್ಚಾಗಿದ್ದ; ಅವರಿಗ್ಯಾರಿದ್ದಾರೆ ದಿಕ್ಕು? ಇದಕ್ಕಿಂತ ವ್ಯಾಳ್ಯ ಸಿಗಬೇಕು ಹ್ಯಾಂಗೆ? ನೋಡು ನಡಿ; ಆಕೀನ ಬದುಕಿಸು ನಡಿ; ಎಂದರು.

ರಾಯರು ಅಕ್ಕನ ಭಿಡೆಯುಕ್ಕೊಳಗಾದರು. ಅಕ್ಕಾ, ತುಕ್ಕವ್ವಾ, ನಡೀರಿ ಹೋಗೋಣ, ಎಂದರು. ಮೂವರೂ ಮುರುಡಪ್ಪನ ಮನೆಗೆ ಬಂದರು. ಆ ಬಡವನ ನೆಂಟರಿಷ್ಟರು - ಆಯಿತೆಂದು ಕೆಲವರು, ಇನ್ನೇನು ಆಯಿತೆಂದು ಕೆಲವರು ಗೋಳಾಡುತ್ತಿದ್ದರು. ಮುರುಡಪ್ಪನು ಕಕ್ಕಾಬಿಕ್ಕಾಗಿ ಗುರುಗಳನ್ನು ಗೌರವಿಸತೊಡಗಿದನು. ರಾಯರು ಒಂದು ದಿನದ ಅಭ್ಯಾಸದ ಪುಣ್ಯ ಸಾಕೆಂದರು. ಏನಾದರೂ ಮಾಡಿ ಬದುಕಿಸಿರಪ್ಪಾ ಎಂದು ಜನರು ಮೊರೆಯಿಟ್ಟರು.

ರಾಯರು—ಏನೋ ಮುರುಡಪ್ಪ! ಮನೆಯುವರ ತ್ರಾಸ! ಮಂದೀ ತ್ರಾಸ!
ನಿನ್ನಹೆಂಡತಿ ಬದುಕಬೇಕಂತೆ! ಏನು ಮಾಡಬೇಕು ಹೇಳು?

ಮುರುಡಪ್ಪ--ಗುರು ಕೊಟ್ಟದ್ದು-ಸಣ್ಣ ಸಣ್ಣ ಮಕ್ಕಳು.
ರಾಯರು—ಬದುಕತಾಳೆ ಬಿಡು, ನನ್ನ ಆಯುಷ್ಯಾನೇ ಕೊಡ್ತೀನಿ ಬಿಡು.
ಮುರುಡಪ್ಪ—ತಮ್ಮದು ಬ್ಯಾಡ, ನನ್ನ ಆಯುಷ್ಯ ಕೊಡಿಸಿ.
ರಾಯರು—ಹಾಂಗಾದ್ರೆ, ನೀನೇ ಸಾಯ್ತೀ ಬಿಡು.
ತುಕ್ಕವ್ವನವರು—ಯಾರದ್ದೂ ಬ್ಯಾಡ. ನನ್ನ ಆಯುಷ್ಯದಿಂದ ಕೊಡಿಸಿರಿ.

ರಾಯರು - ಯಾರ ಆಯುಷ್ಯವೂ ಬೇಡ. ನಮ್ಮ ಆಯುಷ್ಯವೇ ಆಕೆಗೆ ಬರಲಿ, ಎಂದು ದತ್ತರಾಜನನ್ನು ಸ್ಮರಿಸಿದರು. ಮೃತಪ್ರಾಯಳ ಬಾಯಿತೆರೆದು ಕ್ಷೀರಪಾನಮಾಡಿಸಿದರು. ರೋಗಿಯು ರಾಯರು ಕುಡಿಸಿದಷ್ಟು ಹಾಲು ಕುಡಿದಳು. ಕಣ್ಣುತೆರೆದು ಕೈಮುಗಿದಳು. ರಾಯರು ಗುಟುಕಿಗೊಂದರಂತೆ ವರ್ಷವೆಂದರು. ಜನರು ಸತ್ತವಳನ್ನೇ ರಾಯರು ಬದುಕಿಸಿದರೆಂದರು. ಯಾರಿ

ಗಾಗುವ ಸಂತೋಷಕ್ಕಿಂತ ರಾಯರ ಅಕ್ಕ ಅತ್ತಿಗೆಯರಿಗೆ ಸಂತೋಷವಾಯಿತು. ಇದೊಂದು ರಾಯರ ಅತಿಮಾನುಷ ಮಹಿಮೆಯೆಂದು ಪ್ರಖ್ಯಾತವಾಯಿತು.

ರಾಯರ ಕಡೆಗಾಲದಲ್ಲಿ ಶಹಾನುಂಗನ ದರ್ಶನವಾಯಿತು. ಅವನು—ಹ್ಯಾಂಗಿದೆ ಸುಖ, ಎಂದ. ರಾಯರು ಪರಮಾನಂದ, ಎಂದರು. ನುಂಗನು—ನೌಬತ್ತು ಕೇಳಿಸಿತೋ ಎಂದು ಕೇಳಿದ. ಕೇಳಿಸಿತೆಂದರು ರಾಯರು. ನುಂಗ ನಕ್ಕ. ರಾಯರು ನಕ್ಕರು. ಇಬ್ಬರೂ ಮತ್ತೆಮತ್ತೆ ನಕ್ಕರು.

ಶಹಾನುಂಗನ ಸಮಾಧಿ ವಿಜಾಪುರದ ಕೋಟೆಯ ಹೊರಭಾಗದಲ್ಲಿದೆ. ಅಂತಿಂಥವರಿಗೆಲ್ಲಾ ಕಂತೆಯನ್ನು ಹೊದಿಸುವ ಮುಸಲ್ಮಾನರು ಅವನ ಸಮಾಧಿಯನ್ನು ಕಣ್ಣೆತ್ತಿ ನೋಡಿಲ್ಲ. ಮಾರ್ಗಶೀರ್ಷ ಪೌರ್ಣಿಮಾ ಕಾಖಂಡಿಕೆಯಲ್ಲಿ ರಾಯರ ಆರಾಧನೆ ನಡೆಯುತ್ತದೆ. ನೂರಾರು ಜನರು ಸೇರುತ್ತಾರೆ. ಎಲ್ಲೇ ಇರಲಿ, ವಂಶೀಕರಿಗೆ ಸೇರಲು ಅದು ಕಾಲ. ಕಾಲ ಅನಾದಿ. ಅ—ಈ—ಶಬ್ದಗಳಿಂದ ಕರೆಸಿಕೊಳ್ಳುವದಲ್ಲ ನಡೆಸಿದಂತೆ ನಡೆಯುವದು. ಆದ್ದರಿಂದ ಕಾಲಕ್ಕೆ ರಾಜನು ಕಾರಣವೋ ರಾಜನಿಗೇ ಕಾಲಕಾರಣವೋ ಎಂಬುದು ಬಲು ದಿನದ ಪ್ರಶ್ನೆ. ಉತ್ತರ

"ರಾಜಾಕಾಲಸ್ಯಕಾರಣಂ." ತತ್ಸತ್.



# ಪ್ರಸನ್ನವೆಂಕಟರಾಯರು

ದಾಸ ಚತುಷ್ಟಯರ ನಂತರ ಸಮಾಜದಲ್ಲಿ ಸತ್ಪುರುಷರೆಂಬ ಖ್ಯಾತಿಪಡೆದವರೂ, ಕನ್ನಡ ವಾಙ್ಮಯ ಸೇವೆಮಾಡಿದವರೂ ಯಾರಾದರಿದ್ದರೆ, ಆ ಪಙ್ಕ್ತಿಯಲ್ಲಿ ಅಗ್ರಪೂಜೆಗೆ ಅರ್ಹರು ಪ್ರಸನ್ನ ವೆಂಕಟರಾಯರು. ಪ್ರಸನ್ನ ರಾಯರು ವಿಜಯದಾಸರ ಸಮಕಾಲಿಕರು. ದಾಸರಿಗಿಂತ ವಯಸ್ಸಿನಲ್ಲಿ ಚಿಕ್ಕವರು. ಜನ್ಮಸ್ಥಳ ಬಾಗಿಲಕೋಟೆ. ಬಾಗಿಲಕೋಟೆಯು ಉತ್ತರ ಕರ್ನಾಟಕದ ವಿಜಾಪುರ ಜಿಲ್ಲೆಗೆ ಸೇರಿದ ಒಂದು ತಾಲ್ಲೂಕು ಸ್ಥಳ. ಕೃಷ್ಣಾನದಿಗೆ ಉಪನದಿಯಾದ ಘಟಪ್ರಭಾ ತೀರ. ಘಟಪ್ರಭೆಯು ಪ್ರಖ್ಯಾತ ನದಿಯಲ್ಲ. ತೀರವಾಸವಾದುದರಿಂದ ಅನೇಕ ಬ್ರಾಹ್ಮಣ ಕುಟುಂಬಗಳು ಮೊದಲಿನಿಂದ ನೆಲೆಸಿವೆ. ಒಂದು ಕಾಲದಲ್ಲಿದ್ದಂತೆ ವೇದವಿದ್ಯಾಪಾರಂಗತರನ್ನು ಈ ಕಾಲದಲ್ಲಿ ನೋಡಲು ಸಾಧ್ಯವಿಲ್ಲ. ಊರಿನ ಖ್ಯಾತಿ ರೈಲು ತೀರವಾದ್ದರಿಂದ ವ್ಯಾಪಾರದಿಂದ ಬೆಳೆಯಬೇಕಾಗಿದೆ. ಕೋಟೆಯ ಒಳಭಾಗದಲ್ಲಿ ನದಿಯ ದಡಕ್ಕೆ ಹತ್ತಿದಂತೆ ಪ್ರಸನ್ನರಾಯರ ಆ ಕಾಲದ ಮನೆಯಿದೆ. ರಾಯರ ಜ್ಞಾಪಕವನ್ನುಂಟುಮಾಡುವ ದೇವತಾ ಮೂರ್ತಿಗಳಿವೆ. ತಂಬೂರಿ ಬವನಾಶಿಗಳು ವಂಶೀಕರ ಪೂಜ್ಯಪದಾರ್ಥಗಳಾಗಿವೆ. ಪ್ರತಿ ಭಾದ್ರಪದ ಶುದ್ಧ ದ್ವಾದಶಿಯದಿನ ಪೂರ್ವಪದ್ಧತಿಯಂತೆ ರಾಯರ ಸ್ಮಾರಕೋತ್ಸವವು ಸೂಕ್ಷ್ಮಪ್ರಮಾಣದಿಂದ ನಡೆಯುತ್ತಿದೆ. ಸ್ಮಾರಕೋತ್ಸವವು ಜನ್ಮತಿಥಿಯದಲ್ಲ, ಪುಣ್ಯತಿಥಿಯದು. ಪ್ರಸನ್ನವೆಂಕಟರ ತಾಳವಾಲೆಯ ಪುಸ್ತಕಗಳು ಮೊನ್ನೆಮೊನ್ನಿನ ತನಕ ಇದ್ದವಂತೆ. ವಂಶೀಕರು ಮನೆಯನ್ನು ಬಿಟ್ಟಿದ್ದಾಗ—ಬಹಳ ಮಳೆ ಬಂದು ಮನೆಯು ಕುಸಿದಾಗ—ಪುಸ್ತಕಗಳು ಹಿಸುಕಿ ಹೋಗಿ ನದಿಯ ಪಾಲಾದವಂತೆ. ಆ ಕಾಲದಿಂದ ಬಂದ ಭೂಮಿ ಕಾಣಿಗಳನ್ನು ವಂಶೀಕರು ಉಳಿಸಿಕೊಂಡು ಬಂದಿರುವಂತೆ ರಾಯರ ಗ್ರಂಥಗಳನ್ನೂ ಉಳಿಸಿಕೊಂಡಿದ್ದರೆ ಕೀರ್ತಿಯಿರುತ್ತಿತ್ತು.

ಪ್ರಸನ್ನ ವೆಂಕಟರ ದೇವರ ನಾಮಗಳನ್ನು ವಿಶೇಷತಃ ಧಾರವಾಡ ವಿಜಾಪುರ ಜಿಲ್ಲೆಗಳಲ್ಲಿ ಹಳೆಯ ಕಾಲದ ಬ್ರಾಹ್ಮಣಸ್ತ್ರೀಯರು ಸ್ತೋತ್ರ

ಪಾಠದಂತೆ ಪೂಜ್ಯಭಾವನೆಯಿಂದ ಹಾಡುತ್ತಾರೆ. ಈ ಕಾಲದ ಹೆಣ್ಣುಮಕ್ಕಳ ವಿದ್ಯಾಭ್ಯಾಸಕ್ರಮವು ಬೇರೆಯಾಗಿರುವ ಕಾರಣ, ರಾಜರಿಗೆ ಆಯುರ್ದಾನ ಮಾಡುವ ಗತ್ತಿನ ಹಾಡುಗಳನ್ನು ಕಲಿಯಬೇಕಾಗಿರುವಕಾರಣ, ಹಳೆಯ ಉಪಯುಕ್ತ ಹಾಡುಗಳ ಪಾಠವಾಗಲು ಅವಕಾಶವಿಲ್ಲ.

ಪುರುಷರಲ್ಲಿ ಪ್ರಸನ್ನವೆಂಕಟರ ನೂರಾರು ಹಾಡುಗಳನ್ನು ಹಾಡುವವರೆಂದರೆ, ಲೇಖಕನು ಕಂಡಂತೆ ಧಾರವಾಡದ ಶ್ರೀ ಮುದುವೀಡುಕೃಷ್ಣರಾಯರು. ಮುದುವೀಡರನ್ನು ನೋಡದವರೂ ಕೇಳದವರೂ ಕರ್ನಾಟಕದಲ್ಲಿ ಯಾರೂ ಇಲ್ಲವೆಂದರೆ ತಪ್ಪಾಗಲಿಕ್ಕಿಲ್ಲ.

ಕೃಷ್ಣರಾಯರ ಜೊತೆಯಲ್ಲಿ ಲೇಖಕನು ಒಂದು ತಿಂಗಳಷ್ಟು ಕಾಲ ವಾಸಮಾಡಿದ್ದಾನೆ. ರಾಯರು ಬೆಳಗಿನ ಝಾವಕ್ಕೆದ್ದು ಪ್ರಸನ್ನರಾಯರ ಉದಯ ರಾಗಗಳಿಂದಾರಂಭಿಸಿ ಬಿಡಿ ಪದಗಳ ತನಕ ಹಾಡುವದನ್ನು ಕೇಳಿದ್ದಾನೆ. ಒಂದೊಂದು ಪದಗಳನ್ನು ಹೇಳುವಾಗಲೂ—ಆಹಾ, ಎಂಥಾ ಮಾತು! ಏನು ಭಕ್ತಿ! ಎನ್ನುತ್ತಲೇ—ಹಿಡಿದ ಚಹಾಪಾತ್ರೆಯನ್ನು ಹಿಡಿದಂತೆ ತಾಸುಗಟ್ಟಲೆ ಹಿಡಿದು ಹುಚ್ಚನಂತೆ ಕುಳಿತಿದ್ದಾನೆ. ಹಾಗಿರದಿದ್ದರೆ ಪ್ರಸನ್ನವೆಂಕಟರ ಹೆಸರು ಶ್ರೀ ಕರ್ನಾಟಕ ಭಕ್ತ ವಿಜಯದಲ್ಲಿ ಬರುತ್ತಿರಲಿಲ್ಲ.

ಪ್ರಸನ್ನ ವೆಂಕಟರ ಪದಗಳೂ ಮತ್ತು ಭಾಗವತವೂ ಈಚೆಗೆ ಧಾರವಾಡದಲ್ಲಿ ಮುದ್ರಿತವಾಗಿವೆ. ಆದರೆ ಶುದ್ಧವಾಗಿ ಆಗಿಲ್ಲ. ರಾಗ ತಾಳಗಳ ಸರಿಯಾದ ನಿರ್ದೇಶವಿಲ್ಲ. ಪ್ರಾಸಸ್ಥಳಗಳಿಗೆ ತಕ್ಕ ರೇಖೆಗಳು ಬಿದ್ದಿಲ್ಲ. ಸಾಲದುದಕ್ಕೆ ಅಕ್ಷರವ್ಯತ್ಯಾಸಗಳೂ ಬಹಳವಾಗಿವೆ. ಇವೆಲ್ಲವನ್ನೂ ಸರಿಯಾಗಿ ಹೊಂದಿಸಿ ಪಾಠಮಾಡುವುದು ಗ್ರಂಥಕರ್ತರ ಸಹಾಯವಿಲ್ಲದೆ ಸಾಧ್ಯವಿಲ್ಲ. ಇಂತಹ ಪುಸ್ತಕಗಳನ್ನು ಸಾಹಿತ್ಯ ಪರಿಷತ್ತಿನವರ ಅಭಿಪ್ರಾಯದ ಬಗ್ಗೆ ಕಳುಹಿಸಿದರೆ ಅವರೇನು ಬರೆದಾರು? ಯಾವ ಷಟ್ಪದಿ ವೃತ್ತಗಳಿಗೂ ಹೊಂದಿಸಿ ಓದಿಕೊಳ್ಳಲು ಬರದಿದ್ದಕಾರಣ—ಪದಗಳನ್ನು ತಾಳದ ಕಾಲಗಳಿಗೆ ತಕ್ಕಂತೆ ಹಾಡಲು ತಿಳಿಯದಿದ್ದಕಾರಣ—ಅವರೂ ಪ್ರಸನ್ನರಾಯರ ತಲೆಗೊಂದು ಚೀಟಿ ಕಟ್ಟಿದ್ದಾರೆ. ಯಾರಪದಗಳನ್ನು ಕೇಳಿ ವಿಜಯರಾಯ

ರಂಥವರು ಕೇಳಿ ಇದು ಕಾಕಂಬಿಯೆಂದು ತಲೆದೂಗುತ್ತಿದ್ದರೋ ಅಂಥ ಪದ ಗಳನ್ನು ಹೇಳುವ ಅಭ್ಯಾಸ ಈ ಕಾಲಕ್ಕೆ ಮರೆತುಹೋಗಿದೆ.

ಪ್ರಸನ್ನ ವೆಂಕಟರ ಜೀವನ ಚರಿತ್ರೆಯು ಇತರ ದಾಸವರ್ಯರಷ್ಟೇ ತಿಳಿಯಲು ಸಾಧ್ಯವಿಲ್ಲ. ನಮ್ಮ ಹೊತ್ತಿಗೆಯಲ್ಲಿ ಹಿರಿಯರು ಬರೆದಿಟ್ಟಿರುವು ದಕ್ಕೂ ಬಾಗಲಕೋಟೆಯ ಪ್ರಾಂತ್ಯದಲ್ಲಿ ಜನರು ಹೇಳುವದಕ್ಕೂ ಹೊಂದಿಕೆ ಯಾಗುವ ಸಂಗತಿಗಳು ಕೆಳಕಂಡಂತಿವೆ ಮಾತ್ರ.

ಪ್ರಸನ್ನರಾಯರ ಪೂರ್ವೀಕರು ಬಾಗಲಕೋಟೆಯವರಾಗಿರಲಿಲ್ಲ. ಕಾಖಂಡಿಕೆಯಿಂದ ಬಾಗಲಕೋಟೆಗೆ ಬಂದು ನೆಲೆಸಿದರು. ಕಾಖಂಡಿಕೆಯು ಬಾಗಲಕೋಟೆಯ ಸಮೀಪದಲ್ಲಿರುವ ಒಂದು ಗ್ರಾಮ. ತಂದೆತಾಯಿಗಳು ಹಿರಿಯಮಗನ ವಶಕ್ಕೆ ಪ್ರಸನ್ನವೆಂಕಟರಾಯರೆಂದು ಮುಂದೆ ಪ್ರಸಿದ್ಧಿಗೆ ಬಂದ ವೆಂಕಪ್ಪನನ್ನು ಒಪ್ಪಿಸಿ ಕಾಲಮಾಡಿದರು. ಅಣ್ಣ ಅತ್ತಿಗೆಯರ ಕೈಕೆಳಗೆ ಬೆಳೆದ ವೆಂಕಪ್ಪನಿಗೆ ವಿದ್ಯಾಭ್ಯಾಸವಾಗಲಿಲ್ಲ. ವೆಂಕಪ್ಪನಮೇಲೆ ಅಣ್ಣನಿಗಿದ್ದ ಅಂತಃಕರಣ ಅತ್ತಿಗೆಗಿರಲು ಕಾರಣವಿರಲಿಲ್ಲ. ಅಣ್ಣನು ಮನೆಯ ಯಜಮಾನ. ಊರಿನಲ್ಲೂ ಸುತ್ತ ಹತ್ತು ಹರಿದಾರಿ ಹಳ್ಳಿಗಳಲ್ಲೂ ಪುರಾಣ ಹೇಳುವ ದೊಡ್ಡ ವಿದ್ವಾಂಸ. ಅಂದಮೇಲೆ ಅತ್ತಿಗೆಯ ಅಧಿಕಾರ ದಡ್ಡ ಮೈದುನನಮೇಲೆ ಸಾಮಾನ್ಯವಾದುದಲ್ಲ. ಹಬ್ಬ ಹರಿದಿನಗಳ ವಿನಾ ಮಿಕ್ಕ ದಿನಗಳಲ್ಲಿ ಅಣ್ಣನ ಪಙ್ಕ್ತಿಯ ಊಟ ತಮ್ಮನಿಗೆ ಸಿಗುತ್ತಿರ ಲಿಲ್ಲ. ಬೆಳಗಾಗುತ್ತಲೇ ವೆಂಕಪ್ಪನು ದನಗಳನ್ನು ಕಾಡಿಗೆ ಹೊಡೆಯ ಬೇಕು. ಕೊಟ್ಟಿಗೆಯನ್ನು ಬಳಿಯಬೇಕು. ನದಿಯಲ್ಲಿ ಮಿಂದು ಮಡಿ ನೀರು ತಂದಿಡಬೇಕು. ಅತ್ತಿಗೆಯು ಬೇಸತ್ತಾಗ ಆಕೆಯ ಮಡಿಗಳನ್ನು ಹರವಬೇಕು. ಅನಂತರ ಒಣ ಭಕ್ಕರಿಯನ್ನು ಕಡಿಯುತ್ತಾ ಹೊಲಕ್ಕೆ ಹೋಗಬೇಕು. ಮನೆಗೆ ಬೇಗ ಬಂದರೆ ಕಷ್ಟ. ಬಾರದಿದ್ದರೆ ಕಷ್ಟ. ವೆಂಕಣ್ಣನ ಪಾಂಡಿತ್ಯವೆಂದರೆ—ವೆಂಕಟೇಶಸ್ತೋತ್ರ ಹೇಳಿಕೊಳ್ಳುವುದು; ತ್ರಿಸಂಧ್ಯೆಗಳಲ್ಲಿ ವಂದನೆಮಾಡುವುದು. ಶೀಲವೆಂದರೆ—ಆದಷ್ಟು ಸಲ ಒದ್ದೆಗಳನ್ನು ಬದಲಾಯಿಸಿ ಮಡಿಯುಡುವುದು.

ಒಂದು ಬೇಸಿಗೆಯಕಾಲ! ವೈಶಾಖಮಾಸ! ಅಗ್ನಿ ನಕ್ಷತ್ರಗಳ ದಿನಗ ಳೆಂದರೆ ಬಾಗಲಕೋಟೆಯಲ್ಲಿ ಪ್ರಳಯಕಾಲ. ವೆಂಕಪ್ಪನು ಪದ್ಧತಿಯಂತೆ

ದನಗಳನ್ನು ಅಡವಿಗೆ ಹೊಡೆದು ಬಂದನು. ಕೊಟ್ಟಿಗೆಯನ್ನು ಬಳಿದು ಕಣಿಕೆಯನ್ನು ಕತ್ತರಿಸಿಟ್ಟನು. ಅತ್ತಿಗೆಯ ವಸ್ತ್ರಗಳನ್ನು ಒಗೆದಿಟ್ಟು ನದಿಯಲ್ಲಿ ಮಿಂದು ಮನೆಗೆ ಬಂದನು. ಮಡಿಗಳನ್ನು ಹರಹಿ ಚಿಲ್ಲರೆಕೆಲಸಗಳನ್ನೂ ಮಾಡಿದನು. ಹಸಿವು ಬಾಯಾರಿಕೆಗಳಿಗೆ ತಾಳಲಾರದೆ—"ಅತ್ತಿಗೆಯವರೆ, ಈ ಹೊತ್ತು ನನಗೆ ಬಲು ತಾಪವಾಗಿದೆ. ಒಣ ಭಕ್ಕರಿ ಹೋಗುವಹಾಗಿಲ್ಲ. ಬಿಸಿಲಲ್ಲಿ ಹೊಲಕ್ಕೆ ಹೋಗಬೇಕು. ಕುಡಿಯಲಿಕ್ಕೆ ಒಂದಿಷ್ಟು ಮಜ್ಜಿಗೆಯನ್ನಾದರೂ ಕೊಟ್ಟರಾದೀತು." ಇಷ್ಟೇ ಆ ಪುಣ್ಯಾತ್ಮಳಿಗೆ ಅಪರಾಧವಾಗಿಬಿಟ್ಟಿತು. ಗಂಡನು ಬೇರೆ ಗ್ರಾಮಾಂತರ ಹೋಗಿದ್ದನು. ಇಬ್ಬರ ಅಧಿಕಾರವೂ ಅವಳದೇ ಆಗಿತ್ತು. "ಏನೋ ಯಂಕ್ಯ! ಈಗ ನಿನಗೆ ಕುಡೀಲಿಕ್ಕೆ ತಣ್ಣನೇ ಮಜ್ಜಿಗೀ ಬೇಕು. ಸಂಜೀಕಡಿ ಬಣ್ಣನೇ ಹೆಂಡ್ತೀ ಬೇಕು. ದುಡಿಯೋರು ತಲೀ ಮೇಲೆ ಅರವೀ ಹಾಕ್ಕೊಂಡು ಅಲೀಲಿ. ನೀನು ಖುಮ್ಮಗೆ ಉಂಡು ಮೋಜು ಮಾಡಬೇಕಂತೀ ಮೋಜು!" ಎಂದುಬಿಟ್ಟಳು.

ಈ ನಿಷ್ಠುರೋಕ್ತಿಯು ವೆಂಕಪ್ಪನಿಗೆ ಸಹಿಸಲಿಲ್ಲ. ದೀನನಾದರೂ ಬಲು ಮಾನವಂತನಾಗಿದ್ದುದರಿಂದವನು ಜರ್ಝರಿತನಾದನು. ಮನೆಯಲ್ಲಿ ಮಿಕ್ಕ ಮಜ್ಜಿಗಿಯನ್ನು ಕಚ್ಚಿನ ಬಾನಿಗೆ ಸುರುವೋದರ ಬದಲು ನನಗಾದರೂ ಕೊಟ್ಟರಾದೀತೆಂದು ಮಾತ್ರ ಕೇಳಿದೆನೆಂದು ಕಣ್ತುಂಬಿ ಮೆಲ್ಲನೆ ನುಡಿದನು. ಅತ್ತಿಗೆಯ ದಯ ಬರದಿರುವುದನ್ನು ನೋಡಿ—ಸರಿ, ಇಲ್ಲಿ ಇನ್ನಿರಬಾರದೆಂದು ನಿಶ್ಚಯ ಮಾಡಿದನು. '-ಅತ್ತಿಗೆಯವರೆ! ತಪ್ಪಾಯಿತು, ನಾನು ಹೋಗಿಬರುತ್ತೇನೆ, ಅಣ್ಣನವರು ಊರಿಗೆ ಬಂದರೆ ತಿರುಪತಿಗೆ ಹೋದನೆಂದು ಹೇಳಿರಿ' ಎಂದು ಮನೆಯಿಂದ ನಡೆದನು.

ಒಂದು ಥಾಲಿ ಮಜ್ಜಿಗೆ, ಒಂದೇ ಥಾಲಿ ಮಜ್ಜಿಗೆಗೆ, ನನ್ನ ಮನೆಯಲ್ಲಿ ನನಗೆ ಪರಾಧೀನವಾಯಿತೆ? ಅತ್ತಿಗೆಯ ಕಠಿಣೋಕ್ತಿಯನ್ನು ಕೇಳಬೇಕಾಯಿತೆ? ನನಗೇನಿದೆ ಈ ಮನೆಯಲ್ಲಿ? ನನಗೇನಿದೆ ಈ ಊರಲ್ಲಿ? ಅತ್ತಿಗೆಯ ಸೀರೆಯೊಗೆದು—ಕತ್ತೆಚಾಕರಿ ಮಾಡಿ ತುತ್ತನ್ನಕ್ಕೂ ಕುತ್ತುಬಂದಮೇಲೆ? ಅತ್ತಿಗೆ ಸುಖದಿಂದಿರಲಿ. ವೆಂಕಟೇಶ, ನೀನು ನನ್ನ ಮನ ದೈವ, ನೀನು ನನ್ನ ಮನೆ ದೈವ, ನೀನು ನನ್ನ ಕುಲದೈವ. ನಿನ್ನ ಗಿರಿಗೆ ಬರುತ್ತೇನೆ.

ಹೀನಬಾಳನ್ನು ಮಾನಗೊಳಿಸಿದೆಯಾ, ಬಾಳುತ್ತೇನೆ. ಇಲ್ಲವೇ ಗಿರಿಯಲ್ಲಿ ಪ್ರಾಣ ಬಿಡುತ್ತೇನೆ. ಎಂಬದಾಗಿ ವೆಂಕಪ್ಪನು ವೆಂಕಟಗಿರಿಗೆ ಬಂದನು. ಸ್ವಾಮಿ ಪುಷ್ಕರಣಿಯಲ್ಲಿ ಮಿಂದನು. ಧರ್ಮದರ್ಶನದ ಕಾಲದಲ್ಲಿ, ಜನರ ನೂಕು ನುಗ್ಗಲಿನಲ್ಲಿ ತಾನೂ ನುಗ್ಗಿದನು. ವೆಂಕಟಪತಿಯ ದರ್ಶನ ಮಾಡಿದನು. ಧಾರೆ ಧಾರೆಯಾಗಿ ಕಣ್ಣೀರು ಸುರಿಸಿದನು. ತನ್ನ ದುಃಖಗಳನ್ನು ಸ್ಮರಿಸಿದನು. ದರ್ಶನದ ಅವಧಿ ಮುಗಿಯಿತು. ಸನ್ನಿಧಿಯ ತೆರೆ ಮರೆಯಾಯಿತು. ಜನರು ಹಿಂದಿರುಗಿದರು. ತಿರುಗದವರನ್ನು ಸೇವಕರು ತಿರುಗಿಸಿದರು. ಅವರೇ ವೆಂಕಪ್ಪನನ್ನು ಕೃಷ್ಣಾಜಿನದ ಸುರುಳಿಯಿಂದ ಹೊಡೆದು ಹೊರಗೆ ನೂಕಿದರು. ಅವನು ಹುಚ್ಚನಂತೆ ಮೂಕನಂತೆ ಪ್ರದಕ್ಷಿಣೆ ಮಾಡುತ್ತಾ, ವಿಮಾನ ಶ್ರೀನಿವಾಸ ಮೂರ್ತಿಯನ್ನು ನೋಡುತ್ತಾ, ಇಲ್ಲಿ ಯಾರ ಅಂಕೆಯೆಂದು ನೆನೆದು ಕುಳಿತನು.

ವೆಂಕಪ್ಪನಿಗೆ ಅನ್ನನೀರು ಕೊಟ್ಟವರ್ಯಾರು? ಎಲ್ಲಿದ್ದ? ಎಲ್ಲಿ ಮಲಗಿದ? ಬಲ್ಲವರ್ಯಾರು? ಯಾರಾದರೂ ಗೌರವಿಸಲು ಅವನಿಗಿದ್ದ ವಿದ್ಯದ ಪರಮಾವಧಿ ಕನ್ನಡ ಬಾಲಬೋಧಗಳ ಓದುಬರಹ; ನಿತ್ಯಕರ್ಮಗಳಿಗನುಕೂಲವಾದ ಅರ್ಥ ತಿಳಿಯದ ವೇದಾಭ್ಯಾಸ. ಅವನ ಮನಸ್ಸನ್ನಾವರಿಸಿದ್ದುದು ವೆಂಕಟೇಶ ಸ್ತೋತ್ರ. ನವರಾತ್ರಿಯಲ್ಲಿ ಅಣ್ಣನ ಪುರಾಣ ಕೇಳಿ ಅವನ ಮನಸ್ಸು ಪರಿಪಕ್ವವಾಗಿತ್ತು. ಭೀಮನೆಂಬ ಕುಂಬಾರನನ್ನು ಸಶರೀರದಿಂದ ಶ್ರೀನಿವಾಸನು ಸ್ವರ್ಗಕ್ಕೆ ಕಳುಹಿಸಿದ ಕಥೆ ಕೇಳಿ ಅವನಿಗೆ ಭರವಸೆಯಿತ್ತು. ಕಾಶೀಯಾತ್ರೆಗೆ ಹೋಗಿದ್ದ ತಪಸ್ವಿಯ ಪತ್ನೀಪುತ್ರರನ್ನು ಅಸ್ತಿ ತೀರ್ಥದಲ್ಲದ್ದಿ ಬದುಕಿಸಿ ತೋಂಡಮಾನ ರಾಜನ ಮಾನ ಕಾಯ್ದ ಕಥೆಯಲ್ಲಿ ವಿಶ್ವಾಸವಿತ್ತು. ವೃದ್ಧ ಬ್ರಾಹ್ಮಣನಿಗೆ ಶ್ರೀನಿವಾಸನು ಯೌವನವನ್ನು ಕರುಣಿಸಿದನೆಂದು ಕೇಳಿ ನಂಬಿಕೆಯಿತ್ತು. ಅವನು ಉನ್ಮತ್ತನಂತೆ ವನವನ ತಿರುಗುವನು. ಕಂಡ ಕಂಡ ತೀರ್ಥಗಳಲ್ಲಿ ಮಿಂಯುವನು. ವನ್ಯಫಲಗಳನ್ನು ಶ್ರೀಹರಿಗೆ ಸಮರ್ಪಿಸಿ ತಾನೂ ಭುಜಿಸುವನು. ಎಲ್ಲಿದ್ದರೂ ಧರ್ಮದರ್ಶನದ ಕಾಲಕ್ಕೆ ದೇವಾಲಯಕ್ಕೆ ಬರುವನು. ಯಾತ್ರಿಕರು ಕನಿಕರದಿಂದ ಮಾತಾಡಿಸಿದರೆ ಪ್ರತಿ ಮಾತಾಡದೆ ಕೈಮುಗಿಯುವನು. ಏನಾದರೂ ಕೊಡಲು ಬಂದರೆ ನಮಿಸಿ ದಳದಳನೆ ಕಣ್ಣೀರು ಸುರಿಸಿ ಸ್ಥಳ

ಬಿಟ್ಟು ಹೋಗುವನು. ಕೊಟ್ಟರೆ ದೇವ! ನೀನು ಕೊಡಬೇಕು. ಚಾಚಿ ದರೆ ನಿನ್ನಮುಂದೆ ಕೈ ಚಾಚಬೇಕು. ಆಡಿದರೆ ನಿನ್ನೊಡನೆ ಮಾತಾಡ ಬೇಕು. ಅನ್ಯರಗೊಡವೆ ನನಗೇನು? ನನಗಾಗಿ ಪರಿತಪಿಸುವರಿದ್ದರೆ ಅವ ರನ್ನು ಬಿಟ್ಟುಬಂದ ಪಾಪ ನನಗೆ ಬರುತ್ತಿತ್ತು. ನನಗೆ ನೀನೇ ಅಣ್ಣ, ನೀನೇ ತಾಯಿ, ನೀನೇ ತಂದೆಯೆನ್ನುತ್ತಿದ್ದನು. ಈ ದುಃಖದಿಂದಲೇ ತಿರು ತಿರುಗಿ ನೆನೆನೆನೆದು ನಿನ್ನನ್ನೂ ಕಾಣದೆ ಈ ದೇಹಬಿದ್ದುಹೋದರೆ ಪಶುಪಕ್ಷಿ ಗಳ ಆಹಾರವಾದರಾಗಲಿ. ಆಗ ನಾನೆಂಬುವದೆಲ್ಲಿದ್ದೀತು? ಆ! ಇರದೆ ಎಲ್ಲಿ ಹೋದೀತು? ಆ ನಾನು ಏನಾಗಬಹುದು? ಮತ್ತೆ ಹುಟ್ಟಬಹುದೇ? ಮನುಷ್ಯನಾಗಿ ಹುಟ್ಟಬಹುದೇ? ಹುಟ್ಟಿ ಮಾಡುವದೇನು? ಹುಟ್ಟಿದಂತೇ ಆಗಿಬಿಟ್ಟರೆ? ಅಹುದು, ಅದೇ ಬೇಕಾದ್ದು. ಆದರೆ ಮಾತ್ರ ನಿನ್ನನ್ನು ನೋಡಬೇಕು. ಅನಂತರ ಏನಾದರೂ ಆಗಬೇಕು ಹೀಗೆಲ್ಲಾ ಚಿಂತಿಸು ವನು, ತರ್ಕಿಸುವನು, ದುಃಖದಿಂದ ಕಣ್ಣೊರಸುವನು.

ವೆಂಕಪ್ಪನಿಗೆ ಪುರಂದರದಾಸರೆಂದರೆ ಬಹಳ ಭಕ್ತಿ. ಅಲ್ಲಲ್ಲಿ ತಪ್ಪು ತಪ್ಪಾಗಿ ಪಾಠಮಾಡಿದ "ಬಂದು ನಿಂತಿಹನೋಡಿ" ಎಂಬ ದೇವರ ನಾಮ ದಲ್ಲಿ ಮಮತೆ ಬಹಳ. ನಾಮದ ಪ್ರತಿಪದವನ್ನೂ ಮನನಮಾಡುವನು. ಆ ಪದವು ತನ್ನದೇ ಆಗಿದ್ದರೆ—ತಾನೇಮಾಡಿದ್ದಾಗಿದ್ದರೆ—ತಾನೇ ಅವರಾ ಗಿದ್ದರೆ—ಹೇಗಿರುತ್ತಿತ್ತೆಂದುಕೊಳ್ಳುವನು. ತನ್ನ ಚಿಕ್ಕಮನಸ್ಸಿನಲ್ಲಿ ತನ್ನ ಪರಿಮಿತ ಭಾವನೆಗೆ ತಕ್ಕಂತೆ ಒಂದು ದೇವರ ಮೂರ್ತಿಯನ್ನು ಕಲ್ಪಿಸು ವನು. ಅದರಲ್ಲಿ ಎಲ್ಲವನ್ನೂ ಚಿಂತಿಸುವನು. ಮತ್ತೆ ನಿರಾಶನಾಗಿ ಅದಲ್ಲ ಅದಲ್ಲವೆನ್ನುವನು. ಉನ್ಮತ್ತನ ಪ್ರಲಾಪದಂತೆ ಹುಚ್ಚನ ಕನಸಿನಂತೆ ತನ್ನ ಭಾಷೆಭಾವನೆಗಳೆಂದುಕೊಳ್ಳುವನು. ತಾನು ದಾಸನಾಗಬೇಕು; ತನ ಗೊಬ್ಬ ಗುರುವಾಗಬೇಕು; ಗುರುವಿನಿಂದ ಅಂಕಿತವಾಗಬೇಕು; ದೇವನ ಕಾರುಣ್ಯವಾಗಬೇಕು; ಎಲ್ಲವೂ ಸರಿ; ಪುರಂದರದಾಸರಂಥಾ ಗುರುಗಳು ದೊರೆಯುವಬಗೆಹೇಗೆ? ಹೀಗೆಲ್ಲಾ ಚಿಂತಿಸುತ್ತಾ ಮನಮರುಗಿದಂತೆ ಅವನ ಮನಃ ಪರಿಪಾಕವಾಯಿತು. ಆಹಾರದ ಅಭಾವದಿಂದ - ವಿವಿಧ ದಂಡನೆಗ ಳಿಂದ-ಅವನ ದೇಹಶುದ್ಧಿಯಾಯಿತು. ಚಿಂತಿಸಿದಾಗೆಲ್ಲಾ ದಾಸರರೂಪ

ವೊಂದು ಭಾಸವಾಗುತ್ತ ನಡೆಯಿತು. ದೇವರ ಚಿಂತನೆಮಾಡಿದರೆ ಇದೆಲ್ಲಿ ಬಂತು ಈ ರೂಪವೆಂದು 'ಹು ಹು ಹೂ' ಎನ್ನುವನು. ಮನಸ್ಸಿನಲ್ಲಿ ತನ್ನ ದೇವರನ್ನು ಚಿತ್ರಿಸಿಕೊಂಡಂತೆಲ್ಲಾ ದಾಸರ ರೂಪವೇ ಸ್ಥಿರವಾಯಿತು. ನಿರಾಶನಾದನು. ನಿರುಪಾಯನಾದನು. ಚಿಂತನೆಯ ದಾರಿತಪ್ಪಿತೆಂದನು. ಮಾರ್ಗದರ್ಶಕರಿಲ್ಲವೇ ಎಂದು ತೊಳಲಿದನು.

ಲೋಕದಲ್ಲಿ ಮಾನವಪ್ರಾಣಿಯು ತನ್ನ ಜೀವಿತದ ಅಲ್ಪಾವಧಿಯನ್ನು ತಿಳಿಯದಂತೆ—ತನ್ನ ಅಪೂರ್ಣತೆ ಅಧೀನತೆಗಳನ್ನು ತಿಳಿದಂತೆ—ಒಬ್ಬನು ಸುಖಿ ಒಬ್ಬನು ದುಃಖಿ, ಒಬ್ಬನು ಶ್ರೀಮಂತ ಒಬ್ಬನು ಬಡವ, ಒಬ್ಬನು ಆಳುವವ ಒಬ್ಬನು ಅಳುವವ, ಇದನ್ನೆಲ್ಲಾ ನೋಡಿದಂತೆ — ತನ್ನ ಈ ಜನ್ಮವೇ ಎಲ್ಲಕ್ಕೂ ಕಾರಣವಲ್ಲವೆಂದೂ, ತಾನು ಹಿಂದೆ ಏನೋ ಆಗಿದ್ದು ಮುಂದೆ ಏನೋ ಆಗಬಹುದೆಂದೂ, ತನ್ನ ಹಿಂದುಮುಂದುಗಳು ಒಂದ ಕ್ಕೊಂದು ಕಾರಣವಾಗಿರಬೇಕೆಂದೂ, ಎಲ್ಲಕ್ಕೂ ಬಲವಾದ ಶಕ್ತಿಯೊಂದಿದ್ದು ಅದಕ್ಕೆ ತಾನು ಒಳಪಟ್ಟಿರುವನೆಂದೂ ವಿವೇಕದಿಂದ ನಿಶ್ಚಯಿಸುವನು. ಈ ಎಲ್ಲ ನಂಬಿಕೆಗಳನಡುವೆ ತನ್ನದೇ ಒಂದು ಪ್ರಪಂಚ, ತನ್ನದೇ ಒಂದು ನೀತಿ, ತನ್ನದೇ ಒಂದು ನ್ಯಾಯ, ತನ್ನದೇ ಒಂದು ದೇವರು; ಹೀಗೆಲ್ಲಾ ಸೃಷ್ಟಿಸಿಕೊಂಡು ತನ್ನ ಚಿಕ್ಕ ತಕ್ಕಡಿಯಲ್ಲಿ ಜಗತ್ತಿನ ನ್ಯಾಯಾನ್ಯಾಯಗಳ ತೂಕಮಾಡುವನು. ತಾನೆಷ್ಟು ಸರಿಯಾಗಿದ್ದರೂ, ತಾನೆಷ್ಟು ಮೊರೆಬಿದ್ದರೂ, ತನ್ನನ್ನು ಆ ದೇವರು ಕಾಪಾಡುತ್ತಿಲ್ಲವೆಂದು ಆ ದೇವರ ತಲೆಗೆ ಅಪರಾಧ ಗಳ ಹೊರೆಯನ್ನು ಹೊರಿಸುವನು. ಹಿಂದೆ ಆದದ್ದಾಯಿತು, ಮುಂದಾದರೂ ತನ್ನ ಬೇಡಿಕೆಗಳನ್ನು ಸಲಿಸೆಂದು ಕೇಳುವನು. ಕೇಳಿದ್ದು ದೊರೆಯದಿದ್ದರೆ ಆ ದೇವರಮೇಲೆ ಸಿಟ್ಟುಮಾಡುವನು. ಸಿಟ್ಟು ಉದಾಸೀನತೆಯಾಗಿ, ಉದಾಸೀನಶಾಂತವಾದಮೇಲೆ ಮತ್ತೆ ಅದೇ ದೇವರಿಗೆ ಅನೇಕ ಹರಕೆಹಾ ಕಲು ಹೊರಡುವನು. ಇವೆಲ್ಲಾ ಸಾಧಕನ ಮನೋರಾಜ್ಯದಲ್ಲಿ ನಿರಂತರ ವಾಗಿ ಬರುವ ತರಂಗಗಳು. ವೆಂಕಪ್ಪನ ಬಡ ಮನಸ್ಸಿನಲ್ಲಿ ಬರದೇಹೋಗ ಲಿಲ್ಲ. ತಾನು ತನ್ನ ಮನಸ್ಸಿನಲ್ಲಿ ತೋರಿದ ರೀತಿಯಲ್ಲಿ—ಜನರು ಹೇಳಿ ಕೇಳಿದ ರೀತಿಯಲ್ಲಿ—ಒಬ್ಬ ದೇವರನ್ನು ಚಿಂತಿಸಿದರೆ ಆ ರೂಪ ತನ್ನೆದುರಿಗೆ ನಿಲ್ಲಬೇಕೋ, ಯಾವದೋ ದಾಸರ ರೂಪ ಕಣ್ಣಿಗೆ ಕಟ್ಟಿದಂತಾಗಬೇಕೋ,

ಇದು ಅವನ ಯುಕ್ತಿಗೆ ಹೊಂದದಂತಾಯಿತು. ಪುರಂದರ ದಾಸರ ಸ್ಮರಣೆ ಮಾಡಿದ ಕಾರಣ ಆ ದಾಸರೂಪ ಮನಸ್ಸಿನಲ್ಲಿ ನೆಲೆಸಿರಬಹುದೇ ಎಂಬ ಸಂದೇಹವಾಯಿತು. ತಾನು ಕಂಡದ್ದು ದಾಸರ ರೂಪವಾಗಿರಲು ಕಾರಣ ವಿಲ್ಲವೆಂದೆನಿಸಿತು' ಈ ಯೋಚನೆಯಲ್ಲಿ ಮುಳುಗಿದ ವೆಂಕಪ್ಪನಿಗೆ ದಿಕ್ಕು ತೋರದಂತಾಯಿತು.

"ಅಪ್ಯಚ್ಯುತೋ ಗುರುದ್ವಾರಾತ್'' ಎಂಬ ಶಾಸ್ತ್ರನ್ಯಾಯದಂತೆ ದೇವರು ಯಾವದೇ ಜಗದ್ವ್ಯಾಪಾರವನ್ನು ಸ್ವಯಂ ಬಂದುಮಾಡುವದಿಲ್ಲ. ತರತಮಭಾವಗಳಿಗನುಸರಿಸಿ, ಗುರುಶಿಷ್ಯನ್ಯಾಯವನ್ನು ತೋರಿಸಿ, ಆ ಆರೂಪಗಳೇ ಅವರವರಿಗೆ ಉಪಾಸ್ಯರೂಪಗಳೆನ್ನಿಸಿ, ತಾನೇ ಎಲ್ಲವನ್ನೂ ಮಾಡುವವನಾದರೂ ಒಂದನ್ನೂ ಮಾಡದ ''ಜಗದ್ವ್ಯಾಪಾರವರ್ಜ್ಯಂ'' ಎನಿಸಿ, ಜಗನ್ನಿಯಂತನಾಗಿರುವನು. ವೆಂಕಪ್ಪನಿಗೆ ಕಾಣಿಸುತ್ತಿದ್ದ ರೂಪವು ಅವನ ಸ್ವರೂಪೋದ್ಧಾರಕ್ಕೆ ಕಾರಣವಾಗಿದ್ದ ಗುರುರೂಪವಾಗಿದ್ದುದರಿಂದ ಆ ರೂಪದ ವಿನಾ ಅನ್ಯರೂಪ ದರ್ಶನವು ಸ್ಥಿರವಾಗಿರಲು ಕಾರಣವಿರಲಿಲ್ಲ. ಆದರ ಅರಿವು ವೆಂಕಪ್ಪನಿಗಾಗಲಿಲ್ಲ.

ಹೀಗಿರಲು ಒಂದು ಮಧ್ಯಾಹ್ನ ಧರ್ಮದರ್ಶನದ ಕಾಲ! ವೆಂಕಪ್ಪನು ವೆಂಕಟಪತಿಯ ಗರ್ಭಾಂಕಣದಲ್ಲಿ ನಿಂತಿದ್ದಾನೆ! ಮಳೆಬರುತ್ತಿದ್ದುದರಿಂದ, ಜನಸಮ್ಮರ್ದವಿದ್ದುದರಿಂದ, ಶ್ರೀನಿವಾಸಮೂರ್ತಿಯ ಸಮೀಪದಲ್ಲಿ ನಿಲ್ಲುವ ಭಾಗ್ಯಲಭಿಸಿದೆ. ಸ್ವಾಮಿಯನ್ನು ಕಣ್ಣುತುಂಬ ನೋಡುತ್ತಾನೆ. ಇದೇ ರೂಪ ತನ್ನ ಮನಸ್ಸಿನಲ್ಲಿ ಸ್ಥಿರವಾಗಬೇಕೆಂದು ಕಣ್ಣುಮುಚ್ಚುತ್ತಾನೆ. ಆ ರೂಪ ಬದಲು ದಾಸರ ರೂಪ ಮುಂದೆ ಬರುತ್ತದೆ. ಕಣ್ಣು ಬಿಡುತ್ತಾನೆ. ಅದು ಮರೆಯಾಗುತ್ತಿದೆ. ಆವರ್ತಿ ಹೆಚ್ಚಿದ ಹಾಗೆ ಒಳಹೊರಗೆ ದಾಸರೂಪವೇ ಸ್ಥಿರವಾಗುತ್ತಿದೆ. ಗುಡಿಯೊಳಗೆ ನಿಂತರೂ ಹೀಗೇಕೆ ಆಯಿತೆಂದು ತಳಮಳಿಸುತ್ತಾನೆ. ಮೈಮೇಲೆ ಸ್ಮೃತಿಯಿಲ್ಲ. ಆಗ ಅಂಶಿಯಿಂದ ಅಂಶರೂಪವಾದ ದಾಸರ ತೇಜೋಮಯ ಅಂತರ್ಯಾಮಿ ರೂಪದಿಂದ ''ವೆಂಕಪ್ಪಾ! ನಿನಗೆ ಪ್ರಸನ್ನನಾಗಿದ್ದೇನೆ. ನಿನ್ನ ಚಿಂತನೆಯು ಫಲರೂಪವಾಯಿತು. ಚಿಂತೆಪರಿಹಾರನಾಯಿತು.'' ಎಂಬ ಪ್ರಸನ್ನ ಉದ್ಗಾರಗಳು

ಬರುತ್ತಿವೆ. ಎಲ್ಲವನ್ನೂ ನೋಡಿ ಸ್ಮೃತಿಗೊಂಡು ಸಮಚಿತ್ತನಾಗಿ ವೆಂಕಪ್ಪನು ಸಂತುಷ್ಟನಾಗುತ್ತಾನೆ. ಗರ್ಭಾಂಕಣವನ್ನು ಬಿಟ್ಟು ವಿಮಾನ ಶ್ರೀನಿವಾಸನೆದುರಿಗೆ ನಿಂತು ಹಾಡುತ್ತಾನೆ. ಹಾಡಿದ ಹಾಡು ಕವಿತೆಯಾಗುತ್ತದೆ. ಕೇಳಿದವರಿಗೆ ಆನಂದವೆನಿಸುತ್ತದೆ. ಯಾವನೋ ಸತ್ಪುರುಷನಿವನೆಂಬ ಭಕ್ತಿಯುಂಟಾಗುತ್ತದೆ. ವೆಂಕಪ್ಪನ ಅಂತರಂಗದಲ್ಲಿ ಜ್ಯೋತಿದರ್ಶನವಾಗುತ್ತದೆ. ಒಡನೆಯೇ ಸಕಲ ಜಗತ್ತೂ ಅವನಿಗೆ ಕರತಲಾಮಲಕದಂತೆ ಕಾಣುತ್ತದೆ. ವಿದ್ಯೆಯಿರದಿದ್ದರೂ ಬುದ್ಧಿ; ಬುದ್ಧಿಯಿಂದ ಸಿದ್ಧಿ; ಸಿದ್ಧಿಯಿಂದ ಪ್ರಸಿದ್ಧಿ, ಒಂದರಹಿಂದೊಂದು ತಾನೇ ಲಭಿಸುತ್ತವೆ. ಇವನನ್ನು ಕಂಡು ಜನರಾಗಲೇ ಹಿಂಬಾಲಿಸುತ್ತಾರೆ. ತಮ್ಮ ಕಷ್ಟ ಸುಖಗಳ ನಿವಾರಣೋಪಾಯ ಕೇಳುತ್ತಾರೆ. ಎಲ್ಲವನ್ನೂ ನೆನೆದು ಎಲ್ಲರನ್ನೂ ನೋಡಿ ವೆಂಕಪ್ಪನು ನಗುತ್ತಾನೆ. ಸ್ಮೃತಿಯೋ ವಿಸ್ಮೃತಿಯೋ ಅವನಿಗೇ ಆಶ್ಚರ್ಯವೆನಿಸುತ್ತದೆ.

ಹೀಗಾಯಿತು ವೆಂಕಪ್ಪನಿಗೆ ಸಾಕ್ಷಾತ್ಕಾರ. ಹೀಗಾಯಿತು ವೆಂಕಪ್ಪನಿಗೆ ದುಃಖದೂರ. ಹೀಗಾದನವನು ಪ್ರಸನ್ನವೆಂಕಟರಾಯ.

ಮಹಾನುಭಾವರಾದ ವಿಜಯದಾಸರು:

—ಸುಳಾದಿ—

ಎಲ್ಲಿದ್ದರೇನು ಸಿರಿವಲ್ಲಭನ ತೊಂಡರಿಗೆ
ಇಲ್ಲವಿಲ್ಲವು ದೋಷ ಎಳ್ಳನಿತಾದರು
ಕೊಳ್ಳಿಗೆ ಇರುವೆಯು ಚಲ್ಲವರಿದು ಮುತ್ತಿ
ನಿಲ್ಲದೆ ಬದುಕಿ ತಾವೆಲ್ಲಾ ಪೋಪುದು ಉಂಟೆ
ಸೊಲ್ಲುಸೊಲ್ಲಿಗೆ ರಂಗನಲ್ಲದಿನ್ನಿಲ್ಲವೆಂಬ
ಬಲ್ಲಿದ ಭಕ್ತಿಯುಳ್ಳ ಭಕ್ತರಿಗೆ
ಎಲ್ಲಯದೋಷ ಮತ್ತೆಲ್ಲಿಯ ಜನನವು
ಬಲ್ಲವರಿಗೆ ಧ್ಯಾನದಲ್ಲಿ ಆನಂದವು
ಚಿಲ್ಲರೆಮಾರ್ಗಬಿಡಿಸಿ ವಿಜಯ ವಿಠಲರೇಯ
ಸಲ್ಲಿಸುವನು ತನ್ನಲ್ಲಿ ಮನವಿಡಲು ||೧||

ಎಂಬದಾಗಿ ಹೇಳಿದಂತೆ ವೆಂಕಪ್ಪನು ವೆಂಕಟರಾಯರಾದಮೇಲೆ ಎಲ್ಲಿದ್ದ ರೇನು?

ನಾಹಂವಸಾಮಿ ವೈಕುಂತೇ
ನಯೋಗೀಹೃದಯೇರವೌ
ಮದ್ಭಕ್ತಾಯತ್ರಗಾಯಂತೇ
ತತ್ರತಿಷ್ಠಾಮಿ ನಾರದ ॥೧॥

ಎಂಬದಾಗಿ ಭಗವದುಕ್ತಿಯಿರುವಾಗ ಪ್ರಸನ್ನರಾಯರಿದ್ದ ಬಳಿ ವೈಕುಂಠ ವಾಯಿತು. ಅವರಿದ್ದ ಬಳಿ ತೀರ್ಥಕ್ಷೇತ್ರಗಳಾದುವು. ಅವರಂದ ವಚನ ಗಳು ವೇದಾರ್ಥಗಳಾದುವು. ಅವರೇ ಎಷ್ಟೋ ಜನರ ಪ್ರತ್ಯಕ್ಷಬ್ರಹ್ಮರಾದರು.

ಪ್ರಸನ್ನವೆಂಕಟರಾಯರು ಭಗವದನುಗ್ರಹವನ್ನು ಸಂಪಾದಿಸಿ ಭರತ ಖಂಡದ ವಿವಿಧ ಕ್ಷೇತ್ರಗಳಲ್ಲಿ ಸಂಚರಿಸಿ ಪರಮಾತ್ಮನ ಲೀಲಾವಿಭೂತಿ ಯನ್ನು ಕೊಂಡಾಡಿ "ಬ್ರಹ್ಮಾಂಡದೊಳಗೆ ಯಾವಲ್ಲಿ ನೋಡಿದರು ನಮ್ಮೂರೇ ವಾಸಿ" ಎಂಬ ಪುರಂದರದಾಸರ ಪುಣ್ಯೋಕ್ತಿಯಂತೆ ಬಾಗಲ ಕೋಟೆಗೇ ಬಂದರು. ಅದೇ ಅಣ್ಣ ಅತ್ತಿಗೆಯರ ಪಾದಗಳಿಗೆರಗಿದರು. ಎಷ್ಟೋ ಕಾಲ ತಮ್ಮನ ವರ್ತಮಾನ ತಿಳಿಯದಿದ್ದ ಅಣ್ಣನಿಗೆ ಪರಮಾನಂದವಾ ಯಿತು. ಅತ್ತಿಗೆಯನ್ನು ಮಾತಾಡಿಸುತ್ತಾ ರಾಯರು,—ನಾನು ಅದೇ ಯಂಕ್ಯ,ನೀವು ನನ್ನ ಹಾಂಗೇ ಕರೀಬೇಕು, ಈಗ ಮರ್ಯಾದೆ ಮಾಡಬಾರದು, ಎಂದರು. "ಅವಸ್ಥಾ ಪೂಜ್ಯತೇ ರಾಮ" ಎಂಬ ಲೋಕೋಕ್ತಿಯಿರುವಾಗ ಆ ಪ್ರಾಣಿಯಾದರೂ ರಾಯರನ್ನು ಯಾವ ಬಾಯಿಂದ "ಯಂಕ್ಯಾ" ಎಂದು ಕರೆದಾಳು? ಒಂದು ಥಾಲಿ ಮಜ್ಜಿಗೆಯ ಲೋಭವಿದೆಂದು ಸ್ಮರಿಸದಿದ್ದಾಳು? ಆ ಪುಣ್ಯಾತ್ಮಳು—"ವೆಂಕಣ್ಣ! ನಿನ್ನನ್ನು ಬಲು ನೋಯಿಸಿದ ಪಾಪಿನಾನು' ಸೀರೆಯೊಗೆಸಿ ನೀರು ಹೊರಿಸಿದ ಪಾಪಿನಾನು. ಉಣಬಡಿಸುವಾಗಲೂ ಪಙ್ತಿಭೇದ ಮಾಡಿದ ಪಾಪಿನಾನು. ದನಕ್ಕೆ ಚಲ್ಲುವ ಒಂದು ಥಾಲಿ ಮಜ್ಜಿಗೆಯನ್ನು ಕೊಡದೆ ಕಾಡಿಗಟ್ಟಿದ ಪಾಪಿನಾನು. ಅಪ್ಪಾ, ಎಷ್ಟು ನೊಂದೆಯೋ, ಎಷ್ಟು ಕಷ್ಟಪಟ್ಟೆಯೋ—ಆ ಪಾಪ, ಆ ಶಾಪ, ಅದರಿಂದ

ಹೊಟ್ಟೆಯ ಮಕ್ಕಳನ್ನೂ ತಿಂದುಕೊಂಡೆ. ಪೈರು ಹೋಯಿತು, ಪಚ್ಚೆ ಹೋಯಿತು, ಬಣವೆಗೇ ಬೆಂಕಿಬಿತ್ತು, ಒಂದಾಯಿತು, ಎರಡಾಯಿತೆನ್ನಲೆ? ಇನ್ನಾದರೂ ನಮ್ಮಮನೆ, ಅದೇ ನಿನ್ನಮನೆ, ಊರ್ಜಿತವಾಗಲೆಂದು ಹರಸು. ನೀನು ವೆಂಕಟಪತಿಯ ಭಕ್ತ. ನನ್ನ ಸರ್ವಾಪರಾಧವನ್ನೂ ಕ್ಷಮಿಸು'' ಎಂಬದಾಗಿ ಬೇಡಿಕೊಂಡಳು.

ರಾಯರು ಅತ್ತಿಗೆಯ ಮಾತು ಕೇಳಿ ಕಂಬನಿಗರೆದರು. ಇದೆಲ್ಲಾ ಪ್ರಾಚೀನ ಕರ್ಮಫಲವೆಂದರು. ಮುಂದೆ ಎಲ್ಲಾ ಒಳ್ಳೆಯದಾಗುವದು ಅತ್ತಿಗೇ, ಚಿಂತಿಸಬೇಡೆಂದು ಹೇಳಿದರು.

ಪ್ರಸನ್ನರಾಯರು ತಮ್ಮ ಬಾಲ್ಯ ಸಂಸ್ಕಾರವನ್ನು ದೊಡ್ಡವರಾದರೂ ಮರೆಯಲಿಲ್ಲ. ಮನೆಯಲ್ಲಿ ಕೂಡುವದಕ್ಕಿಂತ ಅಡವಿಯು ಅವರಿಗೆ ಆನಂದಾಶ್ರಮವಾಗಿತ್ತು. ಬಾಗಲಕೋಟೆಯ ಎದುರು ಭಾಗದ ಗುಡ್ಡಸಾಲು ಅವರ ವಿಹಾರಸ್ಥಾನವಾಗಿತ್ತು. ಯಾವುದಾದರೊಂದು ಗುಜ್ಜುಗಿಡದ ನೆರಳಿನಲ್ಲಿ ಕೂತು ಭಾಗವತ ಪಠನೆಮಾಡುವುದು ರಾಯರ ದಿನಚರ್ಯವಾಗಿತ್ತು. ಭಾಗವತವನ್ನು ಓದಿದಂತೆಲ್ಲಾ ಅದರ ಸಾರಾಂಶವನ್ನು ಕನ್ನಡ ಹಾಡಾಗಿ ಬರೆಯುತ್ತಿದ್ದರು. ಅವರ ಕವಿತೆಗಳಲ್ಲಿ ಬಿಡಿಯಾಗಿ ಬರೆದ ಸ್ತೋತ್ರ ಪದಗಳೇ ಬೇರೆ. ಇಡಿಯಾಗಿ ಬರೆದ ಭಾಗವತ ಕಥೆಯೇ ಬೇರೆ. ಭಾಗವತವೆಂದಕೂಡಲೇ ದಶಮಸ್ಕಂಧ, ದಶಮಸ್ಕಂಧವೆಂದರೆ ಪೂರ್ವಾರ್ಧ, ಅದೆಂದರೆ ಕೃಷ್ಣಲೀಲಾ ಎಂಬಿಷ್ಟೇ ಅರ್ಥದ ಕವಿತೆ ರಾಯರದಲ್ಲ. ಭಾಗವತದ ಆದ್ಯಂತವನ್ನೂ ಹಾಡಾಗಿ ವೃತ್ತವಾಗಿ ದ್ವಿಪದಿಯಾಗಿ ಸಂಪೂರ್ಣವಾಗಿ ಕನ್ನಡಿಸಿದವರು ಪ್ರಸನ್ನರಾಯರು. ಪ್ರಕೃತ ಉಪಲಬ್ಧವಾಗಿ ಮುದ್ರಿತವಾಗಿರುವವೆಂದರೆ ರಾಯರ ಕೆಲವು ಬಿಡಿಪದಗಳು ಮತ್ತು ದಶಮಸ್ಕಂಧದ ಪೂರ್ವಾರ್ಧ ಮಾತ್ರ. ಉತ್ತರ ಕರ್ನಾಟಕದ ಗ್ರಂಥಶೋಧಕರು ಪ್ರಸನ್ನರ ಭಾಗವತವನ್ನು ಪೂರ್ತಿಯಾಗಿ ಸಂಗ್ರಹಿಸಿ ಶೋಧಿಸಿ ಮುದ್ರಿಸಿದರೆ ಮಹಾರಾಷ್ಟ್ರದ ಏಕನಾಥ ಭಾಗವತದಂತೆ ಉಪಯುಕ್ತ ಗ್ರಂಥವಾಗುವುದರಲ್ಲಿ ಸಂಶಯವಿಲ್ಲ. ರಾಯರು ದಶಮಸ್ಕಂಧದ ಪೂರ್ವಾರ್ಧವನ್ನು ಪ್ರಾರಂಭಿಸುವಾಗ ಸಾರಂಗ ರಾಗದಲ್ಲಿ ಕನ್ನಡ ಮಾತುಗಳೆಂದು ಉದಾಸೀನ ಮಾಡದೇ ಕೇಳಿರೆಂದೇ ಪ್ರಾರ್ಥಿಸಿ ಪದವನ್ನು ಪ್ರಾರಂಭಿಸಿದ್ದಾರೆ. ಆ ಪದವು:—

ಸಾರಂಗ — ಆದಿತಾಳ

ಶ್ರೋತವ್ಯವು ಇದೆ ಮಂತವ್ಯವು ಇದೆ ಧ್ಯಾತವ್ಯವು ನಮಗೆ
ಪೂತವು ಹರಿಗುಣಗಾಥೆಯು ಮುಕುತಿಯ ಪಾಥೇಯವು ನಮಗೆ॥ಪ॥

ಶ್ರೀಮದ್ದಶಮಸ್ಕಂಧ ಭಾಗವತ ಭೂಮಿಪ ಪರಿಕ್ಷಿತನು
ಧೀಮಜ್ಜನ ಗುರು ಶುಕಮುನಿಗೆ ನಮಿಸಿ ಪ್ರೇಮದಿ ಕೇಳಿದನು
ಈ ಮುಕುತಿಯ ಪಥಸಾಧನವು ಖಳ ಪಾಮರರಿಗೆ ದೂರ
ಶ್ರೀ ಮಹಾಲಕುಮಿಯ ರಮಣನ ದಾಸರಸ್ತೋಮಕೆ ಸೌಖ್ಯಕರ ೧

ಕರ್ಣಪುಟಗಳಿಗೆ ನೈರಂತರದಲಿ ಪೂರ್ಣ ಸುಧಾರಸವು
ನಿರ್ಣಾಯಕ ಶ್ರೀದಶಪ್ರಮತಿ ಶಾಸ್ತ್ರಾರ್ಣವಜನ್ನರ—ಹಿತವು
ಚೂರ್ಣೀಕೃತ ಪಾಪಾಚಲ ವಜ್ರವು ಸ್ವರ್ಣವಿಪಗ ಕಥೆಯು
ವರ್ಣಾವರ್ಣಗಳಿಂ ಕೀರ್ತಿಪರಾಭರ್ಣ ಸುಖದ ತತಿಯು ॥೨॥

ಎನಗಿಂತೊಂದೀಗುರ್ಣ ಜ್ಯೇಷ್ಠರ ಕ್ರಮವನು ಬಲಗೊಂಡಬುಜಾ
ಸನ ಪರ್ಯಂತರ ಗುರುಗಳಿಗೆರಗುವೆ ಅಣುಬಾಲಿಶ ಮನುಜ
ಎಣಿಸದಲೆನ್ನಯ ನುಡಿ ತಪ್ಪುಗಳನು ಮನುಜೋತ್ತಮ ಮುಖರು
ಕನಡುಕ್ತಿಗಳಿವು ಎನ್ನದೆ ಕೇಳಿರಿ ಘನರು ದಯಾಪರರು ॥೩॥

ಚಿದ್ಗುಣಗಣನಿಧಿ ಚಿನ್ಮಯರೂಪ ಸಚ್ಚಿದ್ಗೃಹತ್ರಯ ತಾನು
ಹೃದ್ಗುಹನಿಲಯ ಸದಾಶ್ರಿತಜನ ಸುಖದೋಗ್ಧ್ರಾಮರಧೇನು
ವಾಗ್ದೇವಿಯರಸ ವನಜಾಸನನುತ ದುಗ್ಧಾಬ್ಧೀಶ್ವರನು
ಅಗ್ರೇಸರ ಭಗವಜ್ಜನ ಸಜ್ಜನರುಗ್ಘಡಿಸುವರಿದನು ॥೪॥

ಆರಿದ ಪೇಳುವರೂ ಕೇಳುವರು ಮುರಾರಿಯ ಚಾರಿತೆಯ
ಕೀರುತಿ ವ್ಯಾಸಕುಮಾರನು ವರ್ಣಿಪ ಚಾರು ಮುಕುತಿಗತಿಯ
ಈರೇಳ್ಜಗದಘ ಹರಿಪುದು ಕರ್ಣಾಪೂರಿತ ಪೀಯುಷವು
ನಾರಾಯಣ ಪ್ರಸನ್ವೇಂಕಟಕೃಷ್ಣನ ತೋರಿಕೊಡುವರಸವು ॥೫॥

ಎಂಬಂತಿದೆ. ಸಂಸ್ಕೃತ ನಾಟಕಗಳಲ್ಲಿ ಹೀನ ಪಾತ್ರಗಳಿಗಾಗಿ ಪ್ರಾಕೃತದ ಗದ್ಯ ಪದ್ಯಗಳನ್ನು ಬರೆದು ಕೆಳಗೆ ಸಂಸ್ಕೃತ ಮಾಡಿಕೊಡುವಂತೆ ಪ್ರಸ

ನ್ನರಾಯರು ಮಕ್ಕಳ ಮುದ್ದು ನುಡಿಯ ಕೆಲವು ಪದಗಳನ್ನು ಕೇಳಿದು ಹಾಡಿದ್ದಾರೆ. ಅದರ ಮಾದರಿಯೆಂದರೆ:—

ಯತ್ತೋದೆಯಮ್ಮಾ ನಂಗನ್ನೆತ್ತಿಕೋ ಅಮ್ಮಾ
ಯಶೋದೆಯಮ್ಮಾ.... ರಂಗ....... ....... ............
ವತ್ತಿಬಲು ಅತ್ತು ಬಂದೀನೇ ನಾ ಇತ್ತೇ ಅಮ್ಮಿ ತಿಂದೇನೇ ||ಪ||
ಹೊಟ್ಟೆ.... ಹಸು ................... ಇಷ್ಟೆ .... ...... ............

ತುತಿಬಾಯಿ ವಂಗ್ಯಾವೆ ಬಿಚಿವಾವು ವಾತತ್ತಿಬತ್ತಾವೆ
ತುಟಿ........ ವಣಗ್ಯಾವೆ ಬಿಸಿ ಹಾಲು ವಾಕರಿಕೆ...........
ಅತ್ತಿವಾವು ಪಪ್ಪುಕಾಯಿ ಅಮ್ಮಮಮ್ಮೊಲ್ಲೆ ಉತ್ತತ್ತಿ
ಹಸಿ ಹಾಲು ಉಪ್ಪಿನಕಾಯಿ ......................................
ಬೆಣ್ಣೀ ತಿಂದೇನೇ ||೧||
.......................

ಯಕ್ಕೊಬಾ ಯಂಬ್ಯಾರೇ ಬಿಚಿನೀಲು ಬುಕ್ಕಚ್ಚಿಮಾಬ್ಯಾಲೇ
ಎರಕೊ .................... .............. ..............................
ಬತ್ಲೊ ತುಂಬೀಕೊಲು ಬೆತ್ಲು ಮಲಿಗಳ ಕೂಡುಂದೇನೇ ||೨||
ಬಟ್ಲೊ ................ಡು ಬೆಕ್ಕು ............ ........... ........

ಉಗ್ಗು ಕೂಶು ಬಾಯಂಗೇ ಚಪ್ಪಶ್ಯಿ ಮಗ್ಗಮ್ಮಿ ಕೂಯಂಗೇ
........ ........ ................ ಚಪ್ಪರಿಸಿ ಮಲಗಿ ಅಮ್ಮಿ ............
ಗೊಗ್ಗ ವಿಾಶಿ ಜೋಗಿಗೆ ಕೊಬ್ಯಾದೇ ಬಾಗಿಲಹೊಗ್ಗೆ ಜತ್ತಿಂಗ
........ ........ ............ ಕೊಡಬೇಡೇ ..............................
ನಾನೇ ||೩||
.........

ಕಲ್ಲಕಿತ್ನ ಎಂತಾಡೇ ಬಂಗಾಪ್ದ ಬುಲ್ಲಿ ಬೆಲ್ಲ ತಿಂತಾಡೇ
ಕಳ್ಳಕೃಷ್ಣ ............ ............ .... .... ............
ಗಲ್ಲ ಕತ್ತಿಕತ್ತಿ ಉಮ್ಮ ಹಲ್ಲನೊತ್ತುತಾಡೇ ಕೊಲ್ಲುಬಾಲಡೇ
.... ಕಚ್ಚಿಕಚ್ಚಿ ........ ......................... .....................
ದುತ್ತ ಗೊಲ್ಲತೇಲನ್ನಾ ||೪||
ದುಷ್ಟ .....................

ನಚ್ಚತ್ಲ ತಂದುತೋಲೇ ಚಂದುಮಾಮನಿತ್ತತ್ತ ಕಲೆತಾಲೇ
ನಕ್ಷತ್ರ ..................... ......................... ................
ಪುತ್ತಮಿಲ್ಲಿ ತುಂಬವಲ್ಲೆ ಮುತ್ತುಕೊತ್ತಾಲೆ ಸ್ಣಣ್ಣ ಬುತ್ತಿತುಂಬ
............ ................ ............ಕೊಟ್ಟರೆ... ........ .................
ಹನ್ನುಕೊಂದು ತಿಂದೇನೇ ||೫||
................... ............

ಲಾಲೀಮುಗಚ್ಚು ಬಾಲೇ ಕಿತ್ನನಮೇಲಿ ಜೋಗುಲುಪಾಲೇ
.................. ........ ................. .........................
ಬಾಲಬವ್ವು ಕಂದು ಎನಗಂಜಿಕಿ ಬತ್ತದೆ
................. ........ ............. ........
ದೂಲ ಎನ್ನಬಿತ್ತು ನೀ ವೋಗಬ್ಯಾಲೇ ||೬||
........ ................. .... ....................

ಕೂಚಿಗಮ್ಮಿ ಕೂಬ್ಯಾಲೇ ನಂಗಂಗಚ್ಚತಾನೆ ಆವನೋಲೇ
... ............. ................ ........ಅಣಕಿಸುತ್ತಾನೆ ............ ...
ಪಾಚನ್ನ ವೆಂಕತಕಿತ್ತಪ್ಪ ಕನ್ನಡೀಲಿ
............ ..................... ............
ನಚುನಗಿ ನಗತಾನೇ ಕಲತಾಲೆ ||೭||
......................... ............

ಪದದ ಮೂರನೇ ನುಡಿಯಲ್ಲಿ 'ಬುಲ್ಲಿ ಬೆಲ್ಲ' ಎಂಬ ಮಾತು ಓದುಗರಿಗೆ ಅಶ್ಲೀಲವೆನಿಸಬಹುದು. ಕವಿಗಳ ಕಾಲದ ಭಾವನೆಯನ್ನು ಯೋಚಿಸಿದರೆ ಅಪಾರ್ಥವಾಗುವದಿಲ್ಲ. ಚಲಚ್ಚಿತ್ರಗಳ ಅಶ್ಲೀಲ ದೃಶ್ಯಗಳನ್ನೂ ನಾಗರಿಕ ಯುವತಿಯರ ಅಶ್ಲೀಲ ಉಡುಗೆಗಳನ್ನೂ ಸಹಿಸಿರುವ ಕಾಲವಿದು. ಅಶ್ಲೀಲ ಗ್ರಂಥಗಳ ಭಂಡಾರ ಬೆಳೆಯುವ ಕಾಲವಿದು. ಆದುದರಿಂದ ಪ್ರಸನ್ನರಾಯರ ಪ್ರಯೋಗವನ್ನು ಬಲು ದೂರ ಯೋಚಿಸುವ ಕಾರಣವಿರುವದಿಲ್ಲ. ಕಡೆಯ ನುಡಿಯಲ್ಲಿರುವ ಸ್ವಾರಸ್ಯವೆಂದರೆ—ನಿಲುಗನ್ನಡಿಯ ಎದುರಿಗೆ ಕುಳಿತು ಯಶೋದೆ ಕೃಷ್ಣನಿಗೆ ಸ್ತನ್ಯ ಕೊಡುತ್ತಿದ್ದಾಳೆ. ಕೃಷ್ಣನಿಗೆ ತಾನು ಮಾಡಿದಂತೆ ಮಾಡುತ್ತಿರುವ ಪ್ರತಿಬಿಂಬ ಕಾಣುತ್ತಿದೆ. ಅದನ್ನು ಅವನು ಅಣಕಿಸಿ ಪ್ರತಿಬಿಂಬದಲ್ಲಿನ ಕೃಷ್ಣ ತನ್ನನ್ನು ಅಣಕಮಾಡುತ್ತಾ

ನೆಂದು ದೂರುತ್ತಾನೆ. ಮತ್ತು ಆ ಕೃಷ್ಣನಿಗೆ ಸ್ತನ್ಯಪಾನಮಾಡಿಸಬೇಡೆಂದು ಹೇಳುತ್ತಾನೆ. ಮತ್ತೊಂದು ಸಮವೃತ್ತ ಸಮಶ್ಲೋಕಿಯಾದ ಗೋಪೀಗೀತವನ್ನು ಕನ್ನಡದಭಿಮಾನದಿಂದ ಪಾರಾಯಣ ಪರಾಯಣೆಯರಾದ ಸಹೋದರಿಯರ ಅನುಕೂಲತೆಗಾಗಿ ಕೆಳಗೆ ಬರೆದಿದೆ.

## ಗೋಪೀಗೀತಾ

ಜಯವ್ರಜಕ್ಕೆ ನೀ ಜನಿಸೆ ಅಧಿಕವು ಶ್ರಿಯಳವಾಸವು ಶಾಶ್ವತಿಲ್ಲಿಯು||
ಪ್ರಿಯಗೆ ಪ್ರಾಣವರ್ಪಿಸಿ ನೋಡವ। ಪ್ರಿಯೆರದೃಷ್ಟಿಗೇ
ಪ್ರಾಪ್ತಿಯಾಗದೇ ||೧||

ಸ್ವಜನ ವಿಸ್ಮಯಾಸ್ಮಿತದಲಳಿದೆಯೋ। ವ್ರಜದ
ದುಃಖವನೊದ್ದ ವೀರನೆ ||
ಭಜಿಪ ಕಿಂಕರೇರ್ಬಾಸಖಾಹರೇಂಬುಜ ಸಮಾಸ್ಯವಾಕ್ಷೀಗೆ
ತೋರ್ಪನೆ ||೨||

ಶರತಕಾಲದ ಸ್ವಬ್ಜಗರ್ಭದ ಸಿರಿಗೆ ಪೋಲುವಾಸ್ಯೇಕ್ಷೆಯೊಪ್ಪುವ
ಸುರತಸ್ವಾಮಿನೀಂ ಶುಲ್ಕದಾಸೇರಂ ವರದ ಕಾಯದೇ
ವಿಧಿಯದಾವುದೈ ||೩||

ವಿಷದ ನೀರ್ದೊರೆವ್ಯಾಳರಕ್ಷರಿಂ ವಿಷಮುಗಾಳಿ ಮಳೆ ವೈದ್ಯುತಾಗ್ನಿಯಿಂ
ವೃಷಭ ಮುಖ್ಯರಿಂ ವಿಶ್ವದುಃಖದಿಂ ವೃಷಭ ನಮ್ಮನು ರಕ್ಷಿಸಿದೆ ನೀ ||೪||

ಅಖಿಳ ಜೀವರಂತರ್ನಿಯಾಮಕ ಗೋಕುಲ ರಕ್ಷಕರ್ಗೆಂತೊ ಬಾಲಕ
ವಿಖನಸಃರ್ಚಿತ ಸರ್ವ ಗೋಪಿಕಾಸಖ ನೀ ಪುಟ್ಟಿದೇ ಸಾತ್ವವಂಶದಿ ||೫||

ವರವರಿಷ್ಣನೇ ವೃಷ್ಣಿಕಾಂತನೇ ಶರಣು ಹೊಕ್ಕರ ಸಂಸೃತೀಹರ
ನೆರೆಕರಾಬ್ಜವನಿಟ್ಟು ಶೀರ್ಷವಾ। ದರಿಸು ಶ್ರೀಕರ ಧರಿಸಿದಕರ ||೬||

ಪ್ರಣತ ಪ್ರಾಣಿಗಳ ಪಾಪಕರ್ಷಕಾ। ವಿನ ಬಳೀಲಿಪ್ಸ ವೈಷ್ಣವಾರ್ಚಿತ
ಫಣಿಯಪೆಡೇಲಿಹ ಪಾದಪದ್ಮವಸ್ತನಕೆ ಹೊಂದಿಸೈ ತಾಪವಾರಿಸೈ ||೭||

ಬುಧರಮೆಚ್ಚಿನ ಬುದ್ಧಿಕಾರಣ ಮಧುರ ಮಾತಿನಾಂಭೋಜನೇತ್ರನೆ
ತ್ವದೀಯ ಆಜ್ಞೆಯ ತಪ್ಪದಿಪ್ಪವರ್ಗಧರ ಸೋಮವ ಊಡುವೀರನೆ ||೮||

ನಿನಕಥಾಮೃತವು ನೀಚ-ಜೀವನಂ ಮುನಿಗಳರ್ಥವು ಮತ್ತೆ ಅಘಹರಂ
ಮನನ ಭವ್ಯವು ಮಹಾಭಾಗ್ಯವು ನೆನೆವ ಭಕ್ತರು ನಿತ್ಯದಾತರು ||೯||

ಪ್ರಿಯನೆಹಾಸವು ಪ್ರೇಮನೋಟವು ದಯೆಯಕ್ರೀಡೆಯು ಧ್ಯಾನಶೋಭೆಯು
ನಯರಹಸ್ಯವು ನಮ್ಮ ಮನವು ಬೆಯಿಸಿ ನೊಯಿಸುವ ಬುದ್ಧಿಕೈತವ ೧೦

ವ್ರಜವಬಿಟ್ಟು ಆವನ್ನು ಮೇಸುವಾಂಬುಜವ ಹೋಲುವಾ ಅಂಘ್ರಿಗೊತ್ತುವ
ರಜತೃಣಾಶ್ಮವಾಲೋಚಿಸಿ ಮನ ಭಜಿಸದ್ಯೆ ಸುಖ ಭೂಪತೇಸಖ ||೧೧||

ದನದ ಧೂಳಿಯಿಂದೊಪ್ಪುವಳಕದಿಂ ವನಜವಕ್ತ್ರವನೀಕ್ಷಿಸಿ ಮನವು
ನೆನೆಸಿ ಇಚ್ಛಿಪೆವು ನಿನ್ನರೂಪವ ಇನನ ಅಸ್ತದಿ ವೀರನಿತ್ಯದಿ ||೧೨||

ಭಕತರಿಚ್ಛಿಪ ಅಬ್ಜೇಜನರ್ಚಿಪ ಪೃಥಿವಿಭೂಷಿಪಾಪತ್ತು ವಾರಿಪ
ಸುಖಕೆ ಶ್ರೇಷ್ಠವಾ ಸತ್ಪದಾಬ್ಜವ ಸುಕುಚದಲ್ಲಿಡೈ ಸುವ್ಯಥೇ ಸುಡೈ ||೧೩||

ಸುರತಹುಟ್ಟುವ ಶೋಕವಟ್ಟುವ ಸ್ವರಿಪವಂಶವ ಸಂಧಿಸೊಪ್ಪುವ
ನರರರಾಗವನಟ್ಟೆ ಮರೆಸುವ ಅರಸ ನಿನ್ನಧರಾಂಕಿತಸುಧಾ ||೧೪||

ಹಗಲುಚರಿಸುವಿ ಹೋಗಿಯಾಟವಿ ಯುಗಕೆ ವೆಗ್ಗಳ ಒಂದು ತೃಟಿಯುದು
ಮೊಗದಸಿರಿ ಗುರುಳ್ಮೆಚ್ಚಿ ನೋಡಲು ಮುಗುಳೆ ಜಡದೊಳು
ಮೋಹಿಪೆವೀಗಳು ||೧೫||

ಎಳೆಯರಿನಿಯರ ಇಷ್ಟರಾಪ್ತರ ಬಲವಮೀರುತ ಬಂದೆವಚ್ಯುತ
ಲಲಿತಗೀತದಾಲಾಪ ಮೋಹದಾಬಲೆರ ನೈಶಕೆ ಬಿಟ್ಟೆ ಕುಹಕ ||೧೬||

ಮುಗುಳುನಗೆಮೊಗ ಮೋಹನೋಟವು ಮುಗುಳುಗಣಿಯುನಮಿಾಟುವಾಘನ
ಮಿಗಿಲು ನಿಮ್ಮದೆ ಮಾಟಕಂಡೆದೆ ಬಿಗಿದು ಅಪ್ಪುವೆಂಬೆಸೆವ ಮೋಹವು ೧೭

ಆಕಳಕಾವರಾಮಂಗಳಾಹರ ಪ್ರಕಟ ನಿನ್ನದು ಪಾಪಪೋಪುದು
ಸ್ವಕೀಯರಾರ್ತಹಾ ಸರ್ವರೋಗಹಾ ನಿಖಿಳರಾಶೆಯಾ ನೀ ಪೂರೈಸಯ್ಯಾ||

ಪ್ರಸನ್ನ ವೆಂಕಟ ಪಶುಪ್ರಪಾಲಕ ಅಸೆಯಗ್ಗೀತವ ಅರಿತು ಮಾಧವ
ಪ್ರಸನ್ನವಾಗುವಾಪತ್ತು ಹರಿಸುವ ಶಶಿಮುಖಿಯರೊಳು ಸ್ನೇಹತಪ್ತರ ೧೯

ಪ್ರಸನ್ನರಾಯರು ದಶಮಸ್ಕಂಧ ಪೂರ್ವಾರ್ಧದ ಕೊನೆಯಲ್ಲಿ ಎಷ್ಟೋ ಕಳಕಳಿಯಿಂದ 'ಅಮ್ಮಮ್ಮ ಆಶ್ಚರಿಯ ವಿಚಿತ್ರ ಚರಿತ್ರ' ಎಂಬ ಹನ್ನೊಂದು ನುಡಿಯ ಪದದಲ್ಲಿ.—

ಸಂಸೃತಿಯ ಭಯವೇಕೆ ದ್ವೇಷಿಗಳಾತಂಕ
ಲೇಶಲೇಶವಿಲ್ಲ ಸ್ವಪ್ನದಲ್ಲೂ।
ತೋಷವೇ ವೆಗ್ಗಳ। ಕೃಷ್ಣ ಸಂಭಾಷಣೆ। ಸಹ। ವಾಸ
ಅಪವರ್ಗವಾಸ ॥೮॥

ಅನಂತ ಗುಣನಾಮಪೂರ್ಣನು ಮುಕ್ತೇಶ
ತಾ ನಾಲಿಗೆಯಲಿ ನಿಂತು ನುಡಿಸಿದನು
ಪ್ರಾಣೇಶಪ್ರೇರಣೆಯ ಪ್ರಾಕೃತದ ಪದವಿದು
ಜ್ಞಾನಿಗಳಿಗೆ ನಿತ್ಯ ಸಮ್ಮತವೂ ಸಮ್ಮತವೂ ॥೯॥

ಈ ದಶಮಸ್ಕಂಧ ಭಾಗವತ ಪೂರ್ವಾರ್ಧವ
ಮೇದಿನಿಯಲಿ ಹೇಳಿ ಕೇಳಿದರ್ಗೆ
ಯಾದವಕುಲರತ್ನ ಸರ್ವ ಪುರುಷಾರ್ಥವ
ಸಾಧಿಸಿಕೊಡುವ ಸತ್ಯವು ನಿತ್ಯವೂ ॥೧೦॥

ಪ್ರಸನ್ನಚಾರಿತ್ರ ಪ್ರಸನ್ನಶೋಭನವಕ್ತ್ರ
ಪ್ರಸನ್ನಾಪಾಂಗನೇತ್ರ ಪ್ರಸನ್ನಗಾತ್ರ
ಪ್ರಸನ್ನ ವೆಂಕಟಕೃಷ್ಣ ಪ್ರಸನ್ನನಾದರೆ ನಿತ್ಯ
ಪ್ರಸನ್ನತರೋಕ್ತಿ ಬಾಹವು ಭಕ್ತಜನಕೆ ॥೧೧॥

ಎಂಬದಾಗಿ ಫಲಸ್ತುತಿ ಮಾಡಿದ್ದಾರೆ.

ಒಂದು ಕಥೆಯನ್ನನುಸರಿಸಿ ಬರೆಯುವ ಕವಿತೆಗಿಂತ ಬಿಡಿಯಾದ ಸ್ತೋತ್ರಪದಗಳೂ ಅನುಭವದ ಮಾತುಗಳೂ ಹೇಳಿ ಕೇಳುವದಕ್ಕೆ ಬಲು ರಮ್ಯವಾಗಿರುತ್ತವೆ. ಆ ಪದಗಳ ಮಾದರಿಯೆಂದರೆ—

ಕಾಂಬೋದಿ — ಝಂಪೆತಾಳ

ಸತತಕಲ್ಯಾಣ ಅಚ್ಯುತಭಟರಿಂಗೆ
ರತಿ ಪತಿ ಪಿತನಂಘ್ರಿರತ ಮಹಾತ್ಮರಿಂಗೆ ॥ಪ॥

ಅರಿಗಳೇ ಸಖರಕ್ಕು ಅತಿ ವಿಷಾಮೃತವಕ್ಕು
ಉರಗ ಪೂವಮಾಲೆಯಕ್ಕು ಉರಿತಣ್ಣಗಕ್ಕು
ಶರಧಿ ಗೋಷ್ಪದವಕ್ಕು ಶರಘಾತ ಬೆಂಡಕ್ಕು
ನರಹರಿಯ ನಾಮವನು ನಂಬಿ ಭಜಿಪರಿಗೆ ||೧||

ಆಧಿವ್ಯಾಧಿಗಳಿಲ್ಲ ಅಶುಭ ವಾರ್ತೆಗಳಿಲ್ಲ
ಕ್ರೋಧನೃಪ ಭಯವಿಲ್ಲ ಕಾಕುಮತಿಯಿಲ್ಲ
ಖೇದವುನಕಿಲ್ಲೆಂದು ಖಿನ್ನತೆಯು ಮುಖಕಿಲ್ಲ
ಶ್ರೀಧವನ ನವಭಕುತಿ ಶೀಲಜೀವರಿಗೆ ||೨||

ಪಾಪತಾಪಗಳೋಟ ಪರಿದು ಬಹ ಎಡರ್ಗೋಟ
ಆಪತ್ತುಗಳಿಗೋಟ ಆಲಸ್ಯಕೋಟ
ಕೋಪದಾರಿದ್ರ್ಯತೆಗೋಟ ಕಲಿವ್ಯಸನಮದಕೋಟ
ಶ್ರೀ ಪ್ರಸನ್ವೇಂಕಟನನಂಬಿ ಭಜಿಪರಿಗೆ ||೩||

ಪದದಲ್ಲಿರುವ ಮಾತುಗಳೆಲ್ಲಾ ಅವರ ಅನುಭವದ ನಿರೂಪಣೆಯಾಗಿದೆ. ಒಂದೊಂದರವಿವರಕ್ಕೂ ಬಲವತ್ತರ ಪ್ರಮಾಣಗಳು ಸಿಗದ ಚಿಕ್ಕ ಕಥೆಗಳಿವೆ. ಆ ವಿಸ್ತಾರಕ್ಕೆ ಗ್ರಂಥ ವಿಸ್ತಾರದ ಭಯವು ಬಾಧಕವಾಗಿದೆ.

ರಾಯರ ಜೀವನದಲ್ಲಿ ಬಹುಮುಖ ಜನಿತವಾದ ಹೇಳಿಕೆಯೊಂದುಂಟು ಅದೇನೆಂದರೆ ಅವರು ಅಡವಿಯ ಹುಲಿಗಳೊಡನೆ ಆಟವಾಡುತ್ತಿದ್ದರೆಂಬುವದು. ಈ ಬಗೆಯ ಹೇಳಿಕೆಗಳು ನಮ್ಮ ಪುರಾಣಗಳಲ್ಲೂ ಮಹಾ ಪುರುಷರ ವಿಜಯ ಚರಿತ್ರೆಗಳಲ್ಲೂ ಹೇಳಲಸಾಧ್ಯವಾದಷ್ಟು ದೊರೆಯುತ್ತವೆ. ಸಮದೃಷ್ಟಿಯುಳ್ಳ ಮಹಾಪುರುಷರಿಗೆ ಅಸಾಧ್ಯಕಾರ್ಯಗಳೊಂದೂ ಇಲ್ಲ. ಮಹರ್ಷಿಗಳ ಪುಣ್ಯಾಶ್ರಮದಲ್ಲಿ ಮೃಗಜಾತಿ ಪಕ್ಷಿಜಾತಿಗಳು ಪರಸ್ಪರ ವೈರಭಾವತೊರೆದು ವಿಹರಿಸುತ್ತಿದ್ದವೆಂದು ಎಷ್ಟೋ ಗ್ರಂಥಗಳು ಸಾರುತ್ತಿವೆ. ಮನೆಗಳಲ್ಲಿ ಪಳಗಿದ ಕ್ರೂರ ಸ್ವಭಾವದ ಪಶುಗಳು ತನ್ನ ಯಜಮಾನನನ್ನು ಕಂಡೊಡನೆ ವಿಧೇಯತೆಯಿಂದ ಆಡುವದನ್ನು ನೋಡಲು ಸಾಧ್ಯವಿದೆ.

ಪ್ರಸನ್ನರಾಯರು ಊರಿಂದೂರಿಗೆ ಹೋಗುವಾಗ ಶಿಷ್ಯರನ್ನು ಮುಂದೆ ಕಳುಹಿಸಿ, ದೇವರಪೆಟ್ಟಿಗೆ ಪೂಜಾಸಾಮಾನುಗಳನ್ನು ಸಾಗಿಸುವ ಕುದುರೆ

ಯೊಂದನ್ನು ಮುಂದೆ ಬಿಟ್ಟುಕೊಂಡು, ತಾವೊಂದು ಕುದುರೆಯಮೇಲೆ ಕುಳಿತು ಪ್ರಯಾಣಮಾಡುತ್ತಿದ್ದರಂತೆ! ಗುಡ್ಡಗಾಡಿನಲ್ಲಿ ಹುಲಿಯನ್ನು ಹುಡುಕಿ ಅದರ ಕಿವಿಗಳನ್ನು ಹಿಡಿದು ದರದರನೆ ಎಳೆತಂದು ದೇವರ ಕಂಟಳೆಯನ್ನು ಹೊರಿಸಿ ವೈಛಪ್ಪರಿಸಿ ನಡೆಯೆಂದು ಚಾಕರಿಮಾಡಿಸುತ್ತಿದ್ದರಂತೆ! ಹುಲಿಯ ಎಡಬಲಗಳಲ್ಲಿ ತಮ್ಮ ಎರಡೂ ಕುದುರೆಗಳನ್ನು ನಡೆಸುತ್ತಿದ್ದರಂತೆ! ರಾಯರು ವೈಛಪ್ಪರಿಸಿದೊಡನೆ ಹುಲಿಯು ಸಾಧು ಎತ್ತಿನಂತೆ ಅವರನ್ನು ಹಿಂಬಾಲಿಸುತ್ತಿತ್ತಂತೆ! ಗ್ರಾಮದ ಅಗಸಿಯು ಬಳಿಗೆ ಬಂದೊಡನೆ "ಹುಲಿರಾಯ! ನಿನ್ನನೋಡಿ ಮಂದಿ ಗಾಬರಿಯಾದಾರು; ಇನ್ನು ಮೇಲೆ ಗೋಹತ್ಯಮಾಡಬೇಡ; ನಡಿ ಅಡವಿಗೆ;" ಎಂದು ವೈಮೇಲೆ ಕೈಯಾಡಿಸಿ ಅದರ ಹಣೆಗೆ ಅಂಗಾರವನ್ನು ಹಚ್ಚಿ ಕಳುಹಿಸುತ್ತಿದ್ದರಂತೆ! ಆ ಹುಲಿಯು ಮತ್ತೆ ಗೋಜಾತಿಯ ತಂಟೆಗೆ ಹೋಗುತ್ತಿರಲಿಲ್ಲವಂತೆ! ಇದನ್ನರಿತು ಹಳ್ಳಿಯ ಜನರು ರಾಯರನ್ನು ತಮ್ಮ ತಮ್ಮ ಗ್ರಾಮಗಳಿಗೆ ಕರೆದುಕೊಂಡು ಹೋಗುವ ವ್ಯಾಜದಲ್ಲಿ ಅಡವಿಯ ಹುಲಿಗಳ ಬಾಧೆ ತಮ್ಮ ದನಗಳಿಗಾಗದಂತೆ ಮಾಡಿಕೊಳ್ಳುತ್ತಿದ್ದರಂತೆ! ರಾಯರು ಓಡಾಡಿದ ಅಡವಿ; ನಮ್ಮ ದನಗಳನ್ನು ಹುಲಿ ಮುರಿಯಲಾರದು; ರಾಯರ ಆಣೆಯಿದೆ; ಎಂಬ ಮಾತು ಆ ಕಾಲದ ಹಳ್ಳಿಗರ ಮನೆ ಮಾತಾಗಿತ್ತಂತೆ! ಹುಲಿಗೆ ಅಂಗಾರ ಹಚ್ಚುತ್ತಿದ್ದ ಕಾರಣ ರಾಯರಿಗೆ ಅಂಗಾರದ ಆಚಾರ್ರು ಎಂದು ಜನರು ಹೆಸರಿಟ್ಟಿದ್ದರಂತೆ!

ತುಲಸೀಕೇರಿಯೆಂಬ ಹಳ್ಳಿಯಲ್ಲಿ ರಾಯರ ಕಾಲದಿಂದ ಅನುಭವಿಸುತ್ತಿದ್ದ ಹೊಲವು ಈಗಲೂ ವಂಶೀಕರ ಅನುಭವದಲ್ಲಿದೆ. ಆ ಹೊಲಕ್ಕೆ "ಕರಿಬಾಯಿ ಆಚಾರ್ರ ಹೊಲ" ಎಂಬ ಹೆಸರಿದೆ. ಕಾರಣವೇನೆಂದು ವಿಚಾರಿಸಿದರೆ:—ಪ್ರಸನ್ನರಾಯರ ಕಾಲದಲ್ಲಿ ಆ ಹೊಲವನ್ನು ಮಾಡುತ್ತಿದ್ದ ರೈತನು ಲಾವಣಿಯನ್ನು ಕೊಡದೆ ಹೊಲ ಬೆಳೆಯಲೇ ಇಲ್ಲವೆಂದು ಅನೃತವಾಡಿದನಂತೆ! ರಾಯರು—"ಲಾವಣಿಕೊಡಲಾರೆಯಾ? ಹೊಲ ಬೆಳೆಯಲಿಲ್ಲವೇ? ಹಾಗಿದ್ದರೆ ಹಾಗೇ ಆಗಲಿ ಹೋಗು" ಎಂದರಂತೆ! ಮುಂದೆ ಮೂರು ನಾಲ್ಕು ವರ್ಷಗಳು ಸುತ್ತಮುತ್ತಣ ಹೊಲಗಳು ಚೆನ್ನಾಗಿ ಬೆಳೆದು ಆ ಹೊಲದಲ್ಲಿ ಏನೂ ಬೆಳೆಯಲಿಲ್ಲವಂತೆ! ಲಾವಣಿಯ ಮಾತಿರಲಿ, ರೈತನಿಗೆ ಉಣ್ಣುವುದಕ್ಕೆ ಜೋಳದ ಕಾಳಿಗೇ ಅಭಾವವಾಯಿತಂತೆ! ಕಾಡೆಲ್ಲಾ ಬೆಳೆದು ಆ

ಒಂದು ಹೊಲ ಬೆಳೆಯಲಿಲ್ಲವೆಂದು ಲಾವಣಿ ಕೊಡದಿರುವುದು ಸಾಧ್ಯವಾಗಲಿಲ್ಲವಂತೆ! ರೈತನು ಕಂಗೆಟ್ಟು ರಾಯರಿಗೆ ಶರಣಾಗತನಾಗಿ ಒಳ್ಳೆ ಶಬ್ದ ನುಡಿಯಿರೆಂದು ಕೇಳಿಕೊಂಡನಂತೆ! ರಾಯರು ಆಗಲೂ 'ಹಾಗೇ ಹಾಗಲಿ' ಎಂದರಂತೆ! ರೈತನ ಕಷ್ಟ ಪರಿಹಾರವಾಗಿ ನಷ್ಟ ಮುಟ್ಟುವತನಕ ರಾಯರು ಆ ಹೊಲದ ಲಾವಣಿಯನ್ನು ಕೇಳಲಿಲ್ಲವಂತೆ!

ಪ್ರಸನ್ನರಾಯರು ಭಾಗವತದ ಭಾಷಾಂತರ ಮಾಡಿದರು, ಕೆಲವು ಬಿಡಿ ಪದಗಳನ್ನು ಬರೆದರು ಎಂದಿಷ್ಟೇ ಹೇಳುವಂತಿಲ್ಲ. ಹಳ್ಳಿ ಜನರು ಹೇಳುವ ರಾಗದಲ್ಲಿ "ಪರಸನ್ನವೆಂಕಟ, ಪರಸನ್ನಕೃಷ್ಣ," ಎಂಬ ಮುದ್ರಿಕೆ ಹಾಕಿ ಸುವ್ವಾಲೆ ಜೋಗುಳಗಳನ್ನೂ ಬರೆದಿದ್ದಾರೆ. ಅದರಲ್ಲಿ ಹಳ್ಳಿಗರ ಜೀವನವನ್ನು ತಿಳಿಸಿದ್ದಾರೆ ಮತ್ತೆ ತಮ್ಮ ಬಾಲ್ಯದ ಅನುಭವ, ಅತ್ತಿಗೆಯ ಅಧಿಕಾರ, ತಾವು ತಿರುಪತಿಗೆ ಹೋದ ಕಥೆ, ಇವೆಲ್ಲವನ್ನೂ ಮನಮರುಗುವ ರೀತಿಯಲ್ಲಿ ಹಾಡಿದ್ದಾರೆ.

ಲೋಕದಲ್ಲಿ ಯಾರ ದೊಡ್ಡಸ್ತಿಕೆಯನ್ನಾಗಲಿ ಯಾರ ಉಪಕಾರವನ್ನಾಗಲಿ ಮತ್ತೆ ಯಾವದೋ ದೇಶಕಾಲಗಳಲ್ಲಿ ಅಳೆದರೆ ಅರ್ಥವಾಗುವುದಿಲ್ಲ; ಜನರಿಗೆ ಮಹತ್ವವೆನಿಸುವುದಿಲ್ಲ. ಪ್ರಸನ್ನರಾಯರಿದ್ದ ಕಾಲ, ಆ ಕಾಲದಲ್ಲಿದ್ದ ಪ್ರಯಾಣ ಸೌಕರ್ಯ, ಆ ಕಾಲದ ಪ್ರಭುತ್ವ, ಆ ಕಾಲದ ಜನರ ಭಾವನೆ, ಈ ದೃಷ್ಟಿಯಿಂದ ನೋಡಿದರೆ ಪ್ರಸನ್ನರಾಯರೇ ಏಕೆ, ಎಲ್ಲ ಹರಿದಾಸರೂ ಈ ಕಾಲದ ಸಕಲ ಸೌಕರ್ಯಗಳ ಮಧ್ಯದಲ್ಲಿ ಯಾವ ಮಹಾಪುರುಷನೂ ಮಾಡದ ಮಹಾಕಾರ್ಯಗಳನ್ನೇ ಮಾಡಿ ತೋರಿಸಿದ್ದಾರೆ. ರಾಜಕಾರಣದಲ್ಲಿ ಪ್ರವೇಶಿಸಿ ಸ್ವಾರ್ಥತ್ಯಾಗಮಾಡಿ ದೇಶಸೇವೆ ಮಾಡುವ ಜನರು ಬಲು ಸಂಖ್ಯೆಯಿಂದ ಒಂದೊಂದು ಶತಮಾನದಲ್ಲೂ ಬರಬಹುದು. ಆದೇ ಧರ್ಮ ಸುಧಾರಣೆಮಾಡಿ ಇಹಪರಸಾಧನೆ ಮಾಡಿ ಕೊಡುವ ಮಹಾಪುರುಷರು ಬರುವದು ಬಲು ದುರ್ಲಭ. ತಮ್ಮ ಪೂರ್ತಿ ಉದ್ಧಾರವಾಗುವ ಜನರಿಗಿಂತ ತಮ್ಮೊಡನೆ ಜನಜಾತಿಯನ್ನೇ ಉದ್ಧರಿಸುವ ಜನರು ಬಲು ದೊಡ್ಡವರು. ರಾಜಕಾರಣ ಧರ್ಮ ಕಾರಣಗಳೆರಡರಲ್ಲೂ ಪ್ರವೇಶಿಸಿ ದೇಶೋದ್ಧಾರಮಾಡುವವರು ಒಂದು ಸಾವಿರ ವರ್ಷಕ್ಕೆ ಒಬ್ಬರೂ

ಬರುತ್ತಿಲ್ಲ. ಅಂಥವರೆಂದರೆ ವಿದ್ಯಾರಣ್ಯರು, ವ್ಯಾಸರಾಯರು, ಸಮರ್ಥ ರಾಮದಾಸರು. ಈ ಮೂವರನಂತರ ನಾಲ್ಕನೆಯವರಿನ್ನೂ ಬರಲಿಲ್ಲ.

ಪ್ರಸನ್ನರಾಯರು ಮಾತ್ರ ಆ ವಂಶದಲ್ಲಿ ಮಹಾಪುರುಷರಾದರು; ದೇವರನ್ನು ಕಂಡರು; ಎಂಬ ನ್ಯೂನತೆಯಾಗಲಿಲ್ಲ. ಅವರ ಅನುಗ್ರಹ ಬಲದಿಂದ ಅವರ ಸಂತತಿಯಲ್ಲಿ ಮೂರು ತಲೆಗಳತನಕ ಅವರಿಗೆ ಸಮಾನರೇ ಜನ್ಮತಾಳಿದರು. ಅವರಷ್ಟೇ ಗೌರವವನ್ನು ಪಡೆದರು. ರಾಯರ ಮೊಮ್ಮಕ್ಕಳು ಕಾಖಂಡಿಕಿ ಅಣ್ಣಯ್ಯಾಚಾರ್ಯರೆಂಬುವರು ಐವತ್ತೇ ವರ್ಷಗಳ ಹಿಂದೆ ಉತ್ತರ ಕರ್ನಾಟಕದಲ್ಲೆಲ್ಲಾ ಮಹಾ ಪ್ರಖ್ಯಾತಿಯನ್ನು ಪಡೆದರು. ಅವರ ವಿಷಯದಲ್ಲಿ ಮಂಗಳವೇಡೆ ವಿಠಲರಾಯರೆಂಬ ಬ್ರಿಟಿಷ್ ಸರ್ಕಾರದ ಡೆಪ್ಯುಟಿ ಕಲೆಕ್ಟರು ಬಾಗೇವಾಡಿಯಲ್ಲಿದ್ದಾಗ ಬರೆದಿಟ್ಟ ಮಾತು ಆಶ್ಚರ್ಯ ಜನಕವಾಗಿದೆ. ಜಯತೀರ್ಥರಂಥಾ (ಟೀಕಾಚಾರ್ಯರು) ಮಹಾಪುರುಷರು ಜನ್ಮವೆತ್ತಿದ ಸ್ಥಳ ಮಂಗಳವೇಡೆ. ಮಂಗಳವೇಡೆಯು ಪಟವರ್ಧನ ಸಂಸ್ಥಾನಿಕರಿಗೆ ಸೇರಿದ ಒಂದು ತಾಲ್ಲೂಕಿರುವ ಊರು. ವಿಠಲರಾಯರಿಗೆ ಧರ್ಮದಲ್ಲಿ ಬಲು ಶ್ರದ್ಧೆ. ಕಮಿಷನರಾದರೂ ರಾಯರ ಸಮಯ ನೋಡಿ ಮಾತಾಡಬೇಕೆಂಬಷ್ಟು ಗೌರವವಿಟ್ಟಿದ್ದನಂತೆ! ರಾಯರಿಗೆ ಸ್ವಪ್ನದಲ್ಲಿ ಯಾವ ಸಂಬಂಧವಿಲ್ಲದಿದ್ದರೂ "ನಿನ್ನ ಬಳಿಗೆ ದೂರ್ವಾಸರು ಬರುವರು, ಅವರನ್ನು ಸತ್ಕರಿಸು, ಅವರಿಂದ ಜ್ಞಾನಸಂಪಾದಿಸು'' ಎಂಬ ಸೂಚನೆಯಾಯಿತಂತೆ! ರಾಯರು ಈ ಕಲಿಗಾಲದಲ್ಲಿ ದೂರ್ವಾಸರೆಂದರೇನು? ನನ್ನಂಥವನ ಮನೆಗೆ ಬರುವದೆಂದರೇನು? ಯಾರಿಗೆ ಯಾವ ಸಂಬಂಧ? ಎಂದು ಅನುಮಾನಿಸಿದರಂತೆ! ಮಾರನೇ ರಾತ್ರಿ ಮತ್ತೆ,ಬಂದವರನ್ನೇ ದೂರ್ವಾಸರೆಂದು ತಿಳಿ, ಆದರಿಸು'' ಎಂದು ಎಚ್ಚರ ಕೊಟ್ಟಂತಾಯಿತಂತೆ! ವಿಠಲರಾಯರು ಸ್ವಪ್ನಸೂಚನೆಯಂತೆ ಮನೆಯನ್ನು ಶೃಂಗರಿಸಿ, ಬೇಕಾದ ಪಕ್ವಾನ್ನಗಳನ್ನು ಮಾಡಿಸಿ ಹಾದಿನೋಡುತ್ತ ಕುಳಿತರಂತೆ! ಅಪರಾಹ್ನದಲ್ಲಿ ಮೇಲೆ ಹೇಳಿದ ಆಚಾರ್ಯರು ರಾಯರ ಮನೆಗೆ ಬಂದರಂತೆ! ರಾಯರು ಅವರ ಸತ್ಕಾರಮಾಡಿ ಏಕಾಂತದಲ್ಲಿ ಸ್ವಪ್ನವಾರ್ತೆಯನ್ನು ತಿಳಿಸಿದರಂತೆ! ಆಚಾರ್ಯರು ನಮ್ಮ ಸ್ವರೂಪವ್ಯಕ್ತವಾಯಿತು;ಹೆಚ್ಚುಕಾಲ ಈ ದೇಹದಲ್ಲಿರುವದಿಲ್ಲವೆಂದು ಹೇಳಿದರಂತೆ!

ರಾಯರಿಗೆ ತಾವು ಹೇಳಿದ್ದು ಅನುಚಿತವಾಯಿತೆಂಬ ಪರಿತಾಪವಾಯಿತಂತೆ! ಹೇಳಿದಂತೆ ನಡೆಯುವದು ನಡೆದುಬಿಟ್ಟಿತಂತೆ!

ವಿಶಾಲವಾದ ಪ್ರಪಂಚದಲ್ಲಿ ಬಲು ಪುಣ್ಯಜೀವಿಗಳು ಎಲ್ಲೆಲ್ಲಿಯೂ ಜನ್ಮತಾಳಿ ಮಾನವಬುದ್ಧಿಗೆ ನಿಲುಕದ ಸಿಲುಕದ ಕಾರ್ಯಗಳನ್ನು ಮಾಡಿ ತೋರಿಸಿ, ಸಾಮಾನ್ಯರಂತೆ ಕಾಣಿಸಿ, ಸಂದೇಹಗಳಿಗೇ ಗುರಿಮಾಡುವರು. ವಿಚಾರಪರರು ಅರ್ಥಮಾಡಿಕೊಳ್ಳುವರು. ಅವಿಚಾರಿಗಳು ಮದಿಸಿ ಮುಗ್ಧರಾಗಿ ದುರ್ವಾದಮಾಡುವರು. ಇದು ಯಾವಾಗಲೂ ಪ್ರಪಂಚದ ಸ್ವಭಾವ.

ಪ್ರಸನ್ನರಾಯರು ಅಂತ್ಯಕಾಲದಲ್ಲಿ ಬಾದಾಮಿಯಲ್ಲಿದ್ದರೆಂದು ಗೊತ್ತಾಗುತ್ತದೆ. ಗುಡ್ಡದ ಕೆಳಗೆ ಕಲ್ಯಾಣಿಯೊಂದರ ದಡದಲ್ಲಿರುವ ಕಟ್ಟೆಯನ್ನು ಪ್ರಸನ್ನರಾಯರ ಕಟ್ಟೆಯೆಂದು ಕರೆಯುತ್ತಾರೆ. ಆ ಕಟ್ಟೆಯಿರುವ ಜಾಗವು ಪ್ರಸನ್ನರು ನಿರ್ಮಾಣಮಾಡಿದ ಜಾಗವಂತೆ!



# ಗಿರಿಯಮ್ಮನವರು

ಹೆಳವನ ಕಟ್ಟೆಯ ಗಿರಿಯಮ್ಮನವರ ಹೆಸರು ಉತ್ತರ ಕರ್ನಾಟಕದ ಹರಿಭಕ್ತಪಂಥಿಗಳಿಗೆ ಮನೆಯಮಾತು. ಗಂಡಸರಿಗಿಂತ ಹೆಂಗಸರಿಗೆ ಗಿರಿಯಮ್ಮನು ಮನೆಯದೇವರು. ಸ್ತ್ರೀಜಾತಿಯಲ್ಲಿ ಜನಿಸಿದ ಕಾರಣದಿಂದಾಗಲಿ, ಆಕೆಯ ಹಾಡುಗಳನ್ನು ಹಾಡುವ ಗೌರವದಿಂದಾಗಲಿ, ಎರಡು ಶತಮಾನಗಳಾದರೂ ಗಿರಿಯಮ್ಮನ ಹೆಸರು ಮರೆತಿಲ್ಲ. ಗಂಡಸರ ಜಾತಿಗೆ ಪುರಂದರದಾಸರ ಪದಗಳಾದರೆ ಹೆಂಗಸರ ಜಾತಿಗೆ ಗಿರಿಯಮ್ಮನ ಪದಗಳಿವೆಯೆಂಬ ಅಭಿಮಾನವಳಿದಿಲ್ಲ. ಗಿರಿಯಮ್ಮನ ಚಂದ್ರಹಾಸ ಕಾಲೀಯಮರ್ದನ ಕಥೆಗಳಿಂದ ಏಕಾದಶೀ ಜಾಗರಮಾಡುವ ಸ್ತ್ರೀಯರು ಧಾರ್ವಾಡದೇಶದಲ್ಲಿ ಇನ್ನೂ ಕೆಲವರಿದ್ದಾರೆ. ಮೈಸೂರಿನಲ್ಲಾದರೂ ಇಪ್ಪತ್ತೈದು ವರ್ಷಗಳ ಹಿಂದೆ ತುಲಾಸ್ನಾನ ಮಾಘಸ್ನಾನನಿಮಿತ್ತ ಹೋಗಿಬರುವ ಮೂರು ಹರಿದಾರಿಯುದ್ದಕ್ಕೂ ಸ್ತ್ರೀಯರ ಮಂಜುಳಧ್ವನಿಯಿಂದ ರಂಜಿತವಾದ ಗಿರಿಯಮ್ಮನ ಹಾಡುಗಳು ಕೇಳಿಬರುತ್ತಿದ್ದವು. ರಾಣೀಬಿನ್ನೂರು ಹರಿಹರ ಪ್ರಾಂತ್ಯಗಳಲ್ಲಿ ಗಿರಿಯಮ್ಮನನ್ನು ನೆನೆಸುವ ಜನರು ಬಹಳ. ಕಾರಣವೇನೆಂದರೆ ಗಿರಿಯಮ್ಮನ ಜನ್ಮಭೂಮಿ ರಾಣೀಬಿನ್ನೂರು.

ಗಿರಿಯಮ್ಮನ ತಂದೆಯ ಹೆಸರು ಭಿಷ್ಟಪ್ಪ. ಅಮ್ಮನ ಲಗ್ನವಾದದ್ದು ಮಲೇಬಿನ್ನೂರು (ಹರಿಹರ ತಾಲ್ಲೂಕು) ಶಾನುಭೋಗ ತಿಪ್ಪರಸನೊಡನೆ.

ಜನ್ಮಾಂತರ ಸಂಸ್ಕಾರಬಲದಿಂದ ಗಿರಿಯಮ್ಮನು ಬಾಲ್ಯಪ್ರಭೃತಿ ದೇವೋನ್ಮಾದಿಯಂತಿದ್ದಳು. ಲಗ್ನವಾಗುತ್ತಲೇ ಗಿರಿಯಮ್ಮನಿಗೆ ಗಂಡನ ಮನೆಯ ವಾಸವಾಯಿತು. ಜನರ ಜನ್ಮಾಂತರಗಳು ಆಗುಹೋಗುಗಳನ್ನು ಹೇಳುವದರಿಂದ ಬಾಲಕಿಯಲ್ಲಿ ಬಹಳ ಗೌರವಹುಟ್ಟಿತು. ಬಂಧನಕ್ಕೆ ಮಾತ್ರವಲ್ಲದೆ ಗಿರಿಯಮ್ಮನ ವಿವಾಹವು ಸಂಸಾರಕ್ಕಾಗಲಿಲ್ಲ. ಶರೀರದಲ್ಲಿ ಶಂಖ ಚಕ್ರ ಚಿನ್ಹೆಗಳು ಬಹುವಾಗಿದ್ದುದನ್ನು ಕಂಡ ಸ್ತ್ರೀಯರು ಈಕೆಯನ್ನು ರಾಧಿಕೆಯೆಂದು ಭಾವಿಸಿದರು. ಈಕೆ ಯೆತ್ತಿಳಿಸಿದ ಮಕ್ಕಳು ಆಯು

ಷ್ಮಂತರಾಗುವರೆಂದು ಬಗೆದರು. ಉತ್ತರದೇಶದ ಮೀರಾಬಾಯಿ ಅಹಲ್ಯಾ ಬಾಯಿಯರ ಹೆಸರನ್ನೂ ಗಿರಿಯಮ್ಮನಿಗಿಟ್ಟು ಸಂತುಷ್ಟರಾದರು. ಅಳುವ ಮಕ್ಕಳು ಗಿರಿಯಮ್ಮನನ್ನು ಕಂಡು ಕಿಲಿ ಕಿಲಿ ನಗಬೇಕು; ಕರಸ್ಪರ್ಶವಾ ದರೆ ಜ್ವರ ಪರಿಹಾರವಾಗಬೇಕು; ಹೀಗೆಲ್ಲಾ ಆದರೆ ಈಕೆಯನ್ನು ದೇವತೆ ಯೆಂದು ಕರೆಯದವರ್‍ಯಾರು? ಕರೆದರೆ ತಪ್ಪೇನು?

ಕಣಿ ಕೇಳುವ ಜನರು ತಂದೊಪ್ಪಿಸುವ ಕಾಣಿಕೆಯಿಂದ ಸುಖಜೀವನ ವಾಗುತ್ತಿದ್ದುದರಿಂದ ಗಿರಿಯಮ್ಮನ ಮಾವನಿಗೆ ಸೊಸೆಯಲ್ಲಿ ಬಹು ಪ್ರೀತಿ. ಅತ್ತೆಗಂತು ಎತುವ ಕೂಸು. ವಾರಗಿತ್ತಿಯರೊಡನೆ ಮನೆ ಕೆಲಸಗಳಿಗೆ ಕೈಹಾಕಿದರೆ ಮಾವನು ಮಾಡಗೊಡನು, ಅತ್ತೆಯು ಹೋಗಗೊಡಳು. ತಂದೆತಾಯಿಗಳು ಹೆಂಡತಿಯನ್ನು ಗೌರವಿಸುವುದರಿಂದಲೂ, ಗಿರಿಯಮ್ಮನ ಗಂಡ ಇವ ತಿಪ್ಪರಸ ಎಂದು ಜನರು ಮರ್ಯಾದೆ ಮಾಡುವುದರಿಂದಲೂ, ತಿಪ್ಪರಸನು ವಿವಾಹದಿಂದ ಸಂತುಷ್ಟನಾದನು.

ನಿಷೇಕ ಕಾಲ ಪ್ರಾಪ್ತವಾಗಲು ಪುರೋಹಿತರು ಪದ್ಧತಿಯಂತೆ ದಂಪ ತಿಗಳನ್ನು ಭದ್ರಪೀಠದಮೇಲೆ ಕೂಡಿಸಿ ಹವನ ಹೋಮಗಳನ್ನು ಮಾಡಿಸಿ ದರು. ಶಯ್ಯಾಗೃಹದ ಶೃಂಗಾರಕ್ಕೆ ರಸಿಕನಾರಿಯರು ನಿಂತರು. ಆಗುವ ದೆಲ್ಲಾ ಆಯಿತು. ಸಂಜೆಯತನಕ ಒಂದೂ ಮಾತಾಡದಿದ್ದ ಗಿರಿಯ ಮ್ಮನು—“ಅತ್ತೆಯವರೆ, ನೀವು ನನ್ನನ್ನು ನೋಡಿರುವಿರಷ್ಟೆ! ನನ್ನ ವಿಚಾರ ನಿಮಗೆ ತಿಳಿದಿರುವುದಷ್ಟೆ! ನಾನು ಲೋಕದ ನಾರಿಯಂತಲ್ಲವೆಂದು ನೀವೇ ಆಡುತ್ತಿರುವಿರಷ್ಟೆ! ಅಂದಮೇಲೆ ನೀವು ನನ್ನ ಮಾತನ್ನು ಲಾಲಿಸಬೇಕು. ನಾನು ನಿಮ್ಮ ಮನೆಗೆ ಬಂದವಳು ನಿಜ. ನನ್ನ ಜನ್ಮ ಸಂಸಾರಕ್ಕಾಗಿ ಅಲ್ಲ. ನಿಮ್ಮ ಮಕ್ಕಳಿಗೆ ಬೇರೇ ಲಗ್ನಮಾಡಿಸಬೇಕು. ಆ ಹೆಂಡತಿಯೊಡನೆ ಅವರು ಸುಖದಿಂದಿರಬೇಕು. ನಾನಿದ್ದಂತೆ ನಾನಿರಬೇಕು. ಇಷ್ಟು ಮಾತ್ರ ನಡೆಸಿಕೊಡಬೇಕು” ಎಂದು ನುಡಿದಳು.

ಸೊಸೆಯ ಮಾತುಕೇಳಿ ಅತ್ತೆಯು ಉತ್ಸಾಹವಡಗಿತು. ಮಾವನ ಮುಗ್ಧನಾದನು. ಬಂದ ಹೆಂಗೆಳೆಯರು ಮನೆತುಂಬಾ ಗುಜುಗುಟ್ಟಿದರು. ಹುಡುಗಿಗೆ ಹೇಳುವರು ಬುದ್ಧಿಹೇಳಿದರು. ತಿಪ್ಪರಸನ ಗೆಳೆಯರು—ಹೆಂಡ

ತಿಯನ್ನು ಪೂಜೆಮಾಡುವುದಕ್ಕೆ ಮಾಡಿಕೊಂಡೆಯೇನೋ! ನೀನು ಗಂಡಸಲ್ಲ ವೇನೋ! ಎನ್ನುವ ಜನಕ ಮೂದಲಿಸಿ ಸಾಹಸಮಾಡಿದರು. ಯಾರ ಮಾತೂ ನಡೆಯಲಿಲ್ಲ. ಯಾರಿಗೂ ಧೈರ್ಯಬರಲಿಲ್ಲ. ಎಲ್ಲರೂ—"ಇವಳ ಮಾತೇ ಬೇರೆ, ಇವಳ ವಿಚಾರವೇ ಬೇರೆ ಆಗುವಂತೆ ಆಗಿದ್ದರೆ ಚೆನ್ನಾಗಿತ್ತು; ಮಾಡುವದೇನು ದೈವೇಚ್ಛೆಗೆ? ಎಂದು ಸುಮ್ಮನಾದರು. ತಿಪ್ಪರಸನು ಹೆಂಡತಿಯ ಎಲ್ಲ ವೃತ್ತಾಂತವನ್ನೂ ಚಿಂತಿಸಿ" ಸರಿ, ಅವಳಾಡಿದ್ದು ಸರಿ; ಅವಳ ಇಷ್ಟದಂತೆ ನಡೆಯಬೇಕು. ಅವಳನ್ನು ಸಾಮಾನ್ಯ ಸ್ತ್ರೀಯೆಂದು ನಾನು ತಿಳಿದಿಲ್ಲ. ಅವಳ ಹೆಸರಿನಿಂದ ನನಗೆ ಗೌರವ. ನಮ್ಮ ಮನೆಗೆ ಗೌರವ. ನಮ್ಮ ವಂಶಕ್ಕೇ ಗೌರವ. ಮಾತನ್ನು ಬೆಳೆಸಬೇಕಾದುದಿಲ್ಲ" ಎಂದು ತಂದೆ ತಾಯಿಗಳನ್ನು ಸಮಾಧಾನಗೊಳಿಸಿದನು. ಇದರಿಂದ ತಿಪ್ಪ ರಸನ ಗೌರವ ಹೆಚ್ಚಿತು. ಗಿರಿಯಮ್ಮನು ದೇವತಾ ಸ್ತ್ರೀ ಯೆನಿಸಿದಳು. ಗಿರಿಯಮ್ಮನೆಂದು ಹೆಸರು ಹಿಡಿದು ಕರೆವ ಜನರೇ ಇಲ್ಲದಂತಾಯಿತು. "ಅಮ್ಮನವರು—ಅಮ್ಮನವರು" ಎಂಬುದೇ ಗಿರಿಯಮ್ಮನ ಪೂಜ್ಯನಾಮ ವಾಯಿತು.

ಲೋಕದಲ್ಲಿ ಬಹು ಜನ್ಮಸಾಧನ ಮಾಡಿದ ಪಕ್ವ ಜೀವಿಗಳು ತಮ್ಮ ಸಂಚಿತಗಾಮಿ ಕರ್ಮಗಳನ್ನು ದಹಿಸಿ ಪ್ರಾರಬ್ಧ ಕರ್ಮಾನುಭವಕ್ಕೆ ಮಾತ್ರ ಎಲ್ಲೋ ಹೇಗೋ ಜನ್ಮತಾಳುವರು. ನೀಚಯೋನಿಗಳಲ್ಲಿ ಜನಿ ಸಿದರೂ ಅವರ ದೊಡ್ಡಸ್ತಿಕೆ ಕಡಿಮೆಯಾಗುವುದಿಲ್ಲ. ಪ್ರಾಪ್ತ ಜನ್ಮದಲ್ಲಿ ವಿದ್ಯಾಭ್ಯಾಸ ಮಾಡದಿದ್ದರೂ ಸಂಸ್ಕಾರ ಬಲದಿಂದ ಜ್ಞಾನಿಗಳ ಮಾತುಗ ಳನ್ನಾಡುವರು. ಅವರಿಗೆ ಸ್ವಭಾವವಾದ ಕಾರ್ಯಗಳು ಅಪಕ್ವ ಮಾನವ ರಿಗೆ ಅತಿ ಮಾನುಷವಾಗುವವು. ಜನರ ನಿಂದೆ ವಂದನೆಗಳನ್ನವರು ಗಣಿಸು ವದಿಲ್ಲ. ಅವರ ದೃಷ್ಟಿಯಲ್ಲಿ ಲೋಕವ್ಯಾಪಾರಗಳು ಅತಿ ತುಚ್ಛವಾಗಿ ಕಾಣುವುವು. ಜನರ ಆಗು ಹೋಗುಗಳನ್ನು ಹೇಳುವದು ಅವರ ದಯಾಳು ತನ. ಹೇಳದಿರುವದು ಅವರ ಮಿತಸ್ವಭಾವದ ಲಕ್ಷಣ. ಮಿತಸ್ವಭಾವದ ಮಿತಿಮೀರಿದರೆ ಜನರನ್ನು ನೋಡಿ ನಗುವರು. ಅಳುವರು, ಹುಚ್ಚರಂತೆ ತೋರಿಸಿಕೊಂಡುಬಿಡುವರು.

ಗಿರಿಯಮ್ಮನು ದೊಡ್ಡಸ್ತಿಕೆ ಎಷ್ಟು ಬೆಳೆದರೂ ಮನೆಯಲ್ಲಿ ತಾನೇ ಅಡಿಗೆ ಮಾಡುವಳು. ಹೆಳವನಕಟ್ಟೆಯಿಂದ ನೀರು ತರುವಳು. ಓರಗಿತ್ತಿಯರ ಮಕ್ಕಳನ್ನಾಡಿಸುವಳು.

ಹೆಳವನಕಟ್ಟೆಯ ಗಿರಿಯಮ್ಮನೆಂದು ಹೆಸರಿರುವ ಕಾರಣ ಆ ಹೆಳವನ ಕಟ್ಟೆಯ ವಿಚಾರವನ್ನು ಸಂಕ್ಷೇಪವಾಗಿ ತಿಳಿಸಬೇಕಾಗುತ್ತದೆ. ಮಲೇಬಿನ್ನೂರ ಸಮೀಪದಲ್ಲಿ ಹೆಳವನಕಟ್ಟೆಯೆಂಬ ಕೆರೆಯಿದೆ. ಕಟ್ಟೆಗೆ ಹೊಂದಿದಂತೆ ರಂಗನಾಥ ದೇವಾಲಯವಿದೆ. ಸ್ಥಲವು ಪುರಾತನ ಕ್ಷೇತ್ರವೆನಿಸಿದೆ. ಜಲವು ಪಾವನತೀರ್ಥವಾಗಿದೆ. ಪೂರ್ವೀಕರು ಭರತಖಂಡದ ಪ್ರತಿಕ್ಷೇತ್ರ ಪರ್ವತ ನದಿತಟಾಕ ವಾಪಿಕೂಪಗಳಿಗೂ ಮಹತ್ವಕೊಟ್ಟು ಅಲ್ಲಲ್ಲಿ ವಾಸಿಸುವ ಭಕ್ತಜನರ ಶ್ರದ್ಧೆಯನ್ನು ರಕ್ಷಿಸಿದ್ದಾರೆ. ಊರೂರಿಗೆ ಸ್ಥಳಪುರಾಣಗಳನ್ನು ಬರೆದಿದ್ದಾರೆ. ಅಷ್ಟಾದಶ ಪುರಾಣಕರ್ತರು ವೇದವ್ಯಾಸರೆಂದು ಪ್ರಸಿದ್ಧಿಯಿರುವಕಾರಣ ಬರೆದವರಿಗೆಲ್ಲಾ ಎಡೆಗೊಡುವ ಸ್ಕಾಂದ ಭವಿಷ್ಯೋತ್ತರ ಬ್ರಹ್ಮಾಂಡ ಪುರಾಣಗಳಲ್ಲಿ ತಮ್ಮದನ್ನೂ ಸಮಾವೇಶ ಮಾಡಿದ್ದಾರೆ. ಹಾಗೆ ಸೇರಿಸಿರುವ ಪುರಾಣಭಾಗಗಳಲ್ಲಿ ಸುಂದರ ಕಥೆಗಳಿದ್ದು ನೀತಿಬೋಧಕವಾಗಿರುವವುಗಳಿಂದ ಯಾವ ಬಾಧಕವೂ ಆಗಿಲ್ಲ. ಈ ದೃಷ್ಟಿಯಿಂದ ರಾಜಭೃತ್ಯನ ಆಜ್ಞೆಯೂ ರಾಜಾಜ್ಞೆಯಾಗುವಂತೆ ಪುರಾಣಗಳು ವ್ಯಾಸಕೃತಗಳಾಗಿವೆ.

ಪ್ರಕೃತ, ಹೆಳವನಕಟ್ಟೆಯೆಂದರೆ ಪಂಗುತೀರ್ಥವೆಂಬ ಸಂಸ್ಕೃತದ ಮೂಲನಾಮವಾಗುತ್ತದೆ. ದೇವಜಾತಿಯ ಅರುಣನಿಗೆ ತೊಡೆಗಳಿಲ್ಲದ ಕಾರಣ ಪಂಗುವೆಂದು ಹೆಸರಾಗುತ್ತದೆ. ಆ ಪಂಗುವು ಒಂದಾನೊಂದು ಕಾಲದಲ್ಲಿ ತಪಸ್ಸುಮಾಡಿ ಪರಮಾತ್ಮನನ್ನು ಪ್ರತ್ಯಕ್ಷಗೊಳಿಸಿಕೊಂಡ ಕಥೆ ಪುರಾಣದಲ್ಲಿದೆ. ಅದೇ ಕಥೆಯು ಪ್ರಾಯಶಃ ರೂಪಾಂತರವಾಗಿ ಕೆಲವು ಶತಮಾನಗಳ ಹಿಂದಿದ್ದ ಒಬ್ಬ ಹೆಳವನ ಕಥೆಯಾಗಿ, ಕಟ್ಟೆಯು ಅವನು ಕಟ್ಟಿಸಿದುದಾಗಿ, ಶ್ರೀರಂಗನಾಥನು ಹುತ್ತದಲ್ಲಿ ಪ್ರಸನ್ನನಾಗಿ, ಅವನು ಕಟ್ಟಿಸಿದ ದೇವಾಲಯವದಾಗಿ, ಪ್ರಕಾಶವಾಗಿದೆ. ಐತಿಹಾಸಿಕ ಹೆಳವನು ಪುರಾಣದ ಅರುಣನಾಗಿದ್ದಾನೆ. ಅದರ ವಿಸ್ತಾರವೆಂದರೆ:—

ಹೆಳವನಕಟ್ಟೆಯ ಬಳಿ ಕುಮಾರನ ಹಳ್ಳಿಯೆಂಬ ಗ್ರಾಮ. ಗ್ರಾಮದಲ್ಲೊಬ್ಬ ಹೆಳವ. ಅವನು ಕಟ್ಟೆಯಿರುವ ಸ್ಥಳದಲ್ಲಿ (ಪ್ರಾಯಶಃ ಭಿಕ್ಷಕ್ಕಾಗಿ) ಕೂಡುತ್ತಿದ್ದನು. ಪಕ್ಕದಲ್ಲಿ ಗುಡ್ಡಗಳಿರುವಕಾರಣ—ಕಟ್ಟೆಯ ಒಳಭಾಗವು ತಗ್ಗುನೆಲವಾಗಿದ್ದಕಾರಣ- ಅಲ್ಲಿ ಹಳ್ಳಕೊಳ್ಳಗಳಿದ್ದಕಾರಣ- ಕೊಳ್ಳಗಳು ಒರತೆಗಳಾಗಿ ದನಗಳು ಮೇಯುವದಕ್ಕೆ ಉತ್ತಮ ಪ್ರದೇಶವಾಗಿತ್ತು. ಸುತ್ತೆಂಟು ಗ್ರಾಮಗಳ ದನಗಳು ಅಲ್ಲಿಗೆ ಮೇಯಲು ಬರುತ್ತಿದ್ದವು. ದನಗಾವರು ಕೂತಬಳಿ ಕೂತಿರುತ್ತಿದ್ದ ಹೆಳವನಿಗೆ ದನಗಳನ್ನು ನೋಡುತ್ತಿರೆಂದು ಹೇಳಿ ಆಟವಾಡುತ್ತಿದ್ದರು. ಮಾತನ್ನು ಕೇಳುತ್ತಿದ್ದ ಕಾರಣ ದನಗಾವರು ಬುತ್ತಿಯಲ್ಲಿ ಭಾಗಕೊಡುತ್ತಿದ್ದರು. ಹೆಳವನ ಜೀವನ ಗೊಲ್ಲರಿಂದ ನಿಶ್ಚಿಂತೆಯಾಯಿತು. ಅವನು ಕೂತಬಳಿ ಗುಡಿಸಲಾಯಿತು. ದನಗಾವರು ಕರೆದು ಕುಡಿವಹಾಲು ಹೆಳವನ ಸುಖಪೇಯವಾಯಿತು. ಹೆಳವನಿಗೆ ತಾನಿದ್ದಲ್ಲಿ ಗೋಕಟ್ಟೆಯನ್ನು ಕಟ್ಟಬೇಕೆಂಬ ಇಚ್ಛೆಯಾಯಿತು. ಗೊಲ್ಲರ ನೆರವಾಯಿತು. ಊರವರು ಬಂದರು. ಸುತ್ತಣ ಗ್ರಾಮಸ್ಥರು ಬಂದರು. ಮಳೆಯಿಂದ ಕಲ್ಲುಮಣ್ಣುಗಳ ಕಟ್ಟೆಯು ಗಟ್ಟಿಯಾಗಿ ನೀರೂ ತುಂಬಿತು. ಜನಗಳಿಗೆ ಮಾರ್ಗವಸತಿಯಾಯಿತು. ಕಟ್ಟೆಗೆ ಹೆಳವನಕಟ್ಟೆಯೆಂಬ ನಾಮಕರಣವಾಯಿತು.

ಹೆಳವನಕಟ್ಟೆಯ ಪಕ್ಕದಲ್ಲಿ ಒಂದು ಹುತ್ತವಿತ್ತು. ಕೆಚ್ಚಲು ಭಾರವಾದ ಆಕಳೊಂದು ಹುತ್ತದ ಪಕ್ಕಕ್ಕೆ ಹೊದ್ದಿದ್ದ ಕಲ್ಲಿಗೊತ್ತಿ ಹಾಲು ಕರೆಯುತ್ತಿತ್ತು. ಅಡವಿಯ ದನಗಳೂ ಎಮ್ಮೆಗಳೂ ಕೆಚ್ಚಲು ಭಾರವಾದಾಗ ಹೀಗೆ ಮಾಡುವುದುಂಟು. ಇದನ್ನು ನೋಡಿ ಹೆಳವನಿಗೆ ಆಶ್ಚರ್ಯವಾಯಿತು. ಹುತ್ತದಲ್ಲಿ ಏನೋ ಇರಬೇಕೆಂಬ ಭಾವನೆಯಾಯಿತು. ಭಾವನೆಗೆ ತಕ್ಕಂತೆ ದೇವತಾ ಸ್ವಪ್ನವಾಯಿತು. ಹುತ್ತವನ್ನು ಬಗೆದರೆ ಹರಿಹರಬ್ರಹ್ಮರ ಮೂರ್ತಿಗಳು ದೊರೆತವು. ಕಾಲಾಂತರದಲ್ಲಿ ಗುಡಿಯಾಯಿತು. ದೇವರಿಗೆ ವಕ್ಕಲು ನಾವೆಂದು ಜನರು ನಡೆದುಕೊಂಡರು. ಸ್ಥಳವು ರಂಗಕ್ಷೇತ್ರವೆನಿಸಿತು.

## ಲಾಲಿಸಿದರೆ ಮಕ್ಕಳು! ಪೂಜಿಸಿದರೆ ದೇವರು!!

ಹೆಳವನು ಕಟ್ಟಿಸಿದ ಕಟ್ಟೆಯೂ ದೇವಾಲಯವೂ ಕಾಲಾಂತರದಲ್ಲಿ ಪುಂಗನೂರರಸರಿಂದ ಜೀರ್ಣೋದ್ಧಾರವಾಯಿತು. ಈಗಿರುವ ವಿಸ್ತಾರ ಆಕಾರಗಳು ಮೈಸೂರರಸರಿಂದಾಗಿದೆ. ಹೆಳವನಕಟ್ಟೆ ಬಲು ಚಿಕ್ಕದಾಗಿರಬೇಕು. ಈಚೆಗೆ ಕಟ್ಟಿರುವ, ಬೆಟ್ಟಕ್ಕೆ ತಾಕುವ ಕಟ್ಟೆ ನೂರಾರು ವರ್ಷಗಳದಾಗಿರಬೇಕು.

## ಗೋಪಾಲದಾಸರು ಬಂದದ್ದು

ಹೀಗಿರಲು ಮಹಾನುಭಾವರಾದ ಗೋಪಾಲದಾಸರು ಮಲೇಬಿನ್ನೂರಿಗೆ ಬಂದರು. ಉಡುಪೀ ಯಾತ್ರೆಯು ಉದ್ದೇಶವಾಗಿದ್ದುದರಿಂದ ಯಾತ್ರಿಕರ ಗುಂಪು ದಾಸರನ್ನು ಹಿಂಬಾಲಿಸಿತ್ತು. ದಾಸರು ಬಂದಾಗ ಅಮ್ಮನು ಗುಡಿಯಲ್ಲಿ ರಂಗವಲ್ಲಿಯನ್ನು ಚಿತ್ರಿಸುತ್ತಿದ್ದಳು; ಯಾರೋ ದೊಡ್ಡವರ ಆಗಮನವಾಗುತ್ತದೆನ್ನುತ್ತಿದ್ದಳು. ದಾಸರ ಖ್ಯಾತಿ ಅಮ್ಮನಿಗೆ ತಿಳಿದಿತ್ತು. ದಾಸ ಸಹೋದರರನ್ನು ಕಂಡೊಡನೆ ಸರ್ವರಿಗೂ ನಮಸ್ಕಾರ ಮಾಡಿದಳು. ದಾಸರು—ಅಮ್ಮಾ ಚಿತ್ರ ಚೆನ್ನಾಗಿದೆ, ಅದರಮೇಲೇ ಇವತ್ತು ನಮ್ಮ ಪೂಜೆಯೆಂದರು. ಅಮ್ಮನು ಅದಕ್ಕೇ ಚಿತ್ರಿಸಿದೆನೆಂದಳು. ಕೇಳಿದವರಿಗೆ ಮಾತು ವಿಚಿತ್ರವೆನಿಸಿತು. ದಾಸರ ಸ್ನಾನಾಹ್ನಿಕಗಳಾದವು. ಅಮ್ಮನೇ ವಿವಿಧ ಪಕ್ವಾನ್ನಗಳನ್ನುಮಾಡಿ ನೈವೇದ್ಯಕ್ಕಿಟ್ಟಳು. ದಾಸರಾಯರು ದ್ವಾದಶಸ್ತೋತ್ರ ಪಠಣೆಮಾಡುವಾಗ ಸ್ತೋತ್ರದಲ್ಲಿ ವರ್ಣಿಶವಾಗಿರುವಂತೆ ಭಗವದ್ದರ್ಶನವಾಗುವದು ವಾಡಿಕೆಯಾಗಿತ್ತು. ವಾತಾವರಣ ದೋಷದಿಂದ ದರ್ಶನವಾಗದಿದ್ದರೆ ಸ್ತೋತ್ರದ ಮೂರನೇ ಅಧ್ಯಾಯದ 'ಕುರುಭುಂಕ್ಷ್ವ ಚ ಕರ್ಮನಿಜಂ ನಿಯತಂ' ಎಂಬ ಶ್ಲೋಕವನ್ನಾರಂಭಿಸಿ ಚಿತ್ತವನ್ನು ಕೇಂದ್ರೀಕರಿಸುತ್ತಿದ್ದರು. ಅನಂತರ ಪಠಿಸುವ ಸ್ತೋತ್ರವು ಅದೇ ಮೊದಲ ಎರಡು ಅಧ್ಯಾಯಗಳಿಂದ ಕ್ರಮವಾಗಿ ಪೂರ್ತಿಯಾಗುತ್ತಿತ್ತು. ಶ್ರೀಮದಾಚಾರ್ಯರಿಂದ ರಚಿತವಾದ ದ್ವಾದಶ ಸ್ತೋತ್ರದ ಎರಡು ಅಧ್ಯಾಯಗಳನ್ನಾದರೂ ಪಠಿಸದೆ ಮಧ್ವಮತಸ್ಥರು ಮಹಾನೈವೇದ್ಯ ಮಾಡುವುದಿಲ್ಲ. ಈ ವಿಚಾರದಲ್ಲಿ ಭಕ್ತಿಜನಕವಾದ ಐತಿಹ್ಯವೊಂದಿರುವುದು. ಅದೇನೆಂದರೆ:—

ಶ್ರೀಮದಾಚಾರ್ಯರವರು ಶಿಷ್ಯರಿಗೆ ಪಾಠ ಹೇಳುವಾಗ ತಮ್ಮ ಗ್ರಂಥಗಳನ್ನು ಹೊರುತ್ತಿದ್ದ ಎತ್ತಿನ ಮುಖ ನೋಡುತ್ತಿದ್ದರಂತೆ ! ಶಿಷ್ಯರು ನಮ್ಮನ್ನು ನೋಡದೆ ಎತ್ತಿನ ಮುಖ ನೋಡಲು ಕಾರಣವೇನೆಂದು ಕೇಳಿದರಂತೆ! ಮುಂದೆ ಈ ಎತ್ತು ನಮ್ಮ ಗ್ರಂಥಗಳಿಗೆ ವ್ಯಾಖ್ಯಾನ ಬರೆಯುವದು ಎಂದರಂತೆ! ಸಂಚಾರ ಕಾಲದಲ್ಲಿ ಎತ್ತಿಗೆ ವಿಷಪ್ರಯೋಗವಾಗಿ ಅಸ್ವಾವಸ್ಥೆಗಿಟ್ಟಿತಂತೆ! ಆಚಾರ್ಯರು ದ್ವಾದಶಸ್ತೋತ್ರದ ಎರಡು ಅಧ್ಯಾಯಗಳನ್ನು ಪಠಿಸಿ ಎತ್ತನ್ನು ಬದುಕಿಸಿದರಂತೆ! ಈ ಕಾರಣದಿಂದ ದ್ವಾದಶ ಸ್ತೋತ್ರದ ಮೊದಲ ಎರಡು ಅಧ್ಯಾಯಗಳನ್ನು ಪಠಿಸುವ ಆಚರಣೆಯಿದೆ. ಅಧ್ಯಾಯದ ಶ್ಲೋಕಗಳಲ್ಲಿ ಎತ್ತಿನ ಸಂಬಂಧವಾದ ಪ್ರಾರ್ಥನೆಯಿಲ್ಲ. ನೈವೇದ್ಯ ಸಮಯದಲ್ಲಿ ವಿಷಪ್ರಯೋಗದ ಸುದ್ದಿ ತಿಳಿದ ಕಾರಣ, ಆಚಾರ್ಯರು ಮತ್ತದೇ ಅಧ್ಯಾಯಗಳನ್ನು ಪಠಿಸಿ ಕಮಂಡುಲೋದಕವನ್ನು ಪ್ರೋಕ್ಷಿಸಿದ ಕಾರಣ, ಸ್ತೋತ್ರಕ್ಕೆ ಮಹತ್ವವುಂಟಾಗಿದೆ.

ಗಿರಿಯಮ್ಮನ ಸುಕೃತ ವಿಶೇಷದಿಂದ 'ವಂದೇವಂದ್ಯಂ' ಎಂದು ಸ್ತೋತ್ರವನ್ನು ಪ್ರಾರಂಭಿಸುವಾಗಲೇ ದಾಸರಿಗೆ ಅಮ್ಮನು ರಚಿಸಿದ್ದ ಗೋಪಾಲಕೃಷ್ಣನ ದಿವ್ಯರೂಪ ದರ್ಶನವಾಯಿತು. ದಾಸರು ಅಮ್ಮನ ಕಡೆ ನೋಡಿದರು. ಅಮ್ಮನು ದೇವರ ಕಡೆ ನೋಡಿದಳು. ಗೋಪಾಲದಾಸರಾಯರ ಅನುಗ್ರಹದಿಂದ ಗೋಪಾಲಕೃಷ್ಣನ ರೂಪ ದರ್ಶನವಾಯಿತೆಂದಳು. ಆ ಆನಂದಭರದಲ್ಲಿ ಎಷ್ಟೋ ಕಾಲ ಕಳೆಯಿತು. ತಮಗೆ ದರ್ಶನವಿತ್ತ ಆನಂದಮೂರ್ತಿಯನ್ನು ಚಿತ್ರಿಸಿ ದಾಸರು ಅಮ್ಮನಿಗೆ ಪ್ರಸಾದವೆಂದನುಗ್ರಹಿಸಿದರು. ಅಂದಿನಿಂದ—ಆ ಮೂರ್ತಿಯಿಂದ ಗಿರಿಯಮ್ಮನಿಗೆ ಭಗವಂತನ ವಿವಿಧ ಲೀಲಾವಿಭೂತಿಗಳ ದರ್ಶನಕ್ಕೆ ಪ್ರಾರಂಭವಾಯಿತು. ಪೂಜೆಯೆನ್ನಬೇಕು ಇದಕ್ಕೆ. ಪೂಜೆಮಾಡಬೇಕು ಹೀಗೆ. ಸಾಕ್ಷಾತ್ಕಾರಮಾಡಿಕೊಳ್ಳದ ಪೂಜೆ ನಿಜವಾದ ಪೂಜೆಯಲ್ಲ. ಅದು ಬಿಟ್ಟರೆ ಗತಿಯಿಲ್ಲ. ಮೂರ್ತಿಪೂಜೆಯನ್ನು ಖಂಡಿಸುವುದರ ಅರ್ಥ ಇಲ್ಲಿದೆ. ಪೂಜೆಗೆ ಭಕ್ತಿಯಿರಬೇಕು. ಭಕ್ತಿಯು ಪೂಜಕನ ಆತ್ಮಶಕ್ತಿಯಾಗಬೇಕು. ಶಕ್ತಿಯಿಂದ ವ್ಯಕ್ತಿದರ್ಶನವಾಗಬೇಕು. ಹೀಗೆ ಸಾಕ್ಷಾತ್ಕಾರಮಾಡಿಕೊಂಡ ಭಕ್ತರು ಅನೇಕರಾದರು. ಸಾಕ್ಷಾತ್ಕಾರಮಾಡಿಕೊಳ್ಳದ ಪೂಜೆಯನ್ನವರೇ ಖಂಡಿಸಿದರು. ಜಗನ್ನಾಥ

ದಾಸರು—'ಲೋಹಕ್ಕಲ್ಲ—ಪ್ರತಿಮೆ ಪೂಜಿಸಲು ಅಲ್ಲೇನಿಲ್ಲ' ಎಂಬದಾಗಿಯೂ ಪ್ರಾಣೇಶದಾಸರು "ಶಿಲಾದಿ ವಿಗ್ರಹಗಳಾಸೆ ಹರಿಯೆಂಬೆಲಾ ಕೇವಲ ಸುಳ್ಳೋ" ಎಂಬದಾಗಿಯೂ, ಆಡಿದ ಮಾತನ್ನು ಈ ಕ್ರಮದಲ್ಲಿ ಅರ್ಥ ಮಾಡಬೇಕು. ಜೀವೇಶ್ವರೈಕ್ಯವನ್ನು ಪ್ರತಿಪಾದಿಸಿದ ಶಂಕರಾಚಾರ್ಯರು ಮೂರ್ತಿಪೂಜೆಯನ್ನು ಬಿಡಲಿಲ್ಲ. ರಾಮಾನುಜ ಮಧ್ವ ಪ್ರಭೃತಿಗಳು ತಮ್ಮ ಜೀವಿತದ ಸರ್ವಸ್ವವೆಂದು ಮೂರ್ತಿಪೂಜೆಮಾಡಿದರು. ಮೂರ್ತಿಯಿಲ್ಲದೆ ಧ್ಯಾನವಿಲ್ಲ. ಮೂರ್ತಿಯಿಲ್ಲದೆ ಆವಾಹನವಿಲ್ಲ. ಮೂರ್ತಿಯಿಲ್ಲದೆ ಉಪಚಾರಗಳಿಲ್ಲ. ಯೋಗಿಯ ಧ್ಯಾನದಲ್ಲಿ ನಿಲ್ಲುವದು ಮೂರ್ತಿ. ಕರ್ಮಠರು ಅಗ್ನಿಯಲ್ಲಿ 'ಚತ್ವಾರಿ ಶೃಂಗಾ ತ್ರಯೋಸ್ಯಪಾದಾಃ ದ್ವೇಶೀರ್ಷೇ' ಇತ್ಯಾದಿ ಭಾವಿಸುವದು ಮೂರ್ತಿ. ಅಪ್ರಬುದ್ಧರು ಎದುರಿಗಿಟ್ಟುಕೊಳ್ಳುವದೂ ಮೂರ್ತಿ. ಮೂರ್ತಿಗೆ ಉಪಾಸಕನು ಕೊಟ್ಟದ್ದೇ ರೂಪ. ಅದು ಸೌಮ್ಯವಾಗಬಹುದು, ಉಗ್ರವಾಗಬಹುದು; ಸುರೂಪವಾಗಬಹುದು; ಸ್ತ್ರೀಯಾಗಬಹುದು, ಪುರುಷನಾಗಬಹುದು.

ಗಿರಿಯಮ್ಮನು ಉದಯಕಾಲದಲ್ಲಿ ಎಲ್ಲರೂ ಏಳುವದಕ್ಕೆ ಮೊದಲು ಶುದ್ಧಳಾಗಿ ಗೋಪಾಲದಾಸರು ಕೊಟ್ಟ ಪ್ರತೀಕದ ಪೂಜೆಮಾಡುವಳು. ಮೊಸರು ಕಡೆಯುತ್ತಾ ಮಂಜುಳಸ್ವರದಿಂದ ಗಾನಮಾಡುವಳು. ಕೃಷ್ಣ! ಇಗೋ ಮಾಸಲು ಬೆಣ್ಣೆ ಕೆನೆ ಮೊಸರು! ತಿನ್ನು ಬಾ ಎನ್ನುವಳು. ನಗುವಳು. ತಿನ್ನದಿದ್ದರೆ ಹೊಡೆಯುವೆನೆಂದು ಸಿಟ್ಟುಮಾಡುವಳು. ಮತ್ತೆ ಗಹಗಹಿಸಿ ನಗುವಳು. ಶ್ರೀಹರಿಯು ಭಕ್ತಳ ಭಕ್ತಿಗೆ ಮೆಚ್ಚಿ ಶ್ರೀ ಕೃಷ್ಣ ಲೀಲೆಯ ಒಂದೊಂದಾಟಗಳನ್ನೂ ಆಡಿ ತೋರಿಸುವನು. ಕೃಷ್ಣನಾಗುವನು, ಗೊಲ್ಲನಾಗುವನು, ರಾಧೆಯಾಗುವನು; ಬೇಡಿದಂತೆ ಆಡುವನು. ಅಮ್ಮನು ಆಡಿದಂತೆ ಹಾಡುವಳು.

ಗಿರಿಯಮ್ಮನ ಮೇಲಣ ತಿಪ್ಪರಸನ ಭಕ್ತಿ ದಿನದಿನಕ್ಕೆ ಅತಿಶಯವಾಯಿತು. ಎದುರಿಗೆ ಓಡಾಡುವುದಕ್ಕೆ ನಾಚುವನು. ಬಡಿಸಲು ಬಂದಾಗ ಹತ್ತುಕ್ಕೆ ಒಂದು ಮಾತಾಡುವನು. ಆಕೆಯ ಕರಸ್ಪರ್ಶವಾದ ಪದಾರ್ಥಗಳನ್ನು ಮಹಾಪ್ರಸಾದವೆಂದು ಭುಜಿಸುವನು. ಆಕೆಯು ರಂಗವಲ್ಲಿಯಿಡುತ್ತಾ

ತನ್ನದೇ ಮುದ್ರಿಕೆಯಿಂದ ಹಾಡುವುದನ್ನು ಕೇಳಿ ಆನಂದಬಾಷ್ಪಸುರಿಸು ವನು. ಲೋಕದಲ್ಲಿ ಪತಿಭಕ್ತಿಮಾಡುವ ಸತಿಯರ ಚರಿತ್ರೆಗಳು ಹೇರಳವಾಗಿದ್ದರೆ, ಸತಿಭಕ್ತಿಮಾಡುವ ಉದಾಹರಣೆ ತಿಪ್ಪರಸನದಾಯಿತು.

ಗಂಡನ ವೈರಾಗ್ಯಭಾವ ನೋಡಿ ಗಿರಿಯಮ್ಮನು ಮರುಗಿದಳು. ಪ್ರತ್ಯೇಕ ಲಗ್ನಮಾಡಿ ಗಂಡನ ಮನಸ್ಸಂತೋಷಪಡಿಸಬೇಕೆಂದು ಹವಣಿಸಿದಳು. ಸಂಗತಿಯನ್ನು ಅತ್ತೆಮಾವರಿಗೆ ತಿಳಿಸಿದಳು. ಗಂಡನ ಪಾದಗಳಿಗೆರಗಿ ನಿಮ್ಮ ಲಗ್ನಮಾಡುವೆನೆಂದಳು.

## ಗಂಡನ ಮದುವೆ.

ಈ ಕಾಲದಲ್ಲಿ ಗಿರಿಯಮ್ಮನ ಭಕ್ತಕೋಟಿಯು ಶತಾಧಿಕವಾಯಿತು. ರಂಗನಾಥನ ಸೇವೆಗೆ ಬರುವ ಜನರು ತಾವು ತಂದದ್ದನ್ನು ಅಮ್ಮನಿಗೆ ಕೊಟ್ಟರಾಯಿತೆಂದು ಒಪ್ಪಿಸಿಬಿಡುವರು. ಅಮ್ಮನು ಹೇಳಿದ ಕೆಲಸಗಳನ್ನು ಬಲು ಭಕ್ತಿಯಿಂದ ಮಾಡುವರು. ಲೋಕವೇ ಗೌರವಿಸುತ್ತಿದ್ದ ಗಿರಿಯಮ್ಮನನ್ನು ನಿಂದಿಸಲು ವಾರಗಿತ್ತಿಯರು ಹಿಂದೆಗೆಯುತ್ತಿರಲಿಲ್ಲ. ಅತ್ತೆ ಮುಗ್ಧೆ, ಮಾವ ಮುದುಕ, ಗಂಡ ಷಂಡ; ಹೇಳುವದೇನು ಸಂಸಾರ! ಹೆಂಗಸಿಗೆ ಹಾಡೇಕೆ? ಕವಿತೆಯೇಕೆ? ದೇವರು ಪ್ರತ್ಯಕ್ಷವಾಗಲು ಸುಧಾ ಪಾಠೀಕಳೇ ? ಇವಳ ಕಣಿಕೇಳಿ ಜನರು ಕಾಳು ಕಡ್ಡಿ ತಂದು ಕೊಟ್ಟರೆ, ತಿಂದು ಹೋಗುವರೇ ಬಹಳ. ಮನೆಗೆ ಬಂದ ಆದಾಯವೇನು? ಹೀಗೆಲ್ಲಾ ಆಡುವದು ಬಲವಾಯಿತು. ಅರಿತೂ ಅರಿಯದಳಂತೆ ವಾರಗಿತ್ತಿಯರನ್ನು ಅಮ್ಮನು ಉಪಚರಿಸುವಳು. ಅವರ ಮಕ್ಕಳನ್ನು ಆಡಿಸುವಳು. ಏನು ಮಾಡಿದರೇನು? ಅಮ್ಮನಸೇವೆ ಅಪರಾಧವಾಯಿತು. ಹೆಂಡತಿ ಗಂಡನ ಮದುವೆಮಾಡುವದು ಬೂಟಾಟಿಕೆಯೆನಿಸಿತು. ಮದುವೆಯಾದರೆ—ಆ ಖರ್ಚು ಮನೆಯಮೇಲೆ ಬಿದ್ದರೆ—ತೀರಿಸುವರ್‍ಯಾರೆಂಬ ಬಿಡಿನುಡಿ ಬಲವಾಯಿತು. ಇಂಗಿತಜ್ಞಳಾದ ಅಮ್ಮನು ದಾಯಾದರಿಗಾದಾಯವಾಗುವಂತೆ ಲಗ್ನದ ಸಿದ್ಧತೆ ಮಾಡಿದಳು. ಯೋಗ್ಯ ಕನ್ನಿಕೆಯನ್ನು ನಿಶ್ಚಯಿಸಿ ಲಗ್ನಕ್ಕೆ ಬರಬೇಕೆಂದು ಭಕ್ತಜನರಿಗೆ ಬರೆದಳು. ಇಷ್ಟುಮಾತ್ರಕ್ಕೇ ಭಕ್ತಜನರು ಬೇಕಾದ ಉಪಾಯನಗಳನ್ನು ಕಳುಹಿಸಿ ತಕ್ಕ ವಸ್ತ್ರಪಾತ್ರಗಳೊಡನೆ ವಿವಾಹಕಾಲಕ್ಕೆ ಬಂದರು. ತನ್ನ

ವಿವಾಹಕಾಲದಲ್ಲಿ ಕೊಟ್ಟಿದ್ದ ಆಭರಣಗಳನ್ನು ಅಮ್ಮನು ತಂಗಿಗೆ ಬಳುವಳಿ ಮಾಡಿದಳು. ತನ್ನನ್ನು ಮರ್ಯಾದೆಯಿಂದ ರಕ್ಷಣೆಮಾಡಿದ ಕೃತಜ್ಞತೆಗೆ ಉಡುಗೊರೆಯೆಂದು ಪತಿಯ ಪಾದಗಳಿಗೆ ನಮಸ್ಕಾರಮಾಡಿದಳು. ವಾರಗಿತ್ತಿಯರು ತಮಗೆ ದೊರೆತ ವಸ್ತ್ರ ಪಾತ್ರಗಳಿಂದ ತತ್ಕಾಲದಲ್ಲಿ ಪ್ರಸನ್ನರಾದರು.

## ತಿರಸ್ಕಾರ

ಅಮ್ಮನಲ್ಲಿ ಭಕ್ತಿಮಾಡುವ ಸ್ತ್ರೀ ಪುರುಷರ ತಂಡ ನೋಡಿ ಅಸೂಯೆ ಪಡುವ ಶಿಷ್ಟರ ಗುಂಪು ಒಳಗೇ ಬೆಳೆಯಿತು. ಅಮ್ಮನ ವಾರಗಿತ್ತಿಯರು ಶಿಷ್ಟರ ಪಕ್ಷವಹಿಸಿದರು. ತಿಪ್ಪರಸನ ಮನೆಗೆ ಬರುವರಲ್ಲಿ—ಕೆಲವರು ಸ್ತ್ರೀ ಪಾಕನೇಮಿಗಳಾದರು. ಕೆಲವರು ಅಪುತ್ರವತಿಯರು ಅಡಿಗೆಯನ್ನು ಮುಟ್ಟಬಾರದೆಂದರು. ಕೆಲವರು 'ನಸ್ತ್ರೀಸ್ವಾತಂತ್ರ್ಯಮರ್ಹತಿ' ವಚನ ಬಲದಿಂದ ಅಮ್ಮನ ವರ್ತನೆ ಧರ್ಮವಿರುದ್ಧವೆಂದರು. ಈ ಕಾರಣಗಳಿಂದ ಅಮ್ಮನಿಗೆ ಅಡಿಗೆಯ ಅಧಿಕಾರ ತಪ್ಪಿತು "ಇಲ್ಲಿ ಬರಬೇಡ—ಅದು ಮುಟ್ಟಬೇಡ" ಎಂಬ ಮಡಿಮಾತುಗಳು ಬಲವಾದವು.

ಅಭಿಜ್ಞರು ಯಾವ ಗೊಡವೆಗೂ ಹೋಗದೆ ಅಮ್ಮನ ಅಡಿಗೆಯನ್ನು ಮಹಾಪ್ರಸಾದವೆಂದು ಸ್ವೀಕರಿಸಿದರು.

ಇದೇ ಸಮಯದಲ್ಲಿ ಸುಮತೀಂದ್ರ ಸ್ವಾಮಿಗಳು(ರಾಘವೇಂದ್ರ ಮಠ ಪೀಠಿಗೆಯವರು) ಸಂಚಾರಕ್ರಮದಿಂದ ಮುಲೇಬಿನ್ನೂರಿಗೆ ಬಂದು ರಂಗನಾಥ ದೇವಾಲಯದಲ್ಲಿಳಿದರು. ಗಿರಿಯಮ್ಮನ ವಿರೋಧಿಗಳು ಅಪಮಾನಮಾಡಿಸುವುದಕ್ಕೆ ಇದೇ ಸಮಯವೆಂದು ಮಠದ ಅಧಿಕಾರಿಗಳಿಗೆ ಸಲ್ಲದ ಸುದ್ದಿಗಳನ್ನು ಹೇಳಿದರು. ಇಂತಹ ದೂರು ಬಂದರೆ ಸಾಕೆಂಬ ಅಧಿಕಾರಿಗಳು—

೧ ಸ್ತ್ರೀಯಾದವಳು ವಿವಾಹಾರಭ್ಯ ಗಂಡನೊಡನೆ ಸಂಸಾರಮಾಡಿ ಸಂತಾನ ಪಡೆದು ಪಿತೃಗಳಿಗೆ ಸದ್ಗತಿಯನ್ನುಂಟುಮಾಡುವದು ಬಿಟ್ಟು ವಿರಾಗಿಯಂತಿರುವುದು ಅಪರಾಧ.

೨ ಕುಲಸ್ತ್ರೀಯಳು ತಾಳ ಹಾಕಿಕೊಂಡು ಹಾಡುವದೂ ನರ್ತನಮಾಡುವದೂ ಅಪರಾಧ.

೩ ಸ್ತ್ರೀಯರಿಗೆ ಧರ್ಮೋಪದೇಶಮಾಡುವ ಅಧಿಕಾರವಿರದಿದ್ದರೂ ಜನರಗುಂಪು ಸೇರಿಸಿ ಉಪದೇಶ ಕೊಡುವುದು ಅಪರಾಧ.

ಈ ಮೂರು ಅಪರಾಧಗಳನ್ನೂ ಗಿರಿಯಮ್ಮನು ಮಾಡಿರುವಕಾರಣ— ಸ್ವಾಮಿಗಳಿಂದ ಮುದ್ರಾಧಾರಣೆಯಾಗುವುದಿಲ್ಲ; ತೀರ್ಥ ದೊರೆಯುವುದಿಲ್ಲ; ಎಂದು ತೀರ್ಮಾನ ಮಾಡಿದರು. ತಿಪ್ಪರಸನಿಗೆ ಅಧಿಕಾರಿಗಳ ತೀರ್ಮಾನ ತಿಳಿದು ವಿಷಾದವಾಯಿತು. ಏನಿಲ್ಲದಿದ್ದರೂ ಭಕ್ತಳಾದ ಗಿರಿಯಮ್ಮನಿಗೆ ದೇವರ ದರ್ಶನ ದೊರೆತರೆ ಸಾಕೆಂಬ ಸ್ಥಿತಿಯಾಯಿತು. ಅಧಿಕಾರಿಗಳು ದೂರದಿಂದ ದರ್ಶನಮಾಡಬಹುದೆಂಬಷ್ಟು ಕೃಪೆ ಮಾಡಿದರು. ವಾರಗಿತ್ತಿಯರು ಮಕ್ಕಳಿಲ್ಲದವರಿಗೆ ಮುದ್ರಾಧಾರಣೆಯಿಲ್ಲವಂತೆ, ಎಂದು ಮನೆತುಂಬಾ ಕೋಲಾಹಲವೆಬ್ಬಿಸಿದರು. ಅಮ್ಮನು ಎಲ್ಲವನ್ನೂ ಕೇಳಿ ದೂರದಲ್ಲಿ ಮೂಲರಾಮನ ದರ್ಶನಮಾಡುತ್ತಾ ನಿಂತಳು. ಸ್ವಾಮಿಗಳಿಗೆ ಅಧಿಕಾರಿಗಳ ಅಧಿಕಪ್ರಸಂಗ ಗೊತ್ತಾಗಿರಲಿಲ್ಲ. ಕುಹಕಿಗಳ ಕುತಂತ್ರ ತಿಳಿದಿರಲಿಲ್ಲ. ಪೂಜೆಮಂಗಳಾರತಿಗಳಾದವು. ತೀರ್ಥಕಾಲದಲ್ಲಿ ಸ್ವಾಮಿಗಳು—'ಇವತ್ತು ಮಹಾತ್ಮಳಾದ ಗಿರಿಯಮ್ಮನ ಭಿಕ್ಷವೆಂದು ಕೇಳುತ್ತೇವೆ. ಆ ಪುಣ್ಯಾತ್ಮಳೆಲ್ಲಿ, ತೀರ್ಥಕ್ಕೆ ಬರಲಿ' ಅಂದರು. ಸಮೀಪದಲ್ಲಿದ್ದ ಮಠಾಧಿಕಾರಿಗೆ ಸ್ವಾಮಿಗಳು ಈ ಪ್ರಶ್ನೆಮಾಡುವರೆಂಬ ನಿರೀಕ್ಷಣೆಯಿರಲಿಲ್ಲ. ಅವನು ನಿರುಪಾಯನಾಗಿ —"ಆಕೆ ಅಪುತ್ರವತಿ; ಇನ್ನೂ ಕೆಲವು ದೋಷಗಳಿವೆಯೆಂದು ತಿಳಿದುಬರುತ್ತದೆ; ಭಿಕ್ಷಾನಂತರ ವಿಚಾರಮಾಡಬೇಕಾಗುತ್ತದೆ. ವೇಳೆಯಾಗಿರುವದರಿಂದ ಮಿಕ್ಕವರಿಗೆ ತೀರ್ಥವಾಗಬಹುದು; ಎಂದನು. "ಎಂಥವರಿಗೆ ಯಾವ ದೋಷ! ಆಕೆ ತೀರ್ಥಕ್ಕೆ ಬರಲಿ" ಎಂದು ಗುರ್ವಾಜ್ಞೆಯಾಯಿತು. ಅಧಿಕಾರಿಯು ನಿರುತ್ತರನಾಗಿ ತಾನೇ ಅಮ್ಮನಿದ್ದಬಳಿಗೆ ಬಂದು ತೀರ್ಥಕ್ಕೆ ಬರಬೇಕೆಂದು ಕರೆದನು. ಅಮ್ಮನು ಸಂಕೋಚದಿಂದ ಸಮುಖಕ್ಕೆ ಬಂದು ಕೈಚಾಚಿದಳು. ಸ್ವಾಮಿಗಳು ಕೈಯನ್ನು ಕ್ಷಣಹೊತ್ತು ನೋಡಿ, ಇದ್ಯಾವ ದೇವತಾಲಕ್ಷಣ! ಈ ಲಕ್ಷಣದ ಕೈಗೆ ಮಕ್ಕಳಿಲ್ಲವೆ? ಚಕ್ರಪಾಣಿಯೇ ಮಗನಾಗಬೇಕು. ಇದು ದೇವಕಿಯ ಕೈಲಕ್ಷಣ; ಇದು ಕೌಸಲ್ಯೆಯ ಕೈಲಕ್ಷಣ; ಇದು ದೇವಹೂತಿಯ ಕೈಲಕ್ಷಣ; ಅಮ್ಮಾ ಯಶೋದಮ್ಮಾ, ನಿನ್ನಂಥ ಪುಣ್ಯಾತ್ಮಳ ದರ್ಶನ ಇಷ್ಟುಕಾಲಕ್ಕೆ ನಮಗೆ ಲಭಿಸಿತು. ನಿನ್ನ ಮಹಿಮೆ

ಯನ್ನು ನಮಗಿಷ್ಟು ತೋರಿಸಮ್ಮಾ ಎಂದರು. ಅಮ್ಮನು ದೊಡ್ಡವರು ಹೀ ಗೆಂದರೆ ಪಾಮರರ ಗತಿಯೇನೆಂದು ಕೇಳಿದಳು. ನಾವು ದೊಡ್ಡವರು, ನೀವು ದೊಡ್ಡವರು; ದೊಡ್ಡದೊಡ್ಡವರು ಕೂಡಿ ಮತ್ತೇನಾಡಬೇಕಮ್ಮಾ, ಎಂದರು ಸ್ವಾಮಿಗಳು. ಭಿಕ್ಷಭೋಜನಗಳಾದವು. ಆಯಾಸವಾಗಿದ್ದುದರಿಂದ ಜನರು ವಿಶ್ರಮಿಸಿಕೊಂಡರು. ಅಮ್ಮನು ಗುಡಿಯಲ್ಲಿದ್ದರೆ ಜನರು ಧೈರ್ಯದಿಂದ ಒಳಗೆ ಬರುತ್ತಿರಲಿಲ್ಲ. ಸ್ವಾಮಿಗಳಿರುವದರಿಂದ ಮಠದ ಸೇವಕರು ಯಾರನ್ನೂ ಬಿಡುತ್ತಿರಲಿಲ್ಲ. ಅಮ್ಮನಾದರೋ ತನ್ನ ನಿಯಮಿತ ಅಹ್ನಿಕಗಳನ್ನು ಮಾಡದೆ ಭೋಜನ ಮಾಡುತ್ತಿರಲಿಲ್ಲ. ಅಮ್ಮನ ಆಹ್ನಿಕವೆಂದರೆ ಹಾಡುಹೇಳುತ್ತಾ ರಂಗವಲ್ಲಿಯಲ್ಲಿ ಚಿತ್ರಬರೆಯುವದು. ಅದರಲ್ಲಿ ತನ್ನ ಅನುಕೂಲತೆಯಂತೆ ವಾರಗಳಿಗೆ ವಿಭಾಗಮಾಡಿಕೊಂಡಿದ್ದಳು. ಚಿತ್ರಬರೆದು ಕುಂಕುಮಾಕ್ಷತೆ ಗಳಿಂದ ಪೂಜಿಸಿ ದಾಸರು ಅನುಗ್ರಹಿಸಿದ್ದ ವೇಣುಗೋಪಾಲನನ್ನು ಮುಂದಿಸಿ ಹಾಡುವಳು. ಹಾಡಿದಂತೆ ನೋಡುವಳು, ನಲಿಯುವಳು. ಅಮ್ಮನು ಪರ ಮಾತ್ಮನ ಲೀಲಾವಿಭೂತಿಗಳನ್ನು ನೋಡಿ ಹಾಡಿದಂತೆ ಯಾವ ದಾಸರೂ ನೋಡಲಿಲ್ಲ, ಹಾಡಲಿಲ್ಲ. ಜ್ಞಾನಯೋಗಿಗಳಿಗೆ ಈ ಭಾಗ್ಯವೇ ಇಲ್ಲ. ವಸಾರೆ ಯಲ್ಲಿ ವ್ಯಾಸಪೀಠದ ಮುಂದೆ ಕುಳಿತಿದ್ದ ಸ್ವಾಮಿಗಳು ಅಮ್ಮನ ಹಾಡುಗಳನ್ನು ಕೇಳಿದರು. ಬಾಲಗೋಪಾಲನ ನರ್ತನದ ಕಿರಿಗೆಜ್ಜೆಯ ಧ್ವನಿಗೆ ವಿಸ್ಮಿತ ರಾದರು. ಅಮ್ಮನು ಜಗಮೋಹನಮೂರ್ತಿಯನ್ನು ಶಿಶುವಾಗಿಮಾಡಿ ಬಗಲಿ ನಲ್ಲೆತ್ತಿಕೊಂಡು ಇವನೇ ನನ್ನ ರಂಗಧಾಮನೆಂದು ಸ್ವಾಮಿಗಳ ಮುಂದೆ ಕೂಡಿಸಿದಳು. ನನ್ನ ಮುದ್ದುಕಂದನಿಗೆ ಮಂಗಳಾಕ್ಷತೆಯನ್ನು ಕೊಡಿರೆಂದು ಬೇಡಿದಳು.

ಸುಮತೀಂದ್ರರು ಬಾಲನನ್ನೆತ್ತಿಕೊಂಡು ಆನಂದಬಾಷ್ಪಗಳಿಂದ ವ್ಯಾಸರಾಯರಿಗೆ ಕನಕದಾಸರು ಪರಮಾತ್ಮನನ್ನು ತೋರಿಸಿದಂತೆ, ವಾದಿ ರಾಜರಿಗೆ ವೈಕುಂಠದಾಸರು ಕೇಶವನನ್ನು ತೋರಿಸಿದಂತೆ, ನನಗೆ ನೀನು ಬಾಲಮುಕುಂದನ ದರ್ಶನಮಾಡಿಸಿದೆ. ನೀನೇ ಯಶೋದೆ, ನೀನೇ ದೇವಕಿ, ನೀನೇ ಕೌಸಲ್ಯೆ, ನೀನೇ ಅನಸೂಯೆ, ನಿನ್ನನ್ನು ಏನೆಂದು ಕರೆಯಲಮ್ಮಾ ಎಂದು ಅಭಿನಂದಿಸಿದರು. ಅಮ್ಮನು ಇವನೇ ನಿಮ್ಮ ಮೂಲರಾಮನೆಂದು "ರಾಮ ಶ್ರೀರಘುನಂದನ" ಎಂಬದಾಗಿ ಹಾಡಿ—

ಮದನಕೋಟಿ ಮೋಹನಾಂಗ
ಮಾಧವ ಪುಣ್ಯಚರಿತ ಕರುಣಾಪಾಂಗ
ಹೆಳವನಕಟ್ಟೆನಿಲಯ ವೆಂಕಟಶ್ರೀರಂಗ
ಸುಮತೀಂದ್ರ ಹೃದಯ ಪಂಕಜಭೃಂಗ
ಸದಾನಂದ
ಕದನವಿಕ್ರಮ ಬಾಹುಕೋದಂಡಧೃತ ಸೀತಾ

"ರಾಮ ಶ್ರೀರಘುನಂದನ" ಎಂಬ ಕಡೆಯ ನುಡಿಯಿಂದ ಸ್ವಾಮಿಗಳಿಗೆ ನಮಸ್ಕಾರಮಾಡಿದಳು.

ಮಾರನೆಯ ಪ್ರಾತಃಕಾಲ ಸ್ವಾಮಿಗಳು ಆಹ್ನಿಕದಲ್ಲಿರುವಾಗ ತಪ್ತಮುದ್ರಾಂಕನಕ್ಕಾಗಿ ಶಿಷ್ಯರು ಕಾದಿದ್ದಾರೆ. ಸುದರ್ಶನಹೋಮ ಮೊದಲಾದ ಕಾರ್ಯಗಳು ನಡೆದಿವೆ. ಅಮ್ಮನು ನಮಸ್ಕರಿಸಿ—ಸ್ವಾಮಿಾ, ಪೂರ್ವಪುಣ್ಯದಿಂದ ವಿಷ್ಣುಭಕ್ತರ ಮನೆಯಲ್ಲಿ ಹುಟ್ಟಿ ವಿಷ್ಣುಭಕ್ತರ ಮನೆಯನ್ನು ಸೇರಿ, ಶ್ರೀಕೃಷ್ಣಮೂರ್ತಿಯ ಸೇವೆಮಾಡಿಕೊಂಡು ಈ ಹೆಣ್ಣು ಜನ್ಮವನ್ನು ನೀಗುತ್ತಿರುವೆನು. ತೀರ್ಥಯಾತ್ರೆಗಳನ್ನು ಮಾಡಿ ಅರಿಯೆ. ದೊಡ್ಡವರ ಸೇವೆಮಾಡುವ ಪುಣ್ಯ ಜನ್ಮದಲ್ಲೇ ಇಲ್ಲ. ಅನೇಕ ತೀರ್ಥಯಾತ್ರೆಮಾಡಿ ಪಾಮರರನ್ನು ಪುನೀತಮಾಡುವವರು ತಾವು. ಅಂಕಿತವಿಲ್ಲದಕಾಯ ನಿಷಿದ್ಧವೆಂದು ಪುರಂದರದಾಸರು ಹೇಳಿರುವರು. ವ್ಯಾಸರಾಯರು ದಾಸರಾಯರಿಗೆ ಚಕ್ರಾಂಕನಮಾಡಿ ಪಾವನಗೊಳಿಸಿದಂತೆ ನನ್ನನ್ನೂ ಪಾವನಗೊಳಿಸಬೇಕು ತಾವು, ಎಂದು ಪ್ರಾರ್ಥನೆಮಾಡಿದಳು. ಮುದ್ರಾಧಾರಣೆಗಾಗಿ ಎರಡು ಕೈಗಳನ್ನೂ ಚಾಚಿದಳು. ಶ್ರೀಗಳವರು ದೇವಿಯ ಶಂಖಚಕ್ರಾಂಕಿತ ಹಸ್ತಗಳನ್ನು ನೋಡಿ—ಅಮ್ಮಾ, ನಿನಗೆ ಶ್ರೀಹರಿಯೇ ಚಕ್ರಾಂಕನಮಾಡಿರುವನು. ನಿನ್ನಂಥವಳಿಗೆ ಚಕ್ರಾಂಕನಮಾಡುವ ಅಧಿಕಾರ ನಮ್ಮದಲ್ಲ. ನಿನ್ನ ದರ್ಶನದಿಂದ ಪಾಮರರ ಮಾತಿರಲಿ, ನಾವು ಪುನೀತರಾದೆವು. ಎಂದು ದೇವಿಯ ಗುಣಕಥನಮಾಡಿದರು.

ಸ್ತ್ರೀಯರ ಚಿತ್ತವು ಬಲು ಚಂಚಲವೆಂದೂ ಸ್ತ್ರೀಯರು ಚಪಲೆಯರೆಂದೂ ಕವಿಗಳು ವರ್ಣಿಸುವರು. ಅವರು ಕೊಟ್ಟ ದೋಷವು ರೂಢಿಯಲ್ಲಿ ಗುಣವಾಗಿ ಪರಿಣಮಿಸಿರುವದು. ಆ ಶಬ್ದಗಳ ಪ್ರಯೋಗಮಾಡದಿದ್ದರೆ

ಸ್ತ್ರೀಯರ ಸ್ತ್ರೀತ್ವವನ್ನು ವರ್ಣಿಸಿದಂತಾಗುವದಿಲ್ಲವೆಂದು ಬೇರೇ ಜನರ ಭಾವನೆಯಾಗಿರುವದು. ಗೀತೆಯಲ್ಲಿ ಅರ್ಜುನನು "ಚಂಚಲಂಹಿಮನಃ ಕೃಷ್ಣ" ಎಂದು ಮನಸ್ಸಿನ ಲಕ್ಷಣವನ್ನು ಹೇಳಿರುವನು. ಆ ಚಾಂಚಲ್ಯವು ಪುರುಷರ ಅಥವ ಸ್ತ್ರೀಯರ ಚಿತ್ತವೆಂಬ ವಿಶೇಷಣದಿಂದ ಕೂಡಿರುವದಿಲ್ಲ. ಮನಸ್ಸು ಜಡವಲ್ಲ. ಯಾವ ದೇಹದಲ್ಲಿದ್ದರೂ ಅದರ ಲಕ್ಷಣ ಅದಕ್ಕಿರುವದು. ಸ್ತ್ರೀಂಪುಂ ದೇಹಗಳು ಸಾಧಕಬಾಧಕಗಳಲ್ಲ. ಅಸ್ವತಂತ್ರತೆಯಿಂದ ಚಾಂಚಲ್ಯ ಬರುವದು ಸ್ವಭಾವ. ಮನಸ್ಸಿನ ದಾರಿಯರಿತು ತಕ್ಕ ವ್ಯವಸಾಯಗಳಿಂದ ಸಂಸ್ಕರಿಸಿದರೆ ಸ್ತ್ರೀಯರಂಥಾ ಸ್ಥಿರಚಿತ್ತರು, ಸ್ತ್ರೀಯರಂಥಾ ಸ್ಥಿತಪ್ರಜ್ಞರು-ಪುರುಷರಾಗುವದು ನಿದಾನವೆಂದು ರೂಢಿಯಿಂದ ಗೊತ್ತಾಗುತ್ತದೆ. "ಬಹುಶಾಖಾಹ್ಯನಂತಾಶ್ಚ ಬುದ್ಧಿರವ್ಯವಸಾಯಿನಾಂ" ಎಂಬ ಗೀತೋಕ್ತಿಯು ಅವ್ಯವಸಾಯಿಗಳ ಚಿತ್ತದ ಲಕ್ಷಣವನ್ನು ಇದ್ದಂತೆ ವರ್ಣಿಸಿದೆ. ಇಂದಿಗೂ ನಮ್ಮ ಧರ್ಮದ ಆಜ್ಞೆಯನ್ನು ಸ್ತ್ರೀಯರಂತೆ ಪುರುಷರು ಪಾಲಿಸುತ್ತಿಲ್ಲ. ಪ್ರಾಣಾಪತ್ತಿನಲ್ಲೂ ಸ್ಥಿರಮತಿಗಳಾದ ಸ್ತ್ರೀಯರ ನಿದರ್ಶನಗಳಿಗೆ ಬಡತನ ಬಂದಿಲ್ಲ. ಮುಖ್ಯವಾಗಿ ಯೋಗ್ಯ ಮಾರ್ಗದರ್ಶನ ಬೇಕು. ಮಾರ್ಗದಲ್ಲಿರುವರಿಗೆ ವಿಘ್ನಗಳು ಬರದಿರಬೇಕು. ಆ ಎಲ್ಲ ಭಾಗ್ಯವೂ ದೊರೆತುದರಿಂದ ಗಿರಿಯಮ್ಮನು ಮಹಾನುಭಾವಳಾದಳು. ಗಿರಿಯಮ್ಮನ ಮಾರ್ಗಕ್ಕೆ ಸಹಾಯಕನಾಗಿ ಗಂಡನಾದ ತಿಪ್ಪರಸನು ಧನ್ಯನೆನಿಸಿದನು. ದೂರ್ವಾಸ ಮುನಿಗಳು ಪಾಂಡವರ ಸತ್ವಪರೀಕ್ಷೆಗೆ ಬಂದಾಗ—"ನಾವೆಲ್ಲಾ ಕರೆದರೆ ಬರುವದಿಲ್ಲ. ಸ್ತ್ರೀಯರು ಮೊರೆಯಿಟ್ಟರೆ ಕನಿಕರದಿಂದ ಕೃಷ್ಣನು ಬೇಗ ಬರುವನು. ನಮ್ಮ ವಿಪತ್ತು ದೂರಾಗುವದು. ದ್ರೌಪದೀ! ಕೃಷ್ಣನನ್ನು ನೀನು ಕರೆ" ಎಂದು ಧರ್ಮನಂದನನು ಆಡಿದಮಾತು ಬಲು ಅರ್ಥವತ್ತಾಗಿರುವದು. ಬಹು ದೇಹದಂಡನೆಯಿಂದ ಪುರುಷರು ಸಾಧಿಸುವದನ್ನು ಸ್ತ್ರೀಯರು ಸುಲಭವಾಗಿ ಸಾಧಿಸಿಬಿಡುವರು. ಒಂದೇ ಮಾತಿನಲ್ಲಿ ಹೇಳುವದಾದರೆ ಕರ್ಮಯೋಗಿಗಳು ಕಠಿಣಯಜ್ಞಾದಿ ಕರ್ಮಗಳಿಂದ ಯಾವ ಚಿತ್ತಶುದ್ಧಿಯನ್ನು ಪಡೆಯುವರೊ, ಅಸಂಪ್ರಜ್ಞಾತಾದಿ ಸಮಾಧಿಗಳಿಂದ ಯೋಗಿಗಳು ಯಾವ ಯೋಗವನ್ನು ಸಂಪಾದಿಸುವರೋ, ಅದನ್ನು ಗಿರಿಯಮ್ಮನು ಕೇವಲ ಈಶ್ವರ ಪ್ರೇಮದಿಂದ ಸಂಪಾದಿಸಿದಳು.

ಗಿರಿಯಮ್ಮನ ಜೀವನದಲ್ಲಿ ಒಂದೊಂದೂ ಅತಿಮಾನುಷ ಘಟನೆಗಳಿವೆ. ಹಿಂದೆಲ್ಲಾ ಹೇಳಿದಂತೆ ಮಿತಿಮಾನವರಿಗೆ ಮಾನವರ ಚರ್ಯೆ ಅರ್ಥವಾಗುವದಿಲ್ಲ. ಅಂತೆಯೇ ಅತಿಮಾನವರ ಚರ್ಯೆ ಮಾನವರಿಗೂ ಅರ್ಥವಾಗುವದಿಲ್ಲ.

ಕೆಳಗೆ ಬರೆದಿರುವ ಮಳೆಯ ಹಾಡಿನಿಂದ ಜನರು ಮಳೆಯಿಲ್ಲದೆ ಕಂಗೆಟ್ಟು ಅಮ್ಮನನ್ನು ಪ್ರಾರ್ಥಿಸಿದಾಗ ಮಳೆಗರೆಸಿ ಜನರಕ್ಷಣೆಮಾಡಿದ ಕಥೆಯು ವ್ಯಕ್ತವಾಗುತ್ತದೆ.

ಮುಖಾರಿ ರಾಗ

ಮಳೆಯ ದಯಮಾಡೋ - ರಂಗ - ನಿಮ್ಮ
ಕರುಣ ತಪ್ಪಿದರೆ ಉಳಿಯದು ಲೋಕ ||ಪ||
ಪಶುಜಾತಿ ಹುಲ್ಲೆ ಸಾರಂಗ ಮೃಗಗಳು ಬಹಳ
ಹಸಿದು ಬಾಯಾರಿ ಬತ್ತಿದ ಕೆರೆಗೆ ಬಂದು
ತೃಷೆಯಡಗದೆ ತಲ್ಲಣಿಸಿ ಮೂರ್ಛೆಗೊಂಡು
ದೆಶೆದೆಶೆಗೆ ಬಾಯ್ಬಿಡುತಿಹವಯ್ಯ ಹರಿಯೆ ||೧||
ಧಗೆಯಾಗಿ ದ್ರವಗುಂದಿ ಇರುವ ಭಾವಿಯ ನೀರ
ಮೊಗೆಮೊಗೆದು ಪಾತ್ರೆಯಲಿ ನಾರಿಯರು
ಹಗಲೆಲ್ಲ ತರುತಿಹರು ಯೋಚನೆಯ ಮಾಡುತ್ತ
ಬೇಗದಿಂದಲಿ ತರಿಸೊ ವೃಷ್ಟಿಯನು ಹರಿಯೆ ||೨||
ಸಂದುಹೋದವು ಜ್ಯೇಷ್ಠ ಆಷಾಢ ಶ್ರಾವಣ
ಬಂದಿದೇ ಭಾದ್ರಪದ ಮಾಸವೀಗ
ಇಂದು ಪುರಂದರಗೆ ಹೇಳಿ ವೃಷ್ಟಿಯ ತರಿಸೊ
ಸಂದೇಹವ್ಯಾಕೆ ಹೆಳವನಕಟ್ಟೆಯ ರಂಗ ||೩||

---

- ೨ -

ತಿಪ್ಪರಸನು ಪಟ್ಟದ ಶಾನುಭೋಗನಾಗಿದ್ದರೂ ಕೆಲಸವನ್ನು ಅವನ ತಮ್ಮ ವೆಂಕಟರಾಯನು ನಿರ್ವಹಿಸುತ್ತಿದ್ದನು. ತಿಪ್ಪರಸನ ಸ್ವಾಭಾವಿಕವಾದ ಸಾತ್ವಿಕತನಕ್ಕೆ ಕುಲಕರಣಿಕೆ ಒಪ್ಪುತ್ತಿರಲಿಲ್ಲ. ಆ ಕಾಲದ ಕುಲ

ಕರಣಿಕೆಯು ಗೊತ್ತಾದಕಾಲದಲ್ಲಿ ಕಂದಾಯವನ್ನು ವಸೂಲ್ಮಾಡುವದು ಮಾತ್ರವಾಗಿರಲಿಲ್ಲ. ಭೂಮಿಗೆ ಗೊತ್ತಾದ ಕಂದಾಯವಿರಲಿಲ್ಲ. ಕಂದಾಯವು ದ್ರವ್ಯರೂಪವಾಗಿರಲಿಲ್ಲ. ಒಬ್ಬ ಕುಲಕರಣಿಯ ಜೀವಿತದಲ್ಲಿ ಒಬ್ಬ ಗೊತ್ತಾದ ರಾಜಪ್ರತಿನಿಧಿಗೆ ಕಂದಾಯಕಟ್ಟಿದ ಅಭ್ಯಾಸವಿರಲಿಲ್ಲ. ಒಂದು ವರ್ಷ ಚಿತ್ರದುರ್ಗದ ನಾಯಕರಿಗೆ ಕಂದಾಯಕೊಟ್ಟರೆ ಮತ್ತೊಂದು ವರ್ಷ ಮರಾಠಾ ಸರ್ದಾರರಿಗೆ ಕೊಡಬೇಕಾಗಿತ್ತು. ಮತ್ತೆ ಮೈಸೂರ ನವಾಬರ ದಾಳಿಯಾದರೆ ಅವರಿಗೇ ಕಂದಾಯಕೊಟ್ಟು ಅಂಕಿತರಾಗಬೇಕಾಗಿತ್ತು. ಕುಲಕರಣಿಯ ಜವಾಬ್ದಾರಿಯೆಂದರೆ—ರೈತರನ್ನು ಹಿಡಿದು ಭೂಮಿಯನ್ನು ಹಂಚಿ ವ್ಯವಸಾಯಮಾಡಿಸಬೇಕು. ರೇಖೆಯಕಾಲದಲ್ಲಿ ಧಾನ್ಯವನ್ನು ಅಳೆಸಿ ರಾಜಾದಾಯವನ್ನು ಪ್ರತ್ಯೇಕಿಸಿಡಬೇಕು. ಅದನ್ನು ವರ್ತಕರಿಗೆ ಮಾರಿ ಹಣವನ್ನು ವಸೂಲ್ಮಾಡಬೇಕು. ಅಮಿಲನು ವರಾತಮಾಡಿದಾಗ ಹಣವನ್ನು ಕಟ್ಟಬೇಕು. ಅಮಿಲನ ಅನುಗ್ರಹವಿಲ್ಲದ ಕುಲಕರಣಿಗೆ ರಾಜದಂಡ ತಪ್ಪುತ್ತಿರಲಿಲ್ಲ. ಸ್ವಲ್ಪ ಹೆಚ್ಚುಕಡಮೆಯಾದರೂ ನಿಗಡಬಂಧನವೇ ದಂಡನೆಯಾಗುತ್ತಿತ್ತು.

ಹೀಗಿರಲು ಏನು ಕಾರಣವೋ ವೆಂಕಟರಾಯನಮೇಲೆ ಅಮಿಲನ ಅನುಗ್ರಹ ತಪ್ಪಿತು. ಅಮಿಲನು ಕೇಳಿದಾಗ ಹಣ ಒದಗುವದು ಕಠಿಣವಾಯಿತು. ವೆಂಕಟರಾಯನಿಗೆ ಅಪಮಾನಮಾಡುವದೇ ಅಮಿಲನ ಉದ್ದೇಶವಾಗಿದ್ದುದರಿಂದ ನಿಗಡಬಂಧನವಾಯಿತು. ಮೇಲುಪಟ್ಟ ಅಧಿಕಾರಿಗಳಲ್ಲಿ ದೂರುಹೇಳಿ ಪಾರಾಗುವದು ಈಗಿನಂತೆ ಸುಲಭಸಾಧ್ಯವಾಗಿರಲಿಲ್ಲ. ಅಮಿಲನು ಮೇಲ್ಪಟ್ಟ ಫೌಜುದಾರ (Dy. Commissioner) ನಿಗೆ ವರದಿಮಾಡಿದ ಅಪರಾಧವಾದರೂ—ವೆಂಕಟರಾಯನು ಗಿರಿಯಮ್ಮನೆಂಬ ಪವಾಡಗಾತಿಯು ಮಾಡುವ ಸಮಾರಾಧನೆಗೆ ಬಟಾಯಿ ಧಾನ್ಯವನ್ನು ಪಯೋಗಿಸಿ ರಾಜದ್ರೋಹಮಾಡಿದ್ದಾನೆಂಬುವದಾಗಿತ್ತು. ಅಪರಾಧ ವೆಂಕಟರಾಯನಿಗೆ ಕೂಡುವಂತಿರಲಿಲ್ಲ. ಹಣಬರದಿರಲು ವರ್ತಕರಿಗೆ ವ್ಯಾಪಾರವಾಗದಿದ್ದದ್ದು ಕಾರಣವಾಗಿತ್ತು. ಇಂಥಾ ಪ್ರಸಂಗದಲ್ಲಿ ಅಮಿಲನು ಅವಧಿಯನ್ನು ಕೊಟ್ಟು ನಿಧಾನವಾಗಿ ವಸೂಲ್ಮಾಡಿಕೊಳ್ಳಬಹುದಾಗಿತ್ತು. ತಮ್ಮ ಕರಣೀಕನಿಗೆ ರಾಜದಂಡವಾದ್ದನ್ನು ಸೈರಿಸದ ರೈತರು ಧೈರ್ಯತಾಳಿ ಕೊಟ್ಟ

ಬುತ್ತಿಗಳನ್ನು ಕಟ್ಟಿಕೊಂಡು ಫೌಜುದಾರನ ಬಾಗಿಲು ಕಾಯ್ದರು. ವೆಂಕಟ ರಾಯನು ಕೊಡಬೇಕಾದ ಹಣವನ್ನು ತಾವೇ ಕೊಡುವೆವೆಂದು ವಿಜ್ಞಾಪಿಸಿ ದರು. ಅಧಿಕಾರಿಯು ಅವಿಾಲನ ವರದಿಯನ್ನೂ ರೈತರ ಹೇಳಿಕೆಯನ್ನೂ ವಿಮರ್ಶೆಮಾಡಿದನು. ಇಷ್ಟುಮಾತ್ರಕ್ಕೇ ವೆಂಕಟರಾಯನಂಥಾ ದೊಡ್ಡ ಮನುಷ್ಯನಿಗೆ ಅಪಮಾನಮಾಡಬೇಕಾಗಿರಲಿಲ್ಲವೆಂದು ಪಶ್ಚಾತ್ತಾಪಪಟ್ಟನು. ಗಿರಿಯಮ್ಮನೆಂಬ ಪವಾಡಗಾತಿಯ ಕಥೆಯೇನೆಂದು ವಿಚಾರಿಸಿದನು. ಅಮ್ಮನ ವಿಚಾರವನ್ನೂ ರೈತರಿಗೆ ಆಕೆಯಲ್ಲಿರುವ ಭಕ್ತಿಯನ್ನೂ ತಿಳಿದು ಆ ಸತ್ಪುರು ಷಳ ದರ್ಶನಕ್ಕೆ ತಾನೇ ಬರುವೆನೆಂದು ಹೊರಟನು.

ಫೌಜುದಾರನು ಗಿರಿಯಮ್ಮನ ದರ್ಶನಕ್ಕೆ ಬರುವ ಸಂಗತಿ ಅವಿಾಲ ನಿಗೆ ತಿಳಿದು ಭಯವಾಯಿತು. ವೆಂಕಟರಾಯನಿಗೆ ನಿಗಡಬಂಧನ ಮಾಡಿ ಸಿದ್ದಿರಲಿ, ಅಮ್ಮನ ದರ್ಶನಮಾಡಿದ ಫೌಜುದಾರನು ತನಗೇ ಅದನ್ನೆಲ್ಲಿ ತಿರುಗಿಸುವನೋ ಎಂಬ ಭಯವಾಯಿತು. ಈ ಕಾರಣದಿಂದ ಅವಿಾಲನು ವೆಂಕಟರಾಯನನ್ನು ಬಿಡುಗಡೆಮಾಡಿದನು. ಫೌಜುದಾರನ ಅನುಗ್ರಹ ಪಡೆಯಬೇಕೆಂದು ರಾಜೌತಣವನ್ನೇರ್ಪಡಿಸಿ ವಾದ್ಯವೈಭವದಿಂದ ಎದು ರ್ಗೊಂಡನು. ಅಧಿಕಾರಿಯು—"ನಾನು ಬಂದಿರುವದು ರಾಜಕಾರ್ಯಕ್ಕಲ್ಲ, ಅಮ್ಮನವರ ದರ್ಶನಕ್ಕೆ; ಅಮ್ಮನವರು ಕೊಟ್ಟ ಪ್ರಸಾದವನ್ನು ಸ್ವೀಕರಿಸು ವದಕ್ಕೆ; ಆದ್ದರಿಂದ ನಿಮ್ಮ ಊಟಕ್ಕೆ ಬರುವದಿಲ್ಲ. ನೀವು ನಿಮ್ಮ ಕೆಲಸ ಮಾಡುತ್ತಿದ್ದು ಕರೆದಾಗ ಬರಬಹುದೆಂದು" ಹೇಳಿಕಳುಹಿಸಿದನು.

ಫೌಜುದಾರನು ಅಮ್ಮನವರ ದರ್ಶನ ಮಾಡಿದನು. ಅವರ ದಿನಚ ರ್ಯಕ್ಕೂ ಅವರನ್ನು ಹಿಂಬಾಲಿಸಿದ ಭಕ್ತಜನರ ಭಕ್ತಿಭಾವಗಳಿಗೂ ಮೆಚ್ಚಿ ದನು. ಅಮ್ಮನವರಿಗೆ ಏನು ಸೇವೆ ಮಾಡಲೆಂದು ತಾನೇ ಕೇಳಿದನು. ಅವರು 'ದೇವರಲ್ಲಿ ಭಕ್ತಿಯಿಡಿರಿ, ನನಗೂ ಅಂಥಾ ಭಕ್ತಿ ಬರ ಲೆಂದು ಪ್ರಾರ್ಥನೆ ಮಾಡಿರಿ' ಎಂದು ಹೇಳಿದರು. ಈ ಮಾತು ಕೇಳಿ ಅಧಿಕಾರಿಯ ಸ್ಥಿತಿಯೇ ಬದಲಾಯಿತು. ತಾಯಿಾ, ತಾವಂತು ಏನೂ ಅಪೇ ಕ್ಷಿಸುವರಲ್ಲ. ವೆಂಕಟರಾಯರಿಗಾದರೂ ಏನು ಮಾಡಿಕೊಡಲಿ, ಅಪ್ಪಣೆ ಯಾಗಬೇಕು ಎಂದು ಕೇಳಿದನು. ಅಮ್ಮನವರು ಅದನ್ನು ಅವರೇ ಕೇಳು ವರೆಂದರು. ವೆಂಕಟರಾಯರಿಗೆ ಲೌಕಿಕ ಬಿಡಿರೆಂದರೆ, ಲೌಕಿಕ ಅವರನ್ನು

ಬಿಡಲಿಲ್ಲವೆಂದರು. ಇಂಥಾ ಭಾಗವತಾಪಚಾರವಮಾಡಿದ್ದಕ್ಕೆ ಅಮಿಾಲನಿಗೆ ಶಿಕ್ಷೆಮಾಡುವೆನೆಂದು ಅಧಿಕಾರಿಯು ನುಡಿದನು. ಅಮ್ಮನವರು—ಬೇಡ ಬೇಡ! ಅಮಿಾಲನಿಗೆ ಶಿಕ್ಷೆಮಾಡುವದೂ ನನಗೆ ಶಿಕ್ಷೆಮಾಡುವದೂ ಒಂದೇ ಎಂದರು. ಅಧಿಕಾರಿಯು ತನಗೆ ಪ್ರಸಾದ ಅನುಗ್ರಹವಾಗಬೇಕೆಂದನು. ಅಮ್ಮನವರು ನಕ್ಕು—ಇವತ್ತು ನಮ್ಮ ಮನೆಯಲ್ಲಿ ನುಚ್ಚುಭಕ್ಕರಿ ತೊಕ್ಕು ಇಷ್ಟೇ! ಅದು ನಿಮಗೆ ಪ್ರಸಾದವಾದರೆ ಸಿದ್ಧವಾಗಿದೆಯೆಂದರು. ಅದನ್ನೇ ಸ್ವೀಕರಿಸಿ ಅಧಿಕಾರಿಯು ತನ್ನ ಬಿಡಾರಕ್ಕೆ ಬಂದನು.

ಅಮ್ಮನವರ ಮಾತು ಅಧಿಕಾರಿಯ ಹೃದಯವನ್ನು ಕೊರೆಯಿತು. ಅಮಿಾಲನು ಬ್ರಾಹ್ಮಣನಾಗಿ ಇಂಥಾ ಸತ್ಪುರುಷರ ದ್ರೋಹಗೆಳಿಸಿದನೇ ಎಂಬ ಪರಿತಾಪವಾಯಿತು. ಅಧಿಕಾರದಿಂದ ಘಟಿಸುವ ಪಾಪ ಸಜ್ಜನರ ಮನಸ್ಸಿನ ತಾಪಗಳನ್ನು ಕುರಿತು ಚಿಂತಿಸಿದನು. ಸಂಧ್ಯಾಕಾಲದಲ್ಲಿ ಅಮಿಾಲನಿಗೆ ಬಾರೆಂದು ಹೇಳಿಕಳುಹಿಸಿದನು. ಅಮಿಾಲರೆ, ಎಂಥಾ ಸಾತ್ವಿಕರಿಗೆ ಏನು ಅಪಮಾಡಿದಿರೆಂದು ಕೇಳಿದನು. ಅಮಿಾಲನು ದಿಕ್ಕು ತೋರದೆ—"ವೆಂಕಟರಾಯನು ಈ ಪ್ರಾಂತ್ಯಕ್ಕೆಲ್ಲಾ ಪಾಳಯಗಾರನಾಗಿದ್ದಾನೆ. ಸರ್ಕಾರದ ಕೆಲಸ ಸರಿಯಾಗಿ ಮಾಡುವುದಿಲ್ಲ. ಸಮಾರಾಧನೆ ಮಾಡಿಕೊಂಡೇ ಕಾಲ ಕಳೆಯುತ್ತಾನೆ" ಎಂಬ ವರ್ತಮಾನಗಳನ್ನು ಕೇಳಿ ಅವನನ್ನು ಕರೆಸಿನೆ. ಮಾತುಮಾತಿಗವನು ಅಮ್ಮನವರಆಣೆ ದೇವರಆಣೆ ಮಾಡಿ ನನ್ನನ್ನು ಛಲಿಸಿದನು. ನಾನು ಅವನನ್ನು ದಂಡಿಸಬೇಕಾಯಿತು. ನಿಗಡ ಬಂಧನ ಮಾಡಿದಾಗಲೂ ಅಮ್ಮನವರಆಣೆಯೆಂದು ಬೇಡಿಗಳನ್ನು ಮುರಿದಿದ್ದಾನೆ. ಇವನು ಮಾಂತ್ರಿಕನಿರಬಹುದೆಂದು ಕಾರಾಗೃಹದಲ್ಲಿಟ್ಟೆ. ಪ್ರಭುಗಳ ಸವಾರಿ ಬರುವದನ್ನು ಕೇಳಿ ಬಿಟ್ಟೆ. ಇಷ್ಟೇ ನಡೆದಿರುವ ಸಂಗತಿಯೆಂದು ವಿಜ್ಞಾಪಿಸಿದನು. ಅಧಿಕಾರಿಯು—ಅಮ್ಮನವರನ್ನು ಆಗಾಗ ದರ್ಶನಮಾಡಿ ಅವರಿಗೆ ಬೇಕಾದ ಅನುಕೂಲಗಳನ್ನು ಮಾಡಿಕೊಡಬೇಕೆಂತಲೂ, ಸಾತ್ವಿಕರನ್ನು ಕಂಡರೆ ಮರ್ಯಾದೆಯಿಂದ ವರ್ತಿಸಬೇಕೆಂತಲೂ, ಅಧಿಕಾರವು ಅಶಾಶ್ವತವೆಂತಲೂ, ಅಮಿಾಲನಿಗೆ ಬುದ್ಧಿಹೇಳಿದನು. ಅನಂತರ ವೆಂಕಟರಾಯನಿಗೆ ಪ್ರಭುವಿನ ಆಜ್ಞೆಯಾಯಿತು. ರಾಯನಿಂದ ಅಮ್ಮನವರ ಜನ್ಮಚರಿತ್ರೆಯನ್ನು ಕೇಳಿ ಫೌಜುದಾರನು ಪಾಪಕ್ಷಯವಾಯಿತೆಂದನು.

ಅಮ್ಮನವರು ಏನೂ ಅಪೇಕ್ಷಿಸುವುದಿಲ್ಲ; ನೀನು ಸಂಸಾರಿಯಾದ್ದರಿಂದ ಏನು ಬೇಕೋ ಕೇಳು; ಅದನ್ನು ಮಾಡಿಕೊಡುವೆನೆಂದು ಅಧಿಕಾರಿಯು ಕೇಳಿದನು. ವೆಂಕಟರಾಯನು—ಸ್ವಾಮಿ, ವಂಶಪಾರಂಪರ್ಯವಾಗಿ ನಮ್ಮ ಪರಗಣಿಯಲ್ಲಿ ಪ್ರತಿ ಗ್ರಾಮದಲ್ಲಿ ಭೂಮಿ, ಮನೆ, ಕಣ, ನಾಡಿಗತನ ಮತ್ತು ದೇಶಪಾಂಡೇಗಿರಿ ಇಷ್ಟನ್ನೂ ಮಾಡಿಕೊಡಬೇಕೆಂದು ಕೇಳಿದನು. ಅಧಿಕಾರಿಯು ಅವನು ಬೇಡಿದಂತೆ ನಡೆಸಿಕೊಟ್ಟನು.

## ಕಣ್ಣು ಕೊಟ್ಟ ಕಥೆ

ಗಿರಿಯಮ್ಮನವರು ಹಾಡಿದ "ತೋರಬಾರದೆ ನಿಮ್ಮ ಚರಿತೆಯ" ಎಂಬ ದೇವರ ನಾಮದಿಂದ ಪುಂಗನೂರು ರಾಜಕುಮಾರನಿಗೆ ಕಣ್ಣು ಬಂದ ಕಥೆಯು ಗೊತ್ತಾಗುತ್ತದೆ. ರಾಜಕುಮಾರನು ಹುಟ್ಟು ಕುರುಡನಾಗಿರಲಿಲ್ಲವಂತೆ! ಮಧ್ಯಕಾಲದಲ್ಲಿ ಅಂಧತ್ವವುಂಟಾಗಲು ತಿರುಪತಿಯಲ್ಲಿ ಸೇವೆ ಮಾಡಿದನಂತೆ! ವೆಂಕಟಪತಿಯು ಒಂದು ಕಣ್ಣು ಕೊಟ್ಟು ಮತ್ತೊಂದು ಕಣ್ಣನ್ನ ಭಕ್ತಳಾದ ಗಿರಿಯಮ್ಮನು ಕೊಡುವಳೆಂದು ಸ್ವಪ್ನದಲ್ಲಿ ಆಜ್ಞೆಮಾಡಿದನಂತೆ! ರಾಜಕುಮಾರನು ಅಮ್ಮನವರಬಳಿಗೆ ಬರಲು ಒಂದು ಅರಳೀ ಎಲೆಯ ಮೇಲೆ ತಾವಿಟ್ಟಿದ್ದ ನಂದಾದೀಪದ ಕಪ್ಪನ್ನು ತೆಗೆದು ಕಣ್ಣಿಗೆ ಸವರಿದರಂತೆ! ಆದರಿಂದ ರಾಜಕುಮಾರನ ಅಂಧತ್ವ ಪರಿಹಾರವಾಗಿ ಅವನು ದೇವರ ಸೇವೆ ಮಾಡಿದನಂತೆ!

ಮೇಲ್ಕಂಡ ಪದಗರ್ಭವು ಕೆಳಗಿನ ಮೂರು ನುಡಿಗಳಿಂದ ಪೂರ್ತಿಯಾಗಿದೆ.

—ಪದ—

ತೋರಬಾರದೆ ನಿಮ್ಮ ಚರಿತೆಯ
ನರರೊಳು ನಗೆಗೇಡು ಮಾಡದೆ ||ಪ||
ಕಲ್ಲೊಳು ಕಾಂತೆಯ ಮಾಡಿದವನೆಂ
ದೆಲ್ಲರು ಜಗದೊಳು ಪೇಳುವರು
ಅಲ್ಲಿ ಮಾಡಿದಹಾಗೆ ಇಲ್ಲಿ ತೋರಿಸಿದರೆ
ಬಲ್ಲಿದನೆನ್ನೊಡೆಯ ದೊಡ್ಡವನೆಂದು ಸಾರುವೆ ||೧||
ಅಹಹ ಕುಬುಜೆಯಳ ತನುವನೆತ್ತಿ

ಮಹಿಯೊಳು ಯುವತಿಯ ಮಾಡಿದೆಯೆಂಬರು
ಬಹು ಪರಾಕ್ರಮವನ್ನು ಈಗ ತೋರಿಸಿದರೆ
ಅಹುದೊ ಎನ್ನೊಡೆಯ ದೊಡ್ಡವನೆಂದು ಹೊಗಳುವೆ ॥೨॥
ನೀನೇ ಗತಿಯೆಂದು ಬಂದ ಭಕ್ತನ ಕ
ಣ್ಣೊನವತಿದ್ದಿ ನಿಜವ ತೋರಿಸಯ್ಯ
ದೀನದಯಾಳು ಹೆಳವನಕಟ್ಟೆ ರಂಗಯ್ಯ
ದಾನಿ ಎನ್ನೊಡೆಯ ದೊಡ್ಡವನೆಂದು ಹೊಗಳುವೆ ॥೩॥

## ದಿಬ್ಬನ ಹಳ್ಳಿಯ ಪವಾಡದವರು

ಮಲೇಬಿನ್ನೂರಿಗೆ ಸಮೀಪದಲ್ಲಿ ದಿಬ್ಬನಹಳ್ಳಿಯೆಂಬ ಗ್ರಾಮವಿದೆ. ಅಲ್ಲಿ ಪವಾಡದವರು ಎಂಬ ಮನೆತನದ ಒಕ್ಕಲಿಗರಿದ್ದಾರೆ. ಅವರು ಪ್ರತಿ ವರ್ಷ ಹೆಳವನ ಕಟ್ಟೆಯ ರಂಗನಾಥನ ರಥೋತ್ಸವವಾಗುತ್ತಲೇ ದೇವರನ್ನು ತಮ್ಮ ಹಳ್ಳಿಯ ಮನೆಗೆ ಕರೆದುಕೊಂಡು ಹೋಗಿ ಸೇವೆಯನ್ನು ಸಲಿಸುತ್ತಾರೆ. ಕಾರಣವೇನೆಂದು ಕೇಳಿದರೆ ಕೆಳಕಂಡ ಕಥೆಯನ್ನು ಹೇಳುತ್ತಾರೆ.

ಗಿರಿಯಮ್ಮನ ಕಾಲದಲ್ಲಿ ರಂಗಪ್ಪನೆಂಬ ರಂಗನಾಥನ ಭಕ್ತನಿದ್ದನಂತೆ! ಅವನು ಅಮ್ಮನವರ ಭಕ್ತನಾಗಿ ನಡೆದುಕೊಳ್ಳುತ್ತಿದ್ದನಂತೆ. ದೇವರ ಸೇವೆಗೆ ಬಂದಿದ್ದ ಕಾಲದಲ್ಲಿ ಅವನ ಒಂದು ವರ್ಷದ ಶಿಶುವು ಮೃತವಾಯಿತಂತೆ! ದುಃಖಿತರಾದ ತಂದೆ ತಾಯಿಗಳನ್ನು ಸಂತೈಸಿ ಅಮ್ಮನವರು ಆ ಶಿಶುವನ್ನು ಬದುಕಿಸಿದರಂತೆ! ಈಬಗೆಯ ಪವಾಡ ಅವರ ಮನೆಯಲ್ಲಿ ನಡೆದ ಕಾರಣ ಮನೆತನಕ್ಕೆ ಪವಾಡದವರೆಂಬ ಹೆಸರು ಬಂದಿದೆ. ಕೂಸನ್ನು ಬದುಕಿಸೆಂದು ಪ್ರಾರ್ಥನೆ ಮಾಡಿದ ಪದದ ಕಡೆಯ ಮಾತುಗಳು—

ಶಿಶುತನದಲ್ಲಿ ನೀ ಪಶುಗಳನು ಸಲಹಿದೆ।
ಶಶಿಭೂಷಣಸಖನೆ ಶಿಶುವ ಕಾಪಾಡೋ ॥೨॥
ಸಾಂದೀಪನಿಗೊಲಿದೆ ಸಂದೇಹವಿಲ್ಲದೆ।
ತಂದೆ ಹೆಳವನಕಟ್ಟೆ ರಂಗಕರುಣಾಪಾಂಗ ॥೩॥

ಎಂಬದಾಗಿವೆ.

ಗಿರಿಯಮ್ಮನು ದಾಸಚತುಷ್ಟಯರ ಪಙ್ಕ್ತಿಗೆ ಸೇರಿದವಳು. ಸಾವಿರಾರು ದೇವರನಾಮುಗಳನ್ನೂ ಕೆಲವು ಕಥೆಗಳನ್ನೂ ಬರೆದವಳು. ಈಕೆಯ ಮಾತಿನಲ್ಲಿ ತತ್ವದ ವಿಸ್ತಾರವಿಲ್ಲ. ತಾರತಮ್ಯದ ಪದಗಳು ಈಕೆಯ ಬಾಯಲ್ಲಿ ಬಂದಂತೆ ಕಾಣುವದಿಲ್ಲ. ಶಿವನನ್ನು ಸ್ತುತಿಸಿದಂತೆ ಮಾಧವನನ್ನೂ ಸ್ತುತಿಸಿರುವಳು. ತಾಯಿಯ ಮನೆದೈವವಾದ ಮೈಲಾರ ಲಿಂಗನ ಸ್ತೋತ್ರಗಳು ಈಕೆಯ ಬಾಯಿಂದ ಬಲು ಸುಂದರವಾಗಿ ಬಂದಿವೆ. ಮಾರುತಿಯನ್ನು ಸ್ತೋತ್ರಮಾಡುವಾಗ ಹರಿದಾಸರು ಸಾಧಾರಣವಾಗಿ ಹನುಮ ಭೀಮ ಮಧ್ವ ಎಂಬ ಅವತಾರಗಳನ್ನು ವರ್ಣಿಸಿದಂತೆ ಈಕೆ ವರ್ಣಿಸಿಲ್ಲ. ಏಕನಾಥೆಯೆಂಬ ಗ್ರಾಮದೇವತೆಯನ್ನು ಪಾರ್ವತಿಯೆಂದೇ ಸ್ತೋತ್ರಮಾಡಿರುತ್ತಾಳೆ.

ಪರಮಾತ್ಮನನ್ನು ತಾಯಿಯೆಂದು ಉಪಾಸನೆ ಮಾಡಿದವರು ಕೆಲವರು; ತಂದೆಯೆಂದು ಉಪಾಸನೆ ಮಾಡಿದವರು ಕೆಲವರು; ಸಖನೆಂದು ಉಪಾಸನೆ ಮಾಡಿದವರು ಕೆಲವರು; ಪತಿಯೆಂದು ಉಪಾಸನೆ ಮಾಡಿದವರು ಕೆಲವರು; ವಿಟನೆಂದು ಉಪಾಸನೆ ಮಾಡಿದವರು ಕೆಲವರು. ಗಿರಿಯಮ್ಮನಾದರೋ ಪರಮಾತ್ಮನನ್ನು ಪುತ್ರನೆಂದೇ ಉಪಾಸನೆ ಮಾಡಿದವಳು. ಶ್ರೀಕೃಷ್ಣನನ್ನು ಮಗುವೆಂದೇ ಆಡಿಸಿ ಮಗುವೆಂದೇ ಮುದ್ದಿಸಿ ಮಗುವೆಂದೇ ಹಾಡಿ ಪಾಡಿದವಳು ಗಿರಿಯಮ್ಮ. ಸುಮತೀಂದ್ರ ಸ್ವಾಮಿಗಳು ಯಶೋದಮ್ಮಾ ಎಂದು ಕರೆದ ಮಾತನ್ನು ಪ್ರಮಾಣವಾಗಿಟ್ಟುಕೊಂಡು ಗಿರಿಯಮ್ಮನು ಯಶೋದಾದೇವಿಯ ಅವತಾರವೆನ್ನುವರು ಅನೇಕರು. ಯಾರೇ ಆಗಲಿ, ಗಿರಿಯಮ್ಮನು ದೊಡ್ಡವಳು, ಗಿರಿಯಮ್ಮನು ದೊಡ್ಡ ಕವಯಿತ್ರಿ. ಗಿರಿಯಮ್ಮನು ದೇವರನ್ನು ಕಂಡವಳು.

ಗಿರಿಯಮ್ಮನು ಪುರಂದರದಾಸರಂತೆ ಸರ್ವಸ್ವವನ್ನೂ ದಾನಮಾಡಿ ಜ್ಞಾನಪಡೆಯಲಿಲ್ಲ. ಗಿರಿಯಮ್ಮನು ವಿಜಯದಾಸರಂತೆ ತುತ್ತನ್ನಕ್ಕಾಗಿ ಕಷ್ಟಪಟ್ಟು ದೇಶ ದೇಶ ತಿರುಗಿ ಜ್ಞಾನ ಸಂಪಾದಿಸಲಿಲ್ಲ. ಗಿರಿಯಮ್ಮನು ಜಗನ್ನಾಥದಾಸರಂತೆ ರೋಗಗ್ರಸ್ತಳಾಗಿ ದೊಡ್ಡವರ ಮೊರೆಬಿದ್ದು ಆಯುಸ್ಸು ಐಶ್ವರ್ಯ ಆರೋಗ್ಯಗಳನ್ನೂ ಜ್ಞಾನವನ್ನೂ ಸಂಪಾದಿಸಲಿಲ್ಲ.

ಗಿರಿಯಮ್ಮನು ಯಾರಂತೆಯೂ ಕಷ್ಟಪಡದೆ ಎಲ್ಲರಂತೆ ಜ್ಞಾನವನ್ನು ಸಂಪಾದಿಸಿ ಎಲ್ಲರಿಗಿಂತಧಿಕವಾಗಿ ಪರಮಾತ್ಮನೊಡನೆ ಕೂಡಾಡಿದವಳು.

ಇಂತಹ ಗಿರಿಯಮ್ಮನ ಅಂತಿಮ ಕಾಲವೂ ಒಂದು ಬಗೆಯ ಪವಾಡವೇ ಆಯಿತು. ಹೊನ್ನಾಳಿಗೆ ಸಮೀಪದಲ್ಲಿ ಕಮ್ಮಾರಗಟ್ಟೆಯೆಂಬ ಗ್ರಾಮವಿದೆ. ಗ್ರಾಮವು ಪವಿತ್ರವಾದ ತುಂಗಭದ್ರಾ ತೀರದಲ್ಲಿದೆ. ಆ ಸ್ಥಳದಲ್ಲಿ ನದಿಗೆ ಸೋಪಾನವನ್ನೂ ಮಾರುತಿಗೆ ದೇವಸ್ಥಾನವನ್ನೂ ಅಮ್ಮನೇ ಕಟ್ಟಿಸಿದಳಂತೆ. ತನ್ನ ಅಂತಿಮ ಸ್ಥಾನದಲ್ಲಿ ಸ್ಮಾರಕವಿರಬೇಕೆಂದೇ ದೇವಾಲಯವನ್ನೂ ಸೋಪಾನವನ್ನೂ ಕಟ್ಟಿಸಿರಬೇಕೆಂದು ಬಲ್ಲವರು ತರ್ಕಿಸುತ್ತಾರೆ. ಅಮ್ಮನು ತುಂಗಭದ್ರೆಯ ಪೂರ್ಣ ಪ್ರವಾಹದಲ್ಲಿ ಅದೃಶ್ಯಳಾದಳೆಂದು ಕೆಲವರ ವಾದವಿದೆ. ಅಮ್ಮನ ಹೆಸರಿನ ಕಟ್ಟೆಯಿರುವದನ್ನು ನೋಡಿ ಅದು ಅಮ್ಮನು ನಿರ್ಯಾಣ ಮಾಡಿದ ಸ್ಥಳವೆಂದು ಕೆಲವರು ಹೇಳುತ್ತಾರೆ. ಎರಡನ್ನೂ ಬಿಟ್ಟು ಹಂಪಿಗೆ ಅಮ್ಮನನ್ನು ಕರೆದೊಯ್ಯುವರು ಕೆಲವರಿದ್ದಾರೆ. ಹೇಗೇ ಇರಲಿ, ಅಮ್ಮನ ಪುಣ್ಯತಿಥಿಯಾದ ಶ್ರಾವಣ ಶುದ್ಧ ಪಂಚಮಿಯ ದಿವಸ ಅಮ್ಮನು ಸ್ಥಾಪಿಸಿದ ಮಾರುತಿಗೆ ರಥೋತ್ಸವವಾಗುತ್ತದೆ. ಭಕ್ತಜನರು ದೇವರಿಗೆನಡೆದು ಕೊಂಡಂತೆ ಅಮ್ಮನಿಗೂ ನಡೆದು ಕೊಳ್ಳುತ್ತಾರೆ. ಅಮ್ಮನ ಕಟ್ಟೆಗೆ ಹರಕೆ ಮಾಡಿ ಇಷ್ಟಾರ್ಥವಾಯಿತೆಂಬುವರೂ ದೊರೆಯುತ್ತಾರೆ.

ಅಗಸರ ಬಂಡೆಯಾಗಿ ಸಾವಿರ ವರುಷವಿರುವದಕ್ಕಿಂತ ಪೂಜೆಗಲ್ಲಾಗಿ ಮೂರು ದಿವಸ ಬಾಳಿದರೂ ಸಾಕಲ್ಲವೆ ?

---

# ವೇಣುಗೋಪಾಲದಾಸರು
## (ಅವಶಿಷ್ಟ ಭಾಗ)

ವಿಜಯದಾಸರ ನಂತರ ವೇಣುಗೋಪಾಲದಾಸರ ಚರಿತ್ರೆಯನ್ನು ಪ್ರತ್ಯೇಕವಾಗಿ ಬರೆಯಬೇಕಾಗಿತ್ತು. ಹಾಗೆ ಬರೆಯುದಿಸಲು ಗ್ರಂಥದ ಪುಟ ಸಂಖ್ಯೆ ಬೆಳೆದೀತೆಂಬ ಭಯವು ಕಾರಣವಾಯಿತು. ವಿಜಯದಾಸರ ಚರಿತ್ರೆ ಯಲ್ಲಿ ಅಲ್ಪ ಪರಿಚಯಮಾಡಿಕೊಟ್ಟಿರುವದು ಸಾಕೆಂಬಷ್ಟು ತತ್ಕಾಲದ ತೃಪ್ತಿ ಯಾಯಿತು. ಆದರೂ ವಿಜಯದಾಸರ ಚರಿತ್ರೆಯ ಮೂವತ್ತಾರನೇ ಪುಟ ದಿಂದ ಮೂವತ್ತೊಂಭತ್ತರ ತನಕ ಬರೆದಿರುವ ವೇಣುಗೋಪಾಲರಾಯರ ಮಾತುಗಳ ಜೊತೆಗೆ ಅತಿ ಮುಖ್ಯವಾದ ಕಡೆಯ ಮಾತುಗಳನ್ನು ಹೇಳಬೇ ಕೆಂದೆನಿಸಿತು.

### ವೇಣುಗೋಪಾಲರಾಯರು

ತಿಮ್ಮಣ್ಣಯ್ಯನವರು, ಪಂಗನಾಮದ ತಿಮ್ಮಣ್ಣಯ್ಯನವರು, ವೇಣು ಗೋಪಾಲದಾಸರು, ಈ ಮೂರೂ ರಾಯರ ಹೆಸರುಗಳು. ತಿಮ್ಮಣ್ಣನೆಂಬುವದು ಮಾತಾಪಿತೃಗಳಿಂದ ಬಂದ ಹೆಸರಾದರೆ ಪಂಗನಾಮದ ತಿಮ್ಮಣ್ಣನೆಂಬುವದು ವಿಜಯದಾಸರಿಂದ ಬಂದ ಹೆಸರಾಯಿತು. ವೇಣುಗೋಪಾಲದಾಸರೆಂಬುವದು ಅವರ ಮುದ್ರಿಕೆಯ ಪ್ರಸಿದ್ಧಿಯಿಂದ ರೂಢಿಗೆ ಬಂದ ಹೆಸರಾಯಿತು. ತಂದೆಯ ಹಕ್ಕುದಾರಿಯಮೇಲೆ ತಿಮ್ಮಣ್ಣನವರೂ ಆದವಾನೀ ಸುಭೆಯ ದಿವಾನರಾ ಗಿದ್ದರೆಂಬ ನೆನಪು ವಾಚಕರಿಗಿರಬಹುದು. ಅವರು ನೀಚಸೇವೆಗೆ ಬೇಸತ್ತು ವಿಜಯದಾಸರ ಶಿಷ್ಯರಾಗಿ "ನಿನ್ನ ನಂಬಿದ ನರಗೆ ಅನ್ಯರಾಶ್ರಯವೇಕೋ ಚನ್ನಗುರು ವಿಜಯರಾಯ" ಎಂಬದಾಗಿ ಗುರುಸ್ತೋತ್ರ ಮಾಡಿರುವದನ್ನು ಓದಿದ ನೆನಪೂ ಇರಬಹುದು.

ರಾಯರ ಏಕಮಾತ್ರ ಪುತ್ರನನ್ನು ನವಾಬನು ಇಸ್ಲಾಂಧರ್ಮಕ್ಕೆ ಸೇರಿಸಿ ಕೊಂಡಮೇಲೆ ಅವನು ತನ್ನ ಮಗಳನ್ನೇ ಕೊಟ್ಟು ವಿವಾಹಮಾಡಿದನು. ಧರ್ಮಾಂತರನಾದ ರಾಯರ ಮಗನು ಕಾಲಾಂತರದಲ್ಲಿ ಆದವಾನಿಯ ಪದವಿ ಯನ್ನೂ ಅನುಭವಿಸಿದನು.

ರಾಯರ ಆಧಿಪತ್ಯದಕಾಲದಲ್ಲಿ ನವಾಬನ ಸಂಪೂರ್ಣ ಪ್ರೇಮವು ಅವರ ಮೇಲಿತ್ತು. ಮರಾಠರು ಆದವಾನಿಯನ್ನು ಸ್ವಾಧೀನಪಡಿಸಿಕೊಳ್ಳದಿರುವದಕ್ಕೂ ರಾಯರೇ ಕಾರಣರಾಗಿದ್ದರು. ಹೀಗಿದ್ದರೂ ಇತರ ಮುಸಲ್ಮಾನ ಅಧಿಕಾರಿಗಳು, ರಾಯರ ಮೇಲಿದ್ದ ನವಾಬನ ನಂಬಿಕೆಯನ್ನು ತಪ್ಪಿಸಬೇಕೆಂದು ಕುತಂತ್ರಹೂಡಿದರು. ಇಂತಹ ಕಾಲದಲ್ಲಿ ರಾಯರು ತಮ್ಮ ಮಗಳ ವಿವಾಹವನ್ನು ಅಟ್ಟಹಾಸದಿಂದ ಮಾಡಿದರು. ನವಾಬನೂ ಮುಸಲ್ಮಾನ ಅಧಿಕಾರಿಗಳೂ ರಾಯರ ಔತಣವುಂಡು ಲೌಕಿಕಕ್ಕನುಸರಿಸಿ ಮದಮಕ್ಕಳಿಗೆ ಯೋಗ್ಯಬಹುಮಾನವನ್ನೂ ಕೊಟ್ಟರು. ರಾತ್ರಿ ವಧೂವರರ ಮೆರವಣಿಗೆಯು ದಿವಾನರ ಪದವಿಗೆ ತಕ್ಕಂತೆ ಶೋಭಿಸುತ್ತಿತ್ತು. ಇವೆಲ್ಲವನ್ನೂ ನೋಡಿ ಸಹಿಸಲಾರದ ಕ್ಷುದ್ರಗಾರರು ಮಹಲಿನಮೇಲೆ ನಿಂತು ರಾತ್ರಿಯ ಅಮಲಿನಲ್ಲಿ ಮೆರವಣಿಗೆ ಚೆನ್ನಾಗಿದೆಯೆಂದು ಮಾತಾಡುತ್ತಿದ್ದ ನವಾಬನ ಬುದ್ಧಿಯನ್ನು ಕೆಡಿಸಿದರು, "ಈ ಕಾಫರನ ಮಗಳ ಮದುವೆಗೆ ಇಷ್ಟೇಕೆ ಅಟ್ಟಹಾಸ? ಎಷ್ಟು ಹಣ ತಿಂದು ನನ್ನ ಕಣ್ಣೆದುರಿಗೇ ಆಡಂಬರಮಾಡಿದ್ದಾನೆ! ಇವನ ಮನೆಯನ್ನು ಜಪ್ತಮಾಡಿರಿ; ಮೆರವಣಿಗೆಯಲ್ಲಿರುವ ಸವಾರರನ್ನೂ ಪಂಜಿನವರನ್ನೂ ಹಿಂದಕ್ಕೆ ಕರೆಸಿರಿ" ಎಂಬ ಉದ್ಗಾರಗಳು ನವಾಬನ ಬಾಯಿಂದ ಬರುವಂತೆ ಮಾಡಿದರು. ಕೇಳುವದೇನು? ಮನೆಗೆ ಹೋಗದಂತೆ ಸುತ್ತ ಆರಬರ ಪಹರೆಯಾಯಿತು. ಉತ್ಸವಭಂಗವಾಯಿತು.

ಅನಿರೀಕ್ಷಿತವಾಗಿ ಅವಿಚಾರದಿಂದಾದ ಅಪಮಾನದಿಂದ ರಾಯರು ಬಲು ಸಂಕಟಪಟ್ಟರು. ನಿರುಪಾಯರಾಗಿ ಮಲಗವೇಲಿಗೆ ಬಂದು ಕಂಬೋಲಿಯ ಶಾಸ್ತ್ರಮಾಡಿ ಬಂಧುಜನರನ್ನು ಬೀಳ್ಕೊಟ್ಟರು.

ಅತ್ತ ನವಾಬನ ಕಡೆಯವರು ದಿವಾನರ ಮನೆಯಲ್ಲಿ ದೊರೆತ ಮೂರು ಲಕ್ಷ ಸ್ವತ್ತನ್ನು ಜಪ್ತಮಾಡಿ ಬೊಕ್ಕಸಕ್ಕೆ ಸೇರಿಸಿದರು. ವೇಣುಗೋಪಾಲರಾಯರಮೇಲೆ ಆಪಾದನೆಹೊರಿಸಿ ದಂಡಿಸುವ ಹಂಚಿಕೆಯಲ್ಲಿದ್ದರು. ನವಾಬನಾದರೊ—ಸ್ವಜನರ ಮಾತು ಕೇಳಿ ಮಾಡಿದ ಕೃತಿಗೆ ವಿಷಾದಪಟ್ಟು ಮುಂದೇನು ಮಾಡಬೇಕೆಂಬುದರಲ್ಲಿ ಕರ್ತವ್ಯಮೂಢನಾಗಿದ್ದನು.

ವೇಣುಗೋಪಾಲರಾಯರಿಗೆ ಮಾಡಿದ ಅಪಮಾನದ ಸಂಗತಿ ಪುಣೆಯ ಪೇಶ್ವಾಯಿಗಳಿಗೆ ತಿಳಿಯಿತು. ಅವರು ನವಾಬನ ವರ್ತನೆಯನ್ನು ಖಂಡಿಸಿ

ರಾಯರ ಪದವಿಯನ್ನವರಿಗೇ ಕೊಟ್ಟು ಗೌರವಿಸದಿದ್ದರೆ ಪರಿಣಾಮವಾಗ ಲಾರದೆಂದು ರಾಯಸ ಕಳುಹಿಸಿದರು. ಮುಸಲ್ಮಾನರ ಪ್ರಾಬಲ್ಯವಡಗಿ ಮಹಾರಾಷ್ಟ್ರರಿಗೆ ಅಂಜುತ್ತಿದ್ದ ಕಾಲವದಾಗಿದ್ದುದರಿಂದ ನವಾಬನೇ ರಾಯ ರನ್ನು ಸಮಾಧಾನಗೊಳಿಸಲು ಮಲಗವೇಲಿಗೆ ಬಂದನು. ಮೂರ್ಖಜನರ ಮಾತಿನಮೇಲೆ ನಡೆದ ಕೃತಿಗೆ ವಿಷಾದಪಟ್ಟನು. ತಾನು ಜೀವಂತನಾಗಿರುವ ತನಕ ಸುಭೆಯ ದಿವಾನಗಿರಿಯನ್ನು ರಾಯರೇ ಮಾಡಬೇಕೆಂದು ಕೇಳಿಕೊಂ ಡನು. ರಾಯರು ಪುನಃ ಲೌಕಿಕ ಮಾಡುವದಿಲ್ಲವೆಂದೇ ಪ್ರಾಯೋಪವೇಶಕ್ಕೆ ಕುಳಿತವರು ಸಂಕಲ್ಪವನ್ನು ಬದಲಿಸಲಿಲ್ಲ. ನಿರ್ಯಾಣಕಾಲಕ್ಕೆ ಸ್ವಲ್ಪ ಮುಂಚಿತವಾಗಿ ಹಾಡಿದ ದೇವರನಾಮವು ಕೆಳಕಂಡಂತಿದೆ.

ಮಧ್ಯಮಾವತಿ—ತ್ರಿಪುಟ ತಾಳ.

ಪಾಲಿಸುವುದು ಎನ್ನ ಪಾವನ್ನ, ವೇಣು ಗೋ
ಪಾಲ ಗುಣಗಣಪೂರ್ಣ, ನಿನ್ನಂಘ್ರಿ ಭಜನೆಯ
ಲೋಲರಲ್ಲಿಡು ಮುನ್ನ - ಆನಂದ ಘನ್ನ ||ಪ||

ಶ್ರೀಲತಾಂಗಿಯ ರಮಣ ಶೋಭಿತ
ಮಾಲೆ ಮುಕ್ತಾಭರಣ ಭಕುತರ
ಕಾಲ ಕಾಲಕೆ ಪೊರೆವದಾತವಿ
ಶಾಲಮಹಿಮನೆ ಮೇಲು ಕರುಣದಿ ||ಅ||

ಏಸು ಜನುಮಗಳಿಂದ, ಭವದೊಳಗೆ ಬಂದು
ವಾಸವಾದುದರಿಂದ, ಭವದೊಳಗೆ ಪರಿಪರಿ
ಕ್ಲೇಶಪಟ್ಟೆ ಗೋವಿಂದ, ಖತಿಸಾಗರದೊಳು
ಈಸಲಾರೆ ಮುಕುಂದ - ನೀ ಕಡಿಯೊ ಬಂಧ

ವಾಸುದೇವಾನಂತ ಶ್ರೀಧರ
ಕೇಶವಾ ದಾಮೋದರಾಚ್ಯುತ
ಶ್ರೀಶ ಸುಂದರಹಾಸ ಹರಿಸ
ರ್ವೇಶ ಸಜ್ಜನ ಪೋಷಕನೆ

ವಾಸವಾನುಜ ವಾಸವ ವಿನುತ
ವಾಸಿಪಂಥಿಗಳಿಲ್ಲದಿಹ ಸುಖ
ದಾಶ ರಾವಣ ನಾಶಗೈಸಿದ
ದಾಶರಥೆ ಮನದಾಸೆ ಪೂರ್ತಿಸಿ ॥೧॥

ಆರಿಗುಸುರಲಿ ನಾನು, ಅಲ್ಪಜ್ಞ ಜನರಿಗೆ
ಸಾರಿ ಪೇಳಿದರೇನು, ಸರ್ವಜ್ಞ ಎನ್ನನು
ದೂರ ನೋಡದೆ ಮಾಣು, ನೆನೆವರಿಗೆ ಬೆಂಬಲ
ಸಾರಿದ ಸುರಧೇನು - ರಥಾಂಡಜನು

ಏರಿಮೆರೆವ ಯದುಕುಲೋತ್ತಮ
ಮಾರಜನಕ ಮಂದರೋದ್ಧರ
ವಾರಿಜಾಸನ ವಂದಿತಾಂಘ್ರಿ
ಸಾರ ಹೃದಯರ ಸಾಕುತಿಪ್ಪನೆ ॥೨॥

ಕ್ರೂರ ಕುಲಕುಠಾರ ಕುಂಭಿಣಿ
ಭಾರ ಪರಿಹರ ಭವ ವಿಮೋಚಕ
ನೀರಜಾಕ್ಷ ನಿಗಮವೇದ್ಯ
ಹಾರ ಕೌಸ್ತುಭ ಹೃದಯ ಶೋಭಿತ

ಮನವನಿಲ್ಲಿಸೊ ಜೀಯ, ದುರ್ಲಭದಿ ಬಂದಿಹ
ಮಾನವಾಗ್ರಣಿ ಕಾಯೊ ಸ್ಥಿರವಲ್ಲವೋ ಈ
ತನುವು ತಿರುಮಲರಾಯ, ಇದರೊಳಗೆ ಸಲಹಲು
ಘನತೆ ನಿನಗತಿಶಯ್ಯ - ಬಿಡು ನಿನ್ನ ಮಾಯ ॥೪॥

ವನಜ ಜಾಂಡವ ಪಡೆದು ಸರ್ವರ
ದಿನದಿನದಿ ಪೊರೆಯುತ್ತ ಪರಮಾ
ದನುಜ ದಿವಿಜರ ಮನೆಯ ಮಾಡಿ
ಅನುದಿನದೊಳ ಗಾಡುತಿಪ್ಪನೆ

ಮುನಿಜನರ ಹೃದಯಾಬ್ಜಮಂದಿರ
ಬಿನಗು ದೈವರಗಂಡ ಗಜನೃಪ
ವನಿತೆ ವಸುಧೆಯು ಕಾಯ್ದ ವೇಣುಗೋ
ಪಾಲ ವಿಠಲ ಒದಗಿ ಈಗಲೆ ||೫||

ಮಲಗವೇಲಿಯಲ್ಲಿ ಒಂದು ಕಲ್ಯಾಣಿಯನ್ನು ರಾಯರು ಪ್ರಾಯೋಪವೇಶಮಾಡಿದ ಕಲ್ಯಾಣಿಯೆಂದು ತೋರಿಸುತ್ತಾರೆ. ನಿರ್ಜಲ ವ್ರತದಿಂದ ಕಳೆದ ದಿವಸಗಳ ಸಂಖ್ಯೆಯನ್ನು ನಲವತ್ತೆರಡೆಂದು ಬಲ್ಲವರು ಹೇಳುತ್ತಾರೆ. ವೇಣುಗೋಪಾಲರಾಯರ ನಿರ್ಯಾಣವು ರಾಜದಂಡದಿಂದಲೇ ಆಯಿತೆಂದೂ ಪುಣೆಯ ಪೇಷ್ವಾಯಿಗಳು ರಾಯಸ ಕಳುಹಿಸಲಿಲ್ಲವೆಂದೂ ಏಕಪಕ್ಷದ ಹೇಳಿಕೆಯಿದೆ. ಬಹುಪಕ್ಷ ಪ್ರಬಲ ಪ್ರಮಾಣಗಳಿಂದ ಏಕಪಕ್ಷದ ದುರ್ಬಲ ಪ್ರಮಾಣಕ್ಕೆ ಮಹತ್ವಕೊಡಬೇಕಾಗಿಲ್ಲ.

ತಿಮ್ಮಣ್ಣಯ್ಯನವರು ಬಹಳ ಪದ ಸುಳಾದಿಗಳನ್ನು ಹಾಡಿದವರು. ಗೋಪಾಲದಾಸರಷ್ಟೇ ಮಾನ್ಯರಾದವರು. ಭಾಷೆ ಭಾವನೆಗಳಲ್ಲಿ ಗೋಪಾಲ ಸಹೋದರರಿಗೂ ಇವರಿಗೂ ವ್ಯತ್ಯಾಸ ಕಂಡುಬರುವದಿಲ್ಲ. ಅಂಕಿತವನ್ನು ನೋಡಿದ ವಿನಾ ರಾಯರ ಪದವನ್ನು ಗುರ್ತಿಸಲು ಸಾಧ್ಯವಲ್ಲ. ಗೋಪಾಲವಿಠಲ, ವರದಗೋಪಾಲವಿಠಲ, ಗುರು ಗೋಪಾಲವಿಠಲ, ವೇಣುಗೋಪಾಲವಿಠಲ ಮುದ್ರಿಕೆಗಳಲ್ಲಿ ಪಾಠಮಾಡುವರಿಂದ ಬಲು ವ್ಯತ್ಯಾಸವಾಗುತ್ತಲಿದೆ. ಸಂಪ್ರದಾಯಸ್ಥರ ಹಸ್ತಪ್ರತಿಗಳ ಪ್ರಮಾಣದಿಂದ ಪದಗಳನ್ನು ನಿರ್ಧರಿಸಬೇಕಾಗಿದೆ. ಹಿಂದೆ ವೈಕುಂಠದಾಸರಾಗಿದ್ದವರೂ ಮುಂದೆ ಮೊದಲುಕಲ್ಲು ಶೇಷದಾಸರಾದವರೂ ಇವರೇ ಎಂದು ಅನುಭವಿಗಳ ಆಪ್ತವಾಕ್ಯಗಳಿವೆ. ಹಾಡಿದ ಪದಗಳಲ್ಲಿ ಸೂಚನೆಗಳಿವೆ. ತಿಮ್ಮಯ್ಯನವರ ವಂಶೀಕರು ಆದವಾನಿ ಪ್ರಾಂತ್ಯದಲ್ಲಿದ್ದಾರೆ. ವೈದಿಕ ಪದ್ಧತಿಯಂತೆ ರಾಯರ ಆರಾಧನೆಯನ್ನು ನಡೆಸುತ್ತಾರೆ.

---

# ಅಣ್ಣಾವಧೂತರು (ಬಡ ಅಣ್ಣಯ್ಯಾಚಾರ್ಯರು)

ಅಣ್ಣಾವಧೂತರು ಅಥವ ಬಡ ಅಣ್ಣಯ್ಯಾಚಾರ್ಯರೆಂಬುವರು 'ವಿಠಲ ವ್ಯಾಸ' ಮುದ್ರಿಕೆಯಿಂದ ಅನೇಕ ದೇವರ ನಾಮುಗಳನ್ನು ಹಾಡಿದ್ದಾರೆ. ಅವಧೂತರ ಪದಗಳು ಸಂಸ್ಕೃತ ಕನ್ನಡ ಉರ್ದು ಹೀಗೆ ಮೂರು ಭಾಷೆಗಳಲ್ಲಿವೆ. ಯಾವ ಭಾಷೆಯಲ್ಲಾಗಲಿ ಕೋರಡೆಯ ಪೆಟ್ಟನಂತೆ ಖಂಡಿತೋಕ್ತಿಯಾಡುವದು ಅವಧೂತರ ಧೋರಣೆಯಾಗಿದೆ. ಅವಧೂತರು ಮೊದಲಿನಿಂದ ಯೋಗಾಭ್ಯಾಸಿಗಳು. ನ್ಯಾಯ ವೇದಾಂತ ಶಾಸ್ತ್ರಗಳಲ್ಲಿ ಅಪ್ರತಿಮ ಪಂಡಿತರು. ಅತ್ಯಂತ ಬಡವರಾಗಿದ್ದುದು ಕಾರಣವಾಗಿ 'ಬಡ' ಶಬ್ದವು ಆಚಾರ್ಯರ ಅಡ್ಡಹೆಸರಾಯಿತು. ಸಾಂಸಾರಿಕ ಕ್ಲೇಶವು ಆಚಾರ್ಯರನ್ನು ಅವಧೂತರನ್ನಾಗಿ ಮಾಡಿತು. 'ಕರತಲಭಿಕ್ಷಸ್ತರುತಲವಾಸಃ' ಎಂಬುವದು ಜನರಾಡುವ ಅವಧೂತರ ದಿನಚರ್ಯವಾಯಿತು. ಅವಧೂತರ ಕಾರ್ಯಕ್ಷೇತ್ರವು ತುಂಗಾ ವರದಾ ನದಿಗಳ ಮಧ್ಯಪ್ರದೇಶವಾಗಿತ್ತು. ಉಡಲು ಒಂದು ತುಂಡು ಪಂಜೆ, ಹೆಗಲಮೇಲೆ ಧಾವಳಿ, ಕೈಯಲ್ಲಿ ತೆಂಗಿನ ಚಿಪ್ಪು, ಜನಿವಾರದಲ್ಲಿ ಒಂದು ನಾರಾಯಣ ಮುದ್ರೆ; ಇಷ್ಟೂ ಅವಧೂತರ ಚರ ಆಸ್ತಿಗಳು. ಆಡಿದ ಮಾತು ಶಾಪಾನುಗ್ರಹಗಳಾಗುತ್ತಿದ್ದ ಕಾರಣ ಜನರಿಗೆ ಅವಧೂತರಲ್ಲಿ ಭಯಭಕ್ತಿಗಳು. ನಿರ್ದೇಶವಿಲ್ಲದೆ ತಿರುಗುವದು; ಯಾರ ಮನೆಯ ಬಾಗಿಲಲ್ಲಾದರೂ ನಿಂತು 'ಭಿಕ್ಷಾ' ಎನ್ನುವದು; ಸಿಕ್ಕಿದ್ದನ್ನು ಅಲ್ಲೇ ತಿಂದು ಚಿಪ್ಪಿನ ತುಂಬಾ ನೀರು ಕುಡಿಯುವದು; ಈ ಕೃತಿಗಳಿಂದ ಅವಧೂತರು ಹುಚ್ಚರಾಗಿದ್ದರು. ಪೇಟೆಗೆ ಬಂದರೆ ಹುಡುಗರು ಹುಚ್ಚ ಬಂದನೆಂದು ಹಿಂಬಾಲಿಸುತ್ತಿದ್ದರು. ಹುಚ್ಚನು ಯಾರದಾದರೂ ಅಂಗಡಿಗೆ ಕೈಹಾಕಿ ತಿನಿಯ ದಿನಸುಗಳನ್ನು ಬೊಗಸೆ ಬೊಗಸೆಯಾಗಿ ಹಂಚುತ್ತಿದ್ದನು. ಅವಧೂತರು ಕೈಯಿಟ್ಟ ಅಂಗಡಿಗೆ ಏಳಿಗೆಯಾಗುವದೆಂಬ ಅನುಭವ ವ್ಯಾಪಾರಿಗಳಿಗಿತ್ತು. ಆದರಿಸಿ ಕರೆದವರ ಅಂಗಡಿಗೆ ಅವರು ಬರುತ್ತಿರಲಿಲ್ಲ. ಬೈದರೆ ಒಳ್ಳೇದಾಗುತ್ತಿರಲಿಲ್ಲ.

ಒಂದು ದಿನ ಇದ್ದಕ್ಕಿದ್ದಹಾಗೆ ಅವಧೂತರು ಖಂಡೇರಾಯರ ಮನೆಗೆ ಬಂದರು. ಖಂಡೇರಾಯರೆಂದರೆ ಸವಣೂರ ದಿವಾನರು. ಆ ಕಾಲದಲ್ಲಿ ಸವಣೂರು ತಕ್ಕಷ್ಟು ದೊಡ್ಡ ಸಂಸ್ಥಾನವಾಗಿತ್ತು. ಸವಣೂರಿನ ಕೀರ್ತಿ ಯಾವತ್ತೂ ಖಂಡೇರಾಯರದಾಗಿತ್ತು. ದಿವಾನರು ಅವಧೂತರನ್ನು ಕಾಣುತ್ತಲೇ ಭ್ರಮೆಗೊಂಡರು. ಎಂದೂ ಇಲ್ಲದೆ ಅಲಭ್ಯ ಲಾಭವಾಗಿ ಆಚಾರ್ಯರು ಬಂದ ಕಾರಣವೇನೆಂದು ಅವರ ಪಾದಗಳಿಗೆರಗಿದರು. ಅವಧೂತರು—'ರಾಯಾ! ನಿಮ್ಮ ಧೊರೀ ಭೆಟ್ಟಿ ಮಾಡಿಸು' ಎಂದರು. ರಾಯರಿಗೆ ಈ ಅರಬೆತ್ತಲೆಯ ಹುಚ್ಚನನ್ನು ನವಾಬನ ಬಳಿಗೆ ಕರೆದುಕೊಂಡು ಹೋಗುವ ಬಗೆ ಹೇಗೆಂಬ ಯೋಚನೆಯಾಯಿತು. ವ್ಯಕ್ತಿಯನ್ನು ನೋಡಿ ತಾಳಿಕೆ ಬರುವಂತಿಲ್ಲ! ಉಕ್ತಿಯಿಂದ ನವಾಬನಿಗೆ ಸಂತೋಷವಾಗುವ ಹಾಗಿಲ್ಲ! ಏನು ಮಾಡಬೇಕೆಂಬ ಚಿಂತೆಯಾಯಿತು. ರಾಯರು—ತತ್ಕಾಲದಲ್ಲಿ ಏನಾದರೂ ಉಪಾಯಮಾಡಿ ನಿವಾರಿಸೋಣವೆಂದು—ಆಚಾರ್ಯರೆ! ಈ ದಿನ ನವಾಬರು ಯಾರಿಗೂ ಭೆಟ್ಟಿಯಾಗುವದಿಲ್ಲ ; ಮತ್ತೊಮ್ಮೆ ನೋಡೋಣ! ಎಂದರು. ಆಚಾರ್ಯರು—ಇಂದಿಲ್ಲದಿದ್ದರೆ ನಾಳೆಯಾಗಲಿ, ನವಾಬ ಸಾಹೇಬರ ಭೆಟ್ಟಿಯಾಗಲಿ; ಎಂದರು. ರಾಯರು—ಏನು ಸೇವೆಮಾಡುವದಕ್ಕೂ ನಾನೇ ಸಿದ್ಧನಿರುವಾಗ ನವಾಬರ ಗೊಡವೆಯೇಕೆ ? ನನಗೇ ಅಪ್ಪಣೆಯಾಗಲಿ; ಅಂದರು. ಆಚಾರ್ಯರು—'ನಿನ್ನ ಕಟ್ಟಿಕೊಂಡು ನಾನೇನುಮಾಡಲಿ ? ಭೆಟ್ಟಿಮಾಡಿಸಂದರೆ ಮಾಡಿಸಬೇಕು. ನಾಳೆ ಬರ್ತೀನಿ ; ತಿಳೀತೂ?' ಎಂದು ನಡೆದು ಬಿಟ್ಟರು. ಖಂಡೇರಾಯರು, ಇವರೇನು ಹುಚ್ಚಾಚಾರ್‍ರು; ಬಂದರೆ ಬಂದರು, ಬಿಟ್ಟರೆ ಬಿಟ್ಟರು; ಮಾತಿಗೆ ನೆಲೆಯಿಲ್ಲ; ಲಹರಿ ಬಂದಂತೆ ನಡೆಯುವವರು; ಎಂದು ಉದಾಸೀನರಾಗಿದ್ದರು. ಆಚಾರ್ಯರು ಮಾರನೇ ದಿನ ಹೊತ್ತಿಗೆ ಸರಿಯಾಗಿ ಬಂದೇ ಬಂದರು. ರಾಯಾ! ನಡೀ ಹೋಗೋಣ! ಎಂದರು.

ರಾಯರು—ಆಚಾರ್ಯರೆ, ರಾಜ ದರ್ಶನಕ್ಕೆ ಬರೀ ತಲೆಯಿಂದ ಹೋಗಬಾರದು; ಏನಾದರೂ ಸುತ್ತಿಕೊಂಡು ಬನ್ನಿರೆಂದರು.

ಆಚಾರ್ಯರು—ಬೀದಿಗೆ ಹೋಗಿ ಯಾರದೋ ಛಾವಣಿಯ ಮೇಲಿದ್ದ ಯಾವದೋ ಶಣಬಿನ ಹಗ್ಗವನ್ನು ಸುತ್ತಿಕೊಂಡು, ಆಯಿತು ನಡೀ ಎಂದರು.

ರಾಯರು—ಏನಾಚಾರ್ಯರೆ? ಹಗ್ಗಾ ಸುತ್ತಿಕೊಂಡು ಬಂದಿರಿ, ಒಂದು ಶಾಲನ್ನಾದರೂ ಸುತ್ತಬಾರದೇ ಎಂದರು.

ಆಚಾರ್ಯರು—ನಾ ದೇಶಾವಾರ ಮಾಡಲಿಲ್ಲ. ನಮ್ಮಪ್ಪ ಮಾಡಲಿಲ್ಲ. ನೀ..............ಮಗ ಕೊಡಲಿಲ್ಲ. ಏನುಮಾಡೋದ.? ಕೆಲಸವಾದರಾಯಿತು ನಡೀ! ತಲೆಯಮೇಲೆ ಏನಾದರೂ ಇದ್ದರಾಯಿತು ನಡೀ! ಎಂದರು.

ರಾಯರು ಹಿಡಿಸಲಾರದೆ ನಕ್ಕರು. ಕನಿಕರದಿಂದ ತಮ್ಮ ಬಳಿಯಿದ್ದ ಹೊಸ ಶಾಲನ್ನೆ ತೆಗೆದು ಆಚಾರ್ಯರ ತಲೆಗೆ ಸುತ್ತಿದರು. ಮೇಲೊಂದು ಶಾಲನ್ನು ಹೊದಿಸಿದರು. ಬರ್‍ರೀ ಆಚಾರ್‍ರೇ ಹೋಗೋಣಾ, ಎಂದರು.

ಇವರು ನಮ್ಮಲ್ಲಿ ದೊಡ್ಡ ಮೌಲ್ವಿಗಳು; ತಮ್ಮ ದರ್ಶನಕ್ಕೆ ಬಂದಿದ್ದಾರೆ; ಎನ್ನುವಷ್ಟರಲ್ಲಿ ನವಾಬನು—ಖಂಡೇರಾವ್! ಏನು ಹುಚ್ಚನಹಾಗೆ ಕಾಣುತ್ತಾನೆ ಇವನು! ಎಂದನು.

ಅವಧೂತರು—ಹುಜೂರ್! ನಾನು ಹುಚ್ಚ! ಕಾರಣವೇನು ಕೇಳುವಿರಾ? ಎಂದು ಹೇಳುತ್ತಲೇ ಕೆಳಕಂಡ ಪದವನ್ನು ನವಾಬನು ತಲೆದೂಗುವಂತೆ ಹಾಡಿದರು. ಹುಚ್ಚನ ಕಂಠ, ಹುಚ್ಚನ ಮಾತುಗಳಿಂದ ನವಾಬನೇ ಹುಚ್ಚನಾದನು. ಖಂಡೇರಾವ್! 'ಬಡಾ ಅಣ್ಣಾಚಾರೀ ಹೈ' ಎಂದನು.

ಆ ಪದವು:—

ಧನ್ಯಾಸಿ — ಆದಿತಾಳ

ಹರ್ದಂಬೇ ಪರವಾಹುವಾ ಮೈ
ಹರ್ದಂಬೇ ಪರವಾಹುವಾ ||ಪ||

ಅಂಘಾ ಹೋಕರ ಏಕೇಲಾ ಮೈ
ಫಿರತಾಥಾ ಜಂಗಲ್||
ಗುರು ಫೂಕರಕಾನ್ಮೇ ಅಖಿಯಾ
ಪಾಕಕಿಯಾ ಚೀದಿಲ್ ||೧||

ಆಪೇಹೋಲ್ಕರ್ ಕುಪೂಲ್‌ದಿಲ್ಕಾ
ದಿಖಾಯಾವ್ಹೂ ಜಾಲ್
ಘುಸೀ ಹೋಕರ ಹವ್ಯುಕ್ಯಾ
ಕರೇಗಾಜೀಕಾಲ್ ||೨||

ದಿಯಾ ಸದ್ಗುರು ಮುಝೋ ವಿಠಲ
ವ್ಯಾಸನಾಮುಕಾ ಭಾಂಗ್
ಛಾನಛಾನಕರ ಪೀಕೋ
ಮೈಮುಸ್ತಾನ ಹುವಾಜೀದಂಗ್ ||೩||

ಪದದ ಅರ್ಥವು ಕೆಳಕಂಡಂತಿರುವುದು:—

ಪ್ರತಿ ಶ್ವಾಸಕ್ಕೂ ಜಗತ್ತು ನನಗೆ ಲಕ್ಷ್ಯವಿಲ್ಲದೇ ಹೋಯಿತು ||ಪ||

ಕುರುಡನಾಗಿ (ಜ್ಞಾನಶೂನ್ಯನಾಗಿ) ಒಬ್ಬನೇ ಕಾಡು ತಿರುಗುತ್ತಿದ್ದೆ. ಅಂದರೆ ಸಂಸಾರಾರಣ್ಯದಲ್ಲಿ ತಿರುಗುತ್ತಿದ್ದೆ. ಗುರುವು ದೊರೆತು ಕಿವಿಯಲ್ಲಿ ಊದಿದನು. ಮನಃಪರಿಪಾಕವಾಯಿತು. ||೧||

ಅವನೇ ಅಜ್ಞಾನ ಮುದ್ರೆಯನ್ನೊಡೆದನು. ಜಗತ್ತು ಪ್ರಕಾಶವಾಯಿತು. ನಮ್ಮಮೇಲೆ ಸಿಟ್ಟುಮಾಡಿ ಯಮನು ಏನುಮಾಡಬಲ್ಲನು ? ||೨||

ಗುರುವೇ ವಿಠಲವ್ಯಾಸನಾಮವೆಂಬ ಭಂಗಿಯನ್ನು ಕೊಟ್ಟನು. ಶೋಧಿಸಿ ಶೋಧಿಸಿ ಕುಡಿದು ಉನ್ಮತ್ತನಾದೆನು. ||೩||

ಸಂತುಷ್ಟನಾದ ನವಾಬನು ಅವಧೂತರಿಗೆ ಬಹಳ ಬಹುಮಾನ ಮಾಡಿದನಂತೆ! ಅವಧೂತರು ಮಹಲಿನಿಂದ ಕೆಳಗಿಳಿಯುತ್ತಲೇ ಎಲ್ಲವನ್ನೂ ದಾನಮಾಡಿ ಯಥಾಪ್ರಕಾರ ಬಡವರ ಬಾಗಿಲಲ್ಲಿ ನಿಂತು 'ಭಿಕ್ಷಾ' ಎಂದರಂತೆ! ದೊಡ್ಡವರ ಮಾತೇ ಬೇರೆ! ಮಾರ್ಗವೇ ಬೇರೆ!

ಅವಧೂತರ ಕನ್ನಡ ಪದವಾದರೂ—

ಪೂರ್ವಿ — ಆದಿತಾಳ

ದಾವಾಧಾರದ ದುರ್ವಿಷಯದಿ ನೀ
ಮುಳುಗಿ ಹರಿಯುತಿದ್ದೀ ||ಪ||

ಕೋವಿದರನು ಕೇಳೀ ಜೀವಕೆ ಸುಖ
ವಾವಾವಾ ತೆರದೀ ||೪||

ಕಾಲನದೂತರು ಕರಣುಳ್ಳವರೇ
ಹಾಳಾಯಿತೆ ಯಮನೂರು
ಭಾಳದೂರ ಹೋಗ್ಯಾರೇ ಬಂದರೆ
ನಾಳೆ ಹೇಳುವರ್ಯಾರು |
ತಾಳೆಂದರೆ ತಾಳ್ವರೆ ರವಿ ಶಶಿಗಳು
ಆಳ್ಗಳೆ ನಿನಗವರು ||
ಚಾಳಕತನವೇನು ಶೃತಿಸ್ಮೃತಿಗಳಲಿ
ಪೇಳುವವೇನು ||೧||

ಮೃತ್ಯುವಿನಾ ವೈದತ್ತಲೆ ಕುತ್ತಿಗೆ
ಒತ್ತಿಬಿಟ್ಟರೆಂತೋ
ಕರ್ತೃ ಯಮನ ವ್ಯಾಪಾರ್‍ಯೋಗ್ಯದು ಮ
ತ್ತುತ್ತುಮಗಾಯ್ತೆಂತೋ
ಚಿತ್ರಗುಪ್ತರು ಇತ್ತಣವಾರ್ತೆಯು
ಮರ್ತುಬಿಟ್ಟರೆಂತೋ
ಚಿತ್ತಕೆ ಚಂಚಲ ತಾ ಬ್ಯಾಡೆಂದೀ
ಗುತ್ತಮಶಾಪೆಂತೋ ||೨||

ಇಷ್ಟುಭವಣಿ ಮುಂದಿಟ್ಟುಕೊಂಡು ನೀ
ಕೆಟ್ಟುಪೋಗಬ್ಯಾಡ
ದೃಷ್ಟಿ ಒಬ್ಬನಲ್ಲಿಟ್ಟರೆ ಜಗದೊಳು
ಕಷ್ಟಾಹುದೆ ನೋಡಾ
ಥಟ್ಟನೆ ಈಭವ ನಷ್ಟಾಗುವ ಹಾಂ
ಗಿಷ್ಟುಮಾಡೊ ಮೂಢ
ವಿಠಲ ವೇದವ್ಯಾಸನ ನಿಜಪದ
ನಿಷ್ಠೆಯು ಬಿಡಬೇಡ ||೩||

ಎಂಬಂತೆ ಖಂಡಿತೋಕ್ತಿಯಾಗಿದೆ. ಹರಿದಾಸ ಪಂಥಿಗಳು ಭಕ್ತಿಯಲ್ಲಿ ಬೆರೆದರೆ ಎಷ್ಟು ಮೃದುಳ ಮಾತಾಡುವರೋ ತತ್ವನಿಶ್ಚಯಕ್ಕೆ ಹೊರಟರೆ ಅಷ್ಟೇ ಕಠಿಣವಾಗಿ ನುಡಿಯುವರು. ತರ್ಕಸಿದ್ಧವಾದ ಮಾತಾಡುವ ಪಂಡಿತರ ಬಾಯಲ್ಲಿ ದಾಸರಂತೆ ಖಂಡಿತೋಕ್ತಿಗಳು ಬರದಿರಲು ಅನುಭವದ ಅಭಾವವೇ ಕಾರಣ. ಭಾಗವತ ಧರ್ಮದಲ್ಲಿ ಮಾನವ ಪ್ರಾಣಿಗಳಿಗೆಲ್ಲಾ ಸ್ಥಾನವಿದೆ. ಅಖಂಡಲನಂತೆ (ಇಂದ್ರ) ಅಮಿತೈಶ್ವರ್ಯವನ್ನನುಭವಿಸುತ್ತಿದ್ದವರು ವಿರಕ್ತರಾಗಿ ಹರಿದಾಸರಾದುದಕ್ಕೆ ಪುರಂದರದಾಸ ಪ್ರಭೃತಿಗಳ ನಿದರ್ಶನವಿದೆ. ಪೀಠಾಧಿಪತಿಗಳು ಗ್ರಂಥಕರ್ತರೆನಿಸಿದವರು ಸಹ ಹರಿದಾಸರಾಗಿ ಹಾಡಿದುದಕ್ಕೆ ನರಹರಿತೀರ್ಥ, ಶ್ರೀಪಾದರಾಜ, ವ್ಯಾಸರಾಯ, ವಾದಿರಾಜ ಸ್ವಾಮಿಗಳಂಥಾ ಮಹಾಪುರುಷರ ನಿದರ್ಶನವಿದೆ. ಪಂಡಿತೋತ್ತಮರು ಪ್ರವಚನಾಚಾರ್ಯರುಗಳೆನಿಸಿದವರು ನಮ್ರಾಭೂತರಾಗಿ ಹರಿದಾಸರಾದುದಕ್ಕೆ ಜಗನ್ನಾಥದಾಸರಂಥಾ ಅನೇಕರ ನಿದರ್ಶನವಿದೆ. ರಾಜ್ಯಪದವಿಯನ್ನನುಭವಿಸಿ ಬೇಸತ್ತು ಹರಿದಾಸರಾದುದಕ್ಕೆ ವೇಣುಗೋಪಾಲ ರಾಯರಂಥವರ ನಿದರ್ಶನವಿದೆ. ಜನ್ಮಪ್ರಭೃತಿ ದಾರಿದ್ರ್ಯಾದಿ ದುಃಖಗಳಿಂದ ಪೀಡಿತರಾದವರು ಸಹ ಜಿತಮನಸ್ಕರಾಗಿ ಹರಿದಾಸರಾದುದಕ್ಕೆ ವಿಜಯದಾಸರಂಥಾ ಮಹನೀಯರ ನಿದರ್ಶನವಿದೆ. ಯೋಗಿಗಳು ಅವಧೂತರು ಸಹ ಹರಿದಾಸರಾದುದಕ್ಕೆ ಮಹೀಪತಿರಾಯರ ಮತ್ತು ಅಣ್ಣಾವಧೂತರ ನಿದರ್ಶನವಿದೆ. ಸ್ತ್ರೀಯರು ಶೂದ್ರರು ಸಹ ಹರಿದಾಸರಾಗಿ ಉನ್ನತಪದವಿಯನ್ನು ಪಡೆದರೆಂಬುದಕ್ಕೆ ಗಿರಿಯಮ್ಮನವರ ಮತ್ತು ಕನಕದಾಸರ ನಿದರ್ಶನವಿದೆ. ಭಾಗವತ ಧರ್ಮವೆಂಬುವದು ಶ್ರೀ ಕೃಷ್ಣಪರಮಾತ್ಮನಿಂದುಪದಿಷ್ಟವಾದ ಗೀತಾಧರ್ಮ.

ಬುಧ್ಯಾವಿಶುದ್ಧಯಾ ಯುಕ್ತೋ ಧೃತ್ಯಾತ್ಮಾನಂ ನಿಯಮ್ಯ ಚ
ಶಬ್ದಾದೀನ್ವಿಷಯಾಂ ಸ್ತ್ಯಕ್ತ್ವಾ ರಾಗದ್ವೇಷೌ ವ್ಯುದಸ್ಯ ಚ ॥೫೧॥
ವಿವಿಕ್ತಸೇವೀ ಲಘ್ವಾಶೀ ಯತವಾಕ್ಕಾಯಮಾನಸಃ
ಧ್ಯಾನಯೋಗಪರೋ ನಿತ್ಯಂ ವೈರಾಗ್ಯಂ ಸಮುಪಾಶ್ರಿತಃ ॥೫೨॥
ಅಹಂಕಾರಂ ಬಲಂ ದರ್ಪಂ ಕಾಮಂ ಕ್ರೋಧಂ ಪರಿಗ್ರಹಂ
ವಿಮುಚ್ಯ ನಿರ್ಮಮಃ ಶಾಂತೋ ಬ್ರಹ್ಮಭೂಯಾಯ ಕಲ್ಪತೇ ॥೫೩॥

ಬ್ರಹ್ಮಭೂತಃ ಪ್ರಸನ್ನಾತ್ಮಾ ನ ಶೋಚತಿ ನ ಕಾಂಕ್ಷತಿ
ಸಮಃ ಸರ್ವೇಷು ಭೂತೇಷು ಮದ್ಭಕ್ತಿಂ ಲಭತೇ ಪರಾಂ ||೫೪||

ಭಕ್ತ್ಯಾಮಾಮಭಿಜಾನಾತಿ ಯಾವಾನ್ಯಶ್ಚಾಸ್ಮಿ ತತ್ವತಃ
ತತೋ ಮಾಂ ತತ್ವತೋಜ್ಞಾತ್ವಾ ವಿಶತೇ ತದನಂತರಂ ||೫೫||

ಸರ್ವಕರ್ಮಾಣ್ಯಪಿ ಸದಾ ಕುರ್ವಾಣೋ ಮದ್ವ್ಯಪಾಶ್ರಯಃ
ಮತ್ಪ್ರಸಾದಾದವಾಪ್ನೋತಿ ಶಾಶ್ವತಂ ಪದಮವ್ಯಯಂ ||೫೬|| XVIII

ಎಂಬಂತೆ ಆತ್ಮನಿಯಮನಮಾಡಿ ಶಾಶ್ವತಪದವನ್ನು ಪಡೆಯುವನೋ ಅವನು ಹರಿದಾಸನು. ಅಂತಹ ಹರಿದಾಸರಲ್ಲಿ ಅಣ್ಣಾವಧೂತರು ಅಥವ ಬಡ ಅಣ್ಣಯ್ಯಾಚಾರ್ಯರು ಅವಧೂತ ಹರಿದಾಸರು.

ಅವಧೂತರ ಸಂಸ್ಕೃತ, ಕನ್ನಡ, ಉರ್ದು ಭಾಷೆಗಳ ಪದಗಳನ್ನೆಲ್ಲಾ ಸಂಗ್ರಹಿಸಿ ಒಂದು ಪುಸ್ತಕ ರೂಪಕ್ಕಿಳಿಸಿದರೆ ಅತ್ಯುತ್ತಮ ಪಠ್ಯಪುಸ್ತಕವಾಗುವದರಲ್ಲಿ ಸಂಶಯವಿಲ್ಲ.

ಅಣ್ಣಾವಧೂತರಂತೆ ಅಡವೀ ರಾಮದಾಸರೆಂಬ ಸತ್ಪುರುಷರು ಉತ್ತರ ಕರ್ಣಾಟಕದಲ್ಲಿ ಜನ್ಮತಾಳಿ ವಿಚಿತ್ರ ಮಹಿಮೆಗಳನ್ನು ತೋರಿಸಿ ಪ್ರಸಿದ್ಧರಾಗಿದ್ದರೂ ಅವರ ಇತಿಹಾಸವೇನೂ ತಿಳಿಯುವಂತಿಲ್ಲ. ಅವರ ಕನ್ನಡ ಹಾಡುಗಳಿಗೆ 'ಕದರುಂಡುಲಿಗಿ ಹನುಮಯ್ಯ' ಎಂಬ ಮುದ್ರಿಕೆಯಿದೆ. ನೂರಾರು ಪದಗಳ ಪ್ರಚಾರವಿದ್ದರೂ ಆ ಮಹನೀಯರ ವಿಚಾರವನ್ನು ಹೇಳುವರು ಈ ಕಾಲದಲ್ಲಿ ದೊರೆಯುವದಿಲ್ಲ. ಕಾಶ್ಮೀರ ಪ್ರಾಂತ್ಯದಿಂದ ಕರ್ಣಾಟಕಕ್ಕೆ ಬಂದು ನೆಲೆಸಿದ ಸಹವಾಸೀ ಬ್ರಾಹ್ಮಣರ ಮಧ್ಯದಲ್ಲಿ ರಾಮದಾಸರು ಜನ್ಮತಾಳಿದರೆಂಬುವದು ಬಹುಮುಖದಿಂದ ತಿಳಿದು ಬರುತ್ತದೆ. ಕದರ ಮುಂಡಿಗೀ ದಾಸರ ಮನೆತನಸ್ಥರು ಬಹು ಕಾಲದಿಂದ ಮೈಸೂರಲ್ಲಿ ವಾಸವಾಗಿ ಮುಮ್ಮಡಿ ಕೃಷ್ಣರಾಜವಡೆಯರ ಭಕ್ತಿ ಗೌರವಗಳಿಗೆ ಪಾತ್ರರಾಗಿದ್ದರೆಂಬುವದು ಮಾತ್ರ ತಿಳಿದು ಬರುವುದಲ್ಲದೆ ಆ ವಂಶಸ್ಥರಿಂದ ಅವರ ಗೊತ್ತಾದ ಇತಿಹಾಸ ಸಿಗುವದಿಲ್ಲ.

## ಆದವಾನಿಯ ರಾಮಸುಂದರ ದಾಸರು

ರಾಮಸುಂದರ ವಿಠಲ ಮುದ್ರಿಕೆಯಿಂದ ಭಾಗವತವನ್ನು ಕೀರ್ತನಕ್ಕಿಳಿಸಿ ಸುಂದರ ಕವಿತೆಗಳನ್ನು ಮಾಡಿರುವ ಇವರ ಪದಗಳು ಬಲು ಸುಂದರವಾಗಿವೆ. ಕರ್ಣಾಟಕದಲ್ಲೆಲ್ಲಾ 'ಪೋಗಿ ಬರುವೆ ಗೋಪ। ನಾಗವೇಣಿಯರೆ॥' ಎಂಬ ದೇವರನಾಮ ಬಹುಮುಖದಿಂದ ಬರುತ್ತಿರುವ ಕಾರಣ ಮಾದರಿಯನ್ನು ಪ್ರತ್ಯೇಕ ಬರೆಯಬೇಕಾಗಿಲ್ಲ. ಇವರು ಜಗನ್ನಾಥದಾಸರೆದುರಿಗೆ ಕೀರ್ತನಮಾಡಿ ಅವರಿಂದ ಸ್ವರೂಪ ಜ್ಞಾನವನ್ನು ಪಡೆದ ಮಹನೀಯರು.

## ಪ್ರೇಮದಾಸರು

ಅಭಿನವಜನಾರ್ದನ ವಿಠಲ ಮುದ್ರಿಕೆಯಿಂದ ಹಾಡಿದ ಹಾಡುಗಳು ನಿಜಾಮ ಕರ್ಣಾಟಕದಲ್ಲಿ ಬಹಳ ಪ್ರಚಾರದಲ್ಲಿವೆ. ರಾಘವೇಂದ್ರಸ್ವಾಮಿಗಳ ಪ್ರೇಮಕ್ಕೆ ಮುಖ್ಯ ಪಾತ್ರರಾಗಿದ್ದ ಕಾರಣ ಇವರಿಗೆ ಪ್ರೇಮದಾಸರೆಂಬ ಹೆಸರಾಗಿದೆ. ಇವರೂ ಅಪರೋಕ್ಷ ಜ್ಞಾನಿಗಳೇ!

---

# ಸುರಪುರದ ಆನಂದದಾಸರು

ಆನಂದದಾಸರೆಂಬ ಹೆಸರಿಗೆ ತಕ್ಕಂತೆ ಸಾರ್ಥಕನಾಮದಿಂದ ಕರೆಸಿಕೊಂಡ ದಾಸರಿವರು. ಇವರ ಮಾತುಗಳು ಆನಂದ; ಕೃತಿಗಳು ಆನಂದ; ಕವಿತೆಯಾನಂದ; ಗಾನವಾನಂದ; ವೀಣಾವಾದನವಾನಂದ.

ಸುರಪುರದ ಮಟ್ಟುಗಳು, ಸುರಪುರದ ಚಾವಡಿಗಳು, ಸುರಪುರದ ಬಹನಿ, ಎಂಬ ಮಾತುಗಳ ಚಲಾವಣೆ ಹಿಂದಿನ ಕಾಲದ ಗಾನರಸಿಕರಲ್ಲಿದ್ದದಕ್ಕೆ ಈ ಮಹನೀಯರು ಕಾರಣ. ಮುಮ್ಮಡಿ ಕೃಷ್ಣರಾಜ ಪ್ರಭುಗಳ ಸನ್ನಿಧಿಯಲ್ಲಿ ಇವರ ಗಾಯನ ಕೀರ್ತನಗಳನ್ನು ಕೇಳಿದ ಮೈಸೂರ ಹಿರಿಯರು ಇಂಥಾ ಕಂಠಸ್ವರ ಇಂಥಾ ಮಾಧುರ್ಯ ಇಂಥಾ ಬಹನಿಗಳನ್ನು ಕೇಳಲಿಲ್ಲ---ಇಂಥವರನ್ನು ಮತ್ತೆ ಕಾಣಲಿಲ್ಲ--ಎಂದು ಹೇಳುತ್ತಿದ್ದರು. ಆ ಕಾಲದಲ್ಲಿ ತಂಜಾವೂರು ದೇಶದಲ್ಲಿ ಅತ್ಯಂತ ಪ್ರಸಿದ್ಧರಾಗಿದ್ದ ಸುಂದರಂ ಸುಬ್ಬಯ್ಯ ಎಂಬ ಸಂಗೀತಗಾರರನ್ನಾಗಲಿ, ಮೈಸೂರ ಆಸ್ಥಾನದಲ್ಲಿ ಪರಮ ಪ್ರಖ್ಯಾತರಾಗಿದ್ದ ವೀಣೆಯ ಸಾಂಬಯ್ಯ, ಸದಾಶಿವರಾಯರೆಂಬ ಗಾಯನಾಚಾರ್ಯರುಗಳನ್ನಾಗಲಿ, ತಲೆದೂಗಿಸಿದ ಗಾಯಕರೆಂದರೆ ಆನಂದದಾಸರು. ಇವರ ವಿಶ್ವತೋಮುಖವಾದ ಪಾಂಡಿತ್ಯವು ಜನರಿಗೆ ಆಶ್ಚರ್ಯವನ್ನುಂಟು ಮಾಡುತ್ತಿತ್ತು. ಗಾಯಕರ ಮಧ್ಯದಲ್ಲಿ ಇವರು ಗಾಯನಾಚಾರ್ಯರು. ನ್ಯಾಯವೇದಾಂತ ಶಾಸ್ತ್ರಪಾರಂಗತರ ಮಧ್ಯದಲ್ಲಿ ಇವರಿಗೆ ಅಗ್ರಮರ್ಯಾದೆ. ಸಾಹಿತ್ಯಶಾಸ್ತ್ರ ಪಾರಂಗತರ ಮಧ್ಯದಲ್ಲಿ ಇವರು ಉದ್ದಾಮ ಸಾಹಿತಿಗಳು. ಕನ್ನಡ ಜಾಣರಲ್ಲಿ ಇವರು ನೆರೆಜಾಣರು.

ಇಷ್ಟು ವಿದ್ಯೆಗಳಲ್ಲೂ ದಾಸರು ಪಾರಂಗತರಾಗಲು ಆ ಕಾಲದಲ್ಲಿ ಸುರಪುರ ಸಂಸ್ಥಾನದಲ್ಲಿ ರಾಜಾಶ್ರಯದಲ್ಲಿದ್ದ ಮತತ್ರಯದ ಪಂಡಿತರುಗಳಲ್ಲಿದ್ದ ಸ್ಪರ್ಧೆಯು ಕಾರಣವಾಯಿತು. ಪ್ರತಿ ಪಂಡಿತನೂ ದಾಸರ ಬಾಲ್ಯದಲ್ಲಿ ಆನಂದನು ತನ್ನವನೆಂದೇ ವಿದ್ಯಾಭ್ಯಾಸ ಮಾಡಿಸಿದನು. ಒಬ್ಬೊಬ್ಬನೂ ಇವನು ಏಕಸಂಧಿಗ್ರಾಹಿಯೆಂದು ಪ್ರೀತಿಯಿಂದ ಬಾಲಕನಿಗೆ ತಾನು ಕಲಿತ ವಿದ್ಯೆಯನ್ನು ಕಲಿಸಿದನು.

ರಾಜಾಸ್ಥಾನದ ನಕಲಿಗಾರನ ಅನುಕರಣ ಮಾಡಿ ಮೃಗಗಳಂತೆ ಪಕ್ಷಿಗಳಂತೆ ಕೂಗುವದೂ ಬಾಲಕನ ಮತ್ತೊಂದು ವಿದ್ಯೆಯಾಯಿತು.

ಆನಂದದಾಸರ ಜನ್ಮಭೂಮಿ ತುಂಗಭದ್ರಾತೀರದಲ್ಲಿರುವ ಚೀಕಲಪರವಿಯೆಂಬ ಗ್ರಾಮ. ಯಾವ ಕ್ಷೇತ್ರದಲ್ಲಿ ಶ್ರೀಪಾದರಾಯರು ತಪಸ್ಸುಮಾಡಿ ಅಶ್ವತ್ಥ ನರಸಿಂಹನನ್ನು ಪ್ರತಿಷ್ಠಿಸಿದರೋ, ಯಾವ ಕ್ಷೇತ್ರದಲ್ಲಿ ಅದೇ ಅಶ್ವತ್ಥ ನರಸಿಂಹದೇವರ ಸೇವೆಯಿಂದ ಕೂಸಮ್ಮನೆಂಬ ಸಾಧ್ವೀಮಣಿಯು ವಿಜಯದಾಸರಂಥಾ ವಿಭೂತಿ ಪುರುಷರನ್ನು ಮಗನನ್ನಾಗಿ ಪಡೆದಳೋ, ಅದೇ ಕ್ಷೇತ್ರವೇ ಆನಂದದಾಸರ ಜನ್ಮಭೂಮಿಯಾಯಿತು. ಬಾಲ್ಯದಲ್ಲಿ ಮಾತಾಪಿತೃಗಳ ವಿಯೋಗವಾಗಿ, ವಿದ್ಯಾರ್ಜನೆಗೆ ಸುರಪುರಕ್ಕೆ ಹೋಗಿ ಅಲ್ಲಿನ ರಾಜರ ಆಶ್ರಯದಿಂದ ವಾಸವಾಡಿದ ಕಾರಣ, ಆನಂದದಾಸರಿಗೆ ಸುರಪುರದ ದಾಸರೆಂಬ ಹೆಸರಾಯಿತು.

## ಪೂರ್ವವೃತ್ತಾಂತ.

ಆನಂದ, ಶೇಷ, ಎಂಬ ಅಣ್ಣತಮ್ಮಂದಿರು ವಿದ್ಯಾಭ್ಯಾಸಕ್ಕಾಗಿ ರಾಜಾಚಾರ್ಯರೆಂಬ ಮಹಾ ಪಂಡಿತರ ಬಳಿಗೆ ಯಾರದೋ ಸಹಾಯ ಪತ್ರವನ್ನು ತೆಗೆದುಕೊಂಡು ಸುರಪುರಕ್ಕೆ ಬಂದರು. ಸುರಪುರವು ಎಷ್ಟೇ ಚಿಕ್ಕ ಸಂಸ್ಥಾನವಾಗಿದ್ದರೂ, ಒಂಭತ್ತು ಲಕ್ಷ ಸೀಮೆಯೆಂದು ಪರಿಮಿತಿಯನ್ನು ತೋರಿಸುತ್ತಿದ್ದರೂ, ಆಳಿದ ರಾಜರ ಧರ್ಮಾಭಿಮಾನ ವಿದ್ಯಾಪ್ರೇಮಗಳಿಂದ ದೇಶದ ಖ್ಯಾತಿಯು ಭರತಖಂಡದಲ್ಲೆಲ್ಲಾ ವ್ಯಾಪಿಸಿತ್ತು. ಅಂತಹ ಧರ್ಮಸಂಸ್ಥಾನಕ್ಕೂ ರಾಜ್ಯದಾಹಿಗಳಾದ ಕಂಪನಿಯವರ ಆಡಳಿತ ಕಾಲದಲ್ಲಿ ಆಪತ್ತೊದರಿಸಿತು. ಬ್ರಿಟಿಷರಮೇಲೆ ರಾಜನು ಬಂಡಾಯಮಾಡಿದನೆಂಬ ಆಪಾದನೆಯಾಯಿತು.

ರಾಜ್ಯತ್ಯಾಗಮಾಡಿದ ಕಾಲದಲ್ಲಿ ರಾಜನು—

'ನೀವು ನನ್ನನ್ನು ಏನುಬೇಕಾದರೂ ಮಾಡಬಹುದು
ನಮ್ಮ ಪ್ರಜೆಗಳನ್ನೂ ಪೂರ್ವಿಕರು ಮಾಡಿದ ಧರ್ಮಗಳನ್ನೂ
ಅಳಿಸದಂತೆ ಕಾಪಾಡಬೇಕು' ಎಂಬದಾಗಿ ಕೇಳಿಕೊಂಡನು.

ಸ್ವಲ್ಪ ಕಾಲಾನಂತರ ಸುರಪುರ ರಾಜ್ಯವು ಕಂಪನಿಯವರಿಂದ ಬಲವಂತರಾದ ಹೈದರಾಬಾದು ನಿಜಾಮರಿಗೆ ಸೇರಿತು. ರಾಜರು ರಾಜ್ಯವಾಳುತ್ತಿದ್ದಾಗ ರಾಜ್ಯದ ಮೂರನೇ ಎರಡು ಭಾಗವು ಧರ್ಮಾದಾಯವಾಗಿತ್ತು. ವರ್ಷಕ್ಕೆ ನೂರರಿಂದ ಆರು ಸಾವಿರದವರಿಗಿನ ಉತ್ಪತ್ತಿಯುಳ್ಳ ಜಹಗೀರುಗಳು ವಿವಿಧ ವೃತ್ತಿವಂತರ ವಶದಲ್ಲಿದ್ದವು. ಜುಟ್ಟು ಜನಿವಾರಗಳಿದ್ದ ಬ್ರಾಹ್ಮಣರಿಗೆಲ್ಲಾ ಜಹಗೀರು ಕೊಟ್ಟ ಧೊರೆಗಳೆಂದು ಸಂತೋಷದಿಂದಾಗಲಿ, ಅಸೂಯೆಯಿಂದಾಗಲಿ, ಜನರಾಡಿಕೊಳ್ಳುತ್ತಿದ್ದರು. ಮುಸಲ್ಮಾನರ ಅಧಿಕಾರದಲ್ಲಿ ಆ ರಾಜರ ಧರ್ಮಗಳು ಎಷ್ಟೋ ಸಂಪುಟಾಕಾರಕ್ಕೆ ಬಂದಿದ್ದರೂ ಇಂದಿಗೂ ಧರ್ಮರಾಜ್ಯದ ಕುರುಹುಗಳನ್ನು ತೋರಿಸುವ ಅವಶೇಷಗಳು ಹೇರಳವಾಗಿವೆ.

ಆನಂದ ಸಹೋದರರು ರಾಜಾಚಾರ್ಯರ ಪದರಿಗೆ ಬಿದ್ದ ದಿನದಿಂದ ಬಾಲಕರ ಪ್ರೌಢ ವಿದ್ಯಾಭ್ಯಾಸಕ್ಕಾರಂಭವಾಯಿತು. ಬಾಲಕರ ಕಂಠಮಾಧುರ್ಯವನ್ನು ಕೇಳಿ ಕಂಠವೀಣೆಯವರೆಂಬ ಖ್ಯಾತಿ ಪಡೆದಿದ್ದ ಶ್ರೀವೈಷ್ಣವ ಮತಸ್ಥ ಗಾನಪಂಡಿತರು ಬಲವಂತವಾಗಿ ಗಾನವನ್ನು ಕಲಿಸಿದರು. ಬಾಲಕರು ಬೆಳಗಿನ ಝಾವದಲ್ಲಿ ಸಂಗೀತವನ್ನಭ್ಯಾಸಮಾಡಿ ಗರಡಿಯಲ್ಲಿ ವ್ಯಾಯಾಮ ಮಾಡುವರು. ಬೆಟ್ಟದಲ್ಲಿರುವ ಭಾವಿಗಳಲ್ಲಿ ಸ್ನಾನಮಾಡಿ ಪಂಡಿತರುಗಳಲ್ಲಿ ವ್ಯಾಸಂಗ ಮಾಡುವರು. ಹಿರಿಯನಾದುದರಿಂದ ಆನಂದನ ವ್ಯಾಸಂಗವು ಹಿರಿದಾಗಿ ಬೆಳೆಯಿತು. ಕಿರಿಯನು ಎಲ್ಲ ರೀತಿಯಿಂದಲೂ ಕಿರಿಯನೆನಿಸಿದನು.

ಹೀಗಿರಲು— 'ಸಧ್ಯಃಫಲಂತು ಸಂಗೀತಂ' ಎಂಬ ಗಾದೆಗನುಸಾರವಾಗಿ ಆನಂದನ ಗಾನಪಾಂಡಿತ್ಯದ ಪ್ರಶಂಸೆಯು ರಾಜನ ಕಿವಿಗೆ ಬಿದ್ದಿತು. ರಾಜನೇ ಆನಂದನನ್ನು ಕರೆಸಿ ವಿವಿಧ ರೀತಿಯಲ್ಲಿ ಪರೀಕ್ಷಿಸಿ ವಿದ್ವದ್ವೇತನ ಮಾಡಿಕೊಟ್ಟನು. ನಿರ್ಮತ್ಸರಿಗಳಾದ ವಿದ್ವಾಂಸರು ಆನಂದನ ವಿಶ್ವತೋಮುಖವಾದ ಪಾಂಡಿತ್ಯವನ್ನು ನೋಡಿ ಸಂತುಷ್ಟರಾದರು. ವಿದ್ಯಾರ್ಥಿ ದೆಸೆಯಲ್ಲಿದ್ದಾಗಲೇ ಪಂಡಿತರ ಪಙ್ಕ್ತಿಯಲ್ಲಿ ಕುಳಿತ ಇವನನ್ನು ನೋಡಿ ಅವರು ಪರಮಾನಂದಭರಿತರಾದರು. ಇವನ ಎಲ್ಲ ಪರಿಚಯ ವಿದ್ವತ್ಪ್ರದರ್ಶನವನ್ನು ಏಕಕಾಲದಲ್ಲಿ ಮಾಡಿಸಿ ನೋಡಬೇಕೆಂದು ಪಂಡಿತರು ಬಯಸಿ

ದರು. ಗಾಯನದಲ್ಲಿ ಕುಳಿತರೆ ಇವನ ಇತರ ಶಾಸ್ತ್ರ ಪಾಂಡಿತ್ಯ ಗೊತ್ತಾಗುವದಿಲ್ಲ. ಕೀರ್ತನವಾದರೆ ಎಲ್ಲಾ ವಿದ್ಯೆಗಳ ಸಮರಸ ಮಾಡಬಹುದು. ಆದ್ದರಿಂದ ಆನಂದನಿಂದ ಕೀರ್ತನ ಮಾಡಿಸಬೇಕು. ಅದನ್ನು ಕೇಳಿ ಎಲ್ಲರೂ ಸುಖಿಸಬೇಕು. ಎಂಬದಾಗಿ ವಿದ್ವಾಂಸರುಗಳು ಬಯಸಿದರು.

ಆನಂದನ ದೃಷ್ಟಿಯಲ್ಲಿ—ಕೀರ್ತ್ತನವು ಭಗ್ನಮನೋರಥರ ಭಿಕ್ಷಾವೃತ್ತಿಯಾಗಿತ್ತು. ವಾಕ್ಯಾರ್ಥಮಾಡುವದು ಪಾಂಡಿತ್ಯ ಪ್ರದರ್ಶನದಿಂದ ಮಾಡುವ ಯಾಚನೆಯಾಗಿತ್ತು. ಗಾನಮಾಡುವದು ರಾಜಾಧಿರಾಜರನ್ನು ತಲೆದೂಗಿಸುವ ಗಂಡು ವೃತ್ತಿಯಾಗಿತ್ತು. ಗಾನಮಾಡುವದರಲ್ಲಿ ಒಲಿದಂತೆ ಮಿಕ್ಕ ವೃತ್ತಿಗಳಲ್ಲಿ ಆನಂದನ ಮನಸ್ಸು ಒಲಿದಿರಲಿಲ್ಲ. ಇದಕ್ಕೆ ಕಾರಣ, ಸುರಪುರದರಾಜರ ಗಾನರಸಿಕತೆಯಾಗಿತ್ತು. ರಾಜನುಮನ್ನಿಸುತ್ತಿದ್ದರೆ ಗಾಯಕರನ್ನು ಕರೆಸಿಮಾಡುತ್ತಿದ್ದ ಸನ್ಮಾನವು ಪ್ರತ್ಯಕ್ಷ ಪ್ರಮಾಣವಾಗಿತ್ತು. ಪುರುಷರಿಗಿಂತ ಗಾನ ವಿದ್ಯಾಫಲವು ಸ್ತ್ರೀಯರಿಗೆ ಹೆಚ್ಚಾಗಿರುತ್ತಿತ್ತು. ಆ ಕಾಲದಲ್ಲಿ ನರ್ತಕಿಯರನೇಕರು ಸುರಪುರದರಾಜನ ಆಶ್ರಯದಲ್ಲಿದ್ದರು. ವೇಶ್ಯಾಲೋಲರಾಗಿರುವದು ರಾಜರಿಗೆ ಭೂಷಣವೆಂಬ ನಂಬಿಕೆ ಜನತೆಯಲ್ಲಿದ್ದುದರಿಂದ ಅದು ಅಪವಾದವಾಗಿರಲಿಲ್ಲ. ರಾಜಾನುಗ್ರಹಕ್ಕೆ ಪಾತ್ರರಾದ ನರ್ತಕಿಯರಿಗೆ ಗಾಯನವನ್ನು ಕಲಿಸಬೇಕೆಂಬ ರಾಜಾಜ್ಞೆಯಾದುದರಿಂದ ಆನಂದನು ಆ ಜನರ ವಿದ್ಯಾಗುರುವಾದನು.

ಇದೆಲ್ಲವನ್ನೂ ನೋಡಿ ರಾಜಾಚಾರ್ಯರಿಗೆ ಸಂತೋಷವಾಗುವದರ ಜೊತೆಗೆ ಆನಂದನು ಎಲ್ಲಿ ಮಾರ್ಗತಪ್ಪುವನೋ ಎಂಬ ಭಯವೂ ಬಾಧಿಸಿತು. ವೇದಾಂತ ಪ್ರವಚನದ ವಿನಾ ಅನ್ಯೋಪಾಯವಿಲ್ಲವೆಂದು ಆಚಾರ್ಯರು ಆನಂದನಿಗೆ ಗೀತಾ ಭಾಷ್ಯವನ್ನು ಪ್ರಾರಂಭಿಸಿದರು.

ಇದೇ ಸಮಯದಲ್ಲಿ ಜಗನ್ನಾಥದಾಸಾರ್ಯರ ಶಿಷ್ಯರಾದ ಶ್ರೀಶವಿಠಲಾಂಕಿತವನ್ನು ಪಡೆದ ದಾಸವರ್ಯರು ಸುರಪುರಕ್ಕೆ ಬಿಜಯಂಗೈದರು. ಕಾಲದ ಲೌಕಿಕವನುಸರಿಸಿ ರಾಜದರ್ಬಾರಿನಲ್ಲಿ ಕೀರ್ತನವಾದೊಡನೆ ವಿದ್ವಾಂಸರೊಬ್ಬೊಬ್ಬರ ಮನೆಯಲ್ಲೂ ದಾಸರ ಕೀರ್ತನಗಳಿಗಾರಂಭವಾಯಿತು. ಶ್ರೀಶದಾಸರಿಗೆ ಹುಂಡೇಕಾರದಾಸರೆಂದು ಮತ್ತೊಂದು ರೂಢಿಯ

ಹೆಸರು. ಜಗನ್ನಾಥದಾಸರ ಶಿಷ್ಯರಾಗುವದಕ್ಕೆ ಮೊದಲು ಶ್ರೀಮಂತರಾಗಿದ್ದು ದೇಶಾಂತರದ ಸಾಹುಕಾರರಿಂದ ಬರುವ ಹುಂಡಿಗಳಿಗೆ ಹಣವನ್ನು ಕೊಡುತ್ತಿದ್ದುದರಿಂದ ಹೆಸರಿನ ರೂಢಿ ಕಡೆಯತನಕ ತಪ್ಪಲಿಲ್ಲ. ಪುರಂದರ ದಾಸರಂತೆ ಸಕಲೈಶ್ವರ್ಯವನ್ನೂ ದಾನಮಾಡಿ ಹರಿದಾಸರಾದ ಕಾರಣ ಶ್ರೀಶ ದಾಸರಲ್ಲಿ ಜನರ ಭಕ್ತಿ ಗೌರವಗಳು ಬಹಳವಾಗಿದ್ದವು. ದಾಸರ ಕೀರ್ತನ ಶ್ರವಣದಿಂದ ಆನಂದನ ಮನಸ್ಸು ಅಲ್ಲಕಲ್ಲೋಲವಾಯಿತು. ಕೀರ್ತನವು ಭಗ್ನಮನೋರಥರ ಭಿಕ್ಷಾವೃತ್ತಿಯೆಂಬ ತಪ್ಪು ತಿಳುವಳಿಕೆ ದೂರಾಯಿತು. ವಿದ್ವಾಂಸರು ಬಯಸಿದಂತೆ ತಾನೂ ಕೀರ್ತನಮಾಡಬೇಕೆಂಬ ಬಯಕೆ ಆನಂದನಿಗಾಯಿತು. ರಾಜಾಚಾರ್ಯರ ಮನೆಯಲ್ಲಿ ನಡೆದ ದಾಸರ ಕೀರ್ತನಕ್ಕೆ ರಾಗರಚನೆ ಮಾಡಲು ಆನಂದನೇ ಟೊಂಕಕಟ್ಟಿ ತಂಬೂರಿಯನ್ನು ಮಿಾಟುತ್ತಾ ಪಕ್ಕದಲ್ಲಿ ನಿಂತನು. ಕೀರ್ತನ ವಿಷಯವು ಶ್ರೀ ಕೃಷ್ಣನ ಅಗ್ರ ಪೂಜಾ (ರಾಜಸೂಯ ಯಾಗ) ನಿರೂಪಣೆಯಾಗಿತ್ತು. ಭೀಮ ಜರಾಸಂಧರ ವಾಗ್ವಾದದಲ್ಲಿ ಭೀಮನು ಬ್ರಹ್ಮತರ್ಕ ಬಲದಿಂದ ಶ್ರೀ ಕೃಷ್ಣನು ಸಾಕ್ಷಾನ್ನಾರಾಯಣನೆಂದು ಸ್ಥಾಪಿಸಿ ಜೈಸಿದ ಕಥಾ ವಿಸ್ತಾರದಲ್ಲಿ ದಾಸರ ಪಾಂಡಿತ್ಯವು ಆನಂದನ ಆವೇಶಕ್ಕೆ ಕಾರಣವಾಯಿತು. ಅವನು ಆಗಲೇ ಸ್ವಯಂ ಸ್ಫೂರ್ತಿಯಿಂದ—

ಸುರಟಿ — ಆದಿತಾಳ.

ಜಗದೊಡೆಯಗೆ ನೀ ಜಾಳುಮಾತುಗಳ
ಬೊಗಳದಿರೆಲೊ ಮೂಢ ||ಪ||

ಹಗೆಯಬಗೆಯಬೇಡ ಮಗಧ ನಿನ್ನ ಕರ
ಳ್ಹುಗಿದು ಶಾಕಿನಿ ಗಣಗಳಿಗೆ ಉಣಿಸುವೆ ||ಅ||

ನಿಗಮಗೋಚರಗೆ ನವನೀತದ ಕಳ
ವುಗಳ ಕಲ್ಪಿಸುವರೇ
ಹಗಲಿರುಳಗಲದ ಶಿರಿ ವೈಸೋಕದಗೆ ಜಾ
ರಿಗನೆಂದುಸುರುವರೇ
ನಗಚಾಪಗೆ ಭುಗಿಲ್ಹುಗಿಸುವನಿಗೆ ಹೇ

ಡಿಗನೆಂದಾಡುವರೇ ||ಚತುರ||
ಮೊಗನಯ್ಯಗೆ ಮೊಮ್ಮೊಗನೆಂದೆನ್ನಲು
ನಗೆಗೇಡಲ್ಲವೆ ಮುಗುಧ ಮೂರ್ಖ ನೀ ||೧||

ಎಂಬದಾಗಿ ಹಾಡಿದನು. ಪದವನ್ನು ಕೇಳಿ ಶ್ರೀಶದಾಸರಾದಿಯಾಗಿ ಎಲ್ಲ ಪಂಡಿತರೂ ಆಶ್ಚರ್ಯಭರಿತರಾದರು. ರಾಜಾಚಾರ್ಯರು ಶಿಷ್ಯನ ಪ್ರೌಢಿಮೆ ಯನ್ನು ನೋಡಿ ಉಬ್ಬಿದಮನದಿಂದ--ಇದೇನು ಹೊಂದಿಕೆ? ಇದೇನು ಹಾಡಿಕೆ? ಎಲ್ಲವೂ ಸರಿ ಆನಂದ! ಪದಕ್ಕೆ ಅಂಕಿತಬೇಡವೇ ಎಂದರು. ಆನಂದನು — ದಾಸರು ಪರಮಾನುಗ್ರಹ ಮಾಡಿ ನನ್ನನ್ನೂ ದಾಸಾನು ದಾಸನನ್ನಾಗಿ ಮಾಡಿದಾಗ! ಅಂಕಿತೋಪದೇಶಕೊಟ್ಟು ಸ್ವರೂಪೋದ್ಧಾರ ಮಾಡಿದಾಗ! ಎಂದನು.

ಶ್ರೀಶದಾಸರು, ತಾವು ಸುರಪುರಕ್ಕೆ ಬಂದ ಕಾರ್ಯಸಫಲವಾಯಿ ತೆಂದರು. ಆನಂದನಂಥಾ ಶಿಷ್ಯ ದೊರೆತಮೇಲೆ ತಮಗೆ ಬ್ರಹ್ಮಾನಂದ ವೆಂದರು. ಸಕಲ ಪಂಡಿತರೂ "ಸಾಧು ಸಾಧು" ಎಂದು ಆನಂದನನ್ನು ಹರಸಿದರು.

ಆನಂದನ ಗೀತಾ ಮಂಗಳಕ್ಕೆ ಆಚಾರ್ಯರು ಸುದಿನವನ್ನು ನಿಶ್ಚೈಸಿ ದರು, ಅದೇ ಆನಂದನಿಗೆ ಅಂಕಿತೋಪದೇಶಕ್ಕೂ ಶುಭ ದಿನವಾಯಿತು. ಸಕಲ ವಿದ್ವಜ್ಜನರ ಸಮುಖದಲ್ಲಿ ಗೀತಾ ಮಂಗಳ ಮಹೋತ್ಸವವಾಯಿತು. ಆಚಾರ್ಯರು ಇಂದಿಗೆ ನಮ್ಮ ಕಾರ್ಯ ಪೂರ್ತಿಯಾಯಿತೆಂದರು. "ಏಕಸ್ಮಿ ಜನ್ಮನಿ ಏಕೈವವಿದ್ಯಾ" ಎಂಬ ಅಪವಾದದಿಂದ ಆನಂದನು ರಹಿತನಾದ ನೆಂದರು.

ಶ್ರೀಶದಾಸರು ಅಂಕಿತೋಪದೇಶಕ್ಕೆ ಪೂರ್ವಭಾವಿಯಾಗಿ ನಡೆಸಬೇ ಕಾದ ಕಾರ್ಯಗಳನ್ನು ನಡೆಸಿದರು. ವಿಜಯರಾಯರಿಂದ ಪರಂಪರಾಗತ ವಾದ ನರಸಿಂಹ ಮೂರ್ತಿಗೆ ತಂತ್ರ ಶಾಸ್ತ್ರಾನುಸಾರ ಮಹಾಪೂಜೆ ಮಾಡಿ ದರು. ಆನಂದನನ್ನು ಭದ್ರಪೀಠದಮೇಲೆ ಕುಳ್ಳಿರಿಸಿ ತಮ್ಮ ಬಿಂಬ ಮೂರ್ತಿಯನ್ನು ಅವನಲ್ಲಿ ಆವಾಹಿಸಿದರು. ಕಮಲೇಶವಿಠಲಾಂಕಿತ ದಿಂದ ನೀನು ಹರಿದಾಸನಾದೆಯೆಂದರು. ಇಂದೇ ಸ್ಫೂರ್ತಿಯಿಂದ ನೀನೇ ಕೀರ್ತನ ಸೇವಾಮಾಡಬೇಕೆಂದು ಆಜ್ಞೈಸಿದರು.

ಆನಂದನು ಹರಿದಾಸ ಪಟ್ಟದಲ್ಲಿ ಅಭಿಷಿಕ್ತನಾದುದನ್ನು ನೋಡಿ ಆಸ್ಥಾನದ ಪಂಡಿತರು ಆನಂದ ಭರಿತರಾದರು. ತಾವೆಲ್ಲರೂ ಬಯಸಿದಂತೆ ಆನಂದನ ಸಕಲ ವಿದ್ಯಾಪ್ರದರ್ಶನಕ್ಕೆ ಇವತ್ತಿನ ಕೀರ್ತನವೇ ಶುಭಾರಂಭ ವೆಂದರು. ಆ ರಾತ್ರಿ ಶ್ರೀಶದಾಸರು ಸಂಪ್ರದಾಯ ಪ್ರಕಾರ ಭಗವದ್ಭಜನೆ ಮಾಡಿ ಆನಂದನನ್ನು ತಾವು ಕುಳಿತಿದ್ದ ಭದ್ರಪೀಠದಲ್ಲಿ ಕುಳ್ಳಿರಿಸಿ ಕೀರ್ತನಾರಂಭವಾಗಬಹುದೆಂದರು. ಆಚಾರ್ಯರು ರಸಭರಿತವಾದ ಅಪೂರ್ವ ಕಥೆಯನ್ನೇ ಹೇಳಬೇಕೆಂದರು.

ಆನಂದದಾಸರು ಗುರುಜನರ ಆಜ್ಞೆಯನ್ನು ಶಿರಸಾವಹಿಸಿ ಪೌರಾಣಿಕ ವಾದ 'ಪರಮಾನ್ನದ ಕಥಾ' ಎಂಬ—ದೂರ್ವಾಸ ಮುನಿಗಳು ಶ್ರೀಕೃಷ್ಣ ನನ್ನು ವಿವಿಧ ರೀತಿಯಲ್ಲಿ ಪರೀಕ್ಷಿಸಿ ವರಪ್ರದಾನಮಾಡಿದ ಆಖ್ಯಾನವನ್ನು ಆರಂಭಿಸಿರು. ಆಖ್ಯಾನದ ಕಡೆಯಲ್ಲಿ ಕೃಷ್ಣ ಪ್ರಶಂಸಾರೂಪವಾದ ಪದವು

ಕೇತಾರಗೌಳ — ಆದಿತಾಳ

ಬ್ರಹ್ಮಣ್ಯದೇವನೆಂಬುವ ಮಹಾಬಿರಿದು ನಿನಗೆ ಸಲ್ಲುವದಯ್ಯಾ ||ಪ||
ಬ್ರಹ್ಮರುದ್ರಾದ್ಯರುಗಳ ದೈವವೆಂ
ದ್ಧಮ್ಮಿನಿಂದ ಹೊಡೆದಾಡುವರು ಬರಿದೆ ||ಅ||

ಹಿಂದೆ ಸರಯು ತೀರದೊಳ್ ಮಹಾಮರ
ಬೃಂದವೆಲ್ಲ ಕೂಡಿ। ಸರ್ವೇಶ್ವರ।
ಸಂದೇಹವ ತಿಳಿಸಲು ಭೃಗುಮುನಿಗಳಿ
ಗಂದೆ ಆಜ್ಞೆಮಾಡೀ||—
ಮಂದಜಾಸನೇಂದುಧರರ ಪರಿಭವ
ದಿಂದಬೆಂದು ನಿನ್ನ ಸನ್ನಿಧಾನಕೆ
ಬಂದು ಪಾದದಿಂದಲೊದೆಯಲವಗಭಿ
ವಂದನಂಗೈದು ಘಳಿಸಿದೆ ಪರ ||೧||

ರಾಯಸೂಯಾಗದೊಳ್ ಮಹಾಮಹ
ರಾಯಸಂದಣಿಯಲಿ। ಅಗ್ರಪೂ।

ಜಾಯ.ತಾರ್ಥದಿಂದ ಗಾಂ
ಗೇಯ ಸಮ್ಮುಖದಲಿ॥
ಆವದೇವಗಿಲ್ಲ ಶಕುತಿ ಬ್ರಹ್ಮ ಕು
ಲಾವಮಾನದಿಂದ ಪೇಳ್ದುದನು ಕೇಳ್
ಕಾವ ಕಮಲೇಶವಿಠಲ ಪ್ರತ್ಯ
ಕ್ಷಾವಲೋಕನದಲಿ ಧನ್ಯನಾದೆ ॥೩॥

ಎಂಬ ಮಾತುಗಳಿಂದ ಎಷ್ಟು ಅರ್ಥವತ್ತಾಗಿದೆ, ಬಂಧುರವಾಗಿದೆ, ಎಂಬುವದು ಗೋಚರವಾಗುತ್ತದೆ.

ಆನಂದನ ಕೀರ್ತನ ಸದ್ವಾರ್ತೆಯು ರಾಜಸನ್ನಿಧಿಯಲ್ಲಿ ಬಹುಮುಖದಿಂದ ಶೃತವಾಯಿತು. ರಾಜನು ತನ್ನ ಆನಂದನು ಆನಂದದಾಸರಾದ ಉತ್ಸವಾಂಗವಾಗಿ ವಿದ್ವಜ್ಜನರಿಗೆಲ್ಲಾ ರಾಜಯೋಗ್ಯವಾದ ವಸ್ತ್ರ ಬಹುಮಾನ ಮಾಡಿದನು. ದ್ವಿತೀಯ ವಿಘ್ನವಾಗದಂತೆ ರಾಜ ದರ್ಬಾರಿನಲ್ಲಿ ಮುಂದಿನ ಕೀರ್ತನ ಮಾಡಬೇಕೆಂದು ತಾನೇ ಆಜ್ಞೆ ಮಾಡಿದನು.

## ಕನಕಾಭಿಷೇಕ

ಆನಂದದಾಸರು ಕೀರ್ತನರಂಗಕ್ಕೆ ಕಾಲಿಟ್ಟ ಕೂಡಲೇ ಅವರಿಗೆ ಬಂದ ಪ್ರಾಶಸ್ತ್ಯವು ಅನನ್ಯ ಸಾಧಾರಣವೆನ್ನಬೇಕು. ರಾಜಸನ್ನಿಧಿಯಲ್ಲಿ ದಾಸರು ಮಾಡಿದ ಕೀರ್ತನಗಳೆಂದರೆ ಭಗವದ್ಗೀತೆಯ ಮೂರು ಷಟ್ಕಗಳು. ಗೀತೆಯ ಪ್ರಥಮ ಶ್ಲೋಕವಾದ—

ಧರ್ಮಕ್ಷೇತ್ರೇ ಕುರುಕ್ಷೇತ್ರೇ
ಸಮವೇತಾಯುಯುತ್ಸವಃ
ಮಾಮಕಾಃ ಪಾಂಡವಾಶ್ಚೈವ
ಕಿಮಕುರ್ವತ ಸಂಜಯ ॥೧॥

ಎಂಬುದನ್ನು ಆಧ್ಯಾತ್ಮರೀತ್ಯಾ ಶರೀರ, ಅಹಂಕಾರ ಮಮಕಾರಗಳು, ಶುದ್ಧವಾದ ಭಕ್ತಿ ವೈರಾಗ್ಯಾದಿ ಗುಣಗಳು, ಎಂಬ ಯೋಜನೆಮಾಡಿ ಅನುವಾದ ಮಾಡಿದರು. ಅಮುಖ್ಯ ಭಾಗವೆಂದು ಉಪೇಕ್ಷಿಸುವ ಅರ್ಜುನ ವಿಷಾದ ಯೋಗವನ್ನೂ ದ್ವಿತೀಯಾಧ್ಯಾಯದ ಮೊದಲ ಹತ್ತು ಶ್ಲೋಕಗಳನ್ನೂ

ವ್ಯಕ್ತಿ ಕಥೆಯಾಗಿ ತೆಗೆದುಕೊಳ್ಳದೆ ತತ್ವನಿರೂಪಣೆಯೆಂದು ವಿಸ್ತರಿಸಿದ ಅನುವಾದವು ದಾಸರ ವಿದ್ಯಾಗುರುಗಳನ್ನೂ ಮುಗ್ಧರನ್ನಾಗಿ ಮಾಡಿತು.

ದಾಸರು ಬರೆದಿಟ್ಟಿರುವ 'ಕೀರ್ತನ ಗೀತೆ'ಯಲ್ಲಿ ಪ್ರತಿ ಅಧ್ಯಾಯಕ್ಕೂ ಎರಡು ಪದಗಳು, ಕೆಲವು ಆರ್ಯಗಳು, ಮತ್ತು ಷಟ್ಪದಿಗಳು, ಈ ರೀತಿ ಬಲು ಬಂಧುರವಾದ ಸಂಗ್ರಹವಿದೆ. ವಿಶ್ವರೂಪ ವರ್ಣನೆಯು ಕನ್ನಡ ದಂಡಕವು ಶ್ರೀ ಭಾಷ್ಯಕಾರರ ವೈಕುಂಠ ಗದ್ಯದಂತೆ ಸುಂದರವಾಗಿದೆ. ಆನಂದದಾಸರು ಮಾಡಿದ'ಕೀರ್ತನಗೀತೆ'ಯನ್ನು ಸಂಕ್ಷೇಪವಾದ ವ್ಯಾಖ್ಯಾನಮಾಡಿ ಮುದ್ರಿಸಿದರೆ ಕನ್ನಡಿಗರಿಗೊಂದು ಕೈಪಿಡಿಯನ್ನು ಮಾಡಿಕೊಟ್ಟಂತಾಗುತ್ತದೆ. ದಾಸರ ಕೀರ್ತನ ಗೀತೆಯ ಮೊದಲನೆಯ ಪದವು—

ಜೆಹಾಗ್ — ಆದಿತಾಳ

ನಿನ್ನ ಸೇವಕನ ಬಿನ್ನಪಂಗಳನ್ನು
ಮನ್ನಿಸಿ ಪಾಲಿಪುದೈ ||ಪ||

ಚನ್ನಾರ ಚಲುವರಾಯ ನೀಲನಿಭ
ವರ್ಣ ಮದನಮೋಹನ್ನ ಕರುಣಸಂಪನ್ನ ||ಅ||

ತ್ವರದಿಂದಲಿ ಸಂಗರ ಮಹೋತ್ಸವಕೆ
ನೆರೆದ ಮಹೋತ್ತಮರು||
ಗುರು ಗುರುಸುತ ಭೀಷ್ಮ ಕೃಪಾಚಾರ್ಯಾ
ದ್ಯರ ಮೇಲೆನ್ನಯ ಕರವೆರವಾಗಲು ತರವೆ ||೧||

ಮಾವ ಭಾವಮೈದುನ ಶ್ವಶುರಾನುಜ
ವಾವೆಯವರಿಗೆಲ್ಲಾ—
ಸಾವಬಗೆದು ಈ ಭೂವಲಯದ ಭಾ
ಗ್ಯಾವ ಭೋಗವಿದು ನಾನೊಲ್ಲೆ ನಿಜವಿದು ||೨||

ಬಂಧುಗಳನು ನೆರೆ ಕೊಂದ್ಯಮರಾಯನ
ಮಂದಿರದೊಳಗೆಲ್ಲಾ
ಬಂಧಿಸಿ ಕಮಲೇಶವಿಠಲ ನೀ ನೋಡುವ
ದಂದವೆ ತವಪದದ್ವಂದ್ವಗಳಿಗೆ ವಂದಿಸುವೆ ||೩||

ಎಂಬಂತೆ ಪ್ರಾರಂಭವಾಗಿದೆ.

ಸಾರಾಂಶ ಮಾತೆಂದರೆ, ದಾಸರ ಕೀರ್ತನವು ಒಂದು ಪ್ರಕಾರದ ಸಕಲ ಮತಗಳ ಅನುವಾದಮಾಡಿ, ಮಾಡಿದ ಸಿದ್ಧಾಂತವಾಗಿತ್ತು. ರಾಜನು ದಾಸರ ಪಾಂಡಿತ್ಯಕ್ಕೆ ಪರವಶನಾಗಿ ಸಕಲ ಪಂಡಿತರ ಸಮ್ಮತಿಯಿಂದ ಕನಕಾಭಿಷೇಕ ಮಾಡಿದನು. ಅಂದು ಮೊದಲು ದಾಸರ ಯೋಗಕ್ಷೇಮವು ಮಹಾರಾಜನದಾಯಿತು. ದಾಸರು ಬಲು ದೊಡ್ಡ ತರಗತಿಯವರಾದರು. ಜನರು ಅವರನ್ನು ಕಾಣುವ ರೀತಿ ಬದಲಾಯಿತು.

ಆನಂದದಾಸರ ಕೀರ್ತಿಯು ಗದ್ವಾಲ ವನಪರ್ತಿ ದೋಮಕೊಂಟ ಮೊದಲಾದ ರಾಜರ ವಿದ್ವತ್ಸಭೆಗಳಲ್ಲಿ ಪ್ರಶಂಸೆಗೆ ಬಂದಿತು. ಆಯಾ ರಾಜರು ದಾಸರನ್ನು ಬರಮಾಡಿಕೊಂಡು ಸ್ಪರ್ಧೆಯಿಂದಲೋ ಎಂಬಂತೆ ಬಹುಮಾನಿಸಿದರು. ದಾಸರ ಕೀರ್ತನವು ರಾಜದರ್ಬಾರಿನಲ್ಲಾದ ವಿನಾ ಸುಲಭವಾಗಿ ಕೇಳಬೇಕೆಂದರೆ ದೊರೆಯುತ್ತಿರಲಿಲ್ಲ. ಆನಂದದಾಸರಷ್ಟು ವಿಭವಶಾಲಿ ದಾಸರು ಯಾರೂ ಆಗಲಿಲ್ಲವೆಂದರೆ ಅತಿಶಯೋಕ್ತಿಯಾಗುವದಿಲ್ಲ. ದಾಸರ ದಿನಚರ್ಯವೆಂದರೆ, ಉಷಃಕಾಲದಲ್ಲಿ ರುದ್ರವೀಣೆಯನ್ನು ಬಾರಿಸಿ ಹಾಡುವದು; ಜಟ್ಟಿಗಳಂತೆ ದಂಡೆಯೊತ್ತುವದು; ಪ್ರೌಢವಿದ್ಯಾರ್ಥಿಗಳಿಗೆ ಪಾಠ ಹೇಳುವದು; ರಾಜಾನುಗ್ರಹಕ್ಕೆ ಪಾತ್ರರಾದ ನರ್ತಕಿಯರಿಗೆ ಮಧ್ಯಾಹ್ನಕಾಲದಲ್ಲಿ ಗಾನ ನರ್ತನಗಳನ್ನು ಕಲಿಸುವದು; ಸಂಧ್ಯಾಕಾಲದಲ್ಲಿ ಸಂಗಡಿಗರೊಡನೆ ಗುಡ್ಡಕ್ಕೆಹೋಗಿ ಮೃಗಗಳಂತೆ ಪಕ್ಷಿಗಳಂತೆ ಕೂಗಿ ಅವುಗಳೊಡನೆ ಆಟವಾಡುವದು; ಇಷ್ಟರವಿನಾ ನೋಡುವರಿಗೆ ಯಾವದೇ ವೈರಾಗ್ಯಲಕ್ಷಣ ಕಂಡು ಬರುತ್ತಿರಲಿಲ್ಲ. ಅರಸು ಮಕ್ಕಳಂತೆ ಅಂಗರೇಖು ಮುಂಡಾಸುಗಳನ್ನು ಧರಿಸುತ್ತಿದ್ದುದು ಶಿಷ್ಟಸಂಪ್ರದಾಯಸ್ಥರಿಗೆ ಸಮ್ಮತವಿರಲಿಲ್ಲ. ನರ್ತಕಿಯರ ಪರಿವಾರವೇ ಶಿಷ್ಯರಾಗಿದ್ದುದರಿಂದಲೂ, ಸುಗಂಧದ್ರವ್ಯಗಳಿಂದ ಯಾವಾಗಲೂ ಘಮಘಮಿಸುತ್ತಿದ್ದುದರಿಂದಲೂ ಸಂಕುಚಿತ ಮನಸ್ಕರು ದಾಸರನ್ನು ದೂರದೇ ಬಿಡಲಿಲ್ಲ. ಬಾಹ್ಯಪರಿಸ್ಥಿತಿ ಹೀಗಿದ್ದರೂ ಆನಂದದಾಸರು ಅಂತರ್ಮುಖಿಗಳಾಗಿದ್ದರು. ರಾತ್ರಿ ಕಾಲದಲ್ಲಿ ವಿದ್ಯಾರ್ಥಿಗಳಂತೆ ವ್ಯಾಸಂಗ ಮಾಡುವದೂ, ಪುರಾಣಕಥೆಗಳನ್ನು ಕೀರ್ತನಕ್ಕೆ ಹೊಂದಿಸಿ ಪದಪದ್ಯಗಳಾಗಿ ಬರೆದಿಡುವುದೂ, ದಾಸರ ಮನಮೆಚ್ಚಿದ ಕಾರ್ಯವಾಗಿತ್ತು. ಹೀಗೆ ದಾಸರು ರಚಿಸಿದ ಆಖ್ಯಾನಗಳಲ್ಲಿ ನಲವತ್ತು ಲೇಖಕನ ಪಿತ್ರಾರ್ಜಿತ

ವಾಗಿದೆ. ಭರತ ನಾಟ್ಯಕ್ಕೆ ಅನುಕೂಲವಾದ ನಾಯಕ ನಾಯಕೀ ಭಾವದಿಂದ ರಚಿಸಿದ ಅನೇಕ ಜಾವಡಿಗಳಲ್ಲಿ ಕೆಲವು ಸಂಗೃಹೀತವಾಗಿವೆ. ಅಭಿನಯಕಲೆಯೇ ಮುಳುಗಿ ಹೋಗಿರುವ ಕಾರಣ ಆನಂದದಾಸರ ಜಾವಡಿಗಳನ್ನು ಹಾಡುವರು ಈ ಕಾಲದಲ್ಲಿ ದೊರೆಯುವುದಿಲ್ಲ. ಆನಂದದಾಸರ ಆಖ್ಯಾನಗಳಲ್ಲಿ ನಾಲ್ಕಾರು ಪದಗಳಿಗಿಂತ, ಹತ್ತೆಂಟು ಆರ್ಯಗಳು, ಅಷ್ಟೇ ಸಂಖ್ಯೆಯವೃತ್ತಗಳಿಗಿಂತ ಹೆಚ್ಚಾಗಿರುವುದಿಲ್ಲ. ಇವರಷ್ಟು ವಿಷಯಗಳನ್ನು ಕ್ರೋಡೀಕರಿಸಿ ಬರೆದವರು ಹರಿದಾಸರುಗಳಲ್ಲಿ ಬಹಳ ವಿರಳ. ಭಾರತೀಯ ಗಾನಕಲೆಯಲ್ಲಿ ಹಿಂದುಸ್ಥಾನೀ ಕರ್ನಾಟಕೀ ಎಂಬ ಪ್ರತ್ಯೇಕ ಪದ್ಧತಿಗಳ ಸಾಮರಸ್ಯವು ಆನಂದದಾಸರ ಪದಗಳಲ್ಲಿ ದೊರೆಯುವಂತೆ ಅನ್ಯತ್ರ ದೊರೆಯುವದಿಲ್ಲ. ಅಪರೂಪ ರಾಗಗಳಲ್ಲಿ ವರ್ಣಮಟ್ಟುಗಳನ್ನೆತ್ತುವದು, ಅದರಲ್ಲಿ ತಾಳಭೇದ ಕಾಲಭೇದಮಾಡಿ ತೋರಿಸುವದು, ಆನಂದದಾಸರಿಗೆ ಸಾಧಿಸಿದಂತೆ ಅನ್ಯರಿಗೆ ಸಾಧಿಸಿಲ್ಲ.

ಸುರಪುರದ ದೊಡ್ಡ ತರಗತಿಯ ರಸಿಕಜನರ ಮನೆಯಲ್ಲಿ ಗಾಯನ ವಾದನ ಸಂಭ್ರಮಗಳಿರುತ್ತಿದ್ದುದರಿಂದ ತಪ್ಪದೆ ಮಧ್ಯಾಹ್ನಕಾಲಗಳಲ್ಲಿ ಸೇರುತ್ತಿದ್ದರು. ರಾಜಾಶ್ರಯದಿಂದ ವಿದ್ವಜ್ಜನರಿಗೆ ಸುಖಜೀವನವಾಗುತ್ತಿದ್ದಾಗ, ಜೀವನವು ಸಂಗ್ರಾಮವಾಗಿ ಪರಿಣಮಿಸದಿದ್ದಾಗ, ಕಾವ್ಯಾಲಾಪನ ಗಾಯನಗಳಿಂದಲ್ಲದೆ ಜನರ ಕಾಲಯಾಪನೆ ಹೇಗಾಗಬೇಕು? ಆ ಕಾಲದಲ್ಲಿ ರಾಜಬಂಧುಗಳಲ್ಲಿ ಸಹ ಕವಿಗಳು ಹೇರಳವಾಗಿದ್ದರು. ಆಂಧ್ರ ಕನ್ನಡ ಸಂಸ್ಕೃತಭಾಷೆಗಳಲ್ಲಿ ಕವಿತ್ವ ಮಾಡುವದು, ಸಮಸ್ಯೆಗಳನ್ನು ಪೂರ್ಣ ಮಾಡುವದು, ಹಾಡುವದು, ರಾಜನಿಗೆ ಗೋಷ್ಠಿಯಲ್ಲಿ ನಡೆದ ಸಂಗತಿಗಳನ್ನು ವರದಿಮಾಡುವದು, ಇವೆಲ್ಲಾ ದೊಡ್ಡವರ ಕೆಲಸವಾಗಿತ್ತು. ಇಂತಹ ಸಂದರ್ಭಗಳಲ್ಲಿ ಆನಂದದಾಸರು ಇತರರೊಡನೆ ಪ್ರಶ್ನೋತ್ತರಗಳಂತೆ ಹಾಡಿದ ಹಾಡುಗಳು ಮನೋರಂಜಕವಾಗಿವೆ. ತತ್ವೋಪದೇಶವಾಗಲಿ, ಪುರಾಣಕಥೆಗಳ ಕಥನವಾಗಲಿ, ಆ ಪದಗಳಲ್ಲಿರದಿದ್ದರೂ, ಪದಗಳು ಜೀವನದ ಸುಂದರ ಭಾವನೆಗಳನ್ನು ವರ್ಣಿಸಿವೆ. ಅಶ್ಲೀಲವಲ್ಲದ ಶೃಂಗಾರ, ಕಟ್ಟಲೆಗಳಿಲ್ಲದಭಕ್ತಿ, ಜಿಜ್ಞಾಸ ಹುಟ್ಟಿಸದ ತತ್ವ, ಈ ಮೂರನ್ನೂ ಆನಂದದಾಸರ ಸಾಹಿತ್ಯದಲ್ಲಿ ನೋಡಬಹುದು.

ಹೀಗೆ ಆ ಕಾಲದ ಭಾವನೆಗೆ ತಕ್ಕಂತೆ ಮಾನವನಿಗೆ ಬರಬೇಕಾದ ಪ್ರಾಶಸ್ತ್ಯಗಳೆಲ್ಲಾ ಆನಂದದಾಸರಿಗೆ ಬಂದವು. ಅಪಜಯ ಆಶಾಭಂಗ ಬೇಸರಗಳು ಅವರ ಜೀವನದ ಪ್ರಥಮ ತರಂಗದಲ್ಲಿ ಬರಲಿಲ್ಲ. ವರ್ಷ ನಲವತ್ತಾದರೂ ಸುಕುಮಾರ ಯುವಕನಂತೆ ಆನಂದದಿಂದಿದ್ದರು ಆನಂದದಾಸರು.

---

- ೨ -

ಲೋಕದಲ್ಲಿ ಮಾನವನು ಎಷ್ಟೇ ವಿದ್ಯಾಪಾರಂಗತನಾದರೂ, ಸಾಮಾಜಿಕ ನಿಯಮಗಳನ್ನನುಸರಿಸಿ ಅವನು ನಡೆದರೂ ಅವನಲ್ಲಿ ಮಾನವತ್ವವುಂಟಾಗುವುದಲ್ಲದೆ ಅತಿ ಮಾನವತ್ವಬರುವುದಿಲ್ಲ. ಸಮಾಜಜೀವಿಯಾದ ಮಾನವನಿಗೆ ಅಶನ ವಸನಗಳು ಸಮೃದ್ಧಿಯಾಗಿ ದೊರೆಯುತ್ತಿದ್ದಾಗ, ಅವನ ಸಮಾಜವು ಅವನನ್ನು ಗೌರವಿಸುತ್ತಿದ್ದಾಗ ಮಾತುಮಾತಿಗೆ ದೇವರ ಅವಶ್ಯಕತೆಯುಂಟಾಗುವುದಿಲ್ಲ. ಅಭ್ಯಾಸಬಲದಿಂದ ಶಾಸ್ತ್ರವಾಕ್ಯಗಳನ್ನುದಹರಿಸಿ ದೇವರ ಮತ್ತು ಧರ್ಮದ ಮಾತಾಡಿದ ಮಾತ್ರಕ್ಕೆ ಆ ಮಾತು ಅನುಭವದ ಮಾತಾಗುವದಿಲ್ಲ. ಲೋಕದೃಷ್ಟಿಯಲ್ಲಿ ದೊಡ್ಡವನಾದ ಮನುಷ್ಯನು ದೇವರ ದೃಷ್ಟಿಯಲ್ಲಿ ದೊಡ್ಡವನೆನಿಸುವದಿಲ್ಲ. ಹರಿದಾಸರೆಂದರೆ ಅತಿ ಮಾನವರು; ಹರಿದಾಸರೆಂದರೆ ಸತ್ಪುರುಷರು; ಆ ತರಗತಿಗೆ ಆನಂದದಾಸರು ಆಶ್ರಯದಾತನಾಗಿದ್ದ ಸುರಪುರದ ರಾಜನಿರುವವರೆಗೆ ಏರಲಿಲ್ಲ.

ಹೀಗಿರಲು ಆಗಿದ್ದ ರಾಜನು ಮೃತನಾಗಿ ಅವನ ದತ್ತಪುತ್ರನಿಗೆ ರಾಜ್ಯಾಭಿಷೇಕವಾಯಿತು. ಯಾವದೋ ಬಡಸಂತತಿಯಿಂದ ಆರಿಸಿ ಬಂದ ರಾಜನಲ್ಲಿ ರಾಜಗುಣಗಳಿರಲಿಲ್ಲ. ತಂದೆಯಂತೆ ಮಗನು ವಿದ್ವಜ್ಜನರಿಗೆ ಆಶ್ರಯದಾತನಾಗಲಿಲ್ಲ. ರಾಜ್ಯಪ್ರಾಪ್ತಿಯಾದೊಡನೆ ಯುವಕರಾಜನು ಮೋತೀಖಾನೆಯ ಅಕ್ಕಿ ಬೇಳೆಗಳ ಲೆಕ್ಕಾಚಾರಕ್ಕೆ ಹೊರಟನು. ಅನವಶ್ಯವಾಗಿ ಈ ಬ್ರಾಹ್ಮಣರಿಗೆಲ್ಲಾ ಪಡಿಭತ್ಯವೇಕೆಂದು ಆನಂದದಾಸರ ಮನೆಗೆ

ಸಲ್ಲುತ್ತಿದ್ದ ಉಪಾಯನವನ್ನು ನಿಲ್ಲಿಸಿದನು. ಶ್ರಮಜೀವಿಗಳಲ್ಲದ ಬಾಯಿ ಭಾಗವತರಿಗೆ ರಾಜವೇತನವೇಕೆಂದು ದಾಸರಿಗೆ ಕೊಡುತ್ತಿದ್ದ ಮೂವತ್ತು ವರಹ ಮಾಸಾಶನವನ್ನೂ ನಿಲ್ಲಿಸಿದನು. ಮುಂದೆ ದಾಸರು ಜೀವಿಸುವ ಬಗೆ ಹೇಗೆ? ಜನ್ಮಪ್ರಭೃತಿ ಒಬ್ಬರನ್ನು ಯಾಚಿಸಿದವರಲ್ಲ. ಕೀರ್ತನ ಮಾಡಿ ಸೆಂದು ಕೇಳಿದವರಲ್ಲ. ಮನೆ ತುಂಬ ಬಳಗ. ಐವತ್ತುಜನ ವಿದ್ಯಾರ್ಥಿ ಗಳು. ಮೇಲಾಗಿ ಆಳುಕಾಳುಗಳು. ಒಂದೊಂದು ಆಭರಣವೂ ಒತ್ತೆ ಬಿದ್ದಿತು. ಕೂತು ಕೂತ ಹಾಗೆ ಗಾನಮಾಡುವ ಲಹರಿಹೋಯಿತು. ಪಾಠ ಪ್ರವಚನಗಳು ನಿಂತುಹೋದುವು. ಬೆಳಗಾದರೇನು ಗತಿ! ರಾತ್ರಿಗೇನು ಗತಿ! ಎಂಬ ಚಿಂತೆ ಬಲವಾಯಿತು. ಈ ಅವಸ್ಥೆಯಲ್ಲಿ ಹಬ್ಬ ಹರಿದಿನಗಳೆಲ್ಲಿ ಬರಬೇಕು? ಶ್ರಾವಣಮಾಸದ ಸಂಪಚ್ಛುಕ್ರವಾರದಂಥಾ ಉತ್ಸವದಿವಸ ದಾಸರ ಮನೆಯಲ್ಲಿ ಊಟಕ್ಕೇ ಅಭಾವವಾಯಿತು. ಬಂಧುಗಳು ಸರಿದರು. ಶಿಷ್ಯರು ಹೊಸಗುರುಗಳನ್ನಾಶ್ರೈಸಿದರು. ಮನೆಯಲ್ಲಿ ಉಳಿದವರೆಂದರೆ ಸಹಧರ್ಮಿಣಿ, ಮಗಳು ತುಂಗಮ್ಮ. ಮೂವರವಿನಾ ನಾಲ್ಕನೆಯವರಿಲ್ಲ. ಆಗ—ಬೇಕಾಯಿತು ದಾಸರಿಗೆ ದೇವರ ಸಹಾಯ ! ಸಮಸ್ತ ದಾರಿದ್ರ್ಯ ಪರಿಹಾರಕಳೂ ಸಂಪನ್ನಿಯಾಮಕಳೂ ಆದ ಮಹಾಲಕ್ಷ್ಮಿಯ ಉಪಾಸನೆ ಮಾಡುವೆನೆಂದು ಸಂಕಲ್ಪಿಸಿ ಪುರಶ್ಚರಣೆಗೆ ಕುಳಿತರು. ದಾಸರನ್ನು ಗೌರ ವಿಸುತ್ತಿದ್ದ ವತನದಾರರು ರಹಸ್ಯವಾಗಿ ಕೊಟ್ಟ ಪದಾರ್ಥಗಳಿಂದ ಮನೆಯ ವರ ಜೀವನವಾಯಿತು. ಒಂದು ವರ್ಷದ ಮಿತಾಹಾರ ಜಿತಮನಸ್ಸಿನ ಉಪಾ ಸನೆಯಿಂದ ದಾಸರ ತೇಜಸ್ಸು ಹೆಚ್ಚಿತು. ದೇವಿಯ ಕಾರುಣ್ಯವಾಯಿತು. ಕೊಲ್ಹಾಪುರಕ್ಕೆ ಬರಬೇಕೆಂದು ಸ್ವಪ್ನ ಸೂಚನೆಯಾಯಿತು. ಮಹಾಮಾ ತೆಯ ದರ್ಶನಮಾಡುವೆನೆಂದು ಪಾದಚಾರಿಗಳಾಗಿ ದಾಸರು ಪ್ರಯಾಣ ಮಾಡಿದರು.

ಬಂದ ಕಾಲ ಶರನ್ನವರಾತ್ರಿ ! ಶ್ರೀಕ್ಷೇತ್ರವನ್ನು ಸೇರಿದ್ದು ಶುಕ್ರ ವಾರ! ದೇವಿಯ ದರ್ಶನಮಾಡಿ—

ಧನಾಸರಿ — ಆದಿ

ಕರುಣದಿ ಕಣ್ಣು ತೆರೆಯೆ। ಬಾರಮ್ಮ ಶಿರಿಯೆ ॥ಪ॥

ಧರಣಿಯೊಳಗೆ ಸು॥ ದರತರ ಕೊಲ್ಹಾ
ಪುರ ಸಿಂಹಾಸನದಿ ಮೆರೆವ ಧೊರೆಯೆ ॥ಅ॥

ವಿಧಿಭವಾದಿಗಳ ಸದನಗಳಿಗೆ ಆ
ಭ್ಯುದಯ ಕಟಾಕ್ಷದ ಸುಧೆಯುವಗರೆಯೆ ॥೧॥

ಸುಂದರಾನನರವಿಂದದ ಮಲ್ಲಿಗೆ
ಮಂದಹಾಸ ಮಕರಂದವ ಸುರಿಯೆ ॥೨॥

ಕಡುಬೆಡಗಿನ ನಿನ್ನಡಿದಾವರೆಗಳ
ಬಿಡದೆ ಭಜಿಪ ವರಕೊಡು ಸುಂದರಿಯೆ ॥೩॥

ಬಡವರಭೀಷ್ಟೆಯ ಕೊಡುವಳೆಂದು ಬಡ
ಬಡಿಸಿಬಂದೆ ನಿನ್ನೊಡಲಿನ ವೊರೆಯೆ ॥೪॥

ಕೊಟ್ಟರೆ ಕಮಲೇಶವಿಠಲರಾಯನ
ಪಟ್ಟದರಸಿಯೆಂಬ ಕಟ್ಟಳೆ ಖರೆಯೆ ॥೫॥

ಎಂದು ಹಾಡಿದರು.

ಆದೇ ಸಮಯದಲ್ಲಿ ಛತ್ರಪತಿ ಮಹಾರಾಜನು ಶ್ರೀದೇವಿಯ ದರ್ಶನಕ್ಕೆ ಬಂದು ಗರ್ಭಾಂಕಣದಲ್ಲಿ ಪೂಜೆ ಮಾಡುತ್ತಿದ್ದನು. ರಾಜಭಟರು ಯಾರು ಗದ್ದಲ ಮಾಡುವರು ? ಪೂಜೆಗೆ ವಿಘ್ನವಾಗುವದು ; ಸ್ವಲ್ಪ ಹೊತ್ತು ಸುಮ್ಮನಿರಹೇಳು; ಎಂದು ಅಧಿಕಾರ ಮಾಡಿದರು. ಮಹಾರಾಜನು ಅವರನ್ನು ನಿವಾರಿಸಿ ದಾಸರ ಹಾಡು ಕೇಳುತ್ತಾ ಪರವಶನಾಗಿ ನಿಂತು ಬಿಟ್ಟನು. ತನ್ನ ಸೇವೆಯಾದೊಡನೆ—ಹಾಡಿದವರ್‍ಯಾರು ? ಎಲ್ಲಿದ್ದಾರೆ ? ಎಂದು ಪರಭಾರೆಯಾಗಿ ವಿಚಾರಿಸಿ ಅರಮನೆಯನ್ನು ಸೇರಿದನು.

ಕೊಲ್ಹಾಪುರವು ಎರಡು ಶತಮಾನಗಳ ಹಿಂದೆ ಸಂಪೂರ್ಣ ಕರ್ನಾಟಕವಾಗಿತ್ತು. ಅರಸರು ಮಹಾರಾಷ್ಟ್ರರಾದ ಕಾರಣ—ಕನ್ನಡಿಗರನೇಕರು ದೇಶಬಿಟ್ಟ ಕಾರಣ—ರಾಜ ಭಾಷೆ ಮಾತ್ರವಾಗಿದ್ದ ಮರಾಠಿಯು ದೇಶಭಾಷೆಯೂ ಆದಕಾರಣ—ಈಗ ಆ ದೇಶವು ಮಹಾರಾಷ್ಟ್ರದಲ್ಲಿ ಸಮಾವೇಶವಾಗಿದೆ.

ಆನಂದದಾಸರ ಕಾಲದಲ್ಲಿ ಕೊಲ್ಹಾಪುರವು ಈಗಿನಷ್ಟು ಮಹಾರಾಷ್ಟ್ರವಾಗಿರಲಿಲ್ಲ. ಉಭಯ ಭಾಷೆಗಳೂ ಸಮಸಮವಾಗಿದ್ದು ರಾಜರೂ ಕನ್ನಡವನ್ನು ತಿಳಿದವರಾಗಿದ್ದರು. ದಾಸರ ಗಾನವನ್ನು ಕೇಳಿದ ಮಹಾರಾಜನು ಮರುದಿನ ಪ್ರಾತಃಕಾಲ ಅವರನ್ನು ಬರಮಾಡಿ ಪೂರ್ವೋತ್ತರಗಳನ್ನು ವಿಚಾರಿಸಿದನು. ರಾಜಾನುಗ್ರಹವಾದಮೇಲೆ ಕೇಳುವದೇನು ? ದಾಸರಿಗೆ ಪ್ರತ್ಯೇಕ ಬಿಡಾರವಾಯಿತು. ಸೇವೆಗೆ ಜನರಾದರು. ಸುರಪುರದಿಂದ ಸ್ವಜನರು ಬಂದು ಸೇರಿದರು. ದಸರೆಯಿಂದ ದೀಪಾವಳಿಯ ತನಕ ಅರಮನೆಯಲ್ಲಿ ಗಾಯನ ಕೀರ್ತನಗಳ ಕೋಲಾಹಲವಾಯಿತು. ರಾಜನು ಮೆಚ್ಚಿ ದಾಸರಿಗೆ ಮಾಡಿದ ಸನ್ಮಾನವೆಂದರೆ ಆರು ಸಹಸ್ರ ವರಹಗಳು; ತಕ್ಕ ವಸ್ತ್ರಭೂಷಣಗಳು.

ದಾಸರು ದೇವಿಯ ಕಾರುಣ್ಯದಿಂದ ತಮ್ಮ ದರಿದ್ರ ಪರಿಹಾರವಾಯಿತೆಂದು ಉತ್ಸಾಹದಿಂದ ಉತ್ಸಾಹಜನಕವಾದ ಆರಭಿ ರಾಗದಲ್ಲಿ ಕೆಳಕಂಡ ಪದವನ್ನು ಹಾಡಿದರು. ಹಿಂದಿನ ಪದದಲ್ಲಿ—ನಮ್ಮ ಇಷ್ಟಾರ್ಥವನ್ನು ಕೊಟ್ಟರೆ ನೀನು ಕಮಲೇಶವಿಠಲನ ಪಟ್ಟದ ರಾಣಿ; ಕೊಡದಿದ್ದರೆ ರಾಣಿಯಲ್ಲ; ಎಂಬರ್ಥದಿಂದ ಹಾಡಿದ ಅಪಚಾರಕ್ಕೆ ಈ ಪದದಲ್ಲಿ ಗಂಭೀರವಾದ ಕ್ಷಮಾಪಣೆಯಿದೆ. ಆ ಪದವಿರುವ ಕ್ರಮವೆಂದರೆ:—

ಆರಭಿ — ಆದಿತಾಳ

ರಮಾಸಮುದ್ರನ—ಕುಮಾರಿ ನಿನ್ನಯ
ಸಮಾನರ್‍ಯಾರಮ್ಮಾ ||ಪ||

ಸುಮಾಸ್ತ್ರನಯ್ಯನೆದೆಮೇಲೆ ಸತತ ಬ
ಹುಮಾನದಲಿ ಮೆರೆವ ಮಹಾಮಹಿಮಳೆ ||ಅ||

ಕನಕಮಕುಟಮಂಡಿತ ಕುಟಿಲಾಳಕಜಾಲೇ| ಶ್ರೀಚಂ|
ದನ ಕುಂಕುಮ ಕಸ್ತುರಿತಿಲಕಾಂಕಿತ ಫಾಲೇ|
ಮಣಿಮಯಕುಂಡಲ ಶೋಭಿತ ಕರ್ಣಕಪೋಲೇ| ಚಂಪಕ|
ನನೆ ನಾಸಾಗ್ರದೊಳೂಗುವ ಮೌಕ್ತಿಕ ಲೋಲೇ||
ಮಿನುಗುವ ಮಾಣಿಕಮಣಿಯಧರ ಪುಟದೊ

ಆನಿವರ ವಜ್ರಾದಿ ಕಣಿಗಳ ರಾಜಿ ದ
ಶನಯುತ ಸ್ಮೇರಾನನ ಶುಭಕಾಂತಿಯಿಂ
ವನಜಭವನ ಮನೆಗೆ ಮಂಗಳಗರೆವ ||೧||

ಕೊರಳೊಳು ಪರಿಮಳ ಪರಿಪರಿ ಪುಷ್ಪದಮಾಲೇ| ಒಪ್ಪುವ|
ಕರಿರಾಜನ ಕರದಿರುವಿಕೆ ಕರಗಳ ಲೀಲೇ
ಶರಣಾಗತಜನ ಪರಿಪಾಲನರತ ಶೀಲೇ| ಗಂಡನ|
ಪರಿರಂಭಣ ಸಾಮ್ರಾಜ್ಯದ ಸುಖದನುಕೂಲೇ ||
ಕರುಣಿಸಮ್ಮ ತವಕರುಣಕಟಾಕ್ಷದ
ಶಿರಿಯ ಬೆಳಗಿನೊಳ್ ಪರಿಚರಿಸುವ ಸುಜ
ನರ ಚರಣಾಂಬುಜ ಪರಿಮಳದೊಳು ಮನ
ವೆರಗಿಸುವದು ಸೌಂದರ್ಯ ಶಿಖಾಮಣಿ ||೨||

ರಮಣೀಯವಿಮಲ ಕಮಲದಳಾಯತ ನೇತ್ರೇ| ಚಂಪಕ|
ಸುಮದ ಸುವರ್ಣಪರಿಮಳದ ಸುಂದರಗಾತ್ರೇ|
ಕಮಲಭವೇಂದ್ರಾದ್ಯಮರ ಮುನಿಗಣಸ್ತೋತ್ರೇ| ಶ್ರೀ|
ಕಮಲೇಶವಿಠಲರಾಯನ ಕರುಣಕೆ ಪಾತ್ರೇ|
ಭ್ರಮಿಸುವೆನು ಭವದತಿಮಿರದೊಳಗಹಂ
ಮಮ ಮದದಿಂದಲಿ ಸುಮಾರ್ಗವರಿಯದೆ
ವಿಮಲದೃಷ್ಟಿ ಚಂದ್ರಮನಮೃತಕಿರಣ
ನಮಗೆ ಸಲಿಸೆ ಮಾರಮಣಿ ಮಜ್ಜನನಿ ||೩||

ಎಂಬಂತಿದೆ.

"ಅರ್ಥಾಃ ಬಹಿಶ್ಚರಾಃ ಪ್ರಾಣಾಃ" ಎಂಬಂತೆ ರಮಾದೇವಿಯ ಅನುಗ್ರಹದಿಂದ ಪ್ರಾಣ ಬಂದಂತೆ ಹಣ ಬಂದಾಗ ದೇವಿಯನ್ನು ಕೊಂಡಾಡದವರ್ಯಾರು? ಹಣವಿದ್ದರೆ ಚಿಂತೆ, ಇಲ್ಲದಿದ್ದರೆ ಚಿಂತೆ, ಇದ್ದದ್ದನ್ನು ಖರ್ಚು ಮಾಡಲು ಮತ್ತೆ ಚಿಂತೆ, ಇವೆಲ್ಲಾ ಜೀವನದಲ್ಲಿ ಬರುವ ಚಿಂತೆಗಳು.

ದೇವಿಯ ಕಾರುಣ್ಯವಾಯಿತು ! ದ್ರ ವ್ಯ ಪ್ರಾ ಪ್ತಿ ಯಾ ಯಿ ತು ! ಮುಂದೇನು? ಉಡುಪೀಯಾತ್ರೆಯಾದರೂ ಮಾಡೋಣವೆಂದು ಆನಂದ

ದಾಸರು ಪ್ರಯಾಣ ಮಾಡಿದರು. ದಾಸರು ಬಂದಾಗ ಉಡುಪಿಯಲ್ಲಿ ಪರ್ಯಾಯಮಹೋತ್ಸವವು ವಿಜೃಂಭಣೆಯಿಂದ ನಡೆಯುತ್ತಿತ್ತು. ಸಾವಿರಾರು ಯಾತ್ರಿಕರು ಉತ್ಸವದಲ್ಲಿ ಭಾಗಿಗಳಾಗಿ ಆನಂದಪಡುತ್ತಿದ್ದರು. ಅಷ್ಟ ಮಠಾಧಿಪತಿಗಳೂ ದಾಸರ ಕೀರ್ತನಕೇಳಿ ಪರಮಾನಂದಭರಿತರಾದರು. ಶ್ರೀಕ್ಷೇತ್ರದಲ್ಲಿದ್ದಾಗ ದಾಸರು ಭಾಗವತ ದಶಮಸ್ಕಂದವನ್ನು ಕನ್ನಡ ಕೀರ್ತನಕ್ಕಿಳಿಸಿ ಶ್ರೀ ಕೃಷ್ಣನಿಗೆ ಸಮರ್ಪಿಸಿದರು. ಅನಂತರ ದಾಸರು ಸಕಲ ಧರ್ಮಪೀಠಗಳಿಗೂ ವಿದ್ವಜ್ಜನರಿಗೂ ಆಶ್ರಯದಾತನಾದ ಶ್ರೀ ಕೃಷ್ಣಮಹಾಪ್ರಭುವಿನ ಮೈಸೂರು ರಾಜಧಾನಿಗೆ ಬಂದಿಳಿದರು. ದಾಸರ ಬಿಡಾರವು ಲೇಖಕನ ಪಿತಾಮಹರಾದ ಪರಮ ಪೂಜ್ಯರೆನಿಸಿದ್ದ ವೆಂಕಟೇಶದಾಸರ ಮನೆಯಲ್ಲಾಯಿತು. ಆನಂದದಾಸರ ಖ್ಯಾತಿಯನ್ನು ಕೇಳಿದ್ದ ಜನರು ಶ್ರೀಮನ್ಮಹಾರಾಜರಲ್ಲಿ ಪ್ರಥಮ ಕೀರ್ತನವನ್ನು ಮಾಡಿಸಬೇಕೆಂದು ಭೂಮ್ಯಾಕಾಶಗಳಷ್ಟು ಪ್ರಯತ್ನಮಾಡಿದರು. ದಾಸರ ಗಾಯನ ಕೇಳಲು ವೀಣೆಯ ಸಾಂಬಯ್ಯನವರೂ ಸದಾಶಿವರಾಯರೂ ದಿನವಹಿ ಬರುತ್ತಿದ್ದರು. ಒಂದು ಕಡೆ ಆನಂದಾಳ್ವಾರರು, ಕುಣಿಗಲು ರಾಮಾಶಾಸ್ತ್ರಿಗಳು, ಕಾಶೀ ಆಚಾರ್ಯರು; ಮತ್ತೊಂದುಕಡೆ ಆಸ್ಥಾನದ ಗಾನ ಪಂಡಿತರುಗಳು; ಹೀಗೆ ಪ್ರಮುಖ ವಿದ್ವನ್ಮಣಿಗಳು ದಾಸರ ಪಾಂಡಿತ್ಯವನ್ನು ಪ್ರಶಂಸಿಸುವದರಲ್ಲಿ ಪರ್ಯವಸಾನವಾಯಿತಲ್ಲದೆ ಎರಡು ವರ್ಷಗಳಾದರೂ ರಾಜದರ್ಬಾರಿನಲ್ಲಿ ಕೀರ್ತನವಾಗಲಿಲ್ಲ. ರಾಜನೇ ಊರಿಗೆ ಯಾವ ವಿದ್ವಾಂಸರು ಬಂದಿದ್ದಾರೆಂದು ಪ್ರಶ್ನೆ ಮಾಡಿದವಿನಾ ಮುಂದರಿದು ಮಾತನಾಡುವ ಧೈರ್ಯ ಯಾರಿಗೂ ಬರಲಿಲ್ಲ. ಕೃಷ್ಣರಾಜಪ್ರಭುವಿನೆದುರಿಗೆ ಕೀರ್ತನ ಮಾಡಿದ ವಿನಾ ಅನ್ಯಸ್ಥಳಗಳಲ್ಲಿ ಮೊದಲಕೀರ್ತನ ಮಾಡುವುದಿಲ್ಲವೆಂದು ದಾಸರ ಸಂಕಲ್ಪವಾಗಿತ್ತು. ದಿವಸಗಳು ಕಳೆದಂತೆ ದಾಸರಲ್ಲಿದ್ದ ಹಣವೂ ಮುಗಿಯಿತು. ಪ್ರಯಾಣಸನ್ನದ್ಧರಾದ ದಾಸರನ್ನು ಪ್ರಸನ್ನ ಕೃಷ್ಣಸ್ವಾಮಿ ದೇವಾಲಯದ ಪೇಷ್ಕಾರನು ಕಂಡು—"ರಾಜಸನ್ನಿಧಿಯಲ್ಲಿ ಕೀರ್ತನವಾಗದ ಮಾತ್ರಕ್ಕೆ ತಮ್ಮ ಕೀರ್ತನ ಕೇಳಬೇಕೆಂಬ ಕುತೂಹಲ ಪಡುವವರಿಗೆ ನಿರಾಶೆಯಾಗಬಾರದು. ಯಾರ ಮನೆಯಲ್ಲಾದರೂ ಕೀರ್ತನಮಾಡುವದು ತಮ್ಮ ಸಂಕಲ್ಪಕ್ಕೆ ವಿರೋಧವಾಗಿರಬಹುದು. ಪ್ರಸನ್ನ ಕೃಷ್ಣಸ್ವಾಮಿಯ ದೇವಾ

ಲಯದಲ್ಲಿ ತಾವು ಕೀರ್ತನ ಮಾಡಿರಿ. ಅಕಸ್ಮಾತ್ ಮಹಾರಾಜರಿಗೆ ಈ ಸಂಗತಿ ಶೃತವಾದರೆ ಶ್ರೀ ಕೃಷ್ಣಾನುಗ್ರಹದಿಂದ ಪ್ರಭುಗಳು ವಿಚಾರಿಸುವ ಯೋಗ ದೊರೆಯಬಹುದು '' ಎಂಬುದಾಗಿ ವಿಜ್ಞಾಪಿಸಿದನು. ದಾಸರು, 'ವಿಪ್ರವಾಕ್ಯೇ ಜನಾರ್ದನಃ' ಎಂದಿರುವದರಿಂದ—ಆಗಲಿ; ಕೀರ್ತನ ವ್ಯವಸ್ಥಾಮಾಡಿರಿ; ಎಂದು ಹೇಳಿದರು. ಸಂಧ್ಯಾ ಕಾಲಕ್ಕೆ ಸರಿಯಾಗಿ ಕೀರ್ತನಾರಂಭವಾಯಿತು. ಮಹಾರಾಜರು ಸಂಧ್ಯಾವಂದನೆಗೆ ಕುಳಿತು ಆಚಮನ ಮಾಡುವದಕ್ಕೂ ದಾಸರು ಗಾನಮಾಡುವದಕ್ಕೂ ಸಮಯದ ಹೊಂದಿಕೆಯಾಯಿತು. ಗಾನಲೋಲರಾದ ಕೃಷ್ಣಪ್ರಭುಗಳು ಗಾನವನ್ನಾಲೈಸುತ್ತಾ ಒಂಭತ್ತು ಘಂಟೆಯ ಗುಂಡು ಹೊಡೆದರೂ ಭಂಗಾರದ ಥಾಲಿಯಮೇಲೆ ಕೈಯಿಟ್ಟು ಕುಳಿತವರು ಅತ್ತಿತ್ತತಿರುಗಲಿಲ್ಲ. ಕೀರ್ತನ ಮಂಗಳವಾಯಿತು. ನಿಶ್ಯಬ್ದವಾಯಿತು. ಮಹಾರಾಜರು ಹರಿಕಾರನನ್ನು ಕರೆದರು. ಗುಡಿಯಲ್ಲಿ ಹರಿಕಥೆ ಮಾಡಿದವರ್ಯಾರೆಂದು ಕೇಳಿದರು. ಹರಿಕಾರನು, — ಅವರೇ ಮಹಾಸ್ವಾಮಿಾ ಸುರಪುರದ ಆನಂದದಾಸರು ! ಎರಡು ವರ್ಷಗಳಿಂದ ಮೈಸೂರಲ್ಲಿದ್ದವರು! ಊರಿಗೆ ಪ್ರಯಾಣ ಮಾಡಬೇಕೆಂದು ದೇವರ ಸನ್ನಿಧಿಯಲ್ಲಿ ಸೇವೆಮಾಡಿದವರು! ಎಂದನು.

ಮಹಾರಾಜರು—ಅವರು ಪ್ರಯಾಣ ಯಾವಾಗಮಾಡುವರು ?
ಹರಿಕಾರ—ನಾಳೆ ಮಾಡುವರೆಂದು ಕೇಳಿದೆ.
ಮಹಾರಾಜರು—ಎರಡು ವರ್ಷಗಳಿಂದ ನಮಗೇಕೆ ಹೇಳಲಿಲ್ಲವೊ?
ಹರಿಕಾರ—ಅಷ್ಟರ ಧೈರ್ಯ ನನಗಿಲ್ಲ ಮಹಾಸ್ವಾಮಿಾ.

ದಾಸರು ಮನೆಗೆ ಬಂದು ಭೋಜನಮಾಡಿ ಕುಳಿತುಕೊಳ್ಳುವಷ್ಟರಲ್ಲಿ ಅರಮನೆಯ ಹರಿಕಾರನು ಬಂದನು. ತಾವು ಪ್ರಯಾಣಮಾಡಕೂಡದಂತೆ ! ನಾಳೆ ಶಿವಪೂಜಾ ಕಾಲಕ್ಕೆ ಬರಬೇಕಂತೆ! ಹುಜೂರು ಹುಕ್ಕುಂ ಆಗಿದೆ! ಎಂದು ತಿಳಿಸಿದನು. ಈ ಸುದ್ದಿಯನ್ನು ಕೇಳಿ ಜನರಿಗೆ ತಮ್ಮ ಹಂಚಿಕೆ ಸಫಲವಾಯಿತೆಂದು ಸಂತೋಷವಾಯಿತು.

ಮಾರನೆಯ ಪ್ರಾತಃಕಾಲ ದಾಸರನ್ನು ಕರೆಯಲು ಮೇನೆ ಬಂದಿತು. ವೈದಿಕ ಮರ್ಯಾದೆಯಂತೆ ದಾಸರು ರಾಜಾಶೀರ್ವಾದ ಮಾಡಿದರು.

ಮಹಾರಾಜರು—ಯಾವ ತಾಯಿ ಹೆತ್ತಳಯ್ಯಾ ನಿನ್ನ! ಏನು ಗಂಧರ್ವ ಗಾನಮಾಡಿದೆ! ನನ್ನ ಸಂಧ್ಯಾವಂದನೆಯನ್ನೂ ನಿಲ್ಲಿಸಿಬಿಟ್ಟೆ!

ದಾಸರು—ಪ್ರಭುಗಳ ಗಾನಾಭಿರುಚಿ ಅಂಥಾದ್ದು!

ಮಹಾರಾಜರು—ಯಾವ ಊರು? ಎಂದು ಬಂದೆ? ಹೇಳದೇ ಕೇಳದೇ ಪ್ರಯಾಣಮಾಡುತ್ತಿದ್ದಿಯೋ?

ದಾಸರು—ಸುರಪುರ, ಬಂದು ಎರಡು ವರ್ಷವಾಯ್ತು. ಸನ್ನಿಧಿಯ ತನಕ ದಾದು ಹತ್ತಲಿಲ್ಲ. ಅದಕ್ಕೇ..........

ಮಹಾರಾಜರು—ಆ! ನನ್ನಮೇಲೆ ಎರಡು ವರ್ಷದ ಬಾಕೀ ಜೇರೇ ಹೊರಿಸುವೆಯೊ? ನೀನು ಹಾಡಿದ ದೇವರನಾಮುಗಳು ಯಾರು ಮಾಡಿದ್ದು?

ದಾಸರು—ಸಮಯೋಪಯೋಗಿಯಾಗಿರಲೆಂದು ನಾನೇ ಮಾಡಿಕೊಂಡವು.

ಮಹಾರಾಜರು—ಎಷ್ಟು ಕಥೆಗಳನ್ನು ಮಾಡುವೆ ಹೀಗೆ?

ದಾಸರು—ನನ್ನ ಸ್ವಂತ ಕವಿತೆಯ ನಾಲ್ವತ್ತು. ಮಿಕ್ಕವು ಕೇಳುವ ತನಕ.

ಮಹಾರಾಜರು—ಭಲೇ ದೇಶದ ಬ್ರಾಹ್ಮಣ!

ಕೃಷ್ಣರಾಜ ಪ್ರಭುಗಳಿಗೆ ಅತಿಶಯ ಪ್ರೀತಿಯುಂಟಾದರೆ ಯಾರನ್ನಾಗಲಿ ಏಕವಚನದಿಂದ ಮಾತಾಡಿಸುವದು ಪದ್ಧತಿಯಾಗಿತ್ತು. ಏಕವಚನದಿಂದ ಕರೆಸಿಕೊಂಡವನೂ ಬೈಸಿಕೊಂಡವನೂ ಅದೃಷ್ಟಶಾಲಿಯೆನಿಸಿಕೊಳ್ಳುತ್ತಿದ್ದನು. ಕೃಷ್ಣರಾಜವಡೆಯರನ್ನು ಅಭಿನವ ಭೋಜ, ಕಲಿಯುಗದ ಕರ್ಣ, ಎಂದು ಆ ಕಾಲದ ಜನರಾಡಿಕೊಳ್ಳುತ್ತಿದ್ದುದರಲ್ಲಿ ಲೇಶವಾದರೂ ಅತಿಶಯೋಕ್ತಿಯಿರಲಿಲ್ಲ. ಯುಕ್ತಿ ಬರುವಂತೆ ಮನಸ್ಸಿಗೆ ತಾಕುವ ಮಾತಾಡಿದವರಿಗೆ ಕೊಡುವದರಲ್ಲಿ ಆ ಪ್ರಭುವಿಗೆ ಸಮರು ಹಿಂದೆ ಹುಟ್ಟಲಿಲ್ಲ—ಮುಂದೆ ಹುಟ್ಟುವದಿಲ್ಲ.

ಆನಂದದಾಸರು ರಾಜದರ್ಶನವಾದ ದಿನದಿಂದ ಮಹಾರಾಜರ ಅತಿಥಿಗಳಾದರು. ಬೆಳಗಾಗುವದರೊಳಗೆ ರಾಜಾಜ್ಞೆಯಿಂದ ನೂರಾರು ಜನರಿಗಾ

ಗುವ ಅವ್ವಲ್ ಲವಾಜಮಾ ಮೋತೀಖಾನೆಯಿಂದ ಬರಬೇಕು. ಬಂದು ದನ್ನು ದಾಸರು ನಿತ್ಯ ಸಮಾರಾಧನೆ ಮಾಡಿ ಸದ್ವಿನಿಯೋಗ ಮಾಡಬೇಕು. ಮಹಾರಾಜರು ಆನಂದದಾಸರಿಂದ ರಚಿತವಾದ ನಲವತ್ತು ಕೀರ್ತನಗಳನ್ನೂ ಕೇಳಿದರು. ಪ್ರತಿಫಲವಾಗಿ ದಾಸರನ್ನು ಭದ್ರಪೀಠದಲ್ಲಿ ಕುಳ್ಳಿರಿಸಿ, ಕಟಕ ಕಂಠಿಗಳಿಂದಲಂಕರಿಸಿ ಕನಕಾಭಿಷೇಕ ಮಾಡಿದರು. ಆನಂದದಾಸರಿಗೆ ಮಾಡಿದಂಥಾ ಮರ್ಯಾದೆಯನ್ನು ಶ್ರೀ ಕೃಷ್ಣರಾಜವಡೆಯರು ಯಾರಿಗೂ ಮಾಡಲಿಲ್ಲವೆಂದು ಲೋಕಪ್ರಸಿದ್ಧಿಯಾಯಿತು. ದಾಸರು ಸುರಪುರವನ್ನು ಸೇರುವತನಕ ಅವರ ಧನಕನಕಗಳನ್ನು ರಕ್ಷಣೆಮಾಡಲು ರಾಜಾಜ್ಞೆಯಿಂದ ದೂತರು ಹಿಂಬಾಲಿಸಿದರೆಂದಮೇಲೆ ಆ ಮಹಾ ಪ್ರಭುವಿನ ವಿದ್ಯಾಭಿಮಾನವನ್ನು ವರ್ಣಿಸುವ ಬಗೆ ಹೇಗೆ?

ಇದು ಆನಂದದಾಸರ ಜೀವನದ ದ್ವಿತೀಯ ತರಂಗವಾಯಿತು.

---

- ೩ -

ಆನಂದದಾಸರ ಜೀವಿತದ ತೃತೀಯ ತರಂಗವು ವೈರಾಗ್ಯಮಯವಾಯಿತು. ಈ ಮಧ್ಯಕಾಲದಲ್ಲಿ ಸುರಪುರದ ರಾಜನು ಕಂಪನಿಯ ಸರ್ಕಾರದ ಮೇಲೆ ಬಂಡಾಯಮಾಡಿದನೆಂಬ ಆಪಾದನೆಯಾಯಿತು. ಬ್ರಿಟಿಷರಿಗೆ ಮೈಸೂರು ದಂಡು ನೆರವಾಗಿ ಸುಲಭವಾಗಿ ಸುರಪುರವನ್ನು ಗೆದ್ದಿತು. ಗೆದ್ದಾಗ ಸಿಕ್ಕಿದ ರಾಣಿವಾಸದ ಬಾಗಿಲಿಗೆ ಕಟ್ಟುತ್ತಿದ್ದ ಮುತ್ತಿನ ಪರದೆ ಮೊದಲಾದ ಕೆಲವು ಬೆಲೆಬಾಳುವ ಸಾಮಾನುಗಳ ವಿನಾ ಮೈಸೂರಿಗೆ ಯಾವದೇ ಬಗೆಯ ಪ್ರಯೋಜನವಾಗಲಿಲ್ಲ. ಸುರಪುರ ರಾಜ್ಯವು ಬ್ರಿಟಿಷರ ಪಾಲಾಗಿ ತಾಮ್ರಮುಖಿಯೋರ್ವನ ವಿಚಾರಣೆಗೊಳಪಟ್ಟಿತು. ಸುರಪುರದ ರಾಜನು ಬ್ರಿಟಿಷರ ವಿರೋಧಿಯಲ್ಲ—ಬಂಡಾಯ ಮಾಡಿದವನಲ್ಲ—ಎಂಬ ದೂರು ಮುಗಿಲು ಮುಟ್ಟಿದಾಗ ರಾಜಸಂತತಿಗೆ ದೊರೆತ ಸೌಭಾಗ್ಯವೆಂದರೆ ಈಗ ಅರವತ್ತು ಸಾವಿರ ಉತ್ಪತ್ತಿಯುಳ್ಳ ಕೆಲವು ಗ್ರಾಮಗಳ ಜಹಗೀರು,

ಕಾಲಾಂತರದಲ್ಲಿ ಸುರಪುರವು ಹೈದರಾಬಾದಿಗೆ ಸೇರಿ ಗುಲ್ಬರ್ಗಾ ಜಿಲ್ಲೆಯಲ್ಲಿ ಸಮಾವೇಶವಾಯಿತು. ಹಿಂದಿನ ರಾಜನ ಕಾಲದಲ್ಲಿ ಬಂದಿದ್ದ ಹೊಲ ಮನೆಗಳ ಜೊತೆಗೆ ಮೈಸೂರರಸರಿಂದ ಪ್ರಾಪ್ತವಾದ ಧನಕನಕಗಳಿದ್ದರೂ, ಆನಂದದಾಸರಿಗೆ ಆ ಹಾಳು ಪಟ್ಟಣದಲ್ಲಿ ವಾಸಮಾಡುವದು ಬೇಸರವಾಯಿತು. ದೇವರನ್ನು ಕಾಣಬೇಕೆಂಬ ಹಂಬಲು ಬಲವಾಯಿತು. ಮಂತ್ರಸಿದ್ಧಿ ಕ್ಷೇತ್ರವೆಂದು ಹೆಸರಾದ ಮಂತ್ರಾಲಯದಲ್ಲಿ ಕೆಲವು ಕಾಲ ವಾಸಮಾಡಿದರು. ಆ ಕಾಲದಲ್ಲಿ ಇಭರಾಂಪುರದ (ಇಬ್ರಾಹಿಂಪುರ) ಕೃಷ್ಣಾಚಾರ್ಯರೆಂಬ ಸತ್ಪುರುಷರ ಸಹವಾಸ ದಾಸರಿಗೆ ದೊರೆಯಿತು. ಆಚಾರ್ಯರನ್ನು ಹೆಸರಿಟ್ಟು ಕರೆಯುವದು ಅಪಚಾರವೆಂಬಷ್ಟು ಭಕ್ತಿಯುಳ್ಳ ಜನರು ಅವರನ್ನು ಅಪ್ಪಾವರು ಪರಿಮಳಾಚಾರ್ಯರು ಎಂದು ಕರೆಯುತ್ತಿದ್ದರು. ಆಚಾರ್ಯರು ಅಪರೋಕ್ಷಜ್ಞಾನಿಗಳು, ಮಹಾಮಹಿಮೆಗಳನ್ನು ತೋರಿಸಿದವರು, ಎಂಬ ಗೌರವವು ಆ ಪ್ರಾಂತ್ಯದಲ್ಲಿ ಮಾತ್ರವಲ್ಲದೆ ಮೈಸೂರು ರಾಜ್ಯದಲ್ಲೂ ಗೊತ್ತಿದ್ದುದರಿಂದ ಸಾವಿರಾರು ಜನರು ಆಚಾರ್ಯರ ಭಕ್ತರಾಗಿದ್ದರು. ಮುಮ್ಮಡೀ ಕೃಷ್ಣರಾಜವಡೆಯರು ಆಚಾರ್ಯರನ್ನು ಬರಮಾಡಿಕೊಂಡು ಬಹುಪರಿಯಿಂದ ಸತ್ಕರಿಸಿದ ವಿಚಾರವು ಆಚಾರ್ಯರ ಚರಿತ್ರೆಯಲ್ಲಿ ಲಿಖಿತವಾಗಿದೆ.

ಒಂದು ಮಧ್ಯಾಹ್ನ ಆನಂದದಾಸರು ರಾಘವೇಂದ್ರಸ್ವಾಮಿಗಳ ಬೃಂದಾವನ ಸನ್ನಿಧಿಯಲ್ಲಿ ರುದ್ರವೀಣೆಯನ್ನು ಬಾರಿಸುತ್ತಿದ್ದಾರೆ. ದಾಸರ ಮಗಳು ತುಂಗಮ್ಮನು ವೀಣೆಯನಾದಕ್ಕೆ ಧ್ವನಿಯನ್ನು ಕೂಡಿಸಿ ಹಾಡುತ್ತಿದ್ದಾಳೆ. ನಾದಾನುಸಂಧಾನ ಸುಖದಲ್ಲಿ ದಾಸರು ದೇಹೇಂದ್ರಿಯಗಳನ್ನು ಮರೆತಿದ್ದಾರೆ. ಆಚಾರ್ಯರು ಅಹುದೋ ಆನಂದ! ಗಾನಮಾಡುವದು ನಿನ್ನ ಸ್ವರೂಪಕ್ಕೆ ಹತ್ತಿದ್ದು. ಇಲ್ಲೂ ಗಂಧರ್ವ, ದೇವಲೋಕದಲ್ಲೂ ನೀನು ಗಂಧರ್ವನೇ! ಎಂದು ಬೆನ್ನು ಚಪ್ಪರಿಸಿದ್ದಾರೆ. ಈಗ ಆಯಿತೇ ನಿನ್ನ ಸ್ವರೂಪ ಜ್ಞಾನ! ಎಂದಿದ್ದಾರೆ.

ದಾಸರು, ಆಚಾರ್ಯರ ಧ್ವನಿ ಕೇಳಿ ಯೋಗದಿಂದ ಬಹಿರ್ಮುಖರಾದಂತೆ ಎಚ್ಚತ್ತು ನಮಸ್ಕರಿಸಿದರು. "ಇಂಥಾ ಉಪಚಾರೋಕ್ತಿಗಳೇ ನನ್ನನ್ನು

ನಟವಿಟಗಾಯಕರ ಪಙ್ಕ್ತಿಯಲ್ಲಿ ಸೇರಿಸಿತು. ಓದಿದ್ದೆಲ್ಲಾ ವ್ಯರ್ಥವಾಯಿತು. ದೇವರ ದಾರಿ ತಿಳಿಯದಾಯಿತು. ಆಚರಣೆಗೆ ಮನಸ್ಸು ಸ್ಥಿರವಾಗುವದಿಲ್ಲ. ಗಾನದಿಂದ ದೇವರನ್ನು ಒಲಿಸಬೇಕೆನಿಸುತ್ತದೆ.' ಎಂಬದಾಗಿ ಅಂಗಲಾಚಿದರು. ಆಚಾರ್ಯ್ಯರು — ಸತ್ಯ! ನಾವು ಹೇಳಿದ್ದೂ ಅದೇ! ನಿನ್ನ ಸ್ವರೂಪ ಅಂಥಾದ್ದು. ಅದೇ ದಾರಿಯಲ್ಲಿ ಸಾಕ್ಷಾತ್ಕಾರವಾಗುವದು. ಎಲ್ಲರ ಶ್ರಮ ನಿನಗಿಲ್ಲ. ನಿನ್ನ ಭಾಗ್ಯ ಎಲ್ಲರಿಗಿಲ್ಲವೆಂದರು. ದಾಸರು ಮತ್ತೆ — ಏನು ಭಾಗ್ಯವೋ ಕಾಣೆ. ರಾಜರಿಂದ ಬಂದ ಭಾಗ್ಯವೇ ನನ್ನದು ಭಾಗ್ಯವೆಂದು ಕಾಣುತ್ತದೆ. ಅದಕ್ಕೇ ನನಗೆ ಭಗವದ್ದರ್ಶನವಾಗಿಲ್ಲವೋ ಏನೋ ಎಂದರು. ಆಚಾರ್ಯರು ಅಧಿಕಾರ ವಾಣಿಯಿಂದ — ನಿನ್ನ ಸ್ವರೂಪವೇ ಅಂಥಾದ್ದೆಂದರೆ! ನಿನಗೆ ಕ್ಷಿಪ್ರದಲ್ಲಿ ಭಗವದ್ದರ್ಶನವಾಗುವದೆಂದರೆ! ಎಂದು ನುಡಿದರು. ಮತ್ತೆ ದಾಸರು ಉತ್ತರಕೊಡಲಿಲ್ಲ. ಸ್ವರೂಪದ ಮಾತನ್ನು ಒತ್ತಿ ಒತ್ತಿ ಆಡಿದ್ದು ಮನಸ್ಸಿನಲ್ಲಿ ರೂಢ ಮೂಲವಾಯಿತು. ಏಕಾಂತದಲ್ಲಿರಬೇಕೆಂದು ತುಂಗಭದ್ರೆಯಿಂದ ಎರಡು ಮೈಲಿ ದೂರದಲ್ಲಿರುವ ಪಂಚಮುಖನಸನ್ನಿಧಿಯನ್ನು ಸೇರಿದರು. ತಮ್ಮ ಇಷ್ಟದೇವತೆ ಕುಲದೇವತೆ ಗುರೂಪದಿಷ್ಟ ದೇವತೆಯಾದ ನೃಸಿಂಹ ಮಂತ್ರೋಪಾಸನೆ ಮಾಡಿದರು. ನೆನೆಸಿದಂತೆ ರೂಪದರ್ಶನ ಗುಣಕ್ರಿಯಾನುಭವಗಳು ದಾಸರಿಗಾಯಿತು. ಹೀಗೆ ಒಂದರಮೇಲೊಂದು ಭಗವದನುಭವಗಳು ಬರುತ್ತಿರುವಾಗ ಮಂತ್ರಾಲಯದಲ್ಲಿ ಶ್ರಾವಣ ಬಹುಳ ದ್ವಿತೀಯಾ ತಿಥಿಗೆ ಮುಂಚಿತವಾಗಿ ಆರಾಧನೆಯ ಮಹೋತ್ಸವದಲ್ಲಿರಬೇಕೆಂದು ತುಂಗಭದ್ರೆಗೆ ಬಂದರು. ವರ್ಷಾಕಾಲ! ಪೂರ್ಣಪ್ರವಾಹ! ಅಂಬಿಗರು ಹರಿಗೋಲನ್ನು ಹಾಕಲು ಒಡಂಬಡರು! ಪೌರ್ಣಿಮೆಯಾದರೂ ಮೋಡದಿಂದ ಮುಚ್ಚಿದ್ದ ಕಾರಣ ಸಂಧ್ಯಾಕಾಲದ ಕತ್ತಲೆ! ರಾಯರೇ ಗತಿ ! ಹರಿಗೋಲನ್ನು ಹಾಕಿರೆಂದು ದಾಸರ ಒತ್ತಾಯ. ಮಳೆ ಹೊಡೆತ! ಕೈಮೀರಿದರೆ ನಾವು ಪಾರಾದೇವು ನಿಮ್ಮ ಗತಿಯೇನೆಂದು ಅಂಬಿಗರ ಪರಿತಾಪ! ಪ್ರವಾಹದ ಶೆಳೆತದಲ್ಲಿ ಹರಿಗೋಲು ನಡೆಸುವರ ಕೈಮೀರಿತು. ಸನ್ನಗೂಬರಾಯಿ ಪೆದ್ದಗೂಬರಾಯಿಗಳೆಂಬ ಬಂಡೆಗಳನ್ನೂ ದಾಟಿತು. ನಿವರ್ತಿ ಸಂಗಮದ ದಾರಿಯೊಳಗೇ ಜಲಸಮಾಧಿಯಾಗುವ ಸ್ಥಿತಿಯೊದಗಿತು. ಅಂಬಿಗರು—ನಮ್ಮಿಂದ ಸಾಧ್ಯವಿಲ್ಲ—

ಹಾರಿಕೊಳ್ಳುವೆವೆಂದರು. ದಾಸರು ಹೀಗೂ ಆಗಬೇಕೇ ಎನ್ನುತ್ತಾ ರಾಘವೇಂದ್ರ ಸ್ತೋತ್ರವನ್ನು ಪಠಿಸುತ್ತಾ ಅನನ್ಯಗತಿಕರಾಗಿ

ಸಂಸಾರೇ ಕ್ಷಯಸಾಗರೇ ಪ್ರಕೃತಿತೋ
ಗಾಧೇಸದಾದುಸ್ತರೇ ಸರ್ವಾವದ್ಯಜಲಗ್ರಹೈ
ರನುಪಮೈಃ ಕಾಮಾದಿಭಂಗಾಕುಲೇ||
ನಾನಾವಿಭ್ರಮ ದುರ್ಭ್ರಮೈರತಿಭಯ
ಸ್ತೋಮಾದಿ ಫೇನೋತ್ಕಟೇ ದುಃಖೋತ್ಕೃಷ್ಟವಿಷೇ
ಸಮುದ್ಧರ ಗುರೋ ಮಾಮಗ್ನರೂಪಂ ಸದಾ||

ಎಂಬ ಶ್ಲೋಕವನ್ನುಚ್ಚರಿಸಿ ಕೈಮುಗಿದರು.

ಇಂತಹ ವಿಷಮಪರಿಸ್ಥಿತಿಯಲ್ಲಿ ದಕ್ಷಿಣ ದಡದಿಂದ ಹೆದರಬೇಡಿ! ಹೆದರಬೇಡಿ! ಬಂದೆ! ಬಂದೆ! ಎಂಬ ಧ್ವನಿಯಾಯಿತು. ಕೌಪೀನಧಾರಿಯೋರ್ವನು ಹಗ್ಗದ ಕುಣಿಕೆಯನ್ನು ಹರಿಗೋಲಿಗೆ ಕಟ್ಟಿ, ಎಳೆ, ಗಟ್ಟಿಯಾಗಿ ಎಳೆ, ಎಂದು ಚೀತ್ಕಾರಮಾಡಿದನು. ದಡದಲ್ಲಿ ಮತ್ತೊಬ್ಬ ಕೌಪೀನಧಾರಿಯು ಎಳೆಯುತ್ತಿದ್ದೇನೆ ಎಳೆಯುತ್ತಿದ್ದೇನೆಂದು ಉತ್ತರ ಕೊಟ್ಟನು. ಹರಿಗೋಲ ಪಕ್ಕದಲ್ಲಿ ಈಜುತ್ತಾ ಹಗ್ಗವನ್ನು ಜಗ್ಗುತ್ತಿರುವ ಕೌಪೀನಧಾರಿಯನ್ನು ಕುರಿತು, ದಾಸರು, ಇಂಥಾ ವಿಪತ್ಸಮಯದಲ್ಲಿ ನಮ್ಮನ್ನು ಪಾರುಮಾಡಲು ಬಂದ ನೀವ್ಯಾರಪ್ಪಾ ಎಂದು ಕೇಳಿದರು. ಕೌಪೀನಧಾರಿಯು, ಮಾತಿಗೆ ಸಮಯವಿದಲ್ಲ—ಹರಿಗೋಲು ದಡಸೇರಲಿ—ಆಮೇಲೆ ಆಡೋಣ ಎಂದು ನಿವಾರಿಸಿದನು. ಅಂಬಿಗರು ಹುಸ್ಸೆಂದು ಹುಟ್ಟುಹಾಕುವದನ್ನು ನಿಲ್ಲಿಸಿ, ರಕ್ಷಣೆಗೆ ಬಂದವರು ಗಂಗೆಮಕ್ಕಳು ಬೇರೇ ಅಲ್ಲ—ಯಾರೋ ಇರಬೇಕೆಂದು ಅವರನ್ನೇ ಎವೆಯಿಕ್ಕದೆ ನೋಡುತ್ತಾ--ಹೂ, ಯಾರಾದರಾಗಲಿ ಸದ್ಯಕ್ಕೆ ಬ್ರಾಹ್ಮಣನ ಪ್ರಾಣವುಳಿಯಿತೆಂದುಕೊಂಡರು. ಹರಿಗೋಲು ಭರದಿಂದ ದಡವನ್ನು ಸೇರಿತು. ಕೌಪೀನಧಾರಿಯು ಅಂಬಿಗನ ಕೈಯಲ್ಲಿ ಏನೋ ಕೊಟ್ಟನು; ನಡೆಯಿರಿ ದಾಸರೆ, ಊರಿಗೆ ಎಂದು ಕರೆದುಕೊಂಡು ಹೊರಟನು. ದಾಸರು ಯಾವ ಮಾತಾಡುವದಕ್ಕೂ ಬಾಯಿಬರದೆ ಕೆಲವು ದೂರ ನಡೆದು—

ದಾಸರು—ಎಲ್ಲಿಗೆ ಕರೆದುಕೊಂಡು ಹೋಗುವಿರಿ?
ಕೌಪೀನಧಾರಿ—ಎಲ್ಲಿಗೇನು? ಮಂಚಾಲೆಗೆ
ದಾಸರು—ಇಲ್ಲಿಗೆಷ್ಟು ದೂರವಿದೆ?
ಕೌಪೀನಧಾರಿ—ದೂರದ ಮಾತೇಕೆ ಒಂದು ಹರಿದಾರಿಯಿದೆ.
ದಾಸರು—ಹೆಸರೇನು?
ಕೌಪೀ—ರಾಘಪ್ಪ ಮಂಚಾಲೆ
ದಾಸರು—ಹಿಂದಿನವರ ಹೆಸರು?
ಕೌಪೀ—ವಾದಪ್ಪ ಮಂಚಾಲೆ.

ಈ ಮಾತು ಕೇಳಿ ದಾಸರ ತಲೆ ತಿರುಗಿತು. ದೈವಿಕವ್ಯಾಪಾರವೆಂದು ನಿಶ್ಚಯವಾಯಿತು. ವೇಷಧಾರಿಗಳು ರಾಘವೇಂದ್ರ ಯತಿಗಳೆಂದೇ ನಿರ್ಧರಿಸಿದರು. ತಟ್ಟನೆ ಮುಂದಿದ್ದ ಕೌಪೀನಧಾರಿಯ ಪಾದಗಳಿಗೆರಗಿ 'ಪಾಮರನ ಮೇಲೆ ತಮ್ಮ ಕೃಪೆ ಬಹಳವಾಯಿತು. ನನ್ನ ಉದ್ಧಾರಕರ್ತರು ತಾವು' ಎಂಬದಾಗಿ ಆನಂದದಾಸರು ಆನಂದಬಾಷ್ಪಗಳಿಂದ ಪುಳುಕಿತರಾದರು. ವೇಷಧಾರಿಯು—'ದೇವರು ನಮ್ಮನ್ನು ಇಲ್ಲಿಟ್ಟಿರುವದೇ ಆದಕ್ಕೆ! ಪ್ರವಾಹದಲ್ಲಿ ಸಿಕ್ಕಿದವರನ್ನು ದಾಟಿಸುವದಕ್ಕೆ! ಅನನ್ಯ ಶರಣರ ಉದ್ಧಾರಕ್ಕೆ!' ಎಂದು ನುಡಿದು ಅದೃಶ್ಯನಾದನು. ಹಿಂದೆ ನೋಡಿದರೆ ಹಿಂಬಾಲಿಸಿದ್ದ ಕೌಪೀನಧಾರಿಯೂ ಇರಲಿಲ್ಲ. ದಾಸರು ಬೆಳದಿಂಗಳಿನಲ್ಲಿ ದಾರಿ ನಡೆಯುತ್ತಾ, ಮನಸ್ಸಿನಲ್ಲಿ ಬರುವ ವಿಷಯುಗಳ ಪೂರ್ವಪಕ್ಷ ಸಿದ್ಧಾಂತಮಾಡಿಕೊಳ್ಳುತ್ತಾ, 'ಸರಿರಾತ್ರಿಗೆ ರಾಯರ ಮಹಾದ್ವಾರದ ಬಳಿಗೆ ಬಂದರು. ವೈಮನಗಳು ದಣಿಯುವತನಕ 'ಶ್ರೀರಾಘವೇಂದ್ರಾಯನಮಃ' ಎಂದು ಪ್ರದಕ್ಷಿಣೆ ನಮಸ್ಕಾರ ಹಾಕುವದರಲ್ಲಿ ಬೆಳಗಾಯಿತು. ಆಚಾರ್ಯರು ಸಂಗಡಿಗರಾದ ಏಳು ಮಂದಿ ಸತ್ಪುರುಷರೊಡನೆ ಉತ್ತರ ಬಾಗಿಲಿನಿಂದ ಆಲಯುವನ್ನು ಪ್ರವೇಶಿಸಿ—' ಏನು ಆನಂದ! ಪ್ರವಾಹದಿಂದ ಪಾರಾದೆಯಾ ? ರಾಯರ ದರ್ಶನವಾಯಿತೇ?' ಎಂಬದಾಗಿ ದಾಸರ ಕುಶಲ ಪ್ರಶ್ನೆಮಾಡಿದರು. ದಾಸರು ಸತ್ಪುರುಷರ ವೃಂದಕ್ಕೆ ನಮಸ್ಕಾರ ಮಾಡಿ ಎಲ್ಲವೂ ಚರಣಾನುಗ್ರಹದಿಂದ ಆಯಿತೆಂದರು. ಆಚಾರ್ಯರು ಮತ್ತೆ ನೋಡು ಆನಂದ! ಈ ಸತ್ಪುರುಷರಲ್ಲಿ ಕೆಲವರನ್ನು ನೀನು ಬಲ್ಲೆ; ಮಿಕ್ಕವರು ಇಂತಿಂಥವರು

ಎಂದು ಅವರ ಸಂಕ್ಷೇಪ ಬ್ರಹ್ಮಾನುಭವಗಳನ್ನು ವರ್ಣಿಸಿ ಹೇಳಿದರು. ಎಲ್ಲರಿಗೂ ನಿನ್ನ ಗಾಯನ ಕೇಳಬೇಕೆಂಬ ಅಪೇಕ್ಷೆಯಿದೆ, ಸಮಯೋಚಿತವಾಗಿ ಒಂದು ಉದಯರಾಗವನ್ನು ಹಾಡು ನೋಡೋಣ! ಎಂದರು. ಆನಂದದಾಸರು ಮಹದಾಜ್ಞೆಯೆಂದು, ಈ ಪುಣ್ಯಶ್ಲೋಕರ ನಾಮಸ್ಮರಣೆಗಿಂತ ಬೇರೊಂದಿಲ್ಲವೆಂದು—

ಭೂಪಾಳಿ — ಅಟ್ಟತಾಳ

ಶ್ರೀರಾಘವೇಂದ್ರರಾಯರ ಪಾದಾಂಬುಜ
ದಾರಾಧಕರ ಕೊಂಡಾಡಿರೋ ।
ಪಾದಾರಾಧಕರ ಕೊಂಡಾಡಿರೋ ||ಪ||

ನಾರಾಯಣನಾಮ ಪಾರಾಯಣರ ಪಾ
ದಾರವಿಂದ ಸುಧಾಸಾರವ ಬೀರುವ ||ಅ||

ಅಲವಬೋಧ ಸತ್ಕುಲದೀಪರೆನಿಸಿದ
ಹುಲುಗಿಯ ನರಸಪ್ಪಾಚಾರ್ಯರ
ಕಲಿಯೊಳು ಕಲಿಕೃತ ಕಲ್ಮಷ ಕಳೆವ ನಿ
ರ್ಮಲ ರಾಯಚ್ಚೂರು ಕೃಷ್ಣಾರ್ಯರ
ಇಳೆಯೊಳು ಚೌಷಷ್ಠಿ ಕಳದಿ ನಿಪುಣರಾದ
ಯಳಮೇಲಿ ಹಯಗ್ರೀವಾಚಾರ್ಯರ
ಹಲವು ಸಜ್ಜನರೊಳು ತಿಳಿಸಿಕೊಳ್ಳದಲಿಪ್ಪ
ಬಲವಂತಯೋಗಿ ನಾರಾಯಣಾಚಾರ್ಯರ ||೧||

ಧರಣಿದೇವರಿಗೆ ನಿರುತಾನ್ನವನೀವ
ವರ ಹರಿಹರ ಭೀಮಾಚಾರ್ಯರ
ಹರಿದಾಸರಿಗೆ ಮಂದಿರವಾದ ಇಭರಾಂ
ಪುರದಲ್ಲಿ ಮೆರೆವ ಕೃಷ್ಣಾರ್ಯರ
ಶಿರಿಪಾದ ಪುತ್ರಪಂಡಿತರೊಳಗಗ್ರೇ
ಸರ ಶ್ರೀರಂಗದ ರಾಮಾಚಾರ್ಯರ

ಸುರಪುರ ಶ್ರೀನರಹರಿಯ ಪಾದಾಂಬುಜ
ಶಿರಿಯೊಳ್ಮರೆವ ಅಸ್ಮದ್ಗುರು ರಾಜಾರ್ಯರ ||೨||

ಶ್ರೀ ರಾಘವೇಂದ್ರರಾಯರು ಭೂಮಿಯೊಳವ
ತಾರ ಮಾಡಿದ ಆರಂಭದಿಂ
ದಾರಾರು ಬೃಂದಾವನ ಪೂಜಾಸ್ತೋತ್ರದಿಂ
ದಾರಾಧಿಸುವರಾನಂದದಿ
ಸಾರಭಕ್ತರ ಪಾದಾರವಿಂದಕೆ ನಮ
ಸ್ಕಾರವಮಾಡಿರೊ ಸಾಷ್ಟಾಂಗದಿ
ಧೀರ ಶ್ರೀ ಕಮಲೇಶವಿಠಲವಲಿದು ತನ್ನ
ಸಾರೂಪ್ಯವಕೊಟ್ಟು ಸಲಹುವ ಸಂತತ ||೩||

ಎಂಬದಾಗಿ ಹಾಡಿದರು.

ಆಗಿಂದಾಗಲೇ ಆಶುಕವಿತೆಯಿಂದ ಹಾಡಿದ ಈ ದೇವರ ನಾಮದಲ್ಲಿ,- ಕ್ಷೇತ್ರಾಧಿಪತಿಗಳು ಶ್ರೀ ರಾಘವೇಂದ್ರಸ್ವಾಮಿಗಳಾದ್ದರಿಂದ ಅವರ ಹೆಸರಿನ ಮೇಲೇ ಪದದ ಪ್ರಾರಂಭವಾಗಿದೆ; ಆಚಾರ್ಯರೊಡನೆ ಬಂದ ಸತ್ಪುರುಷ ರೆಲ್ಲರ ಅಲ್ಪ ಪರಿಚಯವಾಗಿದೆ; ಕಡೆಯಲ್ಲಿ ಸ್ವಗುರುಗಳ ಹೆಸರನ್ನು ಹೇಳಿರು ವುದರಲ್ಲಿ ಔಚಿತ್ಯವಿದೆ; ಪಠಣೆ ಮಾಡುವ ಭಾವಿಕರಿಗೆ ಪುಣ್ಯಶ್ಲೋಕರ ನಾಮಸ್ಮರಣೆಯ ಉದ್ಧಯರಾಗವಾಗಿದೆ; ಮೇಲಾಗಿ ರಾಯರ ಭಕ್ತರಿಗೆಲ್ಲಾ ವಂದನೆಯಿದ್ದು ಶ್ರೀ ಹರಿಗುಣಗಾಯನವಾಗಿದೆ.

ಇಭರಾಂಪುರದ ಕೃಷ್ಣಾಚಾರ್ಯರು, ಏನು ಆನಂದ! ನಮ್ಮ ಹಾಡೇ ಹಾಡಿಬಿಟ್ಟೆಯಲ್ಲ! ಎಂದರು. ದಾಸರು, ಪುಣ್ಯಶ್ಲೋಕರು ತಾವಾದ್ದರಿಂದ ನಾಮಸ್ಮರಣೆ ಮಾಡಿದೆ ಮಾತ್ರ! ಎಂದರು. ನೀನೇನಪ್ಪಾ! ಗಂಧರ್ವನೆಂದು ಆಚಾರ್ಯರ ಮಾರುತ್ತರವಾಯಿತು.

ಆನಂದದಾಸರು ತುಂಗಭದ್ರೆಯ ಪ್ರವಾಹದಿಂದ ಪಾರಾಗಿ ರಾಘವೇಂ ದ್ರಸ್ವಾಮಿಗಳ ಪ್ರತ್ಯಕ್ಷ ದರ್ಶನಮಾಡಿದ ದಿನದಿಂದ "ದರ್ಶನಾದೇವ ಸಾಧವಃ" ಎಂಬ ಭಾಗವತೋಕ್ತಿಯಂತೆ ಅನುಭವಿಸುವ ಧ್ಯಾನಾನಂದವು ಬಿಂಬಾಪರೋಕ್ಷದ ಆನಂದವಾಯಿತು. ಬಿಂಬಾಪರೋಕ್ಷವು ಸಾಧನೆಯ

ಪರಮಾವಧಿಯು. ಅದೇ ಯೋಗಿಗಳ ಜ್ಯೋತಿರ್ದರ್ಶನವು. ಅದರಿಂದ ಸಂಚಿತಾಗಾಮಿ ಕರ್ಮಗಳ ನಾಶವಾಗುವದು. ವಿಷಯವಾಸನೆಯಡಗುವದು. ಪ್ರಾರಬ್ಧ ಕರ್ಮವು ಸಾಧಕನ ಜ್ಞಾನದಿಂದಾಗಲಿ ಭೋಗದಿಂದಾಗಲಿ ಕ್ಷಯಿಸಿ ಬಿಡುವದು. "ನೀಲತೊಯದ ಮಧ್ಯಸ್ಥಾವಿದ್ಯುಲ್ಲೇಖೇವ ಭಾಸ್ವರಾ" ಇತ್ಯಾದಿ ಶೃತಿಪ್ರತಿಪಾದ್ಯವಸ್ತುವೇ "ಸಬ್ರಹ್ಮಸ್ಸಹರಿ ಸ್ಸೇಂದ್ರ ಸ್ಸೋಽಕ್ಷರಃ ಪರಮಸ್ಸ್ವರಾಟ" ಎನಿಸುವದು. ಸಾಧಕನ ಕಾರಣ ಶರೀರವು ಜ್ಯೋತಿರ್ದರ್ಶನದಿಂದ ದಗ್ಧಪಟದಂತಾಗುವದು. ಅನಂತರ ಆ ದೇಹವು ಜನ್ಮಗಳಿಗೆ ಕಾರಣವಾಗುವದಿಲ್ಲ. ಇಚ್ಛಾಮಾತ್ರದಿಂದ ಅಂಥಾ ಸಿದ್ಧಪುರುಷರು ಜನ್ಮ ತಾಳಿದರೂ ಅವರನ್ನು ವಾಸನೆಗಳು ಬಾಧಿಸುವದಿಲ್ಲ. ಇಂದ್ರಿಯಾರ್ಥಗಳಾದ ವಿಷಯಗಳನ್ನು ಇಂದ್ರಿಯಗಳು ಯಾವಾಗ ಗ್ರಹಿಸುವದಿಲ್ಲವೋ ಆಗ ಸಾಧಕನು ಸ್ಥಿತಪ್ರಜ್ಞನಾಗುವನು. ಸ್ಥಿತಪ್ರಜ್ಞನಿಗೆ ಪ್ರಾಜ್ಞನಾಮಕ ಪರಮಾತ್ಮನ ದರ್ಶನವಾಗುವದು. ಈ ಒಂದು ಸ್ಥಿತಿಯನ್ನು ಸಂಪಾದಿಸಲು ಜೀವನು ತೊಳಲಿ ಬಳಲಿ ಬಹುಜನ್ಮಗಳೆತ್ತುವನು.

ಆನಂದದಾಸರು ಅಪರೋಕ್ಷಿಗಳಾದರು. ಸಕಲ ಜಗತ್ತೂ ಅವರಿಗೆ ಕರತಲಾಮಲಕದಂತಾಯಿತು. ಆಚಾರ್ಯರು ಅಧಿಕಾರವಾಣಿಯಿಂದಾಡಿದ ಮಾತು ಸತ್ಯವಾಯಿತು. "ಎಲ್ಲರ ಶ್ರಮ ನಿನಗಿಲ್ಲ, ನಿನ್ನ ಭಾಗ್ಯ ಎಲ್ಲರಿಗಿಲ್ಲ" ಎಂಬುವದು ಅನುಭವದಿಂದಲೇ ಆನಂದದಾಸರಿಗೆ ಸಿದ್ಧಿಯಾಯಿತು.

ಅಪರೋಕ್ಷಿಗಳಾದ ಮಾತ್ರಕ್ಕೇ ಅವರೇನು ಹೊಸ ಕವಚ ಕಿರೀಟ ಕುಂಡಲಗಳನ್ನು ಧರಿಸಿ ಬರುವರೇ? ಲೋಕದ ದೃಷ್ಟಿಯಲ್ಲಿ ಇದ್ದಂತೆಯೇ ಇರುವರು. ಹಿಂದಾಡಿದ ಮಾತುಗಳನ್ನು ಇಂದೂ ಆಡುವರು. ಹಿಂದಿನದು ಬಾಡಿಗೆಯ ಮಾತಾಗಿದ್ದರೆ ಇಂದಿನ ಅದೇ ಮಾತು ಸ್ವಂತಮಾತು. ಹಿಂದಿನ ಕೀರ್ತನದಲ್ಲಿ ಗಾನ ಬಹಳವಾಗಿದ್ದರೆ ಇಂದಿನ ಕೀರ್ತನದಲ್ಲಿ ಜ್ಞಾನ ಬಹಳ. ಇಷ್ಟೇ!

ಅಪರೋಕ್ಷಜ್ಞಾನವಾದಮೇಲೆ ಆನಂದದಾಸರು ಹತ್ತು ವರ್ಷಗಳ ಕಾಲ ಪಾರ್ಥಿವಶರೀರದಿಂದಿದ್ದರು. ಮಂತ್ರಾಲಯ, ಗದ್ವಾಲ, ಇಭರಾಂಪುರ, ವೇಣೀಸೋಮಪುರ, ಸುರಪುರ, ಇಷ್ಟು ಸ್ಥಳಗಳವಿನಾ ಅವರು ಮತ್ತೆಲ್ಲೂ ಸಂಚರಿಸಲಿಲ್ಲ. ರಾಜದರ್ಬಾರಿನಲ್ಲಿ ಕೇಳಿದರೇ ಕೀರ್ತನ, ಇಲ್ಲ

ದಿದ್ದರೆ ದಾಸರ ಕೀರ್ತನ ಕೇಳಲು ಸಿಗುವದಿಲ್ಲವೆಂಬ ಅಪವಾದ ದೂರವಾಯಿತು. ನಿಂತಾಗ ಕುಳಿತಾಗ ಆಡಿದ ಮಾತೆಲ್ಲವೂ ದಿವ್ಯ ಕೀರ್ತನವೇ ಆಗಿತ್ತು.

ದಾಸರ ಅಂತಿಮಕಾಲವೂ ಆನಂದಮಯವಾಯಿತೆಂಬುವದು ಆನಂದದ ಸಂಗತಿಯೇ ಸರಿ. ಸುರಪುರದ ಗೋಪಾಲಕೃಷ್ಣ ದೇವಾಲಯದ ಬಹಿರಾಂಗಣದಲ್ಲಿ ಸಾವಿರಾರು ಜನಸಂದಣಿಯಲ್ಲಿ ದಾಸರು ಕೀರ್ತನಮಾಡುತ್ತಿದ್ದಾರೆ. ಭಾದ್ರಪದ ಶುದ್ಧ ದ್ವಾದಶಿಯಾದಕಾರಣ ವಾಮನಾವತಾರವು ಕಥಾವಸ್ತುವಾಗಿದೆ. ಬಲಿರಾಜನಿಗೆ ಸುತಳಲೋಕಾಧಿಪತ್ಯಕೊಟ್ಟು ಪಟ್ಟಾಭಿಷೇಕವಾಗಿದೆ. ಮುಂದಿನ ಮನ್ವಂತರದಲ್ಲಿ ನನ್ನ ಆಶ್ರಯದಿಂದ ನೀನೇ ಇಂದ್ರನಾಗುವೆ, ಈಗ ಮತ್ತೇನು ಬೇಡುವೆ ಬೇಡು, ಎಂದು ತ್ರಿವಿಕ್ರಮನ ಆಜ್ಞೆಯಾಗಿದೆ. ಭಕ್ತ ಬಲಿರಾಜನು ಇನ್ನು ಬೇಡುವದೇನಿದೆ ಮಹಾಪ್ರಭೋ ಎಂದು—

ಬೆಹಾಗ್ — ಆದಿತಾಳ

ಬೇಡುವದೇನ—ಭವವಿಮೋಚನ ॥ ಪ ॥

ಆವಸಾಧನಕೆ ಆವುದು ಕಡೆತವ
ಪಾವನ ಪಾದದಸೇವೆ ದೊರೆತಮೇಲ್ ॥೧॥

ಅಮರೇಶನ ಪದ ಭ್ರಮಿಸಿದುದಕೆ ಸಿರಿ
ಕಮಲೇಶ ವಿಠಲನೆ ನಮಗೆ ದೊರೆತಮೇಲ್ ॥೩॥

ಎಂದು ಅಭಿಪ್ರಾಯವಿಟ್ಟು ದಾಸರು ಹಾಡುತ್ತಿದ್ದಾರೆ! ಆನಂದ ಪಾರವಶ್ಯದಲ್ಲಿ ಆನಂದದಾಸರ ಹೃದಯವ್ಯಾಪಾರವು ಲೀನವಾಗಿದೆ! ಮಾತು ನಿಂತ ಕಾರಣವೇನೆಂದು ಎಷ್ಟೋ ಹೊತ್ತುನೋಡಿದ ಜನರು ದೇಹವನ್ನು ಸ್ಪರ್ಶ ಮಾಡಿದ್ದಾರೆ! ಸ್ಪರ್ಶವು ಸೀತಲವಾಗಿದೆ! ಭಕ್ತಿಯಿಂದ ಜನರು ಕೀರ್ತನದ ಆರತಿಯನ್ನು ದಾಸರ ಪಾರ್ಥಿವಮೂರ್ತಿಗೆ ಮಾಡಿ ನಮಸ್ಕಾರಮಾಡಿದ್ದಾರೆ! ಸರ್ವತ್ರ ಜಯಜಯಾಕಾರವಾಗಿದೆ !!

ಅನಾಯಾಸೇನಮರಣಂ
ವಿನಾದೈನ್ಯೇನ ಜೀವನಂ
ಅನಾರಾಧಿತ ಗೋವಿಂದ
ಚರಣಸ್ಯೋಭಯಂಕುತಃ ॥೧॥

ಎಂಬ ಶ್ಲೋಕವು ಆನಂದದಾಸರಿಗಾಗಿಯೇ ರಚಿತವಾಯಿತೋ ಏನು ?

ಇದು ಜನ್ಮದ ರೀತಿ! ಇದು ಜನ್ಮದ ನೀತಿ!





ಶ್ರೀ ಮೊದಲಕಲ್ಲು ಶೇಷದಾಸರು

# ಮೊದಲಕಲ್ಲು ಶೇಷದಾಸರು

ಆದಿಶಿಲಾ ಎಂಬುವದು ಗದ್ವಾಲ ಸಂಸ್ಥಾನದಲ್ಲಿರುವ ಪಾವನ ಕ್ಷೇತ್ರ. ಅಷ್ಟೋತ್ತರಶತ ತಿರುಪತಿ ಕ್ಷೇತ್ರಗಳಲ್ಲಿ ಮೊದಲನೆಯದು. ಆದ್ದರಿಂದ ಕ್ಷೇತ್ರಕ್ಕೆ ಈ ಹೆಸರು ಬಂದಿದೆ. ಕ್ಷೇತ್ರಮಹಿಮೆಯನ್ನು ತಿಳಿಸಲು ಸ್ಥಳಪುರಾಣವಿದೆ. ಪುರಾಣಕಾಲದಲ್ಲಿ ರಾಜಧಾನಿಗಳಿದ್ದ ಅಥವ ಸತ್ಪುರುಷರು ತಪಸ್ಸುಮಾಡಿಕೊಂಡಿದ್ದ ಸ್ಥಳಗಳ ಕಥೆಗಳನ್ನು ಸ್ಥಳಪುರಾಣವೆಂಬ ಹೆಸರಿನಿಂದ ಪುಣ್ಯಾತ್ಮರು ಬರೆದಿಟ್ಟಿದ್ದಾರೆ. ಸ್ಥಳಪುರಾಣವಿಲ್ಲದ ಪುರಾತನ ಊರೇ ಭರತಭೂಮಿಯಲ್ಲಿಲ್ಲವೆಂದರೆ ತಪ್ಪಾಗುವದಿಲ್ಲ; ಅಥವ ಅತಿಶಯೋಕ್ತಿಯೆನಿಸುವದಿಲ್ಲ. ಸ್ಥಳಪುರಾಣಗಳು ಕಾಲ್ಪನಿಕ ಕಥೆಗಳಲ್ಲ. ಅವು ಆಯಾ ಸ್ಥಳಗಳ ಚರಿತ್ರೆಗಳು. ಭಾರತೀಯ ಇತಿಹಾಸಗಳ ಅಸ್ತಿಭಾರವು ಧರ್ಮದ ತಳಗಲ್ಲಿನಮೇಲೆ ಕಟ್ಟಲ್ಪಟ್ಟಿರುವದರಿಂದ ಪುರಾಣಗಳು ಇದುವರೆಗೆ ಜೀವಂತವಾಗಿರಲು ಕಾರಣವಾಗಿದೆ. ಆಯಾ ಪ್ರಾಂತ್ಯದಲ್ಲಿ ಯಾವದೋ ಕಾಲದಲ್ಲಿ ಬಾಳಿದ ರಾಜರ ಅಥವ ಜ್ಞಾನಿಗಳ ಚರಿತ್ರೆಯು ಆ ಪ್ರಾಂತ್ಯವಾಸಿಗಳಿಗೆ ಆದರ್ಶಧರ್ಮವೆನಿಸಿದೆ. ಚಿಕಿತ್ಸಕ ಬುದ್ಧಿಯಿಂದ ವಿಚಾರಮಾಡಿದರೆ ಸ್ಥಳಪುರಾಣಗಳು ಪ್ರಯಾಣಸೌಕರ್ಯಗಳಿಲ್ಲದ ಆ ಕಾಲದ ಜನರಿಗೆ ದೇಶಾಭಿಮಾನವನ್ನುಂಟುಮಾಡುವ ಉಪದೇಶಗಳಾಗಿವೆ. ಪುರಾಣಗಳು ಅತಿಶಯೋಕ್ತಿ ಉತ್ಪ್ರೇಕ್ಷೆಗಳಿಂದ ರಹಿತಗಳಾಗಿರುವದು ಸಾಧ್ಯವಲ್ಲ. ಈಗಿನ ಜನರಿಗೆ ಅವುಗಳಲ್ಲಿ ಆರಿಸಿಕೊಳ್ಳಲು ವಿಷಯುಗಳಿಗೆ ಕೊರತೆಯಿಲ್ಲ. ಮೊದಲನೆಯದು ಪುರಾಣಗಳಲ್ಲಿರುವ ಸರಳಕಾವ್ಯ. ಅಲ್ಲಿನ ಇತಿಹಾಸ, ದೇಶಾಭಿಮಾನಜನಕಗಳಾದ ಗಿರಿವನ ನದಿಗಳ ಪ್ರಾಶಸ್ತ್ಯದ ವರ್ಣನೆ. ಮೂರನೆಯದು ತಾನಿದ್ದ ಬಳಿಯೇ ಉತ್ತಮ ಕ್ಷೇತ್ರ, ಅಲ್ಲಿರುವವೇ ಗಂಗಾದಿತೀರ್ಥಗಳು, ಅಲ್ಲಿದ್ದ ಪೂರ್ವನಿವಾಸಿಗಳೂ ಸತ್ಪುರುಷರು; ಎಂಬ ಅವರ ಮೇಲಣ ಭಕ್ತಿ. ಇಷ್ಟು ಪುರಾಣಗಳಿಂದಾಗುವ ಪ್ರಯೋಜನಗಳು. ಒಂದೇ ಮಾತಿನಲ್ಲಿ ಹೇಳುವುದಾದರೆ, ಪುರಾಣಗಳು ಸಾರ್ವಕಾಲಿಕ ಸಾರ್ವ

ಜನಿಕವಾದ ಶೈಲಿಯಲ್ಲಿ, ಅಂದರೆ ಅಜ್ಞ ಪ್ರಾಜ್ಞರುಭಯರೂ ಪುರಸ್ಕರಿಸಲ ರ್ಹವಾದ ಶೈಲಿಯಲ್ಲಿ, ವಿವಿಧ ವರ್ಣನೆಗಳಿಂದ ಜನಮನೋರಂಜನೆಮಾಡುವ ಕಂಚನ ಕಥೆಯಂಥಾ ಕಥೆಗಳಿಂದಾರಂಭಿಸಿ ವೇದದ ವೇದಾಂತದ ತನಕ ಜನಜೀವನದ ಆದರ್ಶಗಳನ್ನು ಕೂಡಿಸಿಟ್ಟಿರುವ, ಉಪದೇಶಗ್ರಂಥಗಳಿನ್ನ ಬೇಕು.

ಆಫ್ರಿಕಾಖಂಡದ ನೈಲ್ (ನೀಲ) ನದಿಯು ಉಗಮ ಸ್ಥಾನವನ್ನು ಕಂಡುಹಿಡಿಯಲು ಎಷ್ಟೋ ಜನ ಐರೋಪ್ಯರು, ಎಷ್ಟೋ ಧನ ಜನ ಸಹಾಯಗಳಿಂದ ಎಷ್ಟೋ ಸಲ ಪ್ರಯತ್ನಮಾಡಿ ನಿರಾಶರಾದರಂತೆ! ಕರ್ನಲ್ ವಿಲ್‌ಫರ್ಡ್ ಎಂಬ ಗೃಹಸ್ಥನು ಕುಶದ್ವೀಪದ ವರ್ಣನೆ, ಅಲ್ಲಿನ ನೀಲನದಿ, ಆ ನದಿಯು ಉಗಮಸ್ಥಾನವಾದ ಚಂದ್ರಸ್ಥಾನ ಸರೋವರ, ಇವುಗಳ ಪೌರಾಣಿಕ ವರ್ಣನೆಯನ್ನು ಕೇಳಿದನಂತೆ! ಅದರಂತೆ ಒಂದು ನಕಾಶೆಯನ್ನು (Map) ಬರೆದನಂತೆ! ಆ ನಕಾಶೆಯು ಈಗಿನ ಆಫ್ರಿಕಾಖಂಡದ ನಕಾಶೆಯಂತಿತ್ತಂತೆ! ನೀಲ ಮತ್ತು ನೈಲ್ ಎಂಬ ಹೆಸರುಗಳನ್ನು ನೋಡಿ ನೀಲ ಶಬ್ದವು ನೈಲ್ ಎಂಬ ಅಪಭ್ರಷ್ಟ ರೂಪವಾಗಿರಬೇಕೆಂದು ನಿಶ್ಚಯಿಸಿದನಂತೆ! ಆಗಿನ ಕುಶದ್ವೀಪಕ್ಕೆ ಕ್ರಿಸ್ತಯುಗದಲ್ಲಿ ಆಫ್ರಿಕವೆಂಬ ಹೆಸರು ಬಂದಿರಬಹುದೆಂದುಕೊಂಡನಂತೆ ! ಅದರಂತೆ ನೀಲ ನದಿಯು ಉಗಮಸ್ಥಾನದ ಶೋಧನೆಗೆ ಹೊರಟನಂತೆ! ಅವನ ಶೋಧನ ಕಾರ್ಯವು ಯಶಸ್ವಿಯಾಯಿತಂತೆ!

—February 1928, Modern Review.

ಮೇಲ್ಕಂಡ ಒಂದೇ ದೃಷ್ಟಾಂತದಿಂದ ಪುರಾಣಗಳ ಉಪಯುಕ್ತತೆಯು ಆಧುನಿಕರಿಗೆ ಗೊತ್ತಾಗದಿರಲಿಕ್ಕಿಲ್ಲ. ಪುರಾಣಗಳೆಂದರೆ ಇರುವ ಉದಾಶೀನತೆಯು ಕಡಮೆಯಾಗದಿರಲಿಕ್ಕಿಲ್ಲ.

ಆದಿಶಿಲೆಯು (ಮೊದಲಕಲ್ಲು) ತುಂಗಾ ಕೃಷ್ಣಾ ನದಿಗಳ ಮಧ್ಯದಲ್ಲಿದೆ. ಆದರೆ ಎರಡೂ ನದಿಗಳು ಎರಡು ಕಡೆಯಿಂದಲೂ ಒಂದೊಂದು ಗಾವುದಕ್ಕೆ ಕಮ್ಮಿ ದೂರದಲ್ಲಿಲ್ಲ. ಕ್ಷೇತ್ರವು ದೊಡ್ಡ ಪಟ್ಟಣವಾಗಿದ್ದ ಅಥವ ನಿರ್ಜನ ಪ್ರದೇಶವಾಗಿದ್ದ ಕುರುಹುಗಳು ಇತಿಹಾಸಕಾಲದಲ್ಲಿ ಕಂಡುಬಂದಿಲ್ಲ. ಊರಿಗೆ ಒಂದು ಮೈಲಿ ದೂರದಲ್ಲಿ ಸಣ್ಣದೊಂದು ಗುಡ್ಡವಿದೆ.

ಅದು ಸ್ವಯಂವ್ಯಕ್ತ ಶ್ರೀನಿವಾಸಕ್ಷೇತ್ರವೆನಿಸಿದೆ ಊರ ಪಕ್ಕದಲ್ಲಿರುವ ಶ್ರೀನಿವಾಸದೇವಾಲಯವೂ ಅದರಂತಿದ್ದು ಅದೇ ಕೀರ್ತಿಯನ್ನು ಪಡೆದ್ಯ ಸೇವಿಸುವರಿಗೆ ಇಷ್ಟಾರ್ಥದಾಯಕ ಸ್ಥಳವಾಗಿದೆ. ಪಕ್ಕದಲ್ಲಿರುವ ಕೊಳವನ್ನು ಜನರು ಸ್ವಾಮಿಪುಷ್ಕರಿಣಿಯೆನ್ನುತ್ತಾರೆ. ದೇವರಿಗೆ ಅಭಿಷೇಕಮಾಡುವವರು ಬ್ರಾಹ್ಮಣರು. ಅಲಂಕಾರಮಾಡುವವರು ಬೇಡ ಜಾತಿಯವರು. ಕಾಡು ಬಂಡೆಗೆ ಹೊಂದಿಸಿ ಕಟ್ಟಿರುವ ಗುಡಿಯು ಈಚಿನದಾಗಿದೆ. ಸುತ್ತಣ ಪ್ರಕೃತಿಯು ಅಷ್ಟು ಸುಂದರವಾಗಿರದಿದ್ದರೂ ಆಲಯದ ಆವರಣವನ್ನು ಹೊಕ್ಕಕೂಡಲೇ ಉಂಟಾಗುವ ಮನಶ್ಶಾಂತಿಯು ಅನುಭವದ ಮಾತಾಗಿದೆ. ಇಂತಹ ಪಾವನಸ್ಥಳದಲ್ಲಿದ್ದು ತಪಶ್ಚರ್ಯಮಾಡಿ ಪ್ರಖ್ಯಾತಿ ಪಡೆದವರು ಮೊದಲಕಲ್ಲು ಶೇಷದಾಸರು. ಅಪರೋಕ್ಷಜ್ಞಾನಿಗಳು, ಮಹಾಮಹಿಮೆಗಳನ್ನು ತೋರಿಸಿದ ಹರಿದಾಸರಲ್ಲಿ ಕೊನೆಯವರು. ಇವರ ನಂತರ ಕಳೆದ ಈಚಿನ ಐವತ್ತು ವರ್ಷಗಳಲ್ಲಿ ಈ ತರಗತಿಯ ಜನರು ಕರ್ಣಾಟಕದಲ್ಲಿ ಬರಲಿಲ್ಲ. ಇತರ ದೇಶಗಳಲ್ಲಿ ಬಂದ ವರ್ತಮಾನವಿಲ್ಲ. ಇದರ ಕಾರಣವೇನೆಂಬುವದು ಗೊತ್ತಾಗುವಂತಿಲ್ಲ.

ಮೊದಲಕಲ್ಲು ಶೇಷದಾಸರು ಭಾರದ್ವಾಜಗೋತ್ರದವರು. ಗದ್ವಾಲಿಗೆ ಐದು ಮೈಲಿ ದೂರದಲ್ಲಿರುವ ದರೂರೆಂಬ ಗ್ರಾಮವು ಜನ್ಮಸ್ಥಳ. ಕ್ರಿ: ೧೮೦೦ರ ಸುಮಾರಿನಲ್ಲಿವರು ಜನ್ಮತಾಳಿರಬೇಕು. ಗ್ರಾಮದ ಕುಲಕರಣಿಯಾಗಿ ದೇಶದಲ್ಲಿ ಸನ್ಮಾನ್ಯ ಗೃಹಸ್ಥರೆನಿಸಿದಿವರನ್ನು ಶೇಷಪ್ಪನೆಂದು ಕರೆಯುತ್ತಿದ್ದರು. ಕಾರ್ತೀಕ ಮಾಘಮಾಸಗಳಲ್ಲಿ ಗದ್ವಾಲಿಯಲ್ಲಿ ನಡೆಯುವ ವಿದ್ವತ್ಸಭೆಗೆ ಬರುತ್ತಿದ್ದ ವಿದ್ವಜ್ಜನರಿಗೆ ಕುಲಕರಣಿಯು ಆಶ್ರಯದಾತನಾಗಿದ್ದನು. ಹೋಗಿ ಬರುವ ಎರಡು ವೇಳೆಗಳಲ್ಲೂ ಶೇಷಪ್ಪನ ಮನೆಯಲ್ಲಿಳಿಯದೆ ತಮ್ಮ ವಿದ್ವತ್ತನ್ನು ತೋರಿಸದೆ ಪಂಡಿತರು ಪ್ರಯಾಣಮಾಡುತ್ತಿರಲಿಲ್ಲ. ಕುಲಕರಣಿಯೆಂದರೆ ಆ ಕಾಲದ ಮೊಗಲಾಯಿ ಗ್ರಾಮಾಧಿಕಾರಿಯಾಗಿದ್ದುದರಿಂದ ಮಹಾ ಕರ್ತೃತ್ವಶಾಲಿಯಾಗಿದ್ದನೆಂಬುದನ್ನು ವಾಚಕರು ನೆನಪಿನಲ್ಲಿಡಬೇಕು. ಪರಮ ಪ್ರಖ್ಯಾತ ಪಂಡಿತರು ಮಾತ್ರವಲ್ಲದೆ ಸತ್ಪುರುಷರೂ ಎನಿಸಿದ್ದ ಸುರಪುರದ ಆನಂದದಾಸರೂ ಎಳನೋಲೀ ಹಯಗ್ರೀವಾಚಾರ್ಯರೂ ಶೇಷಪ್ಪನ ಅತಿಥಿಗಳಾಗಿರುತ್ತಿದ್ದುದು ರಾಜದರ್ಬಾ

ರಿನಲ್ಲಿ ಪ್ರಶಂಸೆಗೆ ಬರುತ್ತಿತ್ತು. ನರ್ತಕಿಯರ ನರ್ತನ, ಗಾಯಕರ ಗಾಯನ, ವಿದ್ವಾಂಸರ ವಾಕ್ಯಾರ್ಥಗಳ, ಯೋಗ್ಯತಾ ನಿರ್ಣಯದಲ್ಲಿ ಶೇಷಪ್ಪನು ಅಸದೃಶನೆನಿಸಿದ್ದನು. ಮರ್ಯಾದೆ ಮಾಡುವದರಲ್ಲೂ ಯೋಗ್ಯತೆಯನ್ನನುಸರಿಸಿ ನಡೆಯುತ್ತಿದ್ದನು. ಕಾಯಿದೆ ಕಾನೂನುಗಳ ವ್ಯಾಪನೆಯಿರದಿದ್ದ ಆ ಕಾಲದಲ್ಲಿ ಜನರು ಗೌಡ ಕುಲಕರಣಿಗಳನ್ನು ತಮ್ಮ ರಾಜರೆಂದೇ ಭಾವಿಸುತ್ತಿದ್ದರು. ಅಂದಮಾತ್ರಕ್ಕೆ ಕುಲಕರಣಿಯು ಜನರನ್ನು ಹಿಂಸಿಸಿ ಘಳಿಸುತ್ತಿರಲಿಲ್ಲ. ಜನರ ಎಲ್ಲ ವ್ಯವಹಾರಗಳ ತೀರ್ಮಾನವು ಕುಲಕರಣಿಯಿಂದಾಗುತ್ತಿತ್ತು. ಆದ್ದರಿಂದವರು ಅವನ ಖರ್ಚುವೆಚ್ಚಗಳನ್ನು ಸಂತೋಷದಿಂದ ನಡೆಸುತ್ತಿದ್ದರು. ಸಭಾಕಾಲಗಳಲ್ಲಾಗುವ ಖರ್ಚು ಗ್ರಾಮಸ್ಥರು ಮಾಡಬೇಕಾದುದೆಂಬ ನಂಬಿಕೆ ಜನರಿಗಿತ್ತು. ಇಷ್ಟರಮೇಲೆ ಅದು ಸಮೃದ್ಧಿಯ ಕಾಲ. ಗದ್ವಾಲ ರಾಜರು ವಿದ್ವತ್ಸಭಾನಿಮಿತ್ತ ಸಾವಿರಗಟ್ಟಲೆ ಖರ್ಚುಮಾಡುವರಾದರೆ ಶೇಷಪ್ಪನು ನೂರರಗಟ್ಟಲೆ ಖರ್ಚುಮಾಡುತ್ತಿದ್ದನು. ಬಂದ ಅತಿಥಿಗಳನ್ನು ಮೃಷ್ಟಾನ್ನವಿತ್ತು ಆದರಿಸುತ್ತಿದ್ದನು. ಆದರೆ ಈತನ ಜಿಹ್ವಾಚಾಪಲ್ಯವು ಬದನೇಕಾಯಿಯ ಎಣ್ಣೆಗಾಯಿತಿಂದಲ್ಲದೆ ತೀರುತ್ತಿರಲಿಲ್ಲ. ಇಷ್ಟು ಮಾತ್ರಕ್ಕೇ ಆ ಕಾಲದ ಶಿಷ್ಟಸಂಪ್ರದಾಯಸ್ಥರಿಗಿದು ಬಲು ವಿರೋಧವಾಗಿ ಕಾಣಿಸುತ್ತಿತ್ತು. ಆಳುತನದಲ್ಲಿ ಶೇಷಪ್ಪನು ಎತ್ತರವಾದ ಆಳು. ಗರಡೀಸಾಧನೆ ಮಾಡಿದ್ದ ಕಾರಣ ಇವನ ಮೈಕಟ್ಟು ಪ್ರೇಕ್ಷಣೀಯವಾಗಿತ್ತು. ಉಡಲು ಯಾವಾಗಲೂ ಜರತಾರಿಯ ಧೋತ್ರ. ಸುತ್ತುವದು ಗದ್ದೇಮಡಿಯ ರುಮಾಲು. ಉಡುಪು ನಿರ್ಮಲವಾಗಿ ಗರಿಮುರಿಯಾಗಿರಬೇಕು. ರಾಜದರ್ಬಾರಿಗೆ ಹೋದರೂ ಈತನ ನಿಲುವಂಗಿ ಧೋತ್ರ ರುಮಾಲುಗಳ ಸಿಸ್ತು ಆ ಕಾಲದ ಜನರಿಗೆ ಬಲು ಮನೋಹರವಾಗಿತ್ತು.

ಕಣ್ಣಿಗೆ ಕಾಣುವಷ್ಟೇ ದೇಶಕ್ಕೊಬ್ಬ ರಾಜನಿದ್ದ—ಕಾಲ್ನಡಿಗೆಯಿಂದ ಮಾರ್ಗಕ್ರಮಣಮಾಡಬೇಕಾಗಿದ್ದ—ಕೈಬರಹದಿಂದ ಗ್ರಂಥಭಂಡಾರಗಳನ್ನು ತುಂಬಿಸಬೇಕಾಗಿದ್ದ—ಯಂತ್ರ ತಂತ್ರಗಳನ್ನೇ ಕಾಣದ ಆ ಕಾಲಕ್ಕೂ,—ಕಿವಿಗೆ ಕೇಳುವಷ್ಟು ದೇಶಕ್ಕೆಲ್ಲಾ ಒಬ್ಬನೇ ರಾಜನಿರುವ—ನೆನೆಸಿದಾಗ ಘಂಟೆಗೆ ನೂರಾರು ಮೈಲು ಪ್ರಯಾಣಮಾಡಲನುವಾದ ಆಕಾಶ ವಿಮಾನಗಳಿರುವ—ನಿಮಿಷಕ್ಕೆ ಸಾವಿರಗಟ್ಟಲೆ ಹಾಳೆಗಳನ್ನು ಮುದ್ರಿಸುವ

ಸೌಕರ್ಯವಿರುವ ಈ ಕಾಲಕ್ಕೂ ಅಜಗಜಗಳಷ್ಟು ಅಂತರವಿದೆಯೆಂದು ಕಾಣಿಸಬಹುದು. ಆದರೆ ಆ ಕಾಲದಲ್ಲಿದ್ದ ಸುಖ ಶಾಂತಿ ಸಮೃದ್ಧಿ ತೃಪ್ತಿಗಳು ಈ ಕಾಲದಲ್ಲಿಲ್ಲ. ನಾವು ಅನುಭವಿಸುತ್ತಿರುವ ನಾಗರೀಕತೆಯ ಫಲವು ನಮ್ಮದಲ್ಲ. ಆದರಿಂದ ನಮಗೆ ಯಾವದೇ ಬಗೆಯ ಆದಾಯವಾಗುತ್ತಿಲ್ಲ.

ಆ ಕಾಲದಲ್ಲಿ (ಒಂದು ಶತಮಾನದ ಹಿಂದೆ) ಗದ್ವಾಲ ಸಂಸ್ಥಾನವನ್ನು ನಾಗರದೊಡ್ಡಿಯ ರಾಜಬಂಧು ಮನೆತನದಿಂದ ದತ್ತುಬಂದಿದ್ದ ಸೋಮಭೂಪಾಲನು ಆಳುತ್ತಿದ್ದನು. ಈತನು ಬಲು ಕಠಿಣಮನೋವೃತ್ತಿಯುವನಾಗದ್ದನು. ತನ್ನ ಅಧಿಕಾರಿಗಳಲ್ಲಿನನಿಗೆ ನಂಬಿಕೆಯಿರಲಿಲ್ಲ. ಕಂಡವರನ್ನು ಕಾರಾಗೃಹದಲ್ಲಿಟ್ಟು ದಂಡಿಸುತ್ತಿದ್ದಕಾರಣ ಈತನಲ್ಲಿ ಜನಾನುರಾಗವಿರಲಿಲ್ಲ. ರಾಜ್ಯದ ದಿವಾನಗಿರಿ ಮೊದಲಾದ ಅಧಿಕಾರಮಾಡುತ್ತಿದ್ದ ಗೋವಿಂದರಾಯ ಕರ್ನೂಲು ಗೋಪಾಲರಾಯ ಗುಂಜಹಳ್ಳಿ ಭೀಮಣ್ಣ ಮೊದಲಾದವರಿಗೂ ನಿರ್ಬಂಧ ತಪ್ಪಲಿಲ್ಲ. ದಯಾಗುಣವೆಂಬುದನ್ನು ಈತನು ಕಂಡಿರಲಿಲ್ಲ. ದತ್ತುಮಾಡಿಕೊಂಡ ವೆಂಕಟಲಕ್ಷಮ್ಮ ರಾಣಿಯು ಈತನ ವರ್ತನೆಗಳಿಗಾಗಿ ಚಿಂತಿಸುತ್ತಿದ್ದಳು.

ಹೀಗಿರಲು ಸೋಮಭೂಪಾಲನ ವಕ್ರದೃಷ್ಟಿಯು ಕುಲಕರಣಿ ಶೇಷಪ್ಪನಮೇಲೆ ಬಿದ್ದಿತು. ಶೇಷಪ್ಪನ ಉಡಿಗೆ ತೊಡಿಗೆ ದಾನ ಧರ್ಮ ಜನಾನುರಾಗಗಳನ್ನು ನೋಡಿ ಸಂತೋಷಪಡುವದರ ಬದಲು ಅಸೂಯಾಪರನಾದನು. ದೋಷಗಳನ್ನೇ ಹುಡುಕುತ್ತಾ ಕುಳಿತರೆ ಯಾರಲ್ಲಿ ತಾನೇ ಅವು ಸಿಗುವದಿಲ್ಲ? ಶೇಷಪ್ಪನು ಸರ್ಕಾರಕ್ಕೆ ಕಟ್ಟುವ ಹಣ ಬರುವದು ತಡವಾಯಿತು. ಸರ್ಕಾರದ ಹಣವನ್ನು ಬಳಸಿದನೆಂಬ ಆಪಾದನೆಯಾಯಿತು. ರಾಜ ದರ್ಬಾರಿಗೆ ಕರೆಸಿದಾಗಲೂ ಧೊರೆಯು ಶೇಷಪ್ಪನ ಗದ್ದೇಮಡಿಯ ರುಮಾಲನ್ನು ನೋಡಿ ಹೀಯಾಳಿಸಿದನು. ಸೇವಕನ ಕೈಯಿಂದ ರುಮ್ಮಾಲು ಕೆಳಗುರುಳುವಂತೆ ಹೊಡೆಸಿ ಅವಮಾನ ಮಾಡಿದನು. ಶೇಷಪ್ಪನಂಥಾ ದೊಡ್ಡಮನುಷ್ಯನಿಗಾದ ಅವಮಾನವನ್ನು ನೋಡಿ ಜನರು ಪರಿತಪಿಸಿದರು.

ಶೇಷಪ್ಪನು ರಾಜನನ್ನು ಕುರಿತು,—'ರುಮ್ಮಾಲು ಕೆಳಗುರುಳುವದಕ್ಕೂ ತಲೆಯುರುಳುವದಕ್ಕೂ ವಿಶೇಷ ವ್ಯತ್ಯಾಸವಿಲ್ಲ; ಉರುಳಿದ ರುಮ್ಮಾಲನ್ನು ಸುತ್ತುವನು ನಾನಲ್ಲ; ಇಂದಿನಿಂದ ನಾನು ತಮ್ಮ ಕುಲಕರಣಿಯಲ್ಲ;

ತಾವು ನನ್ನ ರಾಜರಲ್ಲ ; ಇದೋ ತಮ್ಮ ದಪ್ತರ, ತಮ್ಮ ಲೆಕ್ಕಣಿಕೆ ; ಯಾರಿಂದಬೇಕಾದರೂ ಕೆಲಸಮಾಡಿಸಿಕೊಳ್ಳಬಹುದು. ನನ್ನ ಮನೆ ಮಾನ್ಯಗಳನ್ನು ಜಪ್ತುಮಾಡಿಕೊಳ್ಳಬಹುದು. ನಾನಿನ್ನು ಹೊರಡುವೆನು' ಎಂದು ನುಡಿದು ರಾಜಸಭೆಯಿಂದ ತೆರಳಿದನು.

ಶೇಷಪ್ಪನಿಗೆ ಅವಮಾನ ಮಾಡುವದೇ ಮುಖ್ಯೋದ್ದೇಶವಾಗಿದ್ದುದರಿಂದ ರಾಜಸಭೆಯು ಅಲ್ಲಿಗೇ ಮುಕ್ತಾಯವಾಯಿತು. ಕುಲಕರಣಿಗಾದ ಅವಮಾನ ವಾರ್ತೆಯು ಊರೆಲ್ಲಾ ವ್ಯಾಪಿಸಿತು. ಮಾನವಂತನಾದ ಶೇಷಪ್ಪನು ಎಲ್ಲಿ ಆತ್ಮಹತ್ಯ ಮಾಡಿಕೊಳ್ಳುವನೋ ಎಂಬ ಭಯ ಜನರಿಗಾಯಿತು. ಊರೊಳಗೆ ಅವನನ್ನು ಕಾಣದ ಜನರು ದರೂರ ಮಾರ್ಗ ಹಿಡಿದು ಹುಡುಕಲು ಹೊರಟರು. ಅಧಿಕಾರಿ ಜನರು ಏನಾದರೂ ಉಪಾಯಮಾಡಿ ಮತ್ತೆ ರಾಜಸಭೆಯಲ್ಲಿ ಆತನಿಗೆ ಬಹುಮಾನ ಮಾಡಿಸಿ ದಪ್ತರವನ್ನು ಕೊಡಿಸಬೇಕೆಂದು ಯೋಚಿಸಿದರು. ಶೇಷಪ್ಪನು ಯಾರ ಕೈಗೂ ಸಿಗಲಿಲ್ಲ. ಅವನು ದರೂರಿಗೂ ಹೋಗಲಿಲ್ಲ. ಎಷ್ಟೋ ದಿನಗಳಮೇಲೆ ಅವನು ಚಿಂತಲರೇವಿನಲ್ಲಿ ಶ್ರೀ ವ್ಯಾಸರಾಯರಿಂದ ಪ್ರತಿಷ್ಠಿತನಾದ ಮಾರುತಿರಾಯನ ಸೇವೆಯಲ್ಲಿರುವನೆಂದು ಜನರಿಗೆ ಗೊತ್ತಾಯಿತು. ಇಲ್ಲಿಗೆ ಶೇಷಪ್ಪನ ಲೌಕಿಕ ಲೀಲೆಯು ಮುಗಿಯಿತು.

## ತಪಶ್ಚರ್ಯ

ಚಿಂತಲರೇವಲಿನ ಮಾರುತಿ ದೇವಾಲಯಕ್ಕೆ ಆ ಕಾಲದಲ್ಲಿ ಕೇವಲ ಗರ್ಭಾಂಕಣವೂ ಸುತ್ತಣ ಪೌಳಿಯೂ ಇತ್ತು. ಮಾರುತಿಯ ಮೂರ್ತಿಯ ಸುತ್ತ ಹುತ್ತ ಬೆಳೆದು ಒಳಗೆ ಪ್ರವೇಶ ಮಾಡಲು ದಾರಿಯಿಲ್ಲದಂತಿತ್ತು. ಹಿಂಸಾಕಾರ್ಯ ಮಾಡಿದರೆ ತಮ್ಮ ಮನೆಮಾರು ಮಕ್ಕಳು ಮರಿಗಳಿಗೆ ಕ್ಷೇಮವಾಗದೆಂದು ಗ್ರಾಮಸ್ಥ ರೈತರು ದೂರಪ್ರದೇಶದಲ್ಲಿ ವಾಸಮಾಡುತ್ತಿದ್ದರು. ಮಿಕಾರಿ ಪ್ರಾಣಿಹಿಂಸೆ ಮಾಡಿದವರಿಗೆ ಭಯಂಕರ ಸ್ವಪ್ನ ಸೂಚನೆಯಾಗಿ ಹಾನಿಯುಂಟಾಗುತ್ತಿತ್ತು. ರಾತ್ರಿ ಕಾಲದಲ್ಲಿ ಪೌಳಿಯೊಳಗೆ ಮಲಗಿದರೆ ತಮ್ಮ ಪರಿಣಾಮವಾಗದೆಂದು ಜನರು ಭೀತರಾಗಿದ್ದರು. ಈ ಭೀತಿ ಇಂದಿಗೂ ತಪ್ಪಿಲ್ಲ. ಮಿಕಾರಿ ನಡೆದವರಿಗೆ ಆಗುವ ಹಾನಿಯೂ ತಪ್ಪಿಲ್ಲ. ಆ ಗ್ರಾಮದ ಜನರನ್ನು ಕರೆದು ವಿಚಾರಿಸಿದರೆ ಒಬ್ಬೊಬ್ಬರೊಂದೊಂದು ದೇವರ

ಕಥೆಗಳನ್ನು ಹೇಳುತ್ತಾರೆ. ನಂಬದಿರಲು ಸಾಧ್ಯವಾಗದ ಅನುಭವಗಳನ್ನು ಹೇಳುತ್ತಾರೆ. ಈಚೆಗೆ ಗದ್ವಾಲರಾಜರು ಗರ್ಭಾಂಕಣಕ್ಕೆ ಹೊಂದಿದಂತೆ ಮೂರಂಕಣದ ಮಂಟಪವನ್ನೂ ಸುತ್ತ ಯಾತ್ರಿಕರಿಗನುಕೂಲವಾಗುವಂತೆ ಪಾಕಶಾಲೆ ವಸತಿ ಗೃಹಗಳನ್ನೂ ನಿರ್ಮಾಣಮಾಡಿದ್ದಾರೆ. ಸಂಸಾರಿಗಳು ವಾಸಮಾಡಲು ಅನುಕೂಲವಿದ್ದ ಮಾತ್ರಕ್ಕೇ ಸ್ವೇಚ್ಛೆಯಾಗಿರಲು ಅವಕಾಶವಿಲ್ಲ. ಮೊನ್ನೆ ತಾನೇ ಮರಾಟವಾಡಿಯ ಅಧಿಕಾರಿಯೊಬ್ಬನು—'ಇಂಥಾ ದೇವಾಲಯಗಳೆಷ್ಟೋ ನೋಡಿದ್ದೇನೆ. ಮೋಸಗಾರರು ಕಥೆಗಳನ್ನು ಕಟ್ಟಿ ಹೇಳುತ್ತಾರೆ. ಮೂಢ ಜನರಿಂದ ಧನಾರ್ಜನೆ ಮಾಡುತ್ತಾರೆ. ನಾನಾರಿಗೂ ಹೆದರುವನಲ್ಲ' ಎಂದು ಅಶುಚಿ ವರ್ತನದಿಂದ ಒಂದು ತಿಂಗಳು ವಾಸಮಾಡಿ ಕಷ್ಟಗಳಿಗೊಳಗಾಗಿ ಕಡೆಗೆ ಮೃತನೂ ಆದ ಸಂಗತಿಯನ್ನು ಅಲ್ಲಿಯ ಪ್ರಾಮಾಣಿಕ ಜನರು ನಾನು ಹೋಗಿದ್ದಾಗ (೧೩—೧೦—೩೩ ಶ್ರೀಮುಖ ಸಂ|| ಅಶ್ವೀಜ ಬ. ನವಮಿ. ಶುಕ್ರವಾರ) ತಿಳಿಸಿದರು. ಇಂತಹ ಕಥೆಗಳನ್ನು ಬರೆಯಲು ಭಯವಾಗುತ್ತದೆ. ಘಜನೀ ಮಹಮ್ಮದ್ ಔರಂಗಜೇಬ್ ಮೊದಲಾದವರ ಕಾಲದಲ್ಲಿ ಸೋಮನಾಥ ಕಾಶೀವಿಶ್ವನಾಥರೇನು ಮಾಡುತ್ತಿದ್ದರೆಂದು ಕೇಳಿದರೆ ಉತ್ತರಕೊಡಲು ಬರದಂತಾಗುತ್ತದೆ. ಏನೇ ಇರಲಿ, ಮಂತ್ರಗಳಲ್ಲೂ ತಪಸ್ವಿಗಳಿಂದ ಪ್ರತಿಷ್ಠಿತವಾದ ಮೂರ್ತಿಗಳಲ್ಲೂ ಶಕ್ತಿಯಿಲ್ಲವೆಂದು ಹೇಳಲು ಸಾಧ್ಯವಿಲ್ಲ.

ಶೇಷಪ್ಪನು ಚಿಂತಲ ರೇವಲನ್ನು ಸೇರಿದ ದಿನದಿಂದ ನಿತ್ಯವೂ ಶ್ರೀ ಕೃಷ್ಣವೇಣಿಯಲ್ಲಿ ಸ್ನಾನಮಾಡುವನು. ಅಗ್ರೋದಕವನ್ನು ತಂದು ಮೂರುತಿಗಭಿಷೇಕ ಮಾಡುವನು. ವೀರ ಆಂಜನೇಯ ಮಂತ್ರವನ್ನು ಒಂಟಿಕಾಲಿನಲ್ಲಿ ನಿಂತು ಜಪಿಸುವನು. ಸಾಯಂಕಾಲದೊಳಗೆ ಒಂದಿಷ್ಟು ಬೇವಿನ ತೊಪ್ಪಲನ್ನರೆದು ಗುಳಿಗೆ ಮಾಡಿ ಪಂಚಪ್ರಾಣಾಹುತಿಯೆಂದು ಭುಜಿಸುವನು. ಮತ್ತೆ ನದಿಯಲ್ಲಿ ಮಿಂದು ಸಾಯಂಸಂಧ್ಯೆಯಂಗೈದು ದೇವಾಲಯದ ಸುತ್ತ ದೇವರ ನಾಮಗಳನ್ನು ಹಾಡುತ್ತಾ ಪ್ರದಕ್ಷಿಣೆ ಮಾಡುವನು. ಮಿತಿ ಮೀರಿ ನಿದ್ರೆ ಬಂದರೆ ಅಲ್ಲೇ ಶಯನ ಮಾಡುವನು. ಪಟ್ಟೆಮಂಚ, ಮೊಳಕಾಲುದ್ದದ ಸುಪ್ಪತ್ತಿಗೆ, ಚಾಚಿದ ಕಡೆಗೆ ಕೈಕಾಲು ದಿಂಬುಗಳು, ಮೇಲಾಗಿ ಪರದೆ, ಇಷ್ಟೆಲ್ಲಾ ಶಯನ ಸಾಮಗ್ರಿಗಳಿದ್ದರೂ ಆಯಾಸದ ಸೋಗು ಹಾಕಿ

ಹುಸ್ ಹುಸ್ಸೆನ್ನುತ್ತಾ, ಉಭಯ ಪಾರ್ಶ್ವಗಳಲ್ಲಿ ಅಂಗಮರ್ದನ ಮಾಡಿಕೊಳ್ಳುತ್ತಿದ್ದ ವೈಭವವೆಲ್ಲಿ? ಭೂಮಿಯೇ ಹಾಸಿಗೆ ಆಕಾಶವೇ ಹೊದ್ದಿಕೆ ಮಾಡಿಕೊಂಡು ಪವಡಿಸುವ ಪರಿಭವವೆಲ್ಲಿ? ನಿಜವಾದ ಸುಖ ನಿಜವಾದ ಶಾಂತಿ ಇರುವದೆಲ್ಲಿ? ಅವು ಹೊರಗೋ ಒಳಗೋ?

ಶೇಷಪ್ಪನು ಚಿಂತಲ ರೇವಿನಲ್ಲಿ ತಪಸ್ಸು ಮಾಡುತ್ತಿರುವ ಸಂಗತಿ ದರೂರಲ್ಲಿ ಜನಜನಿತವಾಗಿ ತಿಳಿಯಿತು. ಜನಾನುರಾಗಿಯಾಗಿದ್ದುದರಿಂದ ಊರಜನರೂ ತಾಯಿ ಹೆಂಡತಿ ಮಕ್ಕಳುಗಳೂ ತಮ್ಮ ಧಣಿಯನ್ನು ಏನಾದರೂ ಮಾಡಿ ಊರಿಗೆ ಕರೆದುಕೊಂಡು ಹೋಗಬೇಕೆಂದು ಬಂದಿಳಿದರು. ಕುಲಕರಣಿಕೆ ಹೋದರೇನು, ರಾಜನು ಮುನಿದರೇನು, ಮನೆಯಿಲ್ಲವೇ, ಮಾನ್ಯವಿಲ್ಲವೇ, ಆಡಿದಂತೆ ಮಾಡುವ ಜನರಿಲ್ಲವೇ, ಸಭಾಕಾಲದಲ್ಲಿ ಬರುವ ಜನರ ಆದರಾತಿಥ್ಯ ಮಾಡಲು ಗ್ರಾಮಸ್ಥರಿಲ್ಲವೆ, ನಿನಗೇನು ಕಡಿಮೆಯಾಗಿದೆ? ಊರಿಗೆ ಬಾರೆಂದು ಒಬ್ಬೊಬ್ಬರೂ ಪರಿಪರಿಯಾಗಿ ಬೇಡಿಕೊಂಡರು. ಶೇಷಪ್ಪನು—"ಊರಿಗೆ ಬರುವ ಕಾಲವಿದಲ್ಲ! ಮತ್ತೆ ಲೌಕಿಕ ಮಾಡುವನು ನಾನಲ್ಲ! ನರರ ಸೇವೆಯನ್ನು ತಪ್ಪಿಸಿ ಹರಿಯನ್ನು ತೋರಿಸೆಂದು ವಾನರ ನಾಥನ ಮೊರೆ ಬಿದ್ದಿರುವೆನು. ಹರಿಯನ್ನು ಕಾಣುವೆನು, ಇಲ್ಲವೇ ಹರಣವನ್ನು ನೀಗುವೆನು. ಮಾತೆಗೂ ಮಡದಿ ಮಕ್ಕಳಿಗೂ ದ್ರೋಹಮಾಡಿ ಬಂದವನು ನಾನಲ್ಲ. ರಾಜದ್ರೋಹವನ್ನು ಮಾಡಿದವನೂ ನಾನಲ್ಲ. ಇದ್ದ ಹೊಲಮನೆಗಳನ್ನು ರೂಢಿಸಿಕೊಂಡು ಮನೆಯವರು ಸುಖವಾಗಿ ಬಾಳಿರಿ. ಊರಿನವರು ನನ್ನನ್ನು ನಿಜವಾಗಿ ಪ್ರೀತಿಸುತ್ತಿದ್ದರೆ ನನ್ನ ಹರಕೆಯನ್ನು ಹರಿನಾಥನು ನೆರವೇರಿಸುವಂತೆ ಪ್ರಾರ್ಥಿಸಿರಿ. ಇಷ್ಟೇ ನಿಮ್ಮನ್ನು ನಾನು ಬೇಡುವದು" ಎಂದು ಮೌನತಾಳಿದನು. ಯಾರ ಮಾತೂ ನಡೆಯಲಿಲ್ಲ. ಎಲ್ಲರೂ ನಿರಾಶರಾದರು.

ಶೇಷಪ್ಪನ ತಪಸ್ಸು ದಿನದಿನಕ್ಕೆ ಕಠಿಣವಾಗಿ ಬೆಳೆಯಿತು. ಯಾರೊಡನೆಯೂ ಮಾತಾಡುವದನ್ನು ಬಿಟ್ಟು ಮೌನಸ್ವಾಮಿಯಾದನು. ಮಂಡಲವಾಯಿತು; ಎರಡನೇ ಮಂಡಲವೂ ಕಳೆಯಿತು. ದೇವರ ಕೃಪೆ ತನ್ನ ಮೇಲಾಗಲಿಲ್ಲವೆಂದು ಬೇಸತ್ತು ಮಾರುತಿಯ ಬಳಿಯಿದ್ದ ಹುತ್ತದಲ್ಲಿ ಸರ್ಪವೇನಾದರಿದ್ದರೆ ಅದು ತನ್ನನ್ನು ಕಚ್ಚಿ ಕೊಲ್ಲಲೆಂದು ಕೈಯಿಂದ ಬಗೆದನು. ಬಲು

ಕಾಲದಿಂದ ಅಲ್ಲಿ ವಾಸಮಾಡಿಕೊಂಡಿದ್ದ ಸರ್ಪವು ಹುತ್ತದಿಂದ ಹೊರಗೆ ಬಂದು ಶೇಷಪ್ಪನುದ್ದಕ್ಕೂ ನಿಂತು ಹೆಡೆಯಾಡಿಸಿ ಹೊರಟು ಹೋಯಿತು. 'ನಿನಗೂ ನಾನು ಬೇಡವಾದೆನೇ', ಎನ್ನುತ್ತಾ ಅವನು ಬೇವಿನ ತೊಪ್ಪಲನ್ನೂ ತಿನ್ನದೆ ಉಪವಾಸ ಮಾಡಿದನು. ಮಂತ್ರಪುರಶ್ಚರಣೆ ಮಾಡುತ್ತಾ ನಿಲ್ಲಲು ಶಕ್ತಿಯಿಲ್ಲದೆ ಕುಳಿತನು. ಕಳಿತಿರುವದೂ ಶ್ರಮವಾಗಿ ಮಲಗಿದನು. ದೇಹಾಯಾಸ ಬಹಳವಾಗಿದ್ದುದರಿಂದ ಅವನಿಗೆ ನಿದ್ರೆ ಬಂದಿತು. ಸ್ವಲ್ಪ ಹೊತ್ತಿನಮೇಲೆ ಕೈಯಲ್ಲಿ ತಂಬೂರಿಯನ್ನು ಹಿಡಿದು ನಿಂತ ಭವ್ಯರೂಪವೊಂದು ಆತನ ಸ್ವಪ್ನಾವಸ್ಥೆಯಲ್ಲಿ ದೃಗ್ಗೋಚರವಾಯಿತು. 'ಶೇಷಪ್ಪ! ನೀನಿಷ್ಟು ದೇಹದಂಡನೆ ಮಾಡಬೇಡ, ನಿನ್ನ ಇಷ್ಟಾರ್ಥವು ಸ್ವಲ್ಪ ಕಾಲದಲ್ಲಿ ಸಿದ್ಧಿಸುವದು' ಎಂದು ನುಡಿದಂತಾಯಿತು. ಶೇಷಪ್ಪನು ತಲೆಯಮೇಲೆ ಹೊಡೆದರೆ ಏಳುವರಂತೆ ಎದ್ದು ಕುಳಿತನು ಈ ಮಾತು ಹೇಳಿದವರ್‍ಯಾರು ? ತಂಬೂರಿಯವರು ಬರಲು ಕಾರಣವೇನು? ನಾನ್ಯಾವ ದಾಸರನ್ನೂ ನೆನೆಸಿದವನಲ್ಲವಷ್ಟೆ! ನನ್ನ ಮನೋವಿಕಾರದಿಂದ ಹೀಗಾಗಿರಲು ಕಾರಣವಿಲ್ಲವಲ್ಲಾ! ಎಂದುಕೊಳ್ಳುತ್ತಾ ನಾಮಸ್ಮರಣೆಗಾರಂಭಿಸಿದನು. ಮರುದಿನ ತನ್ನ ಪದ್ಧತಿಯಂತೆ ಬೇವಿನ ತೊಪ್ಪಲನ್ನೇ ತಿಂದು ಸೇವೆಮಾಡಿದನು. ಮಾರನೇ ಮೂರನೇ ದಿನಗಳಲ್ಲೂ ಇದೇ ರೀತಿ ಸೇವೆಮಾಡುತ್ತಿರಲು ಶೇಷಪ್ಪನು ವಿಶೇಷ ಭಕ್ತಿಮಾಡುತ್ತಿದ್ದ ಯಳಮೇಲೀ ಹಯಗ್ರೀವಾಚಾರ್ಯರು ಸ್ವಪ್ನದಲ್ಲಿ ದರ್ಶನಕೊಟ್ಟಂತಾಯಿತು. 'ಏಕೆ ಶೇಷಪ್ಪ! ವಿಜಯರಾಯರ ಮಾತನ್ನು ಅನಾದರಮಾಡಿದೆ? ಇನ್ನೀ ಕಠಿಣ ವ್ರತವನ್ನು ಬಿಡು. ಏಕಭಕ್ತಿದಿಂದ ಸೇವೆಮಾಡಿದರೆ ಪ್ರಾಣಪತಿಯು ಒಲಿಯೆನೆನ್ನುವದಿಲ್ಲ. ನಿನ್ನ ದೇಹದಂಡನೆಯು ಅಸುರ ವ್ಯಾಪಾರವೆನಿಸುವದು. ನಿನ್ನ ಸೇವೆಯು ಸಾತ್ವಿಕ ರೀತಿಯಿಂದ ನಡೆಯಲಿ' ಎಂದಂತಾಯಿತು. ಸ್ವಪ್ನಾವಸ್ಥೆಯಲ್ಲೇ ಶೇಷಪ್ಪನು, ಆಚಾರ್ಯ ಸ್ವಾಮಿ! ಉಂಡು ಸೇವೆಮಾಡೆನ್ನುವಿರಲ್ಲಾ! ನನಗೆ ಉಣಿಸುವರ್‍ಯಾರು ? ಎಂದು ಕೇಳಿದನು. 'ನಿನಗೆ ಉಣಿಸಲು ಭಕ್ತನೊಬ್ಬನು ತಾನಾಗಿ ಬರುವನು' ಎಂದು ನುಡಿದು ಆಚಾರ್ಯ ರೂಪವು ಅದೃಶ್ಯವಾಯಿತು.

ಹಿಂದಿನಂತೆ ಶೇಷಪ್ಪನು ಎದ್ದುಕುಳಿತು ಚಿಂತಿಸತೊಡಗಿದನು. ಮೊದಲು ಸ್ವಪ್ನದಲ್ಲಿ ದರ್ಶನಕೊಟ್ಟವರು ವಿಜಯರಾಯರಾದರೆ ಅವರ ಸ್ಮರಣೆ ನಾನೆಲ್ಲಿ ಮಾಡಿದೆ? ಸ್ಮರಿಸದೆ ಅವರು ಬರಲು ಕಾರಣವೇನು? ದೊಡ್ಡವರು, ದಯಾಳುಗಳು, ಬಂದರೆ ಬರಲಿ. ಅವರ ಮಾತು ಮಿಾರಿದ್ದು ನನಗಂತು ಅಪರಾಧವೆನಿಸುವದಿಲ್ಲ. ಏಕೆಂದರೆ ಅವರ್ಯಾರೆಂಬುದು ನನಗೆ ಗೊತ್ತಿಲ್ಲ. ಒಂದುವೇಳೆ ಅಪರಾಧವಾಗಿದ್ದರೆ ಅವರೇ ಕ್ಷಮಿಸಲಿ. ನಮ್ಮ ಆಚಾರ್ಯರು ಸ್ವಪ್ನದಲ್ಲಿ ದರ್ಶನಕೊಟ್ಟು ಹೇಳಿದಮೇಲೆ ಅವರ ಮಾತನ್ನು ನಡೆಸುವದು ನನ್ನ ಕರ್ತವ್ಯ. ಎಂದು ಮೊದಲಾಗಿ ತರ್ಕಿಸಿದನು.

ಮಾರನೆಯ ಪ್ರಾತಃಕಾಲ ರೇವನಹಳ್ಳಿಯ ತಿಮ್ಮಪ್ಪನೆಂಬ ಬಡಗೃಹಸ್ಥನು ತಲೆಯಮೇಲೆ ಸ್ವಲ್ಪ ಅಕ್ಕಿಯನ್ನೂ ಹಲಸಂದೆಯನ್ನೂ ಉಪ್ಪು ಹುಳಿ ಕಾರಗಳನ್ನೂ ಗಂಟುಕಟ್ಟಿಟ್ಟುಕೊಂಡು ಚಿಂತಲರೇವಿಗೆ ಬಂದನು. ಶೇಷಪ್ಪನ ಪಾದಗಳಿಗೆರಗಿ—'ಸ್ವಾಮಿಾ, ತಾವಿಷ್ಟು ಕಠಿಣಸೇವಾ ಮಾಡಬಾರದು. ತಮ್ಮ ಸೇವಕನಾಗಿ ನಾನಿದ್ದು ನಿಮಗೆ ಅಡಿಗೆಮಾಡಿ ಬಡಿಸುತ್ತೇನೆ. ತಾವು ಭೋಜನಮಾಡಿ ಮನದಣಿಯ ಸೇವೆಮಾಡಬಹುದು' ಎಂದು ಬೇಡಿಕೊಂಡನು. ಶೇಷಪ್ಪನು ಇದೇನೋ ದೈವಿಕ ವ್ಯಾಪಾರವೆಂದು ಸಮ್ಮತಿಸಿದನು. ಛಾಯೆಯು ದೇಹವನ್ನು ಅನುವರ್ತಿಸಿಕೊಂಡಿರುವಂತೆ ತಿಮ್ಮಪ್ಪನು ಕುಲಕರಣಿಯ ಸೇವೆಮಾಡಿದನು. ಕಾಲಕ್ರಮದಲ್ಲಿ ದೇವರ ಸೇವೆಗೆ ಬರುವರ ಸಂಖ್ಯೆಗಿಂತ ಶೇಷಪ್ಪನನ್ನು ನೋಡಲು ಬರುವರ ಸಂಖ್ಯೆ ಬಲವಾಯಿತು. ಸಾಲದುದಕ್ಕೆ ಬರಗಾಲವೂ ಪ್ರಾಪ್ತವಾದ ಕಾರಣ ನೂರಾರು ಜನರಿಗೆ ಅನ್ನದಾನಮಾಡುವ ಭಾರವು ತಿಮ್ಮಪ್ಪನ ತಲೆಯಮೇಲೆ ಬಿತ್ತು. ಸುತ್ತಮುತ್ತಣ ಗ್ರಾಮಗಳ ರೆಡ್ಡಿಗಳು ದಿನವೂ ಅರ್ಧ ಚೀಲ ಜೋಳ ಅರ್ಧ ಚೀಲ ಅಕ್ಕಿ ತಕ್ಕ ಸಾಮಾನುಗಳ ಸಹಿತ ತಿಮ್ಮಪ್ಪನ ಬಳಿಗೆ ಕಳುಹಿಸುತ್ತಾ ಬಂದರು. ಭೋಜನವು ಬ್ರಾಹ್ಮಣರಿಗೆ ಮಾತ್ರವಲ್ಲ, ಅಸ್ನಾತುರರಾಗಿ ಬಂದವರಿಗೆಲ್ಲಾ ಆದರದಿಂದ ನಡೆಯುಲಾರಂಭಿಸಿತು. ಈ ಸಮಾಚಾರಗಳನ್ನು ಕೇಳಿ ವೆಂಕಟಲಕ್ಷ್ಮಮ್ಮರಾಣಿಯು ಬಡಜನರ ಭೋಜನ ಭಾರವನ್ನು ವಿಶೇಷತಃ ತಾನೇವಹಿಸಿ ಬಹುಜನರ ಪ್ರಾಣದಾನ ಮಾಡಿದಳು. ವಸ್ತುಸ್ಥಿತಿ ಹೀಗಿದ್ದರೂ ಮೌನಸ್ವಾಮಿ ಶೇಷಪ್ಪನು ಅನ್ನದಾನ ಮಾಡುವನೆಂಬ

ಕೀರ್ತಿಯು ದೇಶದಲ್ಲಿ ವ್ಯಾಪಿಸಿತು. ಎರಡುವರ್ಷಗಳ ಅಖಂಡ ಮಂತ್ರೋಪಾಸನೆಯಿಂದ ಶೇಷಪ್ಪನಿಗೆ ಆಂಜನೇಯನ ದರ್ಶನಪರವಾನುಗ್ರಹಗಳೂ, ತನ್ಮೂಲಕ ಶ್ರೀರಾಮಚಂದ್ರನ ದರ್ಶನಾನಂದಸೌಭಾಗ್ಯಗಳೂ ಉಂಟಾದವು. ಅಷ್ಟರಲ್ಲಿ ಶೇಷಪ್ಪನನ್ನು ಮಹಾಪುರುಷನೆಂದು ಜನರು ಗೌರವಿಸಲಾರಂಭಿಸಿದರು. ಆತನ ಬಾಯಿಂದ ಬರುವ ಮಾತುಗಳು ಶಾಸ್ತ್ರಾರ್ಥಗಳೆನಿಸಿದವು. ನಿಂತಲ್ಲಿ ಕುಳಿತಲ್ಲಿ ನೂರಾರು ಜನರು ಆತನನ್ನು ಎಡೆಬಿಡದೆ ಆಶ್ರಯಿಸಿದರು.

ಅನಂತರ ಶೇಷಪ್ಪನು ವಿಜಯರಾಯರ ಜನ್ಮಸ್ಥಳವಾದ ಚೀಕಲಪರವಿಯಲ್ಲಿ ಅಶ್ವತ್ಥನರಸಿಂಹನ ಸೇವೆಮಾಡಿ ಚಿಪ್ಪಗಿರಿಗೆ ಬಂದು ಕೆಲವು ಕಾಲ ಸೇವಿಸಿದನು. ಸ್ವಪ್ನದಲ್ಲೇ ದರ್ಶನಕೊಟ್ಟು ಕೃಪೆಮಾಡಿದ ವಿಜಯರಾಯರು ಈ ಸಮಯದಲ್ಲಿ ನಿಜರೂಪದಿಂದ ವ್ಯೈದೋರಿದರು. "ಶೇಷಪ್ಪಾ! ನಿನ್ನ ಅಧಿಕಾರ ದೊಡ್ಡದು. ಹಿಂದಿನ ಎರಡು ಜನ್ಮಗಳಲ್ಲಿ ಭಗವದ್ದರ್ಶನ ಮಾಡಿದವನೀನಾದರೂ ಅದು ಕೇವಲ ಬಾಹ್ಯಾಪರೋಕ್ಷವಾಗಿತ್ತು. ಬಿಂಬಾಪರೋಕ್ಷವಾದರೆ ಅದು ಜನ್ಮ ಜನ್ಮಾಂತರಗಳಲ್ಲಿ ಸಹ ಸಹಾಯ ಮಾಡುವದು. ಬಿಂಬಾಪರೋಕ್ಷಿಗೆ ಜನ್ಮ ಬಂಧನಗಳಿಲ್ಲ. ಇಚ್ಛಾಮಾತ್ರದಿಂದ ಜನ್ಮವೆತ್ತಿದರೂ ಅವನ ಜ್ಞಾನಕ್ಕೆ ಲೋಪಬರುವದಿಲ್ಲ. ಹಿಂದಿನಂತೆ ಈ ಜನ್ಮದಲ್ಲೂ ಅಂಕಿತಕೊಟ್ಟು ಹರಿದಾಸನನ್ನಾಗಿ ಮಾಡುವ ಕೆಲಸ ಮಾತ್ರ ನಮ್ಮ ಪಾಲಿಗೆ ಬಂದಿದೆ. ವಿಜಯವಿಠಲ ಪರಮಾತ್ಮನು ನಿನಗೆ '**ಗುರುವಿಜಯವಿಠಲ**' ಎಂಬ ಅಂಕಿತವನ್ನು ಕರುಣಿಸಿದ್ದಾನೆ. ಚಕ್ರತೀರ್ಥದಲ್ಲೂ ನವಬೃಂದಾವನದಲ್ಲೂ ಒಂದೊಂದು ಸಪ್ತಕ ಸೇವೆಮಾಡಿದರೆ, ನರಹರಿತೀರ್ಥರು, ವ್ಯಾಸರಾಯರು, ಮೊದಲಾದ ಮಹಾಮುನಿಗಳ ದರ್ಶನಲಾಭ ನಿನಗಾಗುವದು. ಅನಂತರ ಮಹಾ ರುದ್ರೋಪಾಸನೆ ಮಾಡಿದರೆ ಈ ಜನ್ಮದಲ್ಲಿ ನಿನಗೆ ಬಿಂಬಾಪರೋಕ್ಷವಾಗುವದು. ನೀನು ಪ್ರಖ್ಯಾತ ಹರಿದಾಸನೆನಿಸುವೆ' ಎಂದು ಅನುಗ್ರಹಮಾಡಿ ಕಳುಹಿಸಿದರು. ಶೇಷಪ್ಪನು ಪರಮಾನಂದ ಭರಿತನಾಗಿ ಚಕ್ರತೀರ್ಥಕ್ಕೆ ಬಂದು ಯಂತ್ರೋದ್ಧಾರಕ ಪ್ರಾಣ ಪತಿಯನ್ನು ಕಳಕಂಡ ದೇವರನಾಮದಿಂದ ಸ್ತೋತ್ರಮಾಡಿದನು. ಇದೇ ಶೇಷಪ್ಪನ ಮುಖದಿಂದ ಹೊರಟ ಮೊದಲನೆಯ ದೇವರನಾಮ:—

ತೋಂಡಿ — ಆದಿತಾಳ.

ನಂಬಿದೆ ನಿನ್ನಪಾದ। ಮುಖ್ಯಪ್ರಾಣ ॥ಪ॥

ನಂಬಿದೆ ನಿನ್ನಪಾದ। ಡಂಭ ಮತೊಲಗಿಸು।
ಡಿಂಬದೊಳಗೆ ಹರಿಯ। ಬಿಂಬಪೊಳೆವಂತೆ ಮಾಡು ॥ಅ॥

ಅಂತರಂಗದ ಉಸುರ। ಹೊರಗೆನೂಕಿ ಅಂತರಂಗಕ್ಕೆ ಸೇದುವ॥
ಪಂಥದಾಳು ನೀನೆ। ಕಂತುಜನಕನಲ್ಲಿ
ಮಂತ್ರಿಯೆನಿಸಿಸರು। ವಾಂತರಿಯಾಮಿಯಾಗಿ॥
ಇಂತು ನಾನಾಬಗೆ। ತಂತುವ ನಡೆಸುವ
ಹೊಂತಕಾರಿ ಗುಣ। ವಂತ ಬಲಾಢ್ಯ ॥೧॥

ಇಪ್ಪತ್ತು ಒಂದುಸಾವಿರ। ಐದೊಂದು ನೂರು।
ಅಪ್ರತಿಹಂಸಮಂತ್ರಾ॥
ತಪ್ಪದೆ ದಿನದಿನ। ಒಪ್ಪದಿಂದಲಿ ಜಪಿಸಿ
ತಪ್ಪಿಸಿ ಭವವಸ। ಮಿಪ್ಪದ ಜೀವರಿಗೆ॥
ಅಪ್ಪನಂದದಿ ಪುಣ್ಯ। ಬಪ್ಪಂತೆ ಕರುಣಿಸು
ಕಪ್ಪುವರ್ಣನ ಕೂಡೊಪ್ಪಿಸಿ ಪಾಲಿಸು ॥೨॥

ಹತ್ತೇಳು ಎರಡಯುತ। ನಾಡಿಗಳಲ್ಲಿ
ಸುತ್ತಿಸುತ್ತುವ ಮಾರುತಾ॥
ಉತ್ತರ ಲಾಲಿಸು। ಉತ್ಕ್ರಮಣದಲ್ಲಿ।
ನೆತ್ತಿಯ ದ್ವಾರದಿಂದ। ಲೆತ್ತ ಪೋಗಲೀಸದೆ॥
ತತ್ತ್ವವರೊಳು ಜೀವೋತ್ತಮನೆ ಸಮ
ಚಿತ್ತಯನಗೆ ಕೊಡುತ್ತಲುದ್ಧರಿಸೊ ॥೩॥

ಪಂಚಪ್ರಾಣ ರೂಪನೆ। ಸತ್ವಶರೀರ
ಪಂಚೇಂದ್ರಿಯುಗಳಪ್ಪನೆ॥
ಮುಂಚಿನ ಪರಮೇಷ್ಠಿ। ಸಂಚೀತಾಗಾಮಿ ಬಿಡಿಸಿ

ಕೊಂಚಮಾಡು ಪ್ರಾರಬ್ಧ| ವಂಚನೆಗೈಸದೆ||
ಅಂಚಂಚಿಗೆ ಪರಸಂಚಗಳೋಡಿಸಿ
ಪಂಚವಕ್ತ್ರ ಹರಿ ಮಂಚದ ಗುರುವೆ|| ||೪||

ಯೋಗಾಸನದೋಳಿಪ್ಪ| ಯಂತ್ರೋದ್ಧಾರಕ
ಭಾಗವತಜನರಪ್ಪ ||
ಯೋಗಿಗಳೀಶ ವ್ಯಾಸ | ಯೋಗಿಗೊಲಿದನ್ಯಾಸ |
ಶ್ರೀತುಂಗಭದ್ರವಾಸ | ಬಾಗುವೆ ಕೊಪುಲೇಸ ||
ಶ್ರೀಗುರು ವಿಜಯವಿಠಲನ ಪಾದಕೆ
ಬಾಗಿದ ಭವದೂರ ಸಾಗರ ಮಾರುತಿ || ||೫||

ಈ ಪದವು ಬಹು ಶಾಸ್ತ್ರಾರ್ಥಗರ್ಭಿತವಾಗಿದೆ. ಮೊದಲನೆಯ ಕವಿತೆಯಾದರೂ ವಿಜಯದಾಸರ ಶೈಲಿಯಂತೆ ಸುರಿತ ಕವಿತೆಯಾಗಿದೆ. ಗಾನಮಾಡುವರಿಗೆ ಕಾಲ ತಾಳ ರಾಗ ವರ್ಣ ಮಟ್ಟುಗಳು ಬಲು ಪ್ರೌಢ ರೀತಿಯಲ್ಲಿದ್ದು ಕೇಳುವವರಿಗೆ ಆನಂದದಾಯಕವಾಗಿದೆ. ಪದದ ಮಾತಿನ ರೀತಿಯನ್ನು ನೋಡಿದರೆ ಮಾರುತಿರಾಯನನ್ನು ಎದುರಿಗೆ ನಿಲ್ಲಿಸಿಕೊಂಡು ಹಾಡಿದಂತಿದೆ. ಈ ಪದವನ್ನು ಹಾಡಿದಾಗಿನಿಂದ ಶೇಷಪ್ಪನು ಶೇಷದಾಸರಾದನು.

ಮಹಾನುಭಾವರಾದ ಶೇಷದಾಸರಿಗೆ ಚಕ್ರತೀರ್ಥದಲ್ಲಿ ಮಾರುತಿಯ ಪುನರ್ದರ್ಶನವೂ, ನವಬೃಂದಾವನದಲ್ಲಿ ಚಂದ್ರಿಕಾಚಾರ್ಯರಾದಿಯಾದ ಮಹಾ ಮುನಿಗಳ ಪ್ರತ್ಯಕ್ಷ ದರ್ಶನವೂ ಆಯಿತು. ಇಷ್ಟೇ ಸಂಚಾರಮಾಡಿಕೊಂಡು ಬಂದ ಶೇಷದಾಸರಿಗೆ ಚಿಂತಲರೇವಲಕ್ಕೆ ಬಂದೊಡನೆ ಜನರು ನಡೆದುಕೊಳ್ಳುವ ಕ್ರಮವೇ ಬೇರೆಯಾಯಿತು. ದಾಸರ ಬಾಯಿಂದ ಹೊರಟ ಶಬ್ದಗಳು ಶಾಪಾನುಗ್ರಹಗಳಾದವು. ಮಹಾರಾಣಿ ವೆಂಕಟಲಕ್ಷಮ್ಮನು ತಾನಾಗಿ ದಾಸರ ದರ್ಶನಕ್ಕೆ ಬಂದು ಕುಶಲ ಪ್ರಶ್ನೆ ಮಾಡಿದಳು. ದಾಸರ ಬಿಡಾರವು ಮಠಪತಿಗಳ ಸಂಸ್ಥಾನದಂತಾಯಿತು. ದಿನವೂ ನೂರಾರು ಜನರು ಬರಬೇಕು, ಬಂದವರಿಗೆ ಮೃಷ್ಟಾನ್ನ ಭೋಜನವಾಗಬೇಕು, ಧರ್ಮಶ್ರವಣವಾಗಬೇಕು, ನಾನು ಮುಂದು ತಾನು ಮುಂದು ಎಂದು ಜನರು ಬೇಕಾದುದನ್ನು ತಂದುಕೊಡಬೇಕು; ಈ ರೀತಿಯೆಲ್ಲಾ

ನಡೆಯಲಾರಂಭವಾಯಿತು. ದಿವಾನ ಗೋವಿಂದರಾಯ, ಖಜಾನೆದಾರ ಶ್ರೀನಿವಾಸರಾಯರಂಥಾ ದೊಡ್ಡ ಗೃಹಸ್ಥರುಗಳು ಶಿಷ್ಯರಾದರು. ನಡೆಯಿತು ವೈಭವ !

'ಕಿಮುಲಭ್ಯಂ ಭಗವತಿ ಪ್ರಸನ್ನೇ ಶ್ರೀನಿಕೇತನೇ'



- ೨ -

ಮನುಷ್ಯಾಣಾಂ ಸಹಸ್ರೇಷು ಕಶ್ಚಿದ್ಯತತಿ ಸಿದ್ಧಯೇ
ಯತತಾಮಪಿ ಸಿದ್ಧಾನಾಂ ಕಶ್ಚಿನ್ಮಾಂವೇತ್ತಿ ತತ್ವತಃ ॥೩॥ vii ಗೀತಾ

ಪರಮಾತ್ಮನ ವಿಚಿತ್ರ ವಿಶ್ವ ಸೃಷ್ಟಿಯಲ್ಲಿ ಜೀವರಾಶಿಗಳು ಮಾನವ ಜನ್ಮಕ್ಕೆ ಬರಲು ಕೋಟ್ಯವಧಿ ವರ್ಷಗಳು ಕಳೆದು ಹೋಗುವವು. ಸ್ಥಾವರಗಳಿಂದ ಜಂಗಮ - ಜಂತುವರ್ಗಕ್ಕೆ ಬಂದಮೇಲೆ, ಎಷ್ಟೋ ಜನ್ಮಗಳು ಎಷ್ಟೋ ಅನುಭವಗಳನ್ನು ಮಾಡಿಕೊಂಡು ಜೀವಿಯು ಮಾನವನಾಗುವನು. ಪೂರ್ವಸಂಸ್ಕಾರಗಳು ಬಲವತ್ತರವಾಗಿರುವದರಿಂದ ಮಾನವನಾದರೂ ಅವನ ಪಶುಸ್ವಭಾವವು ಅನೇಕ ಜನ್ಮಗಳೆತ್ತಿದ ವಿನಾ ಹೋಗುವುದಿಲ್ಲ. ಜೀವಿಯು ಉತ್ತಮ ಸಂಸ್ಕಾರ ಸನ್ನಿವೇಶಗಳಿರುವ ಜನ್ಮದಲ್ಲಿ ಬಂದಾಗ, ನಾನ್ಯಾರು, ನನ್ನ ಹಿಂದಿನ ವೃತ್ತಾಂತವೇನು, ನನ್ನ ಭವಿತವ್ಯತೆಯೇನು, ನನ್ನ ಅಪೂರ್ಣತೆಗಳು ಪೂರ್ಣತೆಯನ್ನು ಹೊಂದುವ ಬಗೆ ಹೇಗೆ, ಎಂಬ ವಿಚಾರಗಳಲ್ಲಿ ಮಗ್ನನಾಗುವನು. ಈ ವಿಚಾರಗಳ ಸೆಳೆತದಲ್ಲಿ ಸಿಕ್ಕಿದಾಗ ಕಳೆದು ಹೋಗುವ ಜನ್ಮಗಳಿಗೆ ಕೊನೆಮೊದಲಿರುವದಿಲ್ಲ. ಮೊದಮೊದಲು ಮಾನವನು ಇಂದ್ರಿಯಗೋಚರ ವಿಷಯಗಳನ್ನು ಮಾತ್ರ ನಂಬುವನು. ಅತೀಂದ್ರಿಯ ವಸ್ತುಜ್ಞಾನ ಮಾಡಿಕೊಳ್ಳಬೇಕೆಂದವನು ಪ್ರಯತ್ನಪಟ್ಟಾಗ ಮಾರ್ಗತಪ್ಪಿದನೆಂದರೆ ಅದರಿಂದ ಸಹ ಬಲು ಜನ್ಮಗಳು ವ್ಯರ್ಥಕಳೆದು ಹೋಗುವವು. ಅನಂತವಾದ ಕಾಲದಲ್ಲಿ ಕಳೆದುಹೋದ ಕಾಲವ್ಯಾವದು, ಉಳಿದಿರುವ ಕಾಲವ್ಯಾವದು, ಎಂಬ ವಿಚಾರಗಳಿಗೆ ಎಡೆ

ಯಿರುವದಿಲ್ಲ. ಸುಕೃತವಶಾತ್ ಸರಿಯಾದ ಮಾರ್ಗದರ್ಶಿಗಳು ದೊರೆತರೆ ಅವನ ಉದ್ಯಮವು ಸಫಲವಾಗುವದು. ಆದ್ದರಿಂದಲೇ ಶ್ರೀಕೃಷ್ಣ ಭಗವಂತನು, ಅನೇಕ ಸಹಸ್ರ ಮಾನವರಲ್ಲಿ ಯಾವನಾದರೊಬ್ಬನು ಸಿದ್ಧಿಯನ್ನು ಪಡೆಯಬೇಕೆಂದು ಯತ್ನಿಸುವನು, ಹಾಗೆ ಸಿದ್ಧಿಹೊಂದಿದ ಸಾವಿರಾರು ಜನರಲ್ಲಿ ಯಾವನೋ ಓರ್ವನು ನನ್ನನ್ನು ತಿಳಿಯುವನು. ಎಂಬ ಅರ್ಥದ ಮೇಲ್ಕಂಡ 'ಮನುಷ್ಯಾಣಾಂ ಸಹಸ್ರೇಷು' ಎಂಬ ಶ್ಲೋಕವನ್ನು ಅರ್ಜುನನಿಗೆ ಉಪದೇಶಮಾಡಿರುವನು.

ಪರಮಾತ್ಮನ ದಶಾವತಾರ ಚರಿತ್ರೆಯನ್ನು ತಾತ್ವಿಕದೃಷ್ಟಿಯಿಂದ ವಿವೇಚಿಸುವದಾದರೆ ಒಂದೊಂದು ಅವತಾರಗಳಿಗೆ ಅಂತರವಿರುವಷ್ಟು ಕಾಲವೇ ಜೀವನಿಗೆ ಒಂದೊಂದು ವರ್ಗದಿಂದ ಮತ್ತೊಂದು ವರ್ಗಕ್ಕೆ ಬರಲು ಬೇಕಾಗುವದೆಂದು ಗೊತ್ತಾಗುವದು. ಮಾನವತ್ವದ ಬೆಳೆವಳಿಗೆಯನ್ನು ವಾಮನ ಭಾರ್ಗವ ರಾಮ ಕೃಷ್ಣ ಬುದ್ಧ ಎಂಬ ಐದು ಅವತಾರಗಳಲ್ಲಿ ತೋರಿಸುವದು ಬಲು ಅರ್ಥವತ್ತಾಗಿರುವದು. ಮಾನವತ್ವದ ಪರಿಪೂರ್ಣತೆಯನ್ನು ತೋರಿಸಿದ ರಾಮಾವತಾರಕ್ಕೂ ಅತಿ ಮಾನವತ್ವದ ಲಕ್ಷಣವನ್ನು ತೋರಿಸಿದ ಕೃಷ್ಣಾವತಾರಕ್ಕೂ ಇರುವ ಕಾಲದ ಅಂತರವೇ ಮಾನವನು ಅತಿಮಾನವ (Superman) ನಾಗಲು ಬೇಕಾಗುವದು. ಆಗಲೇ ಅವನನ್ನು ಜನರು ಯೋಗೀಶ್ವರನೆನ್ನುವರು; ವೇದಾಂತಿಯೆನ್ನುವರು. ಇಷ್ಟಾದರೂ ಯೋಗಿಯು ತ್ಯಾಗಿಯಾಗಲು ಕೃಷ್ಣ ಬುದ್ಧಾವತಾರಗಳಷ್ಟು ಅಂತರದ ಕಾಲ ಬೇಕಾಗುವದು. ಅಂದ ಮಾತ್ರಕ್ಕೇ ದಶಾವತಾರ ತತ್ವವನ್ನು ಅಪಾರ್ಥಮಾಡಿಕೊಳ್ಳಲು ಕಾರಣವಿಲ್ಲ. ಪರಮಾತ್ಮನೂ ಈ ರೀತಿ ಜನ್ಮ ಪರಂಪರೆಗಳಲ್ಲಿ ಸಿಲುಕಿ ಪೂರ್ಣತೆಯನ್ನು ಪಡೆದನೆಂದು ಹೇಳುವ ಕಾರಣವಿಲ್ಲ. ಪರಮಾತ್ಮನು ಪರಿಪೂರ್ಣನು, ಸರ್ವಜ್ಞನು, ಜನ್ಮಾದಿ ಬಂಧರಹಿತನು. ಲೋಕದ ಜನರ ಉದ್ಧಾರಾರ್ಥವಾಗಿ ಈ ರೀತಿ ಅವತರಿಸಿ ಮಾರ್ಗತೋರಿಸಿರುವನು ಮಾತ್ರ. ಇಂಥ ಸಂಶಯವೇ ಬಂದ ಕಾಲದಲ್ಲಿ ಅವನು ಅರ್ಜುನನಿಗೆ ಉಪದೇಶಿಸಿದ ಮಾತುಗಳನ್ನು ಕೇಳಿದರೆ ಸಂಶಯ ಪರಿಹಾರವಾಗುವುದು.—

ಬಹೂನಿ ಮೇ ವ್ಯತೀತಾನಿ ಜನ್ಮಾನಿ ತವಚಾರ್ಜುನ
ತಾನ್ಯಹಂ ವೇದಸರ್ವಾಣಿ ನತ್ವಂ ವೇತ್ಥ ಪರಂತಪ ||೫||

ಅಜೋಪಿಸನ್ನವ್ಯಯಾತ್ಮಾ ಭೂತಾನಾಮೀಶ್ವರೋಪಿಸ‍ರ್
ಪ್ರಕೃತಿಂಸ್ವಾಮಧಿಷ್ಠಾಯ ಸಂಭವಾಮ್ಯಾತ್ಮ ಮಾಯಯಾ ||೬||

ಯದಾಯದಾಹಿ ಧರ್ಮಸ್ಯ ಗ್ಲಾನಿರ್ಭವತಿ ಭಾರತ
ಅಭ್ಯುತ್ಥಾನಮಧರ್ಮಸ್ಯ ತದಾತ್ಮಾನಂ ಸೃಜಾಮ್ಯಹಂ ||೭||

ಪರಿತ್ರಾಣಾಯ ಸಾಧೂನಾಂ ವಿನಾಶಾಯ ಚ ದುಷ್ಕೃತಾಂ
ಧರ್ಮಸಂಸ್ಥಾಪನಾರ್ಥಾಯ ಸಂಭವಾಮಿ ಯುಗೇ ಯುಗೇ ||೮||

ಜನ್ಮಕರ್ಮಚ ಮೇದಿವ್ಯಂ ಏವಂ ಯೋವೇತ್ತಿ ತತ್ವತಃ
ತ್ಯಕ್ತ್ವಾದೇಹಂ ಪುನರ್ಜನ್ಮನೈತಿಮಾಮೇತಿ ಸೋರ್ಜುನ ||೯||

ಹೀಗೆ ಜನ್ಮ ಪರಂಪರೆಗಳಲ್ಲಿ ಬಂದು ಸಿದ್ಧಿ ಹೊಂದಿದ ಜೀವರು ಎಷ್ಟೋ ಕಾಲಗಳಿಗೊಮ್ಮೆ ಎಷ್ಟೋ ಕೋಟಿ ಜನಗಳ ಮಧ್ಯದಲ್ಲಿ ದೃಗ್ಗೋಚರರಾಗುವರು. ಅವರು ಜೀವನದ ಆದರ್ಶವನ್ನು ತೋರಿಸಿ ಬಲು ಜನರಿಗೆ ಮಾರ್ಗದರ್ಶಿಗಳಾಗುವರು. 'ಗಾಳಿ ಬಂದಾಗ ತೂರಿಕೋ' ಎಂಬ ಗಾದೆಗನುಸಾರವಾಗಿ ಅಂಥವರು ಬಂದ ಸಮಯದಲ್ಲಿ ಅನೇಕ ಅಪಕ್ವ ಜೀವರು ಅವರ ಅನುಕಂಪದಿಂದ ಪರಿಪಕ್ವದೆಶೆಗೆ ಬಂದು ಜನ್ಮಬಂಧನದಿಂದ ದೂರಾಗುವರು.

ಹಿಂದೆ ವೈಕುಂಠದಾಸರಾಗಿದ್ದವರೇ ಅನಂತರ ಪಂಗನಾಮದ ತಿಮ್ಮಣ್ಣಯ್ಯನವರಾಗಿದ್ದು, ಈಗ ಶೇಷದಾಸರಾಗಿ ಬಿಂಬಾಪರೋಕ್ಷವನ್ನು ಪಡೆಯಲು ಸಾಧನೆ ಮಾಡುತ್ತಿರುವರು. ಬಿಂಬಾಪರೋಕ್ಷಕ್ಕೆ ಬಾಹ್ಯಾಪರೋಕ್ಷವು ಪ್ರಥಮ ಸೋಪಾನವಾಗಿರುವುದು. ಬಾಹ್ಯಾಪರೋಕ್ಷದೆಶೆಯಲ್ಲಿ ಅನೇಕ ವಾಕ್ಸಿದ್ಧಿಗಳುಂಟಾಗುವವು. ಬಿಂಬಾಪರೋಕ್ಷವಾದ ಮೇಲಂತು ಅವರ ಯೋಗ್ಯತೆಯು ಅನಂತ ಗುಣಾಧಿಕವಾಗಿ ಪರಿಣಮಿಸುವದು.

ದಾಸರಿದ್ದ ಬಳಿಗೆ ಕಾಮ್ಯಾರ್ಥಿಗಳಾಗಿ ಜನರು ಬರುವದು ಬಲವಾಯಿತು. ದಯಾಳುಗಳಾಗಿದ್ದುದರಿಂದ ಯಾರನ್ನು ತಿರಸ್ಕರಿಸುವದೂ ಅವರಿಗೆ ದುಸ್ಸಾಧ್ಯವಾಯಿತು. ಯಂತ್ರ ಪ್ರದಾನದಿಂದಲೂ, ಅಭಿಮಂತ್ರಿತ ಫಲದಾನದಿಂದಲೂ, ಸಂತಾನಾರ್ಥಿಗಳು ಸಂತತಿಯನ್ನು ಪಡೆದರು. ದಾಸರು ಸ್ನಾನಮಾಡಿದ ಸ್ಥಳದ ಮೃತ್ತಿಕೆಯ ಲೇಪನದಿಂದ ಕುಷ್ಠಾದಿ ರೋಗಗಳು ಪರಿಹಾರವಾದವು. ಸೇವಾರೂಪವಾಗಿ ಶಾಲು ಪೀತಾಂಬರಗಳೂ ಮುತ್ತಿನಕಂಠಿಮೊದಲಾದ ಆಭರಣಗಳೂ ಅಗಣಿತವಾಗಿ ಬರಲಾರಂಭವಾಯಿತು. ಇದೆಲ್ಲವನ್ನೂ ನೋಡಿ ದಾಸರು ಹೆದರಿದರು. ಏಕಾಂತ ಸ್ಥಳದಲ್ಲಿದ್ದು ತಪಸ್ಸುಮಾಡಬೇಕೆಂದು ಬಯಸಿದರು. ದೇವ! ನಿನ್ನ ಅಂಗಡಿಯನ್ನು ನಿನಗೇ ಒಪ್ಪಿಸುವೆನು, ನನ್ನನ್ನು ಬಿಡುಗಡೆಮಾಡೆಂದು ಪ್ರಾಣರಾಯನ ಮೊರೆಬಿದ್ದರು. ಭಕ್ತಾನುಕಂಪಿಯಾದ ಮಾರುತಿರಾಯನು ಇನ್ನು ಮುಂದೆ, ಮೊದಲುಕಲ್ಲಿನಲ್ಲಿ ಏಕಾಂತ ತಪಶ್ಚರ್ಯದಲ್ಲಿದ್ದು ಇಷ್ಟಾರ್ಥವನ್ನು ಪಡೆಯೆಂದು ಆಜ್ಞೆಗೈದನು. ಚಿಂತಲರೇವಿನಿಂದ ದಾಸರು ಮೊದಲುಕಲ್ಲಿಗೆ ಪ್ರಯಾಣಮಾಡುವಾಗ ಕೆಳಕಂಡ ಸುಳಾದಿಯಿಂದ ಪ್ರಾಣಪತಿಯನ್ನು ಸ್ತೋತ್ರಮಾಡಿದರು.—

ಧೃವತಾಳ

ಘನ ದಯಾನಿಧಿಯಾದ ಪವನರಾಯನೆ ನಮೊ
ಪುನರಪಿ ನಮೋ ನಿನ್ನಪಾದ ಸರಸೀರುಹಕೆ
ಮಣಿದು ಬೇಡಿಕೊಂಬೆ ನೀನೇಗತಿಯೆಂದು
ನಿನಗಿಂತ ಹಿತರ್ಯಾರೋ ಜೀವನಕೆ
ಸನಕಾದಿವಂದ್ಯನ ಆಜ್ಞೆಯಿಂದಲಿ ಪರ
ಮಾಣು ಜೀವಿಗಳಲ್ಲಿ ವ್ಯಾಪ್ತನಾಗಿ ಬಿಡದೆ
ಅಣುರೂಪಗಳಿಂದ ನಿಂದುಮಾಡಿದ ಕ್ರಿಯ
ಮನಸಿಜ ವೈರಿಯಿಂದ ತಿಳಿಯಲೊಶವೆ
ಹೀನಮನಸಿನಿಂದ ಬದ್ಧನಾದವ ನಾನು
ಗುಣರೂಪಕ್ರಿಯಗಳವಿದಿತ ನೀನು

ತನುವಿನೊಳಗೆ ಮೂರುಕೋಟ್ಯಧಿಕ ಎಪ್ಪತ್ತೆರಡು
ಎನಿಪ ಸಾಸಿರರೂಪದಿಂದ ಸತಿಯು ಸಹಿತ
ತೃಣ ಮೊದಲಾದ ಜೀವಪ್ರಕೃತಿ ಕಾಲಕರ್ಮ
ಅನುಸಾರವಾಗಿ ಕ್ರಿಯಗಳನೆ ಮಾಡಿ
ಅನಿಮಿತ್ತಬಾಂಧವನೆನಿಸಿ ಸಜ್ಜನರಿಗೆ
ಜ್ಞಾನಭಕ್ತ್ಯಾದಿಗಳ ನೀನೆ ಇತ್ತು,
ಮನದಲ್ಲಿ ಹರಿರೂಪ ಸಂದರುಶನವಿತ್ತು
ಘನೀಭೂತವಾದ ಆನಂದದಿಂದ
ವಿನಯದಿಂದಲಿ ಜೀವರ ಪೊರೆವ ಉಪಕಾರ
ವನು ಸ್ಮರಿಸಲಾಪನೆ ಎಂದಿಗು ಗುಣನಿಧಿಯೆ
ಇನಕೋಟತೇಜ ಗುರುವಿಜಯವಿಠಲರೇಯ
ಇನಿತು ನಿನ್ನೊಳು ಲೀಲೆ ಮಾಳ್ಪ ಆವಾಕಾಲ ||೧||

ಮಟ್ಟತಾಳ

ಮಿನುಗುವ ಕಂಠದಲಿ ಎರಡು ದಳದ ಕಮಲ
ಕರ್ಣಿಕ ಮಧ್ಯದಲಿ ಸತಿಸಹಿತಲಿದ್ದು
ವನಜಾಸನವಿಡಿದು ತೃಣಜೀವರ ತನಕ
ತನುಗಳಿಗೆ ವಿಹಿತವಾದ ಶಬ್ದಗಳನ್ನು
ನೀನೆಮಾಡಿ ಅವರವರಿಗೆ ಉಣಿಸುತ್ತ
ಘನತೆಯನೆ ಇತ್ತು ಕಾಣಿಸಿಕೊಳ್ಳದಲೆ
ಮನುಜಾಧಮರಿಗೆ ಮಾಯವ ಮೊಸಗಿಸಿ
ಕೊನೆಗುಣದವರನ್ನು ನಿತ್ಯದುಃಖಗಳಿಂದ
ದಣಿಸುವೆ ಪ್ರಾಂತದಲಿ ಕೊನೆಮೊದಲಿಲ್ಲದಲೆ
ದನುಜಮರ್ದನ ಗುರುವಿಜಯವಿಠಲರೇಯ
ನಿನಗಿತ್ತನೀಪರಿ ಸ್ವಾತಂತ್ರ್ಯಮಹಿಮೆಯನು ||೨||

ರೂಪಕ ತಾಳ

ನಾಸಿಕ ಎಡದಲ್ಲಿ ಭಾರತಿತಾನಧೋ
ಶ್ವಾಸಬಿಡಿಸುವಳು ನಿನ್ನಾಜ್ಞಾದಿ

ನಾಸಿಕ ಬಲವಲ್ಲಿ ಈಶನಾಜ್ಞಾದಿ ಊರ್ಧ್ವ
ಶ್ವಾಸಬಿಡಿಸಿ ಪೊರೆವೆ ಜೀವರನ್ನು
ತಾಸಿಗೊಂಭೈನೂರು ಕ್ರಮದಿ ಇಪ್ಪತ್ತೊಂದು
ಸಾಸಿರದಾರ್ನೂರು ದಿನದಿನದಿ
ಭೂಃ ಶಬ್ದದಿಂದಲಿ ಹರಿಯನ್ನೆ ಪೂಜಿಸುವ
ಅಸೀತಿ ನಾಲಕ್ಕುಲಕ್ಷ ಜೀವರಿಗೆ
ಲೇಶು ಮಿಶ್ರಗಳನ್ನು ಆದರಂತೆ ನಿರ್ದೇಶ
ವಾಸಗೈಸುವೆ ನೀನೆ ಪ್ರಾಂತದಲಿ
ಈ ಸುಜ್ಞಾನವ ತಿಳಿದುಪಾಸನ ಮಾಳ್ಪರಿಗೆ
ಶ್ವಾಸಮಂತ್ರದ ಪುಣ್ಯಲೇಶವೀವೆ
ಕಾಸಿನಿಂದಲಿ ಕೋಟಿದ್ರವ್ಯ ಪ್ರಾಪುತದಂತೆ
ವಾಸುದೇವನು ಇದಕೆ ತುಷ್ಟನಾಗಿ
ಈ ಶರೀರದಿ ಪೊಳೆದು ಕ್ಲೇಶ ಪರಿಹರಿಪ
ಈ ಸಂಜ್ಞೆಯಿಂದಲಿ ದಿವಿಜರೆಲ್ಲಾ
ದಾಸರಾಗಿಹರಯ್ಯ ನಿನ್ನಪಾದವ ಬಿಡದೆ
ಕ್ಲೇಶ ಆನಂದಗಳೆಲ್ಲ ನಿನ್ನಾಧೀನ
ದೇಶಕಾಲ ಪೂರ್ಣ ಗುರುವಿಜಯವಿಠಲ
ಭಾಸುರಜ್ಞಾನ ನಿನ್ನಿಂದಲೀವ ॥೩॥

ಜಂಪೆತಾಳ

ಪಂಚದ್ವಾರಗಳಲ್ಲಿ ಪಂಚವಪುಷಗಳಿಂದ
ಪಂಚರೂಪನ ಧ್ಯಾನಮಾಳ್ಪ ನಿನ್ನ
ಪಂಚಮುಖ ಮೊದಲಾದ ಅಮರರೆಲ್ಲರು ನಿ
ಶ್ಚಂಚಲದಿ ಭಜಿಸುತಿರೆ ಅವರವರ
ವಾಂಛಿತಂಗಳನಿತ್ತು ಪೊರೆವ ಮುಖ್ಯಪ್ರಾಣ
ಪಂಚಕರಣಕೆ ಮುಖ್ಯಮಾನಿ ನೀನೇ
ಪಂಚರೂಪಗಳಿಂದ ಪಂಚಾಗ್ನಿಗತನಾಗಿ

ಪಂಚವ್ಯಾಪಾರಗಳ ಮಾಳ್ಪ ದೇವ
ಪಂಚದ್ವಾರದಲಿಪ್ಪ ಪಂಚ ಪಂಚಮುರರು
ಸಂಚರಿಸುವರಯ್ಯ ನಿನ್ನಿಂದಲಿ
ಪಂಚಭೇದಗಳರುಹಿ ಶುದ್ಧಶಾಸ್ತ್ರಗಳಿಂದ ಪ್ರ
ಪಂಚವನುಸಲಹಿದ ಉಪಕಾರಿಯೆ ನಿ
ಷ್ಕಿಂಚನರ ಪ್ರೀಯಗುರು ವಿಜಯವಿಠಲರೇಯ
ಮಿಂಚಿನಂದದಿ ಪೊಳೆಯುವಂತೆ ಮಾಡೋ ||೪||

ತ್ರಿಪುಟತಾಳ

ದಳಅಷ್ಟವುಳ್ಳ ರಕ್ತಾಂಬುಜದ ಮಧ್ಯ
ಪೊಳೆವ ಕರ್ಣಿಕೆಯಲ್ಲಿ ಶೋಭಿಸುವ
ಮೂಲೇಶನ ಪಾದಪಂಕಜದಲಿ ನಿಂದು
ಸಲೆಭಕುತಿಯಿಂದ ಪೂಜಿಸುವ ನಿನ್ನ ಚರಣ
ಮೂಲದಲ್ಲಿ ಜೀವ ಅಶ್ರೈಸಿ ಇಪ್ಪನಾಗಿ
ಸ್ಥಳವ ಸೇರಿಪ ಭಾರ ನಿನ್ನ ದಯ್ಯಾ
ಒಲ್ಲೆನೆಂದರೆ ಬಿಡದು ಭಕತರ ಅಭಿಮಾನ
ಒಲಿದು ಪಾಲಿಸಬೇಕು ಘನಮಹಿಮ
ಖಳದರ್ಪಭಂಜನ ಗುರುವಿಜಯವಿಠಲ
ಒಲಿವನಿನ್ನಯ ಕೃಪೆಗೆ ವಿಮಲಚರಿತ || ೨೪ ||

ಅಟ್ಟತಾಳ

ಜಾಗರಸ್ವಪ್ನ ಸುಷುಪ್ತಿಯಲ್ಲಿ ನೀನೆ
ಜಾಗರೂಕನಾಗಿ ಜೀವರಪಾಲಿಪೆ
ಭಾಗತ್ರಯದಲಿ ವಿಭಾಗವಮಾಡುವೆ
ನಾಗಭೂಷಣಾದಿ ಸುರರಿಗೆ ಜೀವನ
ಸಾಗರ ಮೊದಲಾದ ಸಕಲದರಲಿವ್ಯಾಪ್ತ
ನಾಗರಾಜನ ಅಂಗುಟದಿಮಿಾಟಿದಶಕ್ತ

ಯುಗಾದಿ ಕೃತನಾಮ ಗುರುವಿಜಯವಿಠಲನ
ಯೋಗವಪಾಲಿಸಿ ಭವದೂರಮಾಡುವದು ||೬||

ಆದಿತಾಳ

ಅಸುರರ ಪುಣ್ಯವನು ಭಕತರಿಗಿತ್ತು ಅವ
ರ ಸವಿಾಚೀನ ಕರ್ಮ ದನುಜರಿಗುಣಿಸುವೆ
ಈಶನೇ ಗತಿಯೆಂದು ನೆರೆನಂಬಿದವರಿಗೆ
ಸುಸವಿಾಚೀನವಾದ ಮೋದಗಳೀವೆ ನಿತ್ಯ
ವಸುಧೆಯಭಾರವನು ಧರಿಸಿ ತ್ರಿಕೋಟಿಯ
ಸುಶರೀರಗಳಿಂದ ಬಹಿರಾವರಣದಲ್ಲಿ
ವಾಸವಾಗಿ ಭೂತಹೃತ್ಕಮಲದಲಿನಿಂದು
ಬಿಸಜಜಾಂಡವನು ಪೊರೆವ ಕರುಣಿ ನೀನೆ
ಅಸಮನೆನಿಪ ಗುರುವಿಜಯವಿಠಲರೇಯ
ವಶವಾಗುವನು ನಿನ್ನ ಕರುಣವಿದ್ದವನಿಗೆ ||೭||

ಜತೆ

ಹರಿಯವಿಹಾರಕ್ಕೆ ಆವಾಸನೆನಿಸುವೆ
ಗುರುವಿಜಯವಿಠಲನ ಸುಪ್ರೀತಘನದೂತ ||೧||

---

ಮೊದಲಕಲ್ಲು ದೇವಾಲಯದ ಪಕ್ಕದಲ್ಲಿ ಒಂದು ಪುರಾತನ ಶಿವಾಲಯವಿರುವದು. ಅಲ್ಲಿರುವ ಲಿಂಗವನ್ನು ಕ್ಷೇತ್ರಕ್ಕೆ ಮೂಲ ಮೂರ್ತಿಯೆಂದು ಕರೆಯುವರು. ಆಲಯವು ಆಕಾರದಲ್ಲಿ ಒಬ್ಬಿಬ್ಬರವಿನಾ ಹೆಚ್ಚು ಜನರು ಪ್ರವೇಶಮಾಡಲಾರದಷ್ಟು ಚಿಕ್ಕದಾಗಿರುವದು. ದಾಸರು ಮೊದಲಕಲ್ಲಿಗೆ ಬಂದವರು ಈಗ ಛತ್ರವೆಂದು ಕರೆಸಿಕೊಳ್ಳುತ್ತಿರುವ ಶಿಲಾಮಂಟಪದ ಸ್ಥಾನದಲ್ಲಿದ್ದ ಮನೆಯಲ್ಲಿ ವಸತಿಮಾಡಿದರು. ರುದ್ರಾನುಗ್ರಹದಿಂದ ಬಿಂಬಾಪರೋಕ್ಷವಾಗುವದೆಂದು ಹೇಳಿದ್ದ ವಿಜಯರಾಯರ ಆಜ್ಞಾನುಸಾರ ಮಹಾದೇವನನ್ನು ಕುರಿತು ತಪಸ್ಸಿಗಾರಂಭಿಸಿದರು. ಪಂಚಾಕ್ಷರೀಮಂತ್ರ, ಪಂಚಾಯಣರಾಗಿ ಉಗ್ರಮೂರ್ತಿಯನ್ನು ಉಗ್ರತಪಸ್ಸಿನಿಂದಲೇ ಒಲಿಸುವೆನೆಂದು

ತಪಸ್ಗೈದರು. ಚಿಂತಲರೇವಲಿನಲ್ಲಿ ಬೇವಿನತೊಪ್ಪಲು ದಾಸರ ಆಹಾರ ವಾದರೆ ಮೊದಲಕಲ್ಲಿನಲ್ಲಿ ಬಿಲ್ವಪತ್ರೆಯೇ ಅವರ ಆಹಾರವಾಯಿತು. ಒಂದೊಂದುವೇಳೆ ದಿವಸಗಳು ಕಳೆದರೂ ದಾಸರು ಬಹಿರ್ಮುಖರಾಗುತ್ತಿರ ಲಿಲ್ಲ. ಆಲಯವಿರುವದು ಕಾಡುಸ್ಥಳವಾಗಿರುವದರಿಂದ, ಅಲ್ಲಿ ಸರ್ಪಗಳು ಧಾರಾಳವಾಗಿ ಸಂಚರಿಸುತ್ತಿದ್ದವು. ಒಂದುದಿನ ರಾತ್ರಿಯಾದರೂ ದಾಸರು ಬಹಿರ್ಮುಖರಾಗದಿರಲು, ತಿಮ್ಮಪ್ಪನು ಇನ್ನೂ ಏಕೆ ಬರಲಿಲ್ಲವೆಂದು ಕರದೀಪ ತೆಗೆದುಕೊಂಡು ಗುಡಿಗೆಬಂದನು. ದೊಡ್ಡದೊಂದು ಸರ್ಪವು ದಾಸರ ಮೈಗೆ ಸುತ್ತಿಕೊಂಡು ಮಾಲಾಕಾರವಾಗಿರುವದನ್ನು ಕಂಡು, ಗಾಬರಿಗೊಂಡು ದೂರ ದಲ್ಲಿ ನಿಂತನು. ಸ್ವಲ್ಪ ಹೊತ್ತಿನಮೇಲೆ ದಾಸರು ಆ ಸರ್ಪವನ್ನು ಮೈದ ಡವಿ ಕಳುಹಿಸಿ ತಿಮ್ಮಪ್ಪನಿದ್ದ ಬಳಿಗೆ ಬಂದರು. ಅವನು ತಾನು ಕಂಡ ಸಂಗತಿಯನ್ನು ಹೇಳಲು ಬಾಯಿಬರದೆ, —'ದಾಸರೆ, ಇನ್ನುಮೇಲೆ ರಾತ್ರಿಕಾಲನಲ್ಲಿ ಗುಡಿಯಲ್ಲಿರಬೇಡಿ; ಅಲ್ಲಿ ಸರ್ಪಗಳ ಸಂಚಾರವಿದೆಯೆಂದು ಹೇಳುತ್ತಾರೆ' ಎಂದನು. ದಾಸರು, —'ಹೇಳುತ್ತಾರೆ ಕೇಳುತ್ತಾರೆ ಎಂದೇಕೆ ನುಡಿಯುವೆ, ಕಂಡೆನೆಂದೇ ಹೇಳು, ಭಯವೇನು? ಕೇಳು ತಿಮ್ಮಪ್ಪಾ! ನಮ್ಮ ಆರಾಧ್ಯದೇವತೆಯು ಮಹಾದೇವನೆಂದು ಬಲ್ಲೆಯಷ್ಟೆ?' ಎಂದರು. ಮತ್ತೊಂದು ರಾತ್ರಿಯೂ ಇದಕ್ಕಿಂತ ಅತಿಶಯವಾದ ನೋಟವನ್ನು ನೋಡಿ ತಿಮ್ಮಪ್ಪನು ಎದೆಗುಂದಿದನು. ಹುಲಿಯು ಗುಡಿಯ ಬಾಗಿಲಲ್ಲಿ ಬಂದು ಕುಳಿತ ಮೇಲೆ ಅದು ದಾಸರನ್ನು ಸುಮ್ಮನೇ ಬಿಡುವದಿಲ್ಲ! ಅವರಾದರೋ ಕಣ್ಮುಚ್ಚಿ ಕುಳಿತರೆಂದರೆ ದಿವಾರಾತ್ರಿಗಳನ್ನು ಗಣಿಸುವನಿಲ್ಲ! ತಪಸ್ವಿಗಳಾದ ಮಾತ್ರಕ್ಕೇ ಹಾವು ಹುಲಿಗಳ ಸಂಗಡ ಸರಸವೇ! ಎಂದುಕೊಂಡು ದೂರದಲ್ಲಿ ಕತ್ತಲಲ್ಲಿ ನಿಂತುಕೊಂಡನು. ಬಹಿರ್ಮುಖರಾದ ದಾಸರು ಯಥಾಪ್ರಕಾರ ಸರ್ಪವನ್ನು ಮೈದಡಿವಿ, ಹುಲಿಯ ಮೈಮೇಲೆ ಛಪ್ಪರಿಸಿ, —'ಮೃಗರಾಜ! ನಿನ್ನನ್ನು ಯಾರಾದರೂ ನೋಡಿ ಭಯಪಟ್ಟಾರು, ನೀನಿನ್ನು ಹೋಗು' ಎಂದು ನುಡಿದು ಮನೆಯಕಡೆಗೆ ತಿರುಗಿದರು. ಹುಲಿಯು ಬಾಲವನ್ನಲ್ಲಾಡಿಸುತ್ತಾ ಛಂಗನೆಲಂಘಿಸಿ ಅಡವಿಯನ್ನು ಸೇರಿತು. ತಿಮ್ಮಪ್ಪನು ದಾಸರು ಬಂದು ದನ್ನು ಕಂಡು ಛಳಿ ಬಂದವನಂತೆ ನಡುಗುತ್ತಾ, 'ನೀವು ವಿಷಪರೀಕ್ಷೆಗೆ ಹೊರಟಂತೆ ಕಾಣುತ್ತದೆ; ಹೊಲ ಮನೆ ಹೆಂಡರು ಮಕ್ಕಳನ್ನು ತೊರೆದಂತೆ

ದೇಹಾಭಿಮಾನವನ್ನೂ ಬಿಟ್ಟಂತೆ ಕಾಣುತ್ತದೆ; ನೀವೇನೇ ಹೇಳಿದರೂ ನನಗೆ ಬೇರೇ ಧೈರ್ಯಬರುವದಿಲ್ಲ' ಎಂದು ನುಡಿದನು. ದಾಸರು—'ತಿಮ್ಮಪ್ಪ! ನೀನು ಭಯಸ್ಥ ಮನುಷ್ಯ, ಇನ್ನುಮೇಲೆ ಸರಿರಾತ್ರಿಯಾದ ನಂತರ ಗುಡಿಗೆ ಬರಬೇಡ; ಅಪರರಾತ್ರಿಯಲ್ಲಿ ನಾನು ಆಹಾರವನ್ನೂ ತೆಗೆದುಕೊಳ್ಳುವದಿಲ್ಲ, ಇಷ್ಟುಮಾಡು ನಾಳಿನಿಂದ; ಅದೇನೆನ್ನುವೆಯೋ? ಒಂದು ಬಟ್ಟಲು ಹಾಲು ಮಾತ್ರ ಸಂಧ್ಯಾಕಾಲದಲ್ಲಿ ತಂದಿಡು.' ಎಂದು ಧೈರ್ಯ ಹೇಳಿ ಬೆಳಗಿನರುಣಾದವಾಗುತ್ತಿದ್ದದರಿಂದ ಪುಷ್ಕರಣಿಗೆ ಸ್ನಾನಕ್ಕೆ ಹೊರಟರು. ತಿಮ್ಮಪ್ಪನು ದೇವರ ಪಾತ್ರೆಗಳನ್ನೂ ಮಡಿ ಅಂಗವಸ್ತ್ರವನ್ನೂ ತೆಗೆದುಕೊಂಡು ಬಂದು, ದಾಸರೆ, ಹುಲಿ ಏಕೆ ಬಂತು ಅದರ ಮೈಮೇಲೆ ನೀವು ಹೇಗೆ ಧೈರ್ಯದಿಂದ ಥಪ್ಪರಿಸಿದಿರಿ, ಅದೆಲ್ಲವನ್ನೂ ನನಗೆ ತಿಳಿವಂತೆ ಹೇಳಿರೆಂದನು.

ದಾಸರು—ತಿಮ್ಮಪ್ಪ! ಶಿವನು ಸರ್ಪಭೂಷಣನೆಂದು ಕೇಳಿ ಬಲ್ಲೆಯಷ್ಟೆ!

ತಿಮ್ಮಪ್ಪ—ಕೇಳಿಬಲ್ಲೆ! ಆದರೆ ನಿಮ್ಮ ಕೊರಳಿಗೆ ಸರ್ಪವೇಕೆ ಸುತ್ತಿಕೊಳ್ಳಬೇಕು? ನಿನುಗದರಿಂದ ಭಯವಾಗುವದಿಲ್ಲವೆ?

ದಾಸರು—ಶಿವನನ್ನೇ ನಾವು ಒಲಿಸುವಾಗ ಅವನ ಸರ್ಪ ಒಲಿಯುವದಿಲ್ಲವೇ ನನಗೆ ?

ತಿಮ್ಮಪ್ಪ—ಹುಲಿಯೊ?

ದಾಸರು—ಶಿವನ ಹೆಂಡತಿಯು ಸಿಂಹವಾಹಿನಿಯೆಂದು ಕೇಳಿ ಬಲ್ಲೆಯಾ?

ತಿಮ್ಮಪ್ಪ—'ಸಿಂಹವಾಹಿನ್ಯೈನಮಃ' ಎಂದು ನಾಮಾವಳಿಯನ್ನು ಹೇಳಿದಾಗ ಕೇಳಿದ್ದೇನೆ.

ದಾಸರು—ಸರಿ, ಶಿವನಿದ್ದ ಬಳಿ ಅವನ ಹೆಂಡತಿಯೂ ಬರಬೇಕಷ್ಟೆ! ಬರುವಾಗ ಅವಳು ತನ್ನ ವಾಹನವೇರಿ ಬಂದರೆ ತಪ್ಪೇನು?

ತಿಮ್ಮಪ್ಪ—ಅವಳ ವಾಹನ ಸಿಂಹ! ಹುಲಿಯಲ್ಲ.

ದಾಸರು—ನೀನು ನೋಡಿದ್ದು ಹುಲಿಯೋ ಸಿಂಹವೋ ಹತ್ತರ ಬಂದು ನೋಡಿದೆಯೇನು?

ತಿಮ್ಮಪ್ಪ--ಇಲ್ಲ.

ತಿಮ್ಮಪ್ಪನು ಸರಳಸ್ವಭಾವದ ಏನೂ ತಿಳಿಯದ ಮನುಷ್ಯನು, ದಾಸರ ಸೇವೆ ಮಾಡಿದರೆ ತನಗೆ ಸದ್ಗತಿಯಾಗುವದೆಂದು ನಂಬಿ ಅವರನ್ನಾಶ್ರಯಿಸಿರುವವನು. ಮನೆಯ ಆಡಳಿತವನ್ನು ಮಗನಿಗೆ ಒಪ್ಪಿಸಿ ಬಂದವನಾಗಿದ್ದುದರಿಂದ ಅವನಿಗೆ ದಾಸರಸೇವೆ ಮಾಡುವದರ ವಿನಾ ಬೇರೊಂದು ಕೆಲಸವಿರಲಿಲ್ಲ. ಅವನೊಡನೆ ಸಥೆಯಿಂದ ಮಾತಾಡಿದಂತೆ ದಾಸರು ಯಾರೊಡನೆಯೂ ಆಡುತ್ತಿರಲಿಲ್ಲ.

ಒಂದು ವರ್ಷ ಕಳೆದ ನಂತರ ದಾಸರು ತಿಮ್ಮಪ್ಪನನ್ನು ಸಂಬೋಧಿಸಿ, ಇವತ್ತು ನಾವು ಪಾರಣೆಮಾಡುವೆವು ಅಡಿಗೆ ಮಾಡೆಂದರು. ತಿಮ್ಮಪ್ಪನು ಸಂತೋಷದಿಂದ 'ನಿಮ್ಮ ತಪಸ್ಸು ಮುಗಿಯಿತೇನು, ದೇವರು ಒಲಿದನೇನು,' ಎಂದು ಕೇಳಿದನು. ದಾಸರು-'ಎಲ್ಲವೂ ಆಯಿತಪ್ಪಾ ನಿನ್ನ ದಯದಿಂದ' ಎಂದರು. ಹಾಗಿದ್ದರೆ ಅಡಿಗೆ ಏನೇನುಮಾಡಲಿ, ಎಂದು ತಿಮ್ಮಪ್ಪನು ಕೇಳಿದನು. ದಾಸರು—'ಊರೊಳಗೆ ಹೋಗಿ ನಾನು ಊಟಮಾಡುವೆನೆಂದು ಹೇಳು. ಯಾರಾದರೂ ಭಿಕ್ಷಕೊಟ್ಟರೆ ದೊರೆತದ್ದನ್ನು ತಂದು ಅಡಿಗೆಮಾಡು' ಎಂದರು. ತಿಮ್ಮಪ್ಪನು 'ಇವತ್ತು ದಾಸರು ಪಾರಣೆಮಾಡುವರು; ಯಾರೇನು ಭಿಕ್ಷಕೊಡುವಿರೋ ಕೊಡಿ'ರೆಂದು ಕೂಗುತ್ತಲೇ ಹೊರಟನು. ಇಂತಹ ಸಮಯ ಬಂದೀತೇ ಎಂದು ಕಾದಿದ್ದ ಜನರು ಹೊರಲಾರದಷ್ಟು ಸಾಮಾನು ಕೊಟ್ಟು ತಿಮ್ಮಪ್ಪನನ್ನು ಕಳುಹಿಸಿದರು.

ದಾಸರ ಪಾರಣೆಯ ದಿವಸದಿಂದ ಮೊದಲುಗೊಂಡು ನಿತ್ಯ ಸಮಾರಾಧನೆಗಾರಂಭವಾಯಿತು. ದಾಸರು ಮೌನವ್ರತವನ್ನು ಮುಗಿಸಿದರಂತೆ! ಜನರೊಡನೆ ಮಾತಾಡುವರಂತೆ! ನಮ್ಮ ಇಷ್ಟಾರ್ಥಗಳನ್ನು ಪಡೆಯಲು ಇದೇ ಸಮಯ! ಎಂದು ಜನರು ದೂರದೂರದಿಂದ ಬರಲು ಪ್ರಾರಂಭವಾಯಿತು. ತಿಮ್ಮಪ್ಪನ ಸಂತೋಷಕ್ಕೆ ಮೇರೆಯಿಲ್ಲದಂತಾಯಿತು. ದಾಸರು ವಾಸಮಾಡಿದ ಸ್ಥಳದಲ್ಲಿ ಭಕ್ತ ಜನರು ಶಿಲಾಮಂಟಪವೊಂದನ್ನು ನಿರ್ಮಾಣಮಾಡಿ

ದರು. ಏಕಾಂತದಲ್ಲಿ ಕೂಡಲನುಕೂಲವಾಗಿರುವಂತೆ ಮಂಟಪದ ಮೇಲ್ಭಾಗದಲ್ಲಿ ಒಂದು ಕೋಣೆಯನ್ನೂ ಕಟ್ಟಿದರು. ತಿಮ್ಮಪ್ಪನ ವಿನಾ ಆ ಮೇಲ್ಭಾಗದ ಕೋಣೆಗೆ ಯಾರೂ ಪ್ರವೇಶಿಸುತ್ತಿರಲಿಲ್ಲ.

ದಾಸರು ಏಕಾಂತದಲ್ಲಿ ಕುಳಿತಾಗ ಮಾಡುತ್ತಿದ್ದ ಕೆಲಸವೆಂದರೆ ವಿಜಯರಾಯರಿಂದ ರಚಿತವಾದ ಕಂಕಣಾಕಾರ ಸುಳಾದಿಯಲ್ಲಿ ಉಕ್ತವಾದ ಮಾರ್ಗದಂತೆ ಚಕ್ರಾಬ್ಜವನ್ನು (ಶ್ರೀ ಚಕ್ರದಂತಹ ಯಂತ್ರ) ಮುಂದಿಟ್ಟುಕೊಂಡು ಚಿಂತನೆಮಾಡುವದು. ಜ್ಞಾನಾರ್ಜನೆಗಾಗಿ ಬಂದವರ್ಯಾರಾದರಿದ್ದರೆ ಅವರನ್ನು ಮಾತ್ರ ಮೇಲಕ್ಕೆ ಬರಮಾಡಿಕೊಂಡು ಬಿಂಬೋಪಾಸನಕ್ರಮವನ್ನುಪದೇಶಿಸುವದು. ಇಷ್ಟರ ವಿನಾ ನೂರಾರು ಜನರು ಬರುವರಲ್ಲಾ! ಅವರ ಆದರಾತಿಥ್ಯ ನಡೆಯುವದು ಹೇಗೆ! ಅಕ್ಕಿ ಬೆಲ್ಲ ತುಪ್ಪ ತೊಗರಿಗಳೆಲ್ಲಿ ಬರಬೇಕು? ಎಂಬ ಯೋಚನೆಗಳೇ ಅವರ ತಲೆಯಲ್ಲಿ ಬರಲಿಲ್ಲ. ಉಗ್ರಾಣಿ ದೀವಟಿಗ ಕಸಬಳಿಯುವವ ಪಾಚಕ ಪರಿಚಾರಕರುಗಳು ಜನ್ಮಾವಧಿ ಸೇವೆಮಾಡಲು ಭಕ್ತಿಯಿಂದ ಬಂದೊದಗಿದರು. ಧನ ಧಾನ್ಯಗಳು ಊರೂರಿಂದ ಬರುವದು ನಿತ್ಯ ವಿಧಿಯಾಗಿ ಹೋಯಿತು. ತಿರುಪತಿ ತಿಮ್ಮಪ್ಪನಿಗೆ ಹಾಕಿದ್ದ ಮುಡುಪನ್ನು ತಮಗೆ ಕೊಡುವಂತೆ ಸ್ವಪ್ನವಾಯಿತು, ಮುಡುಪು ತಂದಿದ್ದೇನೆ, ಸ್ವೀಕರಿಸಬೇಕೆಂದು ಒಪ್ಪಿಸುವರು ಬರಲಾರಂಭವಾಯಿತು. ಗದ್ವಾಲ ದಾಮೋದರದಾಸ ಸೇಟನೆಂಬ ಶ್ರೀಮಂತನು ಗದಗು ಕೊಪ್ಪಳ ಪ್ರಾಂತ್ಯಗಳಿಂದ ತಮಗೆ ಹುಂಡಿ ಬಂದಿದೆಯೆಂದು ಹಣವನ್ನು ಕಳುಹಿಸುತ್ತ ಬಂದನು. ತಿಂಗಳು ತಿಂಗಳಿಗೂ ಬರುವರು ಸಾವಿರಾರು ಜನರು, ಬರುವದು ಸಾವಿರಾರು ರೂಪಾಯಿ ಎಂಬಂತಾಯಿತು.

ಕಾಮಿತಾರ್ಥಪ್ರದಾಯಕನಾದ ಮಹಾದೇವನ ಪರಮಾನುಗ್ರಹವಾದ ಮೇಲೆ ಐಶ್ವರ್ಯಕ್ಕೆ ಕಡಮೆಯೆಲ್ಲಿ ಬಂತು? ಅವನ ಅನುಗ್ರಹವೇ ದಾಸರಿಗೆ ಬಿಂಬಾಪರೋಕ್ಷಕ್ಕೆ ಕಾರಣವಾದಮೇಲೆ ಅವರ ಮಹಿಮೆಗೆ ಕಡಮೆಯೆಲ್ಲಿಬಂತು?

ಶೇಷದಾಸರ ಸುಳಾದಿಗಳನ್ನು ನೋಡಿದರೆ ತಾವು ಅರ್ಜುನಾಂಶರೆಂದು ಹೇಳಿಕೊಂಡಿರುವ ಸ್ಪಷ್ಟೋಕ್ತಿಗಳಿವೆ. ಅರ್ಜುನನಾಗಿದ್ದಾಗ ಆದಿ

ಪಾಡಿದ ಮಾತುಗಳು ನಾಯಕನನ್ನಗಲಿದ ನಾಯಕಿಯ ಪರಿತಾಪದ ಮಾತುಗಳಂತಿವೆ. ಅವು ಮನಸ್ಸನ್ನು ಕರಗಿಸಿ ದೇಹವನ್ನು ಜರ್ಝರಿತ ಮಾಡುವ ಮಾತುಗಳಾಗಿವೆ. ಭಕ್ತಿವಂತರಿಗೀ ಮಾತುಗಳು ಆಪ್ಯಾಯನವಾಗುತ್ತವೆ. ನೀರಸ ಹೃದಯರಿಗೆ ಅರಣ್ಯರೋದನವೆನಿಸುತ್ತವೆ. ಪುರಂದರದಾಸರಾದಿಯಾದ ಯಾವ ಹರಿದಾಸರೂ ತಮ್ಮ ಸ್ವರೂಪವಿಂಥಾದ್ದೆಂದು ಹೇಳಿಕೊಳ್ಳದಿರುವದೂ, ಇವರು ಮಾತ್ರ ಹೇಳಿಕೊಂಡಿರುವದೂ, ಬಲು ನೊಂದು ಬೆಂದ ಮನಸ್ಸಿನಲ್ಲಿ ಅಡಗಿಸಿಕೊಳ್ಳಲಾರದ ಸ್ಥಿತಿಯನ್ನು ತೋರ್ಪಡಿಸುತ್ತದೆ.

ಇತಿಹಾಸ ಕಾಲದ ಭಕ್ತರ ಚರಿತ್ರೆಗಳನ್ನು ಓದಿದರೆ ಅವರು ಇಂತಿಂಥವರ ಅವತಾರವೆಂಬ ಆಪ್ತವಾಕ್ಯಗಳಿವೆ. ಆಪ್ತವಾಕ್ಯಗಳಿಗೆ ವಿಶ್ವಾಸವೇ ಕಾರಣ. ವಿಶ್ವಾಸವೇ ಪ್ರಮಾಣವೆನಿಸುವದರಿಂದ ಅಲ್ಲಿ ತರ್ಕಕ್ಕೆ ದಾರಿಯಿರುವದಿಲ್ಲ.

ಪರಮಾತ್ಮ ತತ್ವವಿಚಾರದಲ್ಲಿ ಅಂಶಿಅಂಶಗಳ ವಿಷಯ ಅಥವ ಗುಣಿ ಗುಣಗಳ ವಿಷಯದಲ್ಲಿ ಶ್ರುತಿ ಪ್ರಮಾಣ ಬಲದಿಂದ ಸಿದ್ಧಾಂತಕಾರರು ಅತ್ಯಂತ ಅಭೇದವಿದೆಯೆಂದು ನಿರ್ಣಯಿಸಿರುತ್ತಾರೆ. ಮತಾಂತರದಲ್ಲಿ ಜಾತ್ಯಾ ಸಮಾನವಾದರೂ ಪರಿಮಾಣತಃ ಭೇದವಿರುವದೆಂದು ಭಗವದವತಾರಗಳಿಗೆ ಸಹ ಪೂರ್ಣಾವತಾರ ಅಂಶಾವತಾರಗಳ ತಲೆ ಚೀಟಿಯನ್ನು ಕಟ್ಟುತ್ತಾರೆ. ಹೀಗಿರುವಲ್ಲಿ ಜೀವತತ್ವ ವಿಷಯದಲ್ಲಿ ಅಂಶಿಯಲ್ಲಿರುವ ಪೂರ್ಣ ಪ್ರಭಾವವು ಅಂಶದಲ್ಲಿರುವದೆಂದು ಯೋಚಿಸಲು ಅವಕಾಶವೇ ಇರುವದಿಲ್ಲ. ಏಕೆಂದರೆ ಪರಮಾತ್ಮ ತತ್ವದಂತೆ ಜೀವತತ್ವವು ಪೂರ್ಣವಾದುದಲ್ಲ. ಅದು ವ್ಯಾಪಕವಾದುದಲ್ಲ, ಮತ್ತು ಸ್ವತಂತ್ರ ಮೊದಲೇ ಅಲ್ಲ.

ಸೃಷ್ಟಿಯಲ್ಲಿ ಉಚ್ಚ ತರಗತಿಯ ಜೀವರನೇಕರು ಅಪಕ್ವ ಜೀವರ ದೇಹಗಳನ್ನವಲಂಬಿಸಿ ಮಹತ್ಕಾರ್ಯಗಳನ್ನೆಸಗುತ್ತಾರೆ. ಶಾಸ್ತ್ರಕಾರರು ಅಂತಹ ಶರೀರಗಳನ್ನು ಜೀವದ್ವಯಾವೇಶ ಶರೀರಗಳೆನ್ನುತ್ತಾರೆ. ಪುರಾಣ ಕಾಲದಲ್ಲಿ ಇಂತಹ ಸಂದರ್ಭಗಳು ವಿಶೇಷವಾಗಿ ಬಂದಿವೆ. ಕಂಸ ಶಿಶುಪಾಲ ಅಕ್ರೂರ ಮೊದಲಾದವರು ಇದಕ್ಕೆ ಉದಾಹರಣೆಗಳಾಗಿದ್ದಾರೆ. ಇಂತಹ ಸಂದರ್ಭಗಳು ಇತಿಹಾಸ ಕಾಲದಲ್ಲೂ ಬಹಳವಾಗಿವೆ ಎನ್ನುವದಕ್ಕೆ ಪ್ರಸಕ್ತ ಚರಿತ್ರೆಯ ಉದಾಹರಣೆ ಸಾಕಾಗಿದೆ. ದೇಹದ ಸರ್ವ ದ್ವಾರಗಳಲ್ಲೂ ಪ್ರಕಾ

ಶವುಂಟಾಗಿ ಜ್ಞಾನವು ತಾನೇತಾನಾಗಿ ತಲೆದೋರಿದರೆ ಸತ್ವಗುಣವು ಅಭಿವ್ಯಕ್ತಿಗೆ ಬಂದಿರುವದೆಂದು ಗೊತ್ತಾಗುತ್ತದೆಯೆಂಬ ಗೀತೋಕ್ತಿಯಂತೆ, ಜೀವದ್ವಯಾವೇಶವುಳ್ಳ ದೇಹದಿಂದ ನಡೆಯುವ ವ್ಯಾಪಾರಗಳಲ್ಲಿ ಪಕ್ವ ಅಪಕ್ವ ಜೀವರು ಮುಂದೆ ನಿಂತು ಮಾಡುವ ಕಾರ್ಯಗಳಾದರೂ ಗೊತ್ತಾಗುತ್ತವೆ. ಸಜಾತೀಯ ಜೀವರಾದರೆ ಒಬ್ಬೊಬ್ಬರ ಕೃತಿಗಳು ಪರಸ್ಪರ ಸಹಾಯಕವಾಗಿ ದೇಹಿಗೆ ಕೀರ್ತಿಯುಂಟಾಗುತ್ತದೆ. ವಿಜಾತೀಯ ಜೀವರಾದರೆ ಕೀರ್ತಿ ಅಪಕೀರ್ತಿಗಳಿಗೆ ಕಾರಣವಾದ ಪುಣ್ಯ ಪಾಪಗಳೆರಡೂ ನಡೆಯುತ್ತವೆ. ದೊಡ್ಡವರಲ್ಲಿ ದೋಷವೆಣಿಸುವದು ನಮ್ಮ ಕೆಲಸವಲ್ಲವೆಂದು ಅವರನ್ನು ಗುಣಪಕ್ಷಪಾತಿಗಳು ಪೂಜಿಸುತ್ತಾರೆ. ದೊಡ್ಡವರಾದ ಮಾತ್ರಕ್ಕೇ ತಪ್ಪುಮಾಡಬಹುದೇ ಎಂದು ದೋಷವೆಣಿಸುವವರು ಜರಿಯುತ್ತಾರೆ. ಅಪಕ್ವಜೀವರ ಜೊತೆಯಲ್ಲಿ ಪಕ್ವಜೀವರು ಒಂದು ದೇಹವನ್ನವಲಂಬಿಸಿ ಬರುವುದರಿಂದ ಅಪಕ್ವ ಜೀವರಿಗೆ ಹೆಚ್ಚು ಜನ್ಮಗಳೆತ್ತುವ ಕಷ್ಟ ತಪ್ಪಿ ಸಹಾಯವಾಗುತ್ತದೆ. ಯಾವದೋ ಕಾಲದ ಯಾವದೋ ಜನ್ಮದ ಗುರು ಶಿಷ್ಯಭಾವವಿದ್ದ ವಿನಾ ಇಂತಹ ಸಂದರ್ಭಗಳೊದಗುವದಿಲ್ಲ. ಶಿಷ್ಯನಲ್ಲಿ ಗುರುವಿನ ಅನುಕಂಪವಿದ್ದ ವಿನಾ ಅಪಕ್ವಜೀವಿಯೊಡನೆ ಪಕ್ವಜೀವಿಯು ಒಂದು ದೇಹವನ್ನಾಶ್ರಯಿಸಿ ಬರುವದಿಲ್ಲ. ಶೇಷದಾಸರಲ್ಲಿ ಆವಿಷ್ಟವಾಗಿರುವ ಅರ್ಜುನಾಂಶವಾದರೂ ಈ ಪರಿಯದಾಗಿರುತ್ತದೆ. ಅರ್ಜುನಾಂಶವೆಂದರೇ ಅರ್ಥಾತ್ ಇಂದ್ರಾಂಶವೆಂದಾಗುತ್ತದೆ. ಇಂದ್ರನಂಥಾ ಉಚ್ಚತರಗತಿಯ ಜೀವನು ಸ್ವಯಂ ಭೂಮಿಯಲ್ಲವತರಿಸಿದಾಗ ಅತಿ ಮಹತ್ತರ ಕಾರ್ಯಗಳು ನಡೆಯುತ್ತವೆ. ಅಂಶತ್ವೇನ ಅವತರಿಸಿದಾಗ ಪ್ರಮಾಣವನುಸರಿಸಿ ಕಾರ್ಯಗಳಾಗುತ್ತವೆ. ಹಿಂದೆ ವೈಕುಂಠದಾಸರಾಗಿದ್ದಾಗ ಅರ್ಜುನಾಂಶವಿದ್ದು ನಡೆಸಿದ ಕಾರ್ಯಗಳಿಗೂ, ಶೇಷದಾಸರಲ್ಲಿ ಅದೇ ಅಂಶವಿದ್ದು ನಡೆಸಿದ ಕಾರ್ಯಕ್ಕೂ ಬಹಳ ಅಂತರವಿದೆ. ಅದೇ ಜೀವನು ಸಂಗನಾಮದ ತಿಮ್ಮಣ್ಣಯ್ಯನವರಾಗಿದ್ದಾಗ ಅರ್ಜುನಾಂಶವಿದ್ದ ಕುರುಹು ಕಂಡು ಬಂದಿರುವದಿಲ್ಲ. ಮತ್ತೆ ಶೇಷದಾಸರಾಗಿ ಆ ಜೀವನು ಅವತರಿಸಿದಾಗ ಅರ್ಜುನಾಂಶ ಸಹಿತವಾಗಿ ಬಂದ ಕಾರಣ ಬಿಂಬಾಪರೋಕ್ಷಕ್ಕೆ ವಿಜಯದಾಸರು ಕಾರಣರಾಗಲು ಅವಕಾಶ ತಪ್ಪಿ ಅವರ ಆಜ್ಞೆಯಿಂದಲೇ ಇಂದ್ರನ ಸ್ವರೂಪ ಗುರುವಾದ ಮಹಾ

ದೇವನ ಉಪಾಸನೆ ಮಾಡಬೇಕಾಗಿ ಬಂದು ತನ್ಮೂಲಕ ದಾಸರಿಗೆ ಬಿಂಬಾ ಪರೋಕ್ಷವಾಯಿತು.

ಮೇಲ್ಕಂಡ ವಿವರಗಳ ವಿಸ್ತಾರ ವರ್ಣನೆಯು ಅಷ್ಟು ಅವಶ್ಯವಾದುದಲ್ಲ. ಅವತಾರ ತತ್ವಗಳನ್ನು ನಂಬಲು ಬೇಸರಗೊಂಡ ಜನರಿಗೆ ಇವು ವಿಪರೀತ ವಿಚಾರಗಳೆನಿಸುವವರಲ್ಲಿ ಸಂಶಯವಿಲ್ಲ. ಇದಕ್ಕೆ ದಾಸಕೂಟದ ಹೆಸರಿನಿಂದ ಕೆಲವರು ತಮ್ಮ ದೋಷಗಳನ್ನು ಜನರು ಎಣಿಸದೆ ಪೂಜಿಸಲೆಂಬ ದುರಾಸೆಯಿಂದ ಗುಂಪುಗಳನ್ನು ಮಾಡಿಕೊಂಡು ತಾವು ತಾವು ಇಂತಿಂಥವರ ಅವತಾರವೆಂದು ಪ್ರಚಾರಮಾಡಿಕೊಳ್ಳುತ್ತಿರುವದು ಕಾರಣ. ಹಾಗೂ ಮತ್ತೆ ಕೆಲವರು ಉನ್ನತ ಪದವಿಗೇರಿದವರಿಗೆಲ್ಲಾ ಅಂಶ ಆವೇಶಗಳನ್ನು ಕಟ್ಟಿ ಕರೆದಿರುವದು ಕಾರಣ.

ಈ ಪ್ರಸ್ತಾಪಗಳನ್ನಿಲ್ಲಿ ಬಿಡೋಣ! ಹೂವಿನಿಂದ ನಾರು ಸ್ವರ್ಗಕ್ಕೇರಿದಂತೆ ಅರ್ಜುನಾಂಶವಿದ್ದ ಕಾರಣ ಶೇಷದಾಸರಂಥವರಿಗೆ ಮಹಾ ರುದ್ರದೇವರು ಗುರುಗಳಾಗಿ ದೊರೆತು ಅವರಮೂಲಕಬಿಂಬಾಪರೋಕ್ಷವಾದುದಕ್ಕೆ ಸಂತೋಷಪಡೋಣ! ಆ ಮಹನೀಯರ ಚರಿತ್ರೆ ಮುಂದೇನಿದೆಯೆಂಬುದನ್ನು ಮುಂದಿನ ಪ್ರಕರಣದಲ್ಲಿ ಓದೋಣ.

---

- ೩ -

'ಆತ್ಮಾವಾರೇದ್ರಷ್ಟವ್ಯಃ ಶ್ರೋತವ್ಯೋಮಂತವ್ಯೋ ನಿದಿಧ್ಯಾಸಿತವ್ಯಃ'

ಎಂಬ ಶ್ರುತಿ ಪ್ರಮಾಣದಂತೆ ಶೇಷದಾಸರು ಶ್ರವಣ ಮನನ ನಿಧಿಧ್ಯಾಸನಾದಿ ಸಾಧನೆಗಳಿಂದ ಆತ್ಮಸಾಕ್ಷಾತ್ಕಾರ ಮಾಡಿಕೊಂಡರು. ಯಾವದೊಂದು ವಸ್ತುವನ್ನು ತಿಳಿದರೆ ಎಲ್ಲವನ್ನೂ ತಿಳಿದಂತಾಗುವದೋ ಅಂಥಾ ಬ್ರಹ್ಮವಸ್ತುವನ್ನು ತಿಳಿದರು. "ಯಲ್ಲಬ್ಧ್ವಾ ಪುಮಾನ್‌ಸಿದ್ಧೋಭವತಿ ಅಮೃತೋಭವತಿ ತೃಪ್ತೋಭವತಿ" ಎಂಬಂತೆ ಸಿದ್ಧರಾದರು ಜೀವನ್ಮು

ಕ್ತರಾದರು, ತೃಪ್ತರಾದರು. "ಯತ್ಪ್ರಾಪ್ಯ ನಕಿಂಚಿದ್ವಾಂಛತಿ ನ ಶೋಚತಿ ನ ದ್ವೇಷ್ಟಿ ನ ರಮತೇ ನೋತ್ಸಾಹೀಭವತಿ" ಎಂಬಂತೆ ಏನನ್ನೂ ಬಯಸುವದಿಲ್ಲ; ದುಃಖಿಸುವದಿಲ್ಲ; ದ್ವೇಷಿಸುವದಿಲ್ಲ; ರಮಿಸುವದಿಲ್ಲ; ಉತ್ಸಾಹಿತರಾಗುವದಿಲ್ಲ ಎಂಬ ತರಗತಿಯನ್ನು ಸೇರಿದರು. "ಯತ್ ಜ್ಞಾತ್ವಾಮತ್ತೋಭವತಿ ಸ್ತಬ್ಧೋಭವತಿ ಆತ್ಮಾರಾಮೋಭವತಿ" ಎಂಬಂತೆ ಯಾವದನ್ನು ತಿಳಿದು ಮತ್ತರೂ ಸ್ತಬ್ಧರೂ ಆತ್ಮರಾಮರೂ ಆದರು.

ದಾಸರ ಸಾಧನೆಗಳೂ ಸಿದ್ಧಿ ಪ್ರಸಿದ್ಧಿಗಳೂ ಏನಾದರೂ ಅವರ ಪತ್ನೀ ಪುತ್ರರಿಗೆ ಮಾತ್ರ ಮನಶ್ಶಾಂತಿಯನ್ನುಂಟುಮಾಡಲಿಲ್ಲ. ಮತ್ತೆ ಪ್ರಯತ್ನಮಾಡಿ ದಾಸರನ್ನು ದರೂರಿಗೆ ಕರೆದುಕೊಂಡು ಹೋಗಬೇಕೆಂದವರು ಮೊದಲಕಲ್ಲಿಗೆ ಬಂದರು. ಸಮೀಪಕ್ಕೆ ಹೋಗಲು ಧೈರ್ಯಸಾಲದೆ ತಿಮ್ಮಪ್ಪನ ಮುಖೇನ ತಾವು ದರ್ಶನಾಭಿಲಾಷಿಗಳಾಗಿ ಬಂದಿರುವ ಸಂಗತಿಯನ್ನು ವಿಜ್ಞಾಪಿಸಿದರು. ದಾಸರು - ಪತ್ನೀಪುತ್ರರನ್ನು ನೋಡದಿರಲು ನಾನೇನು ಸನ್ಯಾಸಿಯೇ? ಅವರು ಅವಶ್ಯ ಬರಲಿ, ಇಲ್ಲೇ ಇರಲಿ, ದೇಹ ಬಾಂಧವರಾದ್ದರಿಂದ ಸೇವೆಮಾಡಲಿ, ಕರೆಯಿರೆಂದರು. ತಿಮ್ಮಪ್ಪನನ್ನು ಮುಂದುಮಾಡಿಕೊಂಡು ಬಂದವರು ದರೂರಿಗೆ ಬಂದಿರಬೇಕೆಂಬ ತಮ್ಮ ಹಾಡನ್ನು ಹಾಡಿದರು. ನಾವಿದ್ದ ಬಳಿಯಲ್ಲಿರುವದು ನಿಮ್ಮ ಮುಖ್ಯ ಬಯಕೆಯಾದ್ದರಿಂದ ನೀವು ಇಲ್ಲೇ ಇದ್ದರಾಯಿತೆಂದೂ ಸ್ಥಳದ ಅಭಿಮಾನ ಹೊಲಮನೆಗಳ ಅಭಿಮಾನಗಳನ್ನು ಬಿಟ್ಟರಾಯಿತೆಂದೂ ಅವರನ್ನು ಸಮಾಧಾನಗೊಳಿಸಿ ನಿಲ್ಲಿಸಿಕೊಂಡರು.

ಈ ಕಾಲದಲ್ಲಿ ದಿವಾನ ಗೋವಿಂದರಾಯನೂ ಖಜಾನೆದಾರ ಶ್ರೀನಿವಾಸರಾಯನೂ ಇನ್ನೂ ಭೀಮಣ್ಣ ಮೊದಲಾದ ಗೃಹಸ್ಥರುಗಳೂ ಆಗಾಗ ದಾಸರ ಬಳಿಗೆ ಬಂದು ಹೋಗುತ್ತಾ ಅವರ ಅನುಗ್ರಹಕ್ಕೆ ಸಂಪೂರ್ಣಪಾತ್ರರಾದರು. ಸೋಮಭೂಪಾಲನು ದುಷ್ಟಸೇವಕರ ಪಿತೂರಿಯಿಂದ ಮಡಿದ ಕಾರಣ ವೆಂಕಟಲಕ್ಷ್ಮಮ್ಮ ರಾಣಿಯು ಸ್ವಯಂ ರಾಜ್ಯಾಧಿಕಾರ ವಹಿಸಿ ಗದ್ವಾಲ ಸಂಸ್ಥಾನ ಪಾಲಕಳಾದಳು. ಈಕೆಯ ಪ್ರಭುತ್ವವೆಂದರೆ ದೇವಾಲಯಗಳ ಜೀರ್ಣೋದ್ಧಾರ, ಸರ್ವದಾ ಸತ್ಕಥಾಶ್ರವಣ, ಸಜ್ಜನರ ಸೇವಾದಿಗಳಲ್ಲಿ

ಕಳೆಯಿತು. ಮಹಾರಾಣಿಯು ಶೇಷದಾಸರಲ್ಲಿ ವಿಶೇಷ ಭಕ್ತಿ ಮಾಡುತ್ತಾ ಸಮಯ ದೊರೆತಾಗ ದಾಸರ ದರ್ಶನ ಮಾಡುತ್ತಿದ್ದಳೆಂದು ಮತ್ತೆ ಹೇಳ ಬೇಕಾದುದಿಲ್ಲ.

ಹೀಗಿರಲು ಕಾಲಾಂತರದಲ್ಲಿ ಅವ್ವಲ್ ತಾಲ್ಲೂಕುದಾರಿ ಮತ್ತು ಸುಭಾ ದಾರಿ (Governor) ಗಳನ್ನು ಮಾಡಿ ಮೊಖ್ತರ್‌ಜಂಗ್ ಎಂಬ ಪ್ರಸಿದ್ಧ ನಾಮದಿಂದ ಕರೆಸಿಕೊಂಡ, ಆ ಕಾಲದಲ್ಲಿ ರಾಯಚೂರಿನಲ್ಲಿ ದುಯಂತಾಲ್ಲೂ ಕುದಾರ (Assistant Commissioner) ನಾಗಿದ್ದ ಮುಸಲ್ಮಾನ್ ಅಧಿ ಕಾರಿಯೊಬ್ಬನು ಖಜಾನೆದಾರ ಶ್ರೀನಿವಾಸರಾಯನಿಂದ ಪ್ರೇರಿತನಾಗಿ ಅತ ನನ್ನೂ ಜೊತೆಯಲ್ಲಿ ಕರೆದುಕೊಂಡು ದಾಸರ ದರ್ಶನಕ್ಕೆ ಬಂದನು. ಅಧಿ ಕಾರಿಗೆ ಬಾಲ್ಯದಲ್ಲೇ ರಾಜಾನುಗ್ರಹವಾಗಿ ದೊಡ್ಡ ಪದವಿ ಪ್ರಾಪ್ತವಾಗಿದ್ದ ಕಾರಣ ದೊಡ್ಡ ಮನೆತನದ ಸುಂದರಿಯೊಡನೆ ವಿವಾಹವಾಗಿತ್ತು. ಬಹಿರಂಗ ಭಾಗ್ಯ ಹೇಗಿದ್ದರೂ ಅಧಿಕಾರಿಯು ಬಲು ಖಿನ್ನನಾಗಿದ್ದನು. ವಿವಾಹವಾದ ದಿನದಿಂದ ಒಂದು ದಿನವಾದರೂ ಹೆಂಡತಿಯೊಡನೆ ಏಕಾಂತದಲ್ಲಿ ಕುಳಿತು ಅವನು ಮಾತಾಡಿರಲಿಲ್ಲ. ಸ್ವಯಂ ದುಶ್ಚರಿತ್ರನಾಗಿದ್ದನೆನ್ನಲು ನರ್ತಕಿಯರ ಗಾನನರ್ತನಗಳಿಗೆ ಸಹ ಅವನು ಹೋಗುತ್ತಿರಲಿಲ್ಲ. ಹೆಂಡತಿಯು ಸಚ್ಚ ರಿತ್ರಳೆಂಬ ವಿಷಯದಲ್ಲಿ ಅವನಿಗೆ ಲೇಶವಾದರೂ ಸಂಶಯವಿರಲಿಲ್ಲ. ಶ್ರೀನಿ ವಾಸರಾಯನೊಬ್ಬನ ವಿನಾ ಯಾರಲ್ಲೂ ಅವನು ತನ್ನ ಅಂತರ್ದುಃಖಗಳನ್ನು ಹೇಳಿಕೊಂಡಿರಲಿಲ್ಲ. ದೇವರು ನನ್ನನ್ನೇಕೆ ಸೃಷ್ಟಿ ಮಾಡಿದನು? ನಾನೇಕೆ ವಿವಾಹ ಮಾಡಿಕೊಂಡೆನೆಂಬುದರ ವಿನಾ ಅನ್ಯಯೋಚನೆಗಳು ಅವನ ಮನ ಸ್ಸಿನಲ್ಲಿರಲಿಲ್ಲ. ವೈದ್ಯರಿಂದ ವಾಸಿಯಾಗುವ ವ್ಯಾಧಿಯು ಅವನದಾಗಿರ ಲಿಲ್ಲ. ಇಂಥವನು ದಾಸರ ಬಳಿಗೆ ಬಂದು ಏನು ಹೇಳಿಕೊಳ್ಳಬೇಕು? ಶ್ರೀನಿ ವಾಸರಾಯನಾದರೂ ಅಧಿಕಾರಿಯ ಮನೋರೋಗವನ್ನು ಏನೆಂದು ಹೇಳ ಬೇಕು?

ದಾಸರ ದರ್ಶನಕ್ಕೆ ತಾಲ್ಲೂಕುದಾರನು ಬಂದನೆಂದ ಕೂಡಲೇ ಎಲ್ಲಿದ್ದ ವರು ಅಲ್ಲಲ್ಲೇ ನಿಂತುಬಿಟ್ಟರು. ದಾಸರ ಏಕಾಂತ ಸ್ಥಳದಲ್ಲಿ ಮೂವರ ವಿನಾ ಮತ್ತೊಬ್ಬರ ಪ್ರವೇಶವಾಗಲಿಲ್ಲ. ತಾಲ್ಲೂಕುದಾರನು ಖುರ್ನಿಷ್ ಮಾಡಿ ಮುಸಲ್ಮಾನೀ ಪದ್ಧತಿಯಂತೆ ಕುಳಿತನು. ರಾಯನು ನಮಸ್ಕಾರ

ಮಾಡಿ ಪದ್ಮಾಸನದಲ್ಲಿ ಕುಳಿತನು. ದಾಸರು ವ್ಯಾಘ್ರಾಸನದಲ್ಲಿ ಕುಳಿತು ಉಭಯರಿಗೂ ಆಶೀರ್ವಾದ ಮಾಡಿ ಕುಶಲಪ್ರಶ್ನೆ ಮಾಡಿದರು ಒಂದೇ ಒಂದು-ತಮ್ಮ ಅನುಗ್ರದಿಂದ ಕ್ಷೇಮವೆಂಬ ವಾಕ್ಯದ ವಿನಾ ಮುಂದೆ ಉಭಯರ ಬಾಯಿಂದಲೂ ಮಾತು ಹೊರಡಲಿಲ್ಲ. ಸ್ವಲ್ಪ ಹೊತ್ತಿನಮೇಲೆ—

ದಾಸರು—ತಾಲ್ಲೂಕ್‌ದಾರ್ ಸಾಹೇಬರು ಬಲು ಖಿನ್ನರಾಗಿರುವಂತೆ ಕಾಣುತ್ತದೆ. ಈ ಜನ್ಮದ ಪಾಪ ಕಾರಣವಲ್ಲ. ಮಾತಾ ಪಿತೃಗಳು ಕಾರಣರಲ್ಲ. ಜನ್ಮಾಂತರದಲ್ಲಿ ಸೈನ್ಯಾಧಿಕಾರದಲ್ಲಿದ್ದು, ಬಲು ಪ್ರಾಣಿಗಳ (ಎತ್ತು ಕುದುರೆಗಳು) ಪುಂಸ್ತ್ವಹರಣ (Castration) ಮಾಡಿದ ಪಾಪವಿದು. ಏನು ಮಾಡ್ಯಾರು? ಐಶ್ವರ್ಯವಿದೆ! ಅಧಿಕಾರವಿದೆ! ರೂಪವತಿಯಾದ ಹೆಂಡತಿ ಇದ್ದಾಳೆ! ಅವಳನ್ನು ಕಣ್ಣೆತ್ತಿ ನೋಡಲು ಮಾತ್ರ ಲಜ್ಜೆಯಾಗುತ್ತಿದೆ. ಅಲ್ಲವೇ ಶ್ರೀನಿವಾಸರಾಯ?

ರಾಯ—(ದಂಗು ಬಡಿದಂತಾಗಿ) ಅತ್ತಿತ್ತ ನೋಡುತ್ತಾ ಹೌದು ಹೌದು! ದಾಸರಾಯರಿಗೆ ತಿಳಿಯದ ಸಂಗತಿಯಿಲ್ಲ. ಅನುಗ್ರಹ ಮಾಡಬೇಕು.

ದಾಸರು—ತಾಲ್ಲೂಕ್‌ದಾರ್ ಸಾಹೇಬರೇನೆನ್ನುವರು?

ತಾಲ್ಲೂಕ್‌ದಾರ—(ಉರ್ದುವಿನಲ್ಲಿ) ಶ್ರೀನಿವಾಸರಾವ್ ಸಾಹೇಬರು ಹೇಳಿದ್ದು ಸತ್ಯ. ನನ್ನ ಮೇಲೆ ಅನುಗ್ರಹವಾಗಬೇಕು.

ದಾಸರು—ದೇವರ ಅನುಗ್ರಹವಾಗುವದು.

ತಾಲ್ಲೂಕ್‌ದಾರ ಸಾಹೇಬನು ಖುರ್ನಿಷ್‌ಮಾಡಿ ದಾಸರ ಆಜ್ಞೆಯನ್ನು ಪಡೆದು ತನಗಾಗಿ ಸಿದ್ಧಪಡಿಸಿದ್ದ ಬಿಡಾರದಲ್ಲಿ ವಿಶ್ರಮಿಸಿಕೊಂಡನು. ದಾಸರ ಭೋಜನಾನಂತರ ಕಳುಹಿಸಿಕೊಟ್ಟ ಪ್ರಸಾದವನ್ನು ಭುಜಿಸಿದನು. ದಾಸರು ಕಳುಹಿಸಿಕೊಟ್ಟ ಮಂತ್ರಪೂತವಾದ ತೀರ್ಥವನ್ನು ನಿಯತವಾಗಿ ಒಂದು ಸಪ್ತಕ ಸೇವನೆಮಾಡಿದನು. ಇಷ್ಟು ಮಾತ್ರದಿಂದ ಅಧಿಕಾರಿಯ ಮನೋವ್ಯಥೆಯು ಸ್ವಲ್ಪ ಕಾಲದೊಳಗೆ ಪರಿಹಾರವಾಯಿತು. ಕಾಲಾಂತರದಲ್ಲಿ ಪುತ್ರೋತ್ಸವವಾಯಿತು. ಅಂದು ಮೊದಲಾಗಿ ತಾಲ್ಲೂಕುದಾರನು ಪ್ರತಿತಿಂಗಳಲ್ಲಿ ತನ್ನ ಸೇವೆಯೆಂದು

ಇನ್ನೂರು ರೂಪಾಯಿಗಳನ್ನು ದಾಸರ ಸನ್ನಿಧಿಗೆ ಕಳುಹಿಸುತ್ತ ಬಂದನು. ದಾಸರ ಜೀವಿತಕಾಲದಲ್ಲಿ ಒಂದು ಸಲವಾದರೂ ತಾಲ್ಲೂಕುದಾರನಿಂದ ಬರುವ ಸೇವೆಯು ತಪ್ಪಲಿಲ್ಲ.

## ದೇಶಪರ್ಯಟನ.

ಪುರಂದರ ದಾಸರಾದಿಯಾಗಿ ಎಲ್ಲ ಪ್ರಸಿದ್ಧ ದಾಸರುಗಳು ದೇಶಪರ್ಯಟನ ಮಾಡಿದಂತೆ ಶೇಷದಾಸರು ಪರ್ಯಟನಮಾಡಲಿಲ್ಲ. ಭಕ್ತಜನರ ಕೋರಿಕೆಯನ್ನು ತಿರಸ್ಕರಿಸಲಾರದೆ ಒಮ್ಮೆ ಗದ್ವಾಲಮಾರ್ಗವಾಗಿ ಹೊರಟು ರಾಯಚೂರು ಮಾನವಿಕೊಪ್ಪಳಗಳ ಪರ್ಯಂತ ಹೋಗಿ ತಿರುಗಿ ಕಂಪಲಿ ನವಬೃಂದಾವನ ಚಿಪ್ಪಗಿರಿ ಆದವಾನಿಗಳ ಮೇಲೆ ಮೊದಲಕಲ್ಲಿಗೇ ಬಂದು ಸೇರಿದರು. ಭೋಜನಕ್ಕೆ ಪೂರ್ವದಲ್ಲಿ ಬಂದ ಅತಿಥಿಗಳಿಗೆ ತೀರ್ಥಕೊಟ್ಟು ಸ್ತ್ರೀಯರು ಪುರುಷರು ಮಕ್ಕಳು ಎಂಬ ಭೇದವಿಲ್ಲದೆ ಎಲ್ಲರ ಪಾದಗಳಿಗೆ ನಮಸ್ಕಾರಮಾಡಿ ಅಲ್ಲಲ್ಲಿ ಭಗವದ್ರೂಪಚಿಂತನೆ ಮಾಡುವದು ದಾಸರ ಪದ್ಧತಿಯಾಗಿತ್ತು. ಪಕ್ವಜೀವಿಗಳು ಯಾರಾದರಿದ್ದರೆ ಅವರ ಪಾದಸ್ಪರ್ಶಮಾಡಿ ಚಿಂತನೆಗೆ ನಿಂತರೆ ಹೆಚ್ಚು ಕಾಲ ಕಳೆದು ಹೋಗುತ್ತಿತ್ತು. ಅಂಥವರನ್ನು ಜನರು ಬಹುಗೌರವದಿಂದ ಕಾಣುತ್ತಿದ್ದರು. ಅಂತಹ ಅನೇಕರು--ಸ್ವಾಮಿ, ತಾವು ದೊಡ್ಡವರು, ನಾನು ಅಲ್ಪ, ನನ್ನಂಥವನ ಪಾದ ಮುಟ್ಟಿದರೆ ನನ್ನ ಗತಿಯೇನೆಂದು ಭಯಗ್ರಸ್ತರಾಗಿ ಪ್ರಶ್ನೆಮಾಡುತ್ತಿದ್ದರು. ದಾಸರು,—ನೀವು ಅಲ್ಪರಾದರೆ ನಿಮ್ಮಲ್ಲಿರುವವನು ಪೂರ್ಣನಿದ್ದಾನೆ; ನನ್ನ ಪೂಜೆಗೆ ನಿಮ್ಮಂಥವರು ಉತ್ತಮಾಧಿಷ್ಠಾನಗಳು ಎಂದು ಉತ್ತರಕೊಡುತ್ತಿದ್ದರು. ದೊಡ್ಡ ದೊಡ್ಡ ದಿವಸಗಳಲ್ಲಿ ದಕ್ಷಿಣೆಕೊಡುವಾಗ ಸ್ತ್ರೀಯರು ಪುರುಷರು ಎಂಬ ಭೇದವಿಲ್ಲದೆ, ಹುಡುಗರು ಮಕ್ಕಳ ಭೇದವಿಲ್ಲದೆ, ವೈದಿಕಲೌಕಿಕರ ಭೇದವಿಲ್ಲದೆ, ಸರ್ವರಿಗೂ ಸಮವಾಗಿ ಕೊಡುತ್ತಿದ್ದರು.

[ಈ ವಿಷಯದಲ್ಲಿ ಲೇಖಕನ ಪೂಜ್ಯ ತಂದೆಯವರ ಸ್ವಾನುಭವದ ಮಾತನ್ನು ಬರೆದರೆ ಅಪ್ರಾಸಂಗಿಕವಾಗುವದಿಲ್ಲವಾದ ಕಾರಣ ಕೇಳಿದಂತೆ ಅದೇ ಮಾತುಗಳನ್ನು ಬರೆಯುತ್ತೇನೆ]

ಲೇಖಕನ ತಂದೆಯವರು (ಶ್ರೀ. ವೆಂಕಟಸುಬ್ಬದಾಸರು) ಸ್ವಭಾನು ಸಂವತ್ಸರದಲ್ಲಿ ತಮ್ಮ ಕೀರ್ತನ ಸಂಚಾರವನ್ನು ಹೈದರಾಬಾದು ಕರ್ನಾಟಕ ದಲ್ಲಿ ಮಾಡುತ್ತಿದ್ದರಂತೆ! ಮೊದಲುಕಲ್ಲು ದಾಸರಾಯರ ಖ್ಯಾತಿಯನ್ನು ಕೇಳಿ ಅವರ ದರ್ಶನ ಮಾಡಬೇಕೆಂದು ಮೊದಲಕಲ್ಲಿಗೆ ಹೋದರಂತೆ.! ಆಗ ಗದ್ವಾಲಿಯನ್ನಾಳುತ್ತಿದ್ದ ರಾಮಭೂಪಾಲರು (ವೆಂಕಟ ಲಕ್ಷಮ್ಮಾಂಬೆಯ ನಂತರ ಆಳಿದವರು) ಲೇಖಕನ ತಂದೆಯನ್ನು ಬಹುಪ್ರಕಾರ ಸನ್ಮಾನಿಸಿದ ವಾರ್ತೆಯು ಆ ಪ್ರಾಂತ್ಯದಲ್ಲಿ ಬಹುಮುಖದಿಂದ ದಾಸರಾಯರಲ್ಲಿ ಶೃತವಾ ಗಿತ್ತಂತೆ! ಮಿತ ಸ್ವಭಾವದ ತಂದೆಯವರು ಎಲ್ಲೋ ಮಿಂದು ಎಲ್ಲೋ ಒಂದು ಕೊನೆಯಲ್ಲಿ ಪ್ರಸಾದಾಭಿಲಾಷಿಗಳಾಗಿ ನಿಂತಿದ್ದರಂತೆ! ದಾಸರಾ ಯರು ತಮ್ಮ ನಮಸ್ಕಾರವನ್ನು ಪದ್ಧತಿಯಂತೆ ನೆರೆವೇರಿಸಿಕೊಂಡು ಕಡೆ ಯಲ್ಲಿ ನಿಂತಿದ್ದ ತಂದೆಯವರ ಬಳಿಗೆ ಬಂದು ಯಾರೊಡನೆಯೂ ಮಾತನಾ ಡದಿದ್ದವರು—ಏನು ಸುಬ್ಬಣ್ಣಾ! ಬಂದೆಯಾ, ಕ್ಷೇಮವೇ, ಎಂದು ಕೇಳಿದ ರಂತೆ! ತಂದೆಯವರು ಅಷ್ಟುಮಾತ್ರಕ್ಕೆ ಪುಳುಕಿತರಾಗಿ ಚರಣಸೇವೆಗೆ ಬಂದೆನೆಂದರಂತೆ! ದಾಸರಾಯರು ತಂದೆಯವರ ಪಾದವನ್ನು ಸ್ಪರ್ಶಮಾಡಿ ಕಣ್ಣುಮುಚ್ಚಿ ನಿಂತವರು ಅರ್ಧಘಂಟೆಯಾದರೂ ಬಿಡಲಿಲ್ಲವಂತೆ! ಅನಂ ತರ, ತಂದೆಯವರು ಹೀಗೆ ಮಾಡಿದರೆ ನನ್ನ ಗತಿ ಏನೆಂದರಂತೆ! ದಾಸ ರಾಯರು—'ಸುಬ್ಬಣ್ಣಾ, ಈವತ್ತಿನ ಚಿಂತನೆಯಂಥಾ ಭಗವಚ್ಚಿಂತನೆಯು ಬಲುಕಾಲಕ್ಕೊಮ್ಮೆ ದೊರೆಯುವದೆಂದರಂತೆ! ಎಲ್ಲೋ ಮೂಲೆಯಲ್ಲಿ ಕುಳಿತಿದ್ದವರನ್ನು ಪಕ್ಕದಲ್ಲಿ ಕುಳ್ಳಿರಿಸಿಕೊಂಡು ಭೋಜನ ಮಾಡಿದರಂತೆ! ಅನಂತರ ಎರಡು ಮೂರು ತಿಂಗಳಾದರೂ ಅವರನ್ನು ಬಿಡಲಿಲ್ಲವಂತೆ. ಅನಂ ತರವೇ ಪಾರ್ಥಿವ ಸಂತ್ಸರದಲ್ಲಿ ದಾಸರಾಯರು ನಿನಗೊಬ್ಬ ಹರಿದಾಸ ಮಗ ನಾಗುವನೆಂದರಂತೆ!

ಲೇಖಕನ ತಂದೆಯವರು ಬೇಲೂರನ್ನು ತಮ್ಮ ವಾಸಸ್ಥಳವಾಗಿ ಮಾಡಿಕೊಂಡರು. ಲೇಖಕನು ಪಾರ್ಥಿವ ಸಂ|| ಮಾರ್ಗಶೀರ್ಷ ಬಹುಳೈ ಕಾದಶಿಯ ದಿನ ಜನಿಸಿದನು. ಸಂಕೋಚದಿಂದ ಬರೆಯಬೇಕಾಗಿರುವ ಮಾತೆಂದರೆ, ಅಂಥಾ ದೊಡ್ಡವರ ಆಶ್ವೀರ್ವಾದಕ್ಕೂ ಆಶೀರ್ವಾದ ಪಡೆದವರ

ಯೋಗ್ಯತೆಗೂ, ತಕ್ಕವನು ಮಾತ್ರ ಆಗಲಿಲ್ಲ. ಹರಿದಾಸ ಭಾವವೆಂಬು ವುದು ಅವನಲ್ಲಿ ಇನ್ನೂ ಬರಲಿಲ್ಲ.

## ಬಹಿಷ್ಕಾರ

ಶೇಷದಾಸರ ಜೀವಿತಕಾಲದಲ್ಲಿ ಶ್ರೀಉತ್ತರಾದೀಮಠದ ಪೀಠದಲ್ಲಿ ಸತ್ಯಸಂಕಲ್ಪರು, ಸತ್ಯಸಂತುಷ್ಟರು, ಸತ್ಯಪರಾಯಣರು, ಸತ್ಯಕಾಮರು, ಸತ್ಯೇಷ್ಟರು, ಸತ್ಯಪರಾಕ್ರಮರು, ಸತ್ಯವೀರರು, ಎಂಬ ಹೆಸರಿನ ಏಳು ಜನ ಯತಿಗಳು ಮಠರಾಜ್ಯಭಾರಮಾಡಿದರು. ಸತ್ಯಕಾಮರು ಪೀಠವನ್ನಲಂ ಕರಿಸಿದ್ದ ಕಾಲದಲ್ಲಿ ದಾಸರಾಯರ ಖ್ಯಾತಿಯು ದೇಶದಲ್ಲೆಲ್ಲಾ ವ್ಯಾಪಿ ಸಿತ್ತು. ಇಷ್ಟಾದರೂ ದಾಸರನ್ನು ಕಂಡರೆ ಅಸೂಯೆಪಡದವರಿರಲಿಲ್ಲ. ಗದ್ವಾಲಿಯ ಮಠಾಧಿಕಾರಿ ಮೊದಲಾದವರು —'ಹಳ್ಳಿಯ ಶಾನುಭೋಗನ ಮೆರೆತವಿದೇನು? ಶಾಸ್ತ್ರವೋದಲಿಲ್ಲ, ನೇಮನಿಷ್ಠೆಗಳಿಲ್ಲ, ವೈದಿಕವೊದಲೇ ಅಲ್ಲ, ಇವಗೆ ಅಪರೋಕ್ಷವೆಂದರೇನು? ಇವನ ತಪಸ್ಸು ಏತರದು? ಇವನನ್ನು ಕಟ್ಟಿಕೊಂಡು ಜನರು ಮಾಡುತ್ತಿರುವ ಬೊಬ್ಬಾಟವಿದೇನು? ದಾಸನ ಪೂಜೆಗೆ ನಗಾರಿನೌಬತ್ತುಗಳೇಕೆ? ಕೂತು ತಿರುಗಲು ಮೇನೆಪಲ್ಲಕ್ಕಿಗಳೇಕೆ?' ಎಂದು ಮೊದಲಾಗಿ ನಿಂದಿಸುತ್ತಿದ್ದರು. ಸಮಯಸಿಕ್ಕಿದಾಗ ದಾಸರಿಗೆ ಅವಮಾನ ಮಾಡಬೇಕೆಂದು ಕಾಯುತ್ತಿದ್ದರು. ತಕ್ಕಂತೆ ಅದೇ ಕಾಲದಲ್ಲಿ ಶ್ರೀಉತ್ತ ರಾದಿ ಮಠಾಧಿಪರಾದ ಸತ್ಯಕಾಮರು ಗದ್ವಾಲಿಗೆ ಬಂದಿಳಿದರು. ಕೇಳು ವದೇನು, ಈ ಗೃಹಸ್ಥ ಹಾಗೆ ಆ ಗೃಹಸ್ಥ ಹೀಗೆ, ಇವನು ಮಠದ ಮರ್ಯಾ ದೆಯನ್ನು ನಾವು ಹೇಳದಂತೆ ನಡೆಸಲಿಲ್ಲ; ಅವನ ಬಳಿ ಬಹಳ ಹಣವಿರುವಂತೆ ಕಾಣುತ್ತದೆ; ಇವರದೆಲ್ಲಾ ವಿಚಾರವಾಗಬೇಕು; ಎಂದು ಸರ್ವಾಧಿಕಾರಿಯ ಮುಂದೆ ಮಠಾಧಿಕಾರಿಯ ದೂರು ಪ್ರಾರಂಭವಾಯಿತು. ಹೊಸ ಊರಿಗೆ ಕಾಲಿಟ್ಟಕೂಡಲೇ ಹುಬ್ಬುಗಂಟಿಕ್ಕಿ ಕುಳಿತು, ಅವನಿಗೆ ಬಹಿಷ್ಕಾರಹಾಕಿಸು ತ್ತೇನೆ, ಇವನನ್ನು ಮಠದಿಂದ ದಬ್ಬಿಸಿಬಿಡುತ್ತೇನೆ, ಅವನಿಷ್ಟು ರೂಪಾಯಿ ಕೊಟ್ಟರೇ ಮುದ್ರಾಧಾರಣೆ ಮಾಡಿಸುತ್ತೇನೆ; ಎಂದು ಅಧಿಕಾರದ ದರ್ಪ ತೋರಿಸುವ ಸರ್ವಾಧಿಕಾರಿಯನ್ನು ಕೇಳಬೇಕೇ? ಇಷ್ಟು ಮಾತ್ರ ಮಠಾಧಿ ಕಾರಿಯ ಮಾತು ಕಿವಿಗೆ ಬಿದ್ದೊಡನೆ ಜ್ವಾಲಾಮುಖಿಯಂತೆ ಕಿಡಿಗಳನ್ನು

ಕಾರುತ್ತಾ ಕುಳಿತನು. ಮಠಾಧಿಕಾರಿಯು ತಾಳಮೇಳ ಸರಿಯಾಯಿತೆಂದು
ದಾಸರ ಮೇಲೆ ಇಲ್ಲದ ಆರೋಪಗಳಿಗಾರಂಭಿಸಿದನು. ದಾಸರನ್ನು ಮಠಕ್ಕೆ
ಕರೆಕಳುಹಿಸಿ ವಿಚಾರಣೆಮಾಡಬೇಕೆಂದನು. ಸರ್ವಾಧಿಕಾರಿಯು ಹಿಂದು
ಮುಂದಿನ ವಿಚಾರ ತಿಳಿಯದೆ, ಯಾರನ್ನು ಹೇಗೆ ನೋಡಬೇಕೆಂಬುದನ್ನು
ಮರೆತು ನಿಮ್ಮ ಮೇಲೆ ಅನೇಕ ಅಪರಾಧಗಳ ಆರೋಪವಿದೆ, ಕೂಡಲೇ
ಸಂಸ್ಥಾನಕ್ಕೆ ಬಂದು ನಿಮ್ಮ ಹೇಳಿಕೆಯನ್ನು ಕೊಡಬೇಕು. ಹಾಗೆ ಬರದೆ
ಆಜ್ಞಾಭಂಗ ಮಾಡಿದರೆ ನಿಮಗೆ ಬಹಿಷ್ಕಾರ ಕೊಡಲಾಗುತ್ತದೆಂಬ ಅಭಿ
ಪ್ರಾಯದ ಆಜ್ಞಾಪತ್ರವನ್ನು ಬರೆದು ಕಳುಹಿಸಿದನು. ಆ ಕಾಲದಲ್ಲಿ
ದಾಸರು ಊರೊಳಗಿನ ವೆಂಕಟೇಶ ದೇವಾಲಯವನ್ನು ಬಿಟ್ಟು ಬೆಟ್ಟದಲ್ಲಿ
ವಾಸ ಮಾಡುತ್ತಾ ಐದು ಉತ್ತತ್ತಿಗಳನ್ನು ಮಾತ್ರ ಆಹಾರ ಮಾಡಿಕೊಂಡು
ಅನುಷ್ಠಾನಪರರಾಗಿದ್ದರು. ಹೆಚ್ಚಿಗೆ ಜನಗಳಿಗೆ ಅಲ್ಲಿ ಪ್ರವೇಶವಿರಲಿಲ್ಲ
ಬಲವತ್ತರ ಕಾರಣವಿದ್ದ ವಿನಾ ಯಾರೊಡನೆಯೂ ಅವರು ಮಾತಾಡುತ್ತಿರ
ಲಿಲ್ಲ. ಮಠದ ಸೇವಕನು ಆಜ್ಞಾಪತ್ರವನ್ನು ತಂದಿದ್ದ ಕಾರಣ ಅವನಿಗೆ
ಮಾತ್ರ ದಾಸರನ್ನು ಕಾಣಲು ಅವಕಾಶ ದೊರೆಯಿತು. ಪತ್ರ ತಂದವ
ನನ್ನು ದಾಸರು ಸನ್ಮಾನಿಸಿದರು. ಪ್ರತಿಯಾಗಿ ತಾವು ಸಂಕಲ್ಪಮಾಡಿ
ಅನುಷ್ಠಾನದಲ್ಲಿ ಕುಳಿತಿರುವ ಕಾರಣ ಬೆಟ್ಟವನ್ನು ಬಿಟ್ಟುಬರಲು ಅವಕಾಶ
ವಿಲ್ಲವೆಂತಲೂ, ಗುರುಗಳೇ ಶಿಷ್ಯಾನುಗ್ರಹಕ್ಕಾಗಿ ದೇಶಸಂಚಾರ ಮಾಡುತ್ತಿ
ರುವ ಕಾರಣ ಪರಮಾನುಗ್ರಹ ಮಾಡಿ ಶ್ರೀ ಕ್ಷೇತ್ರಕ್ಕೆ ದಯಮಾಡಿ ಶಿಷ್ಯ
ನಸೇವೆಯನ್ನು ಸ್ವೀಕರಿಸಬೇಕೆಂತಲೂ, ವಿಜ್ಞಾಪನಾಪತ್ರವನ್ನು ಕಳುಹಿ
ಸಿದರು. ದಾಸರ ಪತ್ರವನ್ನು ನೋಡಿ ಸರ್ವಾಧಿಕಾರಿಯು ಉಗ್ರರೂಪ
ತಾಳಿದನು. ಸ್ವಾಮಿಗಳಿಗೆ ಸಿಟ್ಟುಬರುವಂತೆಮಾಡಿ ದಾಸರಿಗೆ ಜನ್ಮ ಬಹಿ
ಷ್ಕಾರ ಪತ್ರಿಕೆಯನ್ನು ಕಳುಹಿಸಿದನು. ಪತ್ರ ತಂದವನಿಗೆ ದಾಸರು ಶಹಲು
ಜೋಡಿಯನ್ನು ಹೊದಿಸಿ ಸಂಸ್ಥಾನದಿಂದ ಬಂದದ್ದೆಲ್ಲವೂ ಪರಮಾನುಗ್ರಹ
ವೆಂದರು. ತಮ್ಮ ನಿಮಿತ್ತ ಮೊದಲಕಲ್ಲಿಗೆ ಬರುವ ಜನರನ್ನು ಕುರಿತು—
'ನಿತ್ಯ ಮೊದಲಕಲ್ಲಿಗೆ ಬರುವ ನೂರಾರು ಜನರಿಗೆ ಅನ್ನದಾನ ಮಾಡುವುದು
ದಾಸನಿಗೆ ದುಬಾರಿಯಾದೀತೆಂದು ಶ್ರೀಗಳವರು ನನ್ನ ಮೇಲೆ ಕೃಪೆಮಾಡಿ
ಬಹಿಷ್ಕಾರ ಕೊಟ್ಟಿರುವರು. ಭೋಜನ ಮಾಡುವನು ನಾನಲ್ಲವಾದ್ದರಿಂದ

ಪಂಜ್ತಿಗೆ ನಾನು ಬರುವೆನೆಂಬ ಭಯ ನಿಮಗಿಲ್ಲ. ನಾನಿದ್ದ ಬಳಿಗೆ ಬರುವುದೂ ಶ್ರೀಗಳವರ ಚಿತ್ತಕ್ಕೆ ಅಪರಾಧವೆಂದು ತೋರಿದರೆ ನಿಮಗೂ ಬಹಿಷ್ಕಾರ ಬರಬಹುದು. ಗುರುಗಳ ಮನಸ್ಸಿಗೆ ಆಯಾಸವಾಗದಂತೆ ನಡೆಯುವುದು ನಿಮ್ಮಂತೆ ನನಗೂ ಕರ್ತವ್ಯವಾಗಿರುವುದು. ಇದರ ಔಚಿತ್ಯವರಿತು ನೀವು ನಡೆದುಕೊಳ್ಳಬಹುದು'' ಎಂಬದಾಗಿ ತಿಳಿಸಿದರು. ಜನರು 'ವಿಚಾರವಿಲ್ಲದೆ ಹಾಕಿದ ಬಹಿಷ್ಕಾರವನ್ನು ನಾವು ಮನ್ನಿಸುವರಲ್ಲ. ನಮಗೆ ಗುರುಗಳ ಬಹಿಷ್ಕಾರದ ಭಯವಿಲ್ಲ. ಯಾರನ್ನು ಬಿಟ್ಟರೂ ತಮ್ಮನ್ನು ನಾವು ಬಿಟ್ಟಿರಲಾರೆವು. ತಾವು ಮಾತ್ರ ನಮ್ಮಲ್ಲಿ ಕೃಪೆ ಮಾಡಬೇಕು.'' ಎಂದು ನುಡಿದರು. ಮಠದ ಬಹಿಷ್ಕಾರದಿಂದ ಜನರಿಗಿದ್ದ ದಾಸರ ಮೇಲಣ ಭಕ್ತಿ ಕಡಿಮೆಯಾಗಲಿಲ್ಲ. ಬದಲಾಗಿ ದಿನದಿನಕ್ಕೆ ದಾಸರ ಬಳಿಗೆ ಬರುವರ ಸಂಖ್ಯೆ ಬಹಳವಾಯಿತು. ಗದ್ವಾಲಿಯನ್ನು ಬಿಟ್ಟು ಶ್ರೀಮಠದ ಸವಾರಿಯು ಹೈದರಾಬಾದಿಗೆ ಬೆಳೆಯಿತು.

ಮಹಿಬೂಬ್‌ನಗರಜಿಲ್ಲೆಯ ತಾಲ್ಲೂಕುದಾರ Deputy (Commissioner) ನಾಗಿದ್ದ ಹನುಮಂತರಾಯನೆಂಬ ಗೃಹಸ್ಥನು ಶ್ರೀಮಠದ ಶಿಷ್ಯನಾಗಿದ್ದನು. ದಾಸರಿಗೆ ಸ್ವಾಮಿಗಳು ಬಹಿಷ್ಕಾರ ಹಾಕಿರುವ ಸಂಗತಿಯನ್ನು ಕೇಳಿ ಸಂತಪ್ತನಾಗಿದ್ದರೂ, ಆತನು ಸ್ವಾಮಿಗಳು ತನ್ನ ಬಳಿಗೇ ಬಂದ ಮೇಲೆ ಅವರ ಸತ್ಕಾರ ನಡೆಸದಿರುವದು ಯೋಗ್ಯವಲ್ಲವೆಂದು ತನ್ನ ಪದವಿಗೆ ತಕ್ಕಂತೆ ಮರ್ಯಾದೆ ಮಾಡಿದನು. ಹೆಂಡತಿಗೆ ಪಿಶಾಚ ಬಾಧೆಯಿದ್ದುದರಿಂದ ರಾಯನ ಮನಸ್ಸಿಗೆ ಶಾಂತಿಯಿರಲಿಲ್ಲ. ಮಾಂತ್ರಿಕರನೇಕರ ಯಂತ್ರ ಮಂತ್ರಗಳು ಫಲಕಾರಿಗಳಾಗಲಿಲ್ಲ. ಸ್ವಾಮಿಗಳು ಬಂದಿರುವದರಿಂದ ಅವರೇನಾದರೂ ಈ ಬಾಧೆಯನ್ನು ಪರಿಹರಿಸಬಹುದೆಂದು ರಾಯನು ಅಂತರಂಗದಲ್ಲಿ ತನ್ನ ದುಃಖಗಳನ್ನು ತಿಳಿಸಿ ಅವರ ಮೊರೆಬಿದ್ದನು. ಅಭಯಗೂಡಲು ಧೈರ್ಯಸಾಲದೆ ಸಂಸ್ಥಾನಕ್ಕೆ ಪರೀಕ್ಷಾಕಾಲ ಬಂತೆಂದು ಸ್ವಾಮಿಗಳು ಚಿಂತಾಕ್ರಾಂತರಾದರು. ಪೀಠಾಧಿಪತಿಗಳಾದ ಮಾತ್ರಕ್ಕೆ ಪಿಶಾಚಬಾಧೆಯನ್ನು ಪರಿಹರಿಸುವ ವಿದ್ಯೆಯನ್ನೂ ಕಲಿತಿರಬೇಕೆಂಬ ನಿಯಮವೆಲ್ಲಿದೆ? ಪೀಠಾರೋಹಣ ಮಾಡಿದವರೆಲ್ಲರೂ ಮಹಾ ತಪಸ್ವಿಗಳಾಗಿರುವದಾದರೂ ಎಲ್ಲಿ ಕಂಡು ಬಂದಿದೆ? ಗ್ರಾಮೈಕರಾತ್ರಿಯಾಗಿ ದೇಶಪರ್ಯಟನ

ಮಾಡುವ ಯತಿಗಳು ಶಾಂತರಾಗಿ ಕುಳಿತು ತಪಶ್ಶಕ್ತಿಯನ್ನು ಬೆಳೆಸಿ ಬೇಡಿದ ವರ ಇಷ್ಟಾರ್ಥಗಳನ್ನು ಪೂರೈಸುವ ಅವಕಾಶ ಎಲ್ಲರಿಗೂ ಹೇಗೆ ಸಾಧ್ಯ? ಬೆಲ್ಲಂಪುರಿ ಹನುಮಂತರಾಯನೆಂದರೆ ಸಾಮಾನ್ಯ ಗೃಹಸ್ಥನಲ್ಲ! ಬರೀ ತಾಲ್ಲೂಕುದಾರ ಮಾತ್ರನಲ್ಲ! ದೊಡ್ಡ ಜಹಗೀರ್ದಾರ! ಶಿಷ್ಯರಲ್ಲಿ ಅತಿಮುಖ್ಯ ನಾದವ! ಸಂಸ್ಥಾನವನ್ನು ತಿಂಗಳುಗಟ್ಟಲೆ ತಡೆಯಬಲ್ಲ ಬಲವಂತ. ಇಂತಹ ಗೃಹಸ್ಥನಿಗೆ ಉತ್ತರವೇನು ಹೇಳಬೇಕೆಂಬ ಚಿಂತೆ ಸ್ವಾಮಿಗಳಿಗೆ ಬಲವಾಯಿತು. ಸಂಸ್ಥಾನ ಪ್ರೇಮಿಗಳಾದ ಆಪ್ತರನೇಕರು ಬಹಿಷ್ಕೃತರ ಹೆಸರೆತ್ತುವದು ಅಲೌಕಿಕವಾದರೂ,ಸ್ವಾಮಿಗಳ ಕ್ಷಮೆಬೇಡಿ ಶೇಷದಾಸರನ್ನು ಕರೆಸಿದಲ್ಲದೆ, ಇಂಥಾ ಪ್ರಸಂಗದಲ್ಲಿ ಗೌರವ ಬರುವುದಿಲ್ಲವೆಂದರು. ದಾಸರು ಮಂತ್ರ ಸಿದ್ಧರು, ಅವರಿಂದ ಬ್ರಹ್ಮರಾಕ್ಷಸ ಬಾಧೆಗಳು ಪರಿಹಾರವಾಗಿವೆ ಯೆಂದರು. ಏನಾದರೂ ಮಾಡಿ ಅವರನ್ನು ಕರಸಲೇಬೇಕೆಂದರು. ಸ್ವಾಮಿ ಗಳು ಯುಕ್ತಾಯುಕ್ತ ವಿಚಾರವನ್ನರಿಯದೆ ಬಹಿಷ್ಕಾರ ಪತ್ರಕ್ಕೆ ಹಸ್ತಾ ಕ್ಷರ ಹಾಕಿಸಿದ ಸರ್ವಾಧಿಕಾರಿಯ ಮೇಲೆ ಸಿಟ್ಟು ಮಾಡಿದರು. ದಳವಾಯಿ ಕೃಷ್ಣಾಚಾರ್ಯನೆಂಬ ವಿಶ್ವಾಸಕ್ಕೆ ಪಾತ್ರನಾದ ಸೇವಕನ ಕೈಯಲ್ಲಿ ತಮ್ಮ ಸ್ವಹಸ್ತದಿಂದ 'ಸಂಸ್ಥಾನಕ್ಕೆ ನೀವು ಮುಖ್ಯ ಶಿಷ್ಯರು, ಸಂಸ್ಥಾನದ ಕೀರ್ತಿ ನಿಮ್ಮದು; ಹಿಂದಿನ ಸಮಾಚಾರಗಳನ್ನು ಮನಸ್ಸಿನಲ್ಲಿಡದೆ, ಪತ್ರ ಕಂಡೊ ಡನೆ ಹೈದರಾಬಾದಿಗೆ ಬರಬೇಕು. ಪ್ರಾಪ್ತವಾಗಿರುವ ಪ್ರಸಂಗವಿಂಥಾದ್ದು' ಎಂಬರ್ಥದ ಪತ್ರವನ್ನು ಬರೆದು ಕಳುಹಿಸಿದರು. ಆ ಸಮಯದಲ್ಲಿ ದಾಸರ ಅನುಷ್ಠಾನದ ಅವಧಿ ಮುಗಿದು ಪ್ರಯಾಣಮಾಡಲು ಅನುಕೂಲವಾಗಿತ್ತು. ಐವತ್ತು ಮಂದಿ ಶಿಷ್ಯರು ದಾಸರೊಡನೆ ಪ್ರಯಾಣಮಾಡಲು ಸಿದ್ಧರಾದರು. ಎರಡೇ ದಿವಸಗಳಲ್ಲಿ ದಾಸರು ಹೈದರಾಬಾದನ್ನು ಸೇರಿ ಸತ್ಯಕಾಮರ ದರ್ಶನ ಮಾಡಿಸಿರೆಂದು ಬಹಿಷ್ಕಾರ ಪತ್ರ ಕಳುಹಿಸಿದ್ದ ಸರ್ವಾಧಿಕಾರಿಯ ಬಳಿಗೆ ಬಂದರು. ಸರ್ವಾಧಿಕಾರಿಗೆ ಆಗಲೂ ದಾಸರ ಮೇಲಣ ಅಸೂಯೆ ತಪ್ಪಿರ ಲಿಲ್ಲ. ಇವರ ನಿಮಿತ್ತವಾಗಿ ತನಗೆ ಸ್ವಾಮಿಗಳಿಂದ ವಾಗ್ದಂಡನೆಯಾಯಿ ತೆಂದು ಅವನು ಮತ್ತಷ್ಟು ಕಠಿಣ ಮಾತುಗಳಾಡಿದನು.

ಸರ್ವಾಧಿಕಾರಿ—ನೀವೋ ಆ ಪರೂರು ದಾಸರು?

ದಾಸರು—ಹೌದು ನಾನೇ ಆ ದಾಸ.

ಸರ್ವಾಧಿಕಾರಿ—ದಾಸರಾದವರಿಗೆ ಮೇನೆಯೇಕೆ? ಪರಿವಾರವೇಕೆ? ಇದೆಲ್ಲಾ ಸ್ವಾಮಿಗಳಿಗಿರಬೇಕಾದ ಮರ್ಯಾದೆ! ಎಲ್ಲವನ್ನೂ ಮಠಕ್ಕೆ ಸೇವಾ ಮಾಡಿ.

ದಾಸರು—ತಾವು ಸಂತೋಷಪಟ್ಟರೆ ಸಾಕು. ಇದೋ ಈ ಮೇನೆ ಕೃಷ್ಣಾರ್ಪಣ! ಇದೋ ಕಂಠಿ ಕೃಷ್ಣಾರ್ಪಣ! ತಾವು ಸ್ವೀಕರಿಸುವಿರಾದರೆ ಹೊದ್ದ ಶಹಲನ್ನೂ ಒಪ್ಪಿಸುವೆನು; ಗುರುದರ್ಶನ ಮಾಡಿಸಿದರೆ ಸಾಕು.

ಸರ್ವಾಧಿಕಾರಿ—(ಸೇವಕನೊಬ್ಬನನ್ನು ಕರೆದು ಆಗಲೂ ತನ್ನ ಶಾಠ್ಯವನ್ನು ಬಿಡದೆ) ಇವರನ್ನು ಸ್ವಾಮಿಗಳ ಹತ್ತಿರ ಕರೆದುಕೊಂಡು ಹೋಗು.

ಆಹ್ನಿಕದಲ್ಲಿ ಕುಳಿತಿದ್ದ ಶ್ರೀಗಳವರಿಗೆ ದಾಸರು ಬಂದರೆಂಬ ಮಾತು ಕಿವಿಗೆ ಬಿದ್ದೊಡನೆಯೇ ಪರಮಾನಂದವಾಯಿತು. ತಡಮಾಡವೆ ಅವರನ್ನು ಸಮುಖಕ್ಕೆ ಕರೆತರುವಂತೆ ಸ್ವಾಮಿಗಳ ಆಜ್ಞೆಯಾಯಿತು. ದಾಸರಿಗೆ ಬಹಿಷ್ಕೃತನು ಸಮೀಪಕ್ಕೆ ಹೋಗಬಹುದೇ ಎಂಬ ಶಂಕೆಯಾಯಿತು. ಈ ಮಾತನ್ನು ದ್ವಾರಪಾಲಕನು ಅರ್ಧಮರ್ಧ ಆಡುವಷ್ಟರಲ್ಲಿ ಸ್ವಾಮಿಗಳೇ ದಾಸರ ಹೆಸರು ಹಿಡಿದು ಕೂಗಿದರು. ದಾಸರು ಸಾಷ್ಟಾಂಗ ನಮಸ್ಕಾರ ಮಾಡಿ ಆಜ್ಞೆ ಪಡೆದು ಸಮುಖದಲ್ಲಿ ಕುಳಿತರು. ಸ್ವಾಮಿಗಳಿಗೆ ಅದುವರಿಗೆ ದಾಸರ ಪರಿಚಯವಾಗಿರಲಿಲ್ಲ. ಸಮೀಪದಲ್ಲಿದ್ದವರನ್ನು ದೂರಕಳುಹಿಸಿ ಶ್ರೀಗಳವರು ಹಿಂದೆ ನಡೆದ ಅನುಚಿತ ಕಾರ್ಯಗಳಿಗೆ ಚಿಂತಿಸಿ, ಪ್ರಕೃತಕಾರ್ಯವನ್ನು ದಾಸರಿಗೆ ತಿಳಿಸಿದರು. ದಾಸರು, ಶಿಷ್ಯನಿರುವಾಗ ಶ್ರೀಗಳವರಿಗೆ ಚಿಂತೆ ಏಕೆ? ರಾಯನ ಹೆಂಡತಿಯನ್ನು ಮೊದಲಕಲ್ಲಿಗೆ ಕಳುಹಿಸಿದರೆ ಒಂದು ಸಪ್ತಕದಲ್ಲಿ ಆಕೆಗೆ ಗುಣವಾದೀತೆಂದು ನುಡಿದರು. ಆ ಸಾಧ್ವಿಗೆ ಗುಣವಾಗಿ ಬರುವವರಿಗೆ ನಾವು ಈ ಸ್ಥಳವನ್ನು ಬಿಡುವದಿಲ್ಲ; ಸಂಸ್ಥಾನದ ಅಭಿಮಾನವನ್ನು ನೀವು ಬಿಡಬಾರದು; ಎಂದು ಮನಸ್ಸು ಕರಗುವ ಮಾತನಾಡಿದರು. ಅನಂತರ ಸ್ವಾಮಿಗಳವರ ಪೂಜಾ ನಡೆಯುವ ಸ್ಥಳದಲ್ಲಿ ದಾಸರಾಯರ ಪೂಜಾ ಆಹ್ನಿಕಗಳಿಗೆ ವ್ಯವಸ್ಥೆಯಾಯಿತು; ಭಿಕ್ಷಸ್ವೀಕಾರ ಕಾಲದಲ್ಲಿ ಸ್ವಾಮಿಗಳು

ತಮ್ಮ ಪಕ್ಕದಲ್ಲಿ ದಾಸರನ್ನು ಕೂಡಿಸಿಕೊಂಡರು. ಬಹಿಷ್ಕಾರ ಪತ್ರ ಬಂದ ದಿನದಿಂದ ದಾಸರು ಅಕ್ಷತೆಯನ್ನು ಹಚ್ಚಿಕೊಂಡಿರಲಿಲ್ಲ. ಅನುಷ್ಠಾನ ಪೂರ್ತಿಯಾದ ಮೇಲೂ ಉತ್ತತ್ತಿಗಳನ್ನಲ್ಲದೆ ಭೋಜನ ಮಾಡಿರಲಿಲ್ಲ. ಅಂದೇ ಸ್ವಾಮಿಗಳ ಸನ್ನಿಧಿಯಲ್ಲಿ ದಾಸರು ಅಕ್ಷತೆಯನ್ನು ಹಚ್ಚಿಕೊಂಡ ಸಂಗತಿಯೂ ಭೋಜನ ಮಾಡಿದ ಸಂಗತಿಯೂ ಅವರಿಗೆ ತಿಳಿದು ಬಲು ವಿಷಾದವಾಯಿತು. ಅಪರೋಕ್ಷಜ್ಞಾನಿಗಳಾದರೂ ಅವರಿಗಿರುವ ಗುರುಭಕ್ತಿಯನ್ನೂ ಸಂಸ್ಥಾನದ ಮೇಲಣ ಅಭಿಮಾನವನ್ನೂ ಕೊಂಡಾಡಿ ಶ್ರೀಗಳವರು ಆನಂದ ಬಾಷ್ಪಗಳನ್ನುದುರಿಸಿದರು. ಹನುಮಂತರಾಯ ಮೊದಲಾದ ಗೃಹಸ್ಥರುಗಳಿಗೆ ದಾಸರನ್ನು ನೋಡಿ ಆದ ಆನಂದವು ಅವರ್ಣನೀಯವಾಯಿತು. ದಾಸರ ಸುಳಾದಿಗಳನ್ನು ಕೇಳಿ ಶ್ರೀಗಳವರು ಪರಮಾನಂದ ಭರಿತರಾದರು. ದಾಸರು ಸಾವಿರ ರೂಪಾಯಿಗಳು, ಸಾವಿರ ರೂಪಾಯಿ ಬೆಲೆ ಬಾಳುವ ಶಹಲು ಮತ್ತು ಇತರ ಅನರ್ಘ್ಯ ಪದಾರ್ಥಗಳನ್ನು ಶ್ರೀಗಳವರಿಗೆ ಪಾದಪೂಜೆಮಾಡಿದರು. ಪ್ರತಿಯಾಗಿ ಶ್ರೀಗಳವರು ಕರದೀಪ ಕರವಸ್ತ್ರ ಛತ್ರ ಚಾಮರ ಮೊದಲಾದ ಸಂಸ್ಥಾನಿಕರ ಮರ್ಯಾದೆಯನ್ನು ದಾಸರಿಗೆ ಮಾಡಿದರು. ಹನುಮಂತರಾಯನು ದಾಸರಿಗೆ ಪ್ರಯಾಣಕ್ಕೆ ದಿವ್ಯವಾದ ಮೇನೆಯನ್ನು ಕಳುಹಿಸಿದುದು ಮಾತ್ರವಲ್ಲದೆ ಸ್ವಾಮಿಗಳಿಗೆ ಕೊಟ್ಟಷ್ಟೆ ಕಾಣಿಕೆಯನ್ನು ಸಮರ್ಪಿಸಿದನು. ರಾಯನ ಹೆಂಡತಿಗಿದ್ದ ಪಿಶಾಚಬಾಧೆಯು ಮೊದಲಕಲ್ಲಿನಲ್ಲಿ ಒಂದು ಸಪ್ತಕವಿರುವುದರೊಳಗೆ ಪರಿಹಾರವಾಯಿತು. ಇದರಿಂದ ಸಂಸ್ಥಾನಕ್ಕೆ ಮರ್ಯಾದೆಯುಂಟಾಯಿತು. ಸ್ವಾಮಿಗಳಿಗೆ ದಾಸರೆಂದರೆ ಇದ್ದ ಅನಾದರಣೆಯು ನಿರ್ಮೂಲವಾಯಿತು.

ಇದೇ ಸಮಕಾಲದಲ್ಲಿ ಬೆಟ್ಟದಲ್ಲಿ ವಾಸಮಾಡುತ್ತಿದ್ದಾಗ ದಾಸರನ್ನು ಸುಲಿಗೆ ಮಾಡಬೇಕೆಂದು ಕೆಲವರು ಕಳ್ಳರು ಸಂಚು ಮಾಡಿದರು. ದಾಸರ ಕೆಲಕೆಲವು ಪದ್ಧತಿಗಳು ಜನರಿಗೆ ವಿಸ್ಮಯಕಾರಿಗಳಾಗಿದ್ದುವು. ತಿನ್ನುವುದು ಐದು ಉತ್ತತ್ತಿ; ಮಲಗುವುದು ಬೆಟ್ಟದ ಗವಿಯಲ್ಲಿ ಹುಲಿಯ ಚರ್ಮದ ಮೇಲೆ; ಕೊರಳಲ್ಲಿ ಮುತ್ತಿನ ಕಂಠಿ; ಹೊದೆಯುವುದು ಜರತಾರಿಯ ಶಾಲು; ಉಡುವುದು ಪೀತಾಂಬರ; ಬೆರಳುಗಳಲ್ಲಿ ಹರಳಿನುಂಗುರಗಳು; ಆಡುವುದು ವೈರಾಗ್ಯದ ಮಾತು; ಮಾಡುವುದು ಸಾವಿರಗಟ್ಟಲೆ ಖರ್ಚು. ಇಂಥವರಲ್ಲದೆ

ಕಳ್ಳರಿಗೆ ಅರಸಿಕೊಂಡು ಬರಲು ಮತ್ತಾರು ಸಿಗಬೇಕು.? ಒಬ್ಬಿಬ್ಬರ ವಿನಾ ಬೆಟ್ಟದಲ್ಲಿ ಮನುಷ್ಯ ಸಂಚಾರವಿಲ್ಲ. ಸಮರಾತ್ರಿಯಲ್ಲಿ ಕಳ್ಳರು ಅರ್ಧ ಬೆಟ್ಟವನ್ನು ದಾಟಿದರು. ಮುಂದೆ ನಡೆಯಲು ಇದ್ದಕ್ಕಿದ್ದ ಹಾಗೆ ಅವರಿಗೆ ಕಣ್ಣು ಕಾಣಿಸಲಿಲ್ಲ. ಎಲ್ಲರಿಗೂ ಆದ ಒಂದೇ ಪರಿಸ್ಥಿತಿಯನ್ನು ನೆನಸಿಕೊಂಡು ಅವರು ದೊಡ್ಡವರಾದ ದಾಸರನ್ನು ಸುಲಿಗೆ ಮಾಡಬೇಕೆಂಬ ದುರಾಲೋಚನೆ ಮಾಡಿ ಬಂದದ್ದರಿಂದ ಹೀಗಾಯಿತೆಂದು ತಮ್ಮಲ್ಲಿ ತಾವೇ ತರ್ಕಿಸಿದರು. ನಿರುಪಾಯರಾಗಿ ನಿಂತಲ್ಲೇ ಕುಳಿತುಬಿಟ್ಟರು. ಅಂಧರಾದ ತಮ್ಮ ಮುಂದಿನ ಗತಿ ಏನೆಂಬ ಚಿಂತೆ ಅವರಿಗೆ ಬಹಳವಾಯಿತು. ಉಷಃಕಾಲ ಸನ್ನಿಹಿತವಾಗಲು ದಾಸರೆದ್ದು ಬೆಟ್ಟದಿಂದ ಕೆಳಕ್ಕೆ ಬರುತ್ತಾ ಮಾರ್ಗದಲ್ಲಿ ಅಡ್ಡ ಕುಳಿತಿರುವ ಜನರನ್ನು ನೋಡಿ, ಹಾದಿಯಲ್ಲೇಕೆ ಕುಳಿತಿರಿ? ಸ್ವಲ್ಪ ಸರಿದುಕೂಡಬಾರದೆ? ಎಂದರು.

ಕಳ್ಳರು—'ಸ್ವಾಮಿಾ, ತಾವ್ಯಾರೋ ತಿಳಿಯದು. ನಮ್ಮೆಲ್ಲರಿಗೆ ಕಣ್ಣೇ ಕಾಣದಂತಾಗಿದೆ. ದಾಸರನ್ನು ಸುಲಿಗೆ ಮಾಡಬೇಕೆಂದು ಬಂದ ಅಪರಾಧದಿಂದ ನಮ್ಮ ಗತಿ ಹೀಗಾಯಿತೆಂದು ತೋರುತ್ತದೆ. ದಯಮಾಡಿ ದಾಸರೆಲ್ಲಿರುವರೋ ಅವರನ್ನು ಬರಮಾಡಿ. ಅವರ ಪಾದಗಳಿಗಾದರೂ ಬಿದ್ದು ಕಣ್ಣುಕೊಡಿರೆಂದು ಕೇಳಿಕೊಳ್ಳುತ್ತೇನೆ' ಎಂದರು.

ದಾಸರು ಕಳ್ಳರನ್ನು ಕುರಿತು,—ದಾಸರಲ್ಲಿ ಏನಿದೆಯೆಂದು ಹುಡುಕಿಕೊಂಡು ಬಂದಿರಿ? ಅವರ ಸುಲಿಗೆ ಮಾಡಿದರೆ ನಿಮಗೇನು ಸಿಗುತ್ತಿತ್ತು. ಎಂದು ಕೇಳಿದರು. ಕಳ್ಳರು—ಅವರ ಕೊರಳೊಳಗಿನ ಮುತ್ತಿನ ಕಂಠಿ ಬೆರಳುಂಗುರಗಳು ಇಷ್ಟು ಸಿಕ್ಕರೇ ಸಾವಿರಾರು ರೂಪಾಯಿ ದೊರೆಯುತ್ತಿತ್ತು ಎಂದರು. ಕಳ್ಳರ ದೈನ್ಯದೆಶೆಯನ್ನು ನೋಡಿ ದಾಸರು ಕನಿಕರ ತಾಳಿದರು. ಅಪ್ಪಾ! ಆ ದಾಸನೇ ನಾನು, ನಿಮಗೇನು ಬೇಕು ಕೇಳಿ, ನಾನೇ ಕೊಡುವೆನೆಂದರು. ಕಳ್ಳರು ಅಲ್ಲೇ ನಮಸ್ಕಾರ ಮಾಡಿ—ತಾವು ದೇವರ ಮನುಷ್ಯರು, ಕಣ್ಣು ಬರುವಂತೆ ಮಾಡಿದರೆ ಸಾಕು, ಮತ್ತೆಲ್ಲಾದರೂ ಕದ್ದು ಜೀವಿಸುವೆವೆಂದರು. ದಾಸರು—ನನಗಾಗಿ ಕಷ್ಟಪಟ್ಟಿರಿ, ರಾತ್ರಿಯೆಲ್ಲಾ ನಿದ್ರೆಗೆಟ್ಟಿರಿ, ಛಳಿಯಲ್ಲಿ ನಿಂತಿರಿ, ನಿಮಗೆ ಕಣ್ಣು ಕಾಣುತ್ತದೆ, ಕಂಠಿಉಂಗು

ರಗಳನ್ನೂ ಕೊಡುತ್ತೇನೆ, ಆದರೆ ಈ ಕೆಟ್ಟ ವೃತ್ತಿಯನ್ನು ಬಿಟ್ಟು ಯೋಗ್ಯ ರೀತಿಯಿಂದ ಜೀವಿಸಿರಿ; ಎಂದು ಆಭರಣಗಳನ್ನು ಕೊಟ್ಟು ಕಣ್ಣುಕಾಣು ವಂತೆ ಮಾಡಿದರು. ಕಳ್ಳರು ಆಭರಣಗಳನ್ನು ತೆಗೆದುಕೊಳ್ಳಲು ಹಿಂದೆಗೆ ದರು. ದಾಸರು—ನಾನು ಸಂತೋಷದಿಂದ ಕೊಟ್ಟಿದ್ದೇನೆ; ಅವನ್ನುಮಾರಿ ದರೆ ಸಾವಿರಾರು ರೂಪಾಯಿಗಳ ಲಾಭ ನಿಮಗಾಗುತ್ತದೆ; ಆದರಿಂದ ನೀವು ಸುಖವಾಗಿ ಬದುಕಿರಿ; ಎಂದು ಅವರನ್ನು ಸಂತೋಷಪಡಿಸಿ ಕಳುಹಿಸಿದರು.

ಸ್ವಾಮಿಗಳು ದಾಸರಿಗೆ ಸಂಸ್ಥಾನಿಕರ ಮರ್ಯಾದೆ ಮಾಡಿದ ದಿನದಿಂದ ಅವರಲ್ಲಿ ವೈದಿಕರಿಗಿದ್ದ ಅನಾದರ ಕಡಮೆಯಾಯಿತು. ಅವರ ನೈವೇದ್ಯ ದಲ್ಲಿ ಊಟಮಾಡಬಾರದು. ಅವರಿಗೆ ವೈದಿಕರು ನಮಸ್ಕಾರ ಮಾಡಬಾ ರದು, ಎಂಬ ಶಾಠ್ಯಗಳು ಮಾಯವಾದುವು. ಎಂತಹ ಪಾಠೀಕನಾಗಲಿ, ಮನೆತನಸ್ಥ ಆಚಾರ್ಯನಾಗಲಿ, ದಾಸರನ್ನು ಕಂಡರೆ ಸನ್ಯಾಸಿಗಳಿಗೆ ಮಾಡು ವಂತೆ ನಮಸ್ಕಾರ ಮಾಡುವುದು ರೂಢಿಗೆ ಬಂದಿತು.

ಈ ವಿಷಯದಲ್ಲಿ ಬರೆಯುವ ಕೆಲವು ಮಾತುಗಳಿವೆ. ಪುರಸ್ಕಾರಕ್ಕಿಂತ ತಿರಸ್ಕಾರವೆಂಬುವುದು ಹಿಂದುಗಳಲ್ಲಿ--ಅದರಲ್ಲಿ ಬ್ರಾಹ್ಮಣರಲ್ಲಿ—ಅದರಲ್ಲೂ ಮಾಧ್ವವೈಷ್ಣವರಲ್ಲಿ ತಾನೇ ತಾನಾಗಿದೆ. ಅವನತಿಯಿಂದ ಉನ್ನತಿಗೇರುವ ಪ್ರಯತ್ನಗಳು ನಡೆಯುತ್ತಿಲ್ಲ. ಆಚಾರದ ಹೆಸರಿನ ಅನಾಚಾರವು ಮಾಧ್ವರ ನಾಶಕ್ಕೆ ಕಾರಣವಾಗಿದೆ.

ಸೋಮಭೂಪಾಲನ ದರ್ಬಾರಿನಲ್ಲಿ ಅವಮಾನಿತನಾಗಿ ಚಿಂತಲರೇವಿಗೆ ಬಂದ ಇಪ್ಪತ್ತು ವರ್ಷಗಳ ಅವಧಿಯಲ್ಲಿ ಶೇಷಪ್ಪನು ತಪಶ್ಚರ್ಯ ಮಾಡಿ ಭಗವತ್ಸಾಕ್ಷಾತ್ಕಾರ ಮಾಡಿಕೊಂಡದ್ದು ದೊಡ್ಡದಾಗಲಿಲ್ಲ. ಶರಣಾಗತ ರಾಗಿ ಬಂದವರ ಇಷ್ಟಾರ್ಥಗಳನ್ನು ಸಲ್ಲಿಸಿದ್ದು ದೊಡ್ಡದಾಗಲಿಲ್ಲ; ಕೆಲವು ಕಪಿಮುಷ್ಟಿಯ ಜನರ ಮತ್ತು ಅವರಿಂದ ಪ್ರೇರಿತರಾದ ಮಠಾಧಿಪತಿಗಳಿಂದ ಮೆಚ್ಚಿಗೆಗೆ ಪಾತ್ರರಾಗುವುದು ಬಲು ದೊಡ್ಡದೆನಿಸಿತು. ಕರ್ನಾಟಕದಲ್ಲಿ ಮಾತ್ರವಲ್ಲ; ಮಹಾರಾಷ್ಟ್ರ ತಮಿಳು ನಾಡುಗಳಲ್ಲೂ, ಭಾಗವತ ಧರ್ಮಿಗಳದು ಇದೇ ಹಾಡಾಗಿತ್ತೆಂದು ಅವರವರ ಇತಿಹಾಸಗಳಿಂದ ಗೊತ್ತಾಗುತ್ತದೆ. ಇಂತಹ ಒರೆಗಲ್ಲಿಗೆ ತಿಕ್ಕಿಮುಕ್ಕಿದ ವಿನಾ ದೊಡ್ಡವರು ದೊಡ್ಡವರಾಗುವುದಿ ಲ್ಲವೆಂದೂ ಗೊತ್ತಾಗುತ್ತದೆ.

- ೪ -

ಕರ್ನಾಟಕ ಭಕ್ತವಿಜಯದ ಪ್ರಥಮ ಭಾಗದ ಉಪೋದ್ಘಾತದಲ್ಲಿ ತಿಳಿಸಿರುವಂತೆ ಮೊದಲಕಲ್ಲು ಶೇಷದಾಸರ ಸುಳಾದಿಗಳ ವಹಿಯಲ್ಲಿ ಅವರು ಚಿಂತಲರೇವಿಗೆ ಬಂದ ದಿನದಿಂದ ಬರೆದಿಟ್ಟ ತಮ್ಮ ದಿನಚರ್ಯದ (Diary) ಸಂಕ್ಷೇಪ ವರದಿಯು ದೊರೆಯುತ್ತದೆ. ಆ ವಹಿಯು ದಾಸರ ಹಸ್ತಾಕ್ಷರದ ಶಿಥಿಲವಾದ ಪುಸ್ತಕದಿಂದ ಕಲ್ಲೂರ ಶ್ರೀನಿವಾಸ ರಾಮಚಂದ್ರ ಕುಲಕರಣಿಯು ಉದ್ಧರಿಸಿ ಬರೆದಿಟ್ಟುಕೊಂಡಂತೆ ತಿಳಿದುಬರುತ್ತದೆ. ಕುಲಕರಣಿಯು ಶ್ರೀದಾಸರ ಅನುಬಂಧಿಯೆಂದು ಗೊತ್ತಾಗುತ್ತದೆ. ಆ ವಹಿಯಲ್ಲಿ ದಾಸರಾಯರು ರಚಿಸಿದ ನಲವತ್ತಮೂರು ಸುಳಾದಿಗಳ ಸಂಗ್ರಹವಿದೆ; ಮತ್ತು ಕೆಲವು ದೇವರ ನಾಮುಗಳನ್ನೂ ಉಗಾಭೋಗಗಳನ್ನೂ ಬರೆದಿಟ್ಟಿದ್ದಾನೆ. ಸುಳಾದಿಗಳ ಕಡೆಯಲ್ಲಿ ಈ ಸುಳಾದಿಯನ್ನು ಇಂಥಾ ದಿವಸ ಇಷ್ಟು ಹೊತ್ತಿನಲ್ಲಿ ಇಂಥಾ ಸಂದರ್ಭದಲ್ಲಿ ದಾಸರು ಹಾಡಿದುದೆಂದು ಸಹ ಆತನು ಗುರ್ತುಮಾಡಿದ್ದಾನೆ. ಸುಳಾದಿಗಳು ಅವರ ಅನುಭವದ ಮಾತುಗಳಿಂದ ಭರಿತವಾಗಿವೆ. ತಮ್ಮ ಇಷ್ಟದೇವತೆಯೊಡನೆ ಎದುರಿಗೆ ನಿಂತು ಮಾತಾಡಿದಂತಿವೆ. ಆ ಮಾತುಗಳೊಂದೊಂದೂ ಭಕ್ತನ ಮನಸ್ಸನ್ನು ಮರುಗಿಸುವಂತಿವೆ. ದಿನಚರ್ಯದ ವರದಿ (Diary)ಯಲ್ಲಿ ದಾಸರು ಮಂತ್ರೋಪಾಸನೆ ಮಾಡಿದ್ದರ ವಿಧಾನ, ಉಪಾಸನೆಮಾಡಿದ ಕಾಲದ ಪರಿಮಿತಿ, ಮಂತ್ರಮೂರ್ತಿಗಳು ಪ್ರಸನ್ನರಾದ ರೀತಿ, ವರಪ್ರದಾನ, ತಮಗಾದ ಸಕಲ ದೇವತಾ ದರ್ಶನ, ಇವುಗಳ ವಿವರಣೆಯಿದೆ. ಸಾಧಕನಾದವನ ಸಾಧನೆಗೆ ಇದು ಉತ್ತಮ ಮಾರ್ಗದರ್ಶಿಯಾಗಿದೆ. ದಾಸರನ್ನು ಪ್ರತ್ಯಕ್ಷ ನೋಡಿದವನೇಕರು ಗದ್ವಾಲ ಪ್ರಾಂತ್ಯದಲ್ಲಿದ್ದಾರೆ. ಅವರ ಮುಖದಿಂದ ದಾಸರ ಅನೇಕ ಮಹಿಮೆಗಳು ಬರುತ್ತವೆ. ದಾಸರ ಹೆಸರೆತ್ತಿದೊಡನೆ ಅವರು ಪುಳುಕಿತರಾಗುತ್ತಾರೆ. ಆದೊಂದುಕಾಲ-ನೋಡುವ ಯೋಗವಿತ್ತೆನ್ನುತ್ತಾರೆ. ಕೆಲಕೆಲವು ವಿಷಯುಗಳು ನಡೆದಕಾಲ ಮತ್ತು ದೇಶಗಳ ಗೊತ್ತಾದ ಯೋಜನೆಯನ್ನು ಕೇಳಿದರೆ, ಈ ಕಾಲದ ಜನರ ಚಿಕಿತ್ಸಕ ಬುದ್ಧಿಗೆ ಒಪ್ಪುವ ಉತ್ತರಗಳು ಆ ಹಳೆಯ ಜನರಿಂದ ಬರುವದಿಲ್ಲ.

ಈ ವಿಮರ್ಶೆಗಳನ್ನು ಬಿಟ್ಟು ದಾಸರಾಯರ ಜೀವನ ಚರಿತ್ರೆಯ ಮುಖ್ಯಾಂಶಗಳ ಕಡೆಗೆ ತಿರುಗಿದರೆ, ಬಹು ಮುಖದಿಂದ ವ್ಯತ್ಯಾಸವಿಲ್ಲದೆ ಬರುವ ಮತ್ತು ನಮ್ಮ ಕಡತದ ಬರಹಕ್ಕೆ ಸರಿಹೋಗುವ ಪೇಷ್ಕಾರ ವೆಂಕಟ ರಾಯನೆಂಬ ಗೃಹಸ್ಥನ ಕಾಶೀಯಾತ್ರೆಯ ಚರಿತ್ರೆಯು ಹೊರಬೀಳುತ್ತದೆ.

ಪೇಷ್ಕಾರ ವೆಂಕಟರಾಯನು ಕೊಪ್ಪಳದ ಇಲಾಖೆಗೆ ಸೇರಿದವನು. ಈತನು ಕುಟುಂಬ ಸಹಿತ ಕಾಶೀಯಾತ್ರೆ ಮಾಡಬೇಕೆಂದು ಹೊರಟು ಗುರುಗಳಾದ ದಾಸರ ಅಪ್ಪಣೆಪಡೆಯಲು ಮೊದಲಕಲ್ಲಿಗೆ ಬಂದನು. ತಾನು ಮಹಾಯಾತ್ರೆಗೆ ಹೊರಟಿರುವ ಸಂಗತಿಯನ್ನು ದಾಸರಲ್ಲಿ ನಿವೇದಿಸಿ ಅಪ್ಪಣೆಯಾಗಬೇಕೆಂದನು. ದಾಸರು ಅವಸರವೇಕೆ, ಧಾವತಿಯೇಕೆ, ಇಲ್ಲೇ ಕೆಲವು ದಿವಸ ಇರು ಎಂದರು. ಗುರುಗಳಾಜ್ಞೆಯನ್ನು ಮೀರಲಾರದೆ ಮತ್ತೆ ಕೇಳಲು ಬಾಯಿಬರದೆ ಗೃಹಸ್ಥನು ಚಿಂತೆಗೊಳಗಾದನು.

ಒಂದು ಮಧ್ಯಾಹ್ನ, ತುಂಗಭದ್ರೆಯಲ್ಲಿ ಭಾಗೀರಥಿಯು ಪ್ರವೇಶಿಸುವ ಕರ್ಕಾಟಕ ಸಂಕ್ರಮಣ. ನೂರಾರು ಅತಿಥಿಗಳು ಸೇರಿದ ಸಮಯ. ವೆಂಕಟೇಶನಿಗೆ ದಾಸರು ನೈವೇದ್ಯವಿತ್ತು ಮಂಗಳಾರತಿಮಾಡಿದರು. ಗೋವಿಂದಪ್ಪನೆಂಬ ತಮ್ಮ ಮಗನ ಹೆಸರುಹಿಡಿದು ಕರೆದರು. ಮಂಗಳಾರತಿಯನ್ನು ಕೊಡಲು ತಂದೆಗಳು ಕರೆದರೆಂದು ಅವನು ಆರತಿಯ ತಟ್ಟೆಗೆ ಕೈಹಾಕಿದನು. ದಾಸರು ಆರತಿಯನ್ನು ಕೊಡುವದಿರಲಿ, ಪೇಷ್ಕಾರ ವೆಂಕಟರಾಯನೆಲ್ಲಿರುವನೋ ಕರೆದುಕೊಂಡು ಬಾರೆಂದರು. ರಾಯನು ಬಂದು ನಮಸ್ಕಾರಮಾಡಿದನು.

ದಾಸರು—ವೆಂಕಟರಾಯ! ಕಾಶೀಯಾತ್ರೆಗೆ ಅಪ್ಪಣೆ ಸಿಗಲಿಲ್ಲವೆಂದು ಚಿಂತಿಸುತ್ತಿರುವೆಯೇನು?

ಪೇಷ್ಕಾರ—ಚಿಂತೆ ಏನಿಲ್ಲ. ಚಿತ್ತಕ್ಕೆ ಬಂದಾಗ ಅಪ್ಪಣೆಯಾಗಲಿ.

ದಾಸರು—ಮುದುಕರು ಮೋಟರನ್ನೆಲ್ಲಾ ಕರೆದುಕೊಂಡು ಹೊರಟಿರುವೆ, ಮಧ್ಯದಲ್ಲಿ ಶ್ರಮವೂ ಆಗಿ ಯಾತ್ರೆಯೂ ಆಗದೇ ಹೋಗುವದಲ್ಲಾ ಎಂಬ ಯೋಚನೆ ನನಗಾಗಿದೆ.

ಪೇಷ್ಕಾರ—ಅಪ್ಪಣೆಯಾದಂತೆ ನಡೆಯುವೆನು.

ದಾಸರು—ನಮ್ಮ ಮಾತಿನಲ್ಲಿ ನಿನಗೆ ಸಂದೇಹವಿಲ್ಲವಷ್ಟೆ!

ಪೇಷ್ಕಾರ—ಎಂದಿಗೂ ಇಲ್ಲ.

ದಾಸರು—ಹಾಗಿದ್ದರೆ ಗಂಗಾಸ್ನಾನಕ್ಕೆ ಬರುವವರನ್ನೆಲ್ಲಾ ಕರೆದು ಕೊಂಡು ಬಾ, ಇಲ್ಲೇ ಸ್ನಾನವಾಗುವದು.

ಪೇಷ್ಕಾರನು ತನ್ನ ಬಳಗವನ್ನು ಕರೆದುಕೊಂಡು ಗರ್ಭಾಂಕಣದ ಬಾಗಿಲಿಗೆ ಬಂದನು. ಈಗ ಇಲ್ಲಿ ಗಂಗಾಸ್ನಾನ ಹೇಗಾಗುವದೆಂದು ಜನರು ದೇವಾಲಯದ ಸುತ್ತಲೂ ಮುತ್ತಿದರು. ದೇವಿಯ ಧ್ಯಾನಾಸಕ್ತರಾಗಿ ದಾಸರು ಕುಳಿತರು. ವೆಂಕಟೇಶನ ಪಾದದಿಂದ ಬುಳುಬುಳನೆ ಬಿಳಿಯ ಬಣ್ಣದ ನೀರು ಬರಲಾರಂಭಿಸಿತು. ಪದ್ಮಾಸನಾಸೀನರಾದ ದಾಸರ ವಸ್ತ್ರಗಳು ತೊಯಿದವು. ನಾನು ಮುಂದು ತಾನು ಮುಂದು ಎಂದು ಸಡಗರದಿಂದ ಜನರು ಗರ್ಭಾಂಕಣದ ಬಾಗಿಲಿಗೆ ಬಂದರು. ದಾಸರು ತಂಬಿಗೆಯಲ್ಲಿ ತುಂಬಿ ತುಂಬಿ ವೆಂಕಟರಾಯನ ಮತ್ತು ಅವನ ಅನುಯಾಯಿಗಳ ತಲೆಯಮೇಲೆ ಗಂಗೋದಕವನ್ನು ಸುರಿದರು. - 'ವೆಂಕಟರಾಯ! ಆಯಿತೇ ಗಂಗಾಸ್ನಾನ!' ಎಂದರು. ವೆಂಕಟರಾಯನು ಕ್ಷಮೆಬೇಡಿ - 'ಆಯಿತು ಮಹಾಸ್ವಾಮಿ, ತಮ್ಮ ಸನ್ನಿಧಿಯಲ್ಲಿರುವದೇ ನನಗೆ ಸಕಲ ತೀರ್ಥಕ್ಷೇತ್ರಗಳು' ಎಂದು ನುಡಿದನು. ವೆಂಕಟರಾಯನ ಪುಣ್ಯದಿಂದ ಆ ದಿನ ಅಲ್ಲಿದ್ದ ಜನರಿಗೆಲ್ಲಾ ಗಂಗಾಸ್ನಾನವಾಯಿತು. ಪೇಷ್ಕಾರನು ಕೆಲವು ದಿವಸ ದಾಸರ ಸನ್ನಿಧಿಯಲ್ಲಿದ್ದು ಯಾತ್ರಾನಿಮಿತ್ತ ಖರ್ಚಿಗೆ ಎಷ್ಟು ಹಣವನ್ನು ತೆಗೆದುಕೊಂಡು ಹೊರಟಿದ್ದನೋ ಅದೆಲ್ಲವನ್ನೂ ದೇವರ ಸೇವೆಗೆಂದು ಸಮರ್ಪಿಸಿ ಪ್ರಯಾಣಮಾಡಿದನು.*

ದಾಸರು ಜನರ ಗುಂಪಿನಲ್ಲಿರುವದು ಬೇಸರವಾದಾಗ ಬೆಟ್ಟದಲ್ಲಿ ಐದು ಉತ್ತತ್ತಿಗಳಮೇಲೆ ತಿಂಗಳುಗಟ್ಟಲೆ ವಾಸಮಾಡುತ್ತಿದ್ದರು. ಮನೆಯಲ್ಲಿ ನಡೆಯುವ ದಿನಗಟ್ಟಲೆಯ ಅತಿಥಿ ಸತ್ಕಾರವು ನಡೆಯುವ ರೀತಿಯಲ್ಲಿ ನಡೆಯುತ್ತಿತ್ತು. ದರ್ಶನಾಭಿಲಾಷಿಗಳು ನಿಯಮಿತ ಕಾಲದಲ್ಲಿ ಬೆಟ್ಟಕ್ಕೆ ಹೋಗಿ

---

*ಈ ಗಂಗಾವತರಣವನ್ನು ಪ್ರತ್ಯಕ್ಷ ನೋಡಿದ ಆಗ ೧೫ ವರ್ಷ ವಯಸ್ಸಿನವಳಾಗಿದ್ದ ಒಬ್ಬ ಸ್ತ್ರೀಯಳು ಈಗಲೂ ಮೊದಲಕಲ್ಲಿನಲ್ಲಿದ್ದಾಳೆ. ಈಕೆಯಂತೆ ಇನ್ನೂ ೩-೪ ಜನ ಹಳಬರು ಗದ್ವಾಲ ಇಲಾಖೆಯಲ್ಲಿದ್ದಾರೆ.

ದಾಸರ ದರ್ಶನಮಾಡುತ್ತಿದ್ದರು. ೬೫-೭೦ವರ್ಷ ವಯಸ್ಸಿನಲ್ಲಿ ಬಿಳಿದಾದ ತಲೆಯ ಕೂದಲುಗಳು ಸಹ ಕಪ್ಪಾಗಿ ಪುಷ್ಟಾಂಗರಾದ ಯುವಕರಂತೆ ಕಾಣಿಸುತ್ತಿದ್ದುದು ಅವರ ಆಹಾರನಿಯಮದ ಪ್ರಭಾವವಾಗಿತ್ತು.

ದಾಸರು ರಚಿಸಿರುವ ಸುಳಾದಿಗಳಲ್ಲಿ ೧೮ತಾಳಗಳದೊಂದು ಅತಿ ಮಹತ್ವದ ಸುಳಾದಿಯಾಗಿರುವದು. ವಿಜಯರಾಯರ ಕಂಕಣಾಕಾರ ಸುಳಾದಿಯನ್ನೂ ಈ ಸುಳಾದಿಯನ್ನೂ ಇಟ್ಟುಕೊಂಡು ಚಕ್ರೋಪಾಸನಪರರು ತಮ್ಮ ಉಪಾಸನೆಯನ್ನು ಸುಲಭವಾಗಿ ನೆರವೇರಿಸುತ್ತಾರೆ. ಈ ಉಪಾಸನೆಯ ಮಹತ್ವವನ್ನು ವಿಜಯದಾಸರು ಹೇಳಿರುವ ಸುಳಾದಿಯ ಜತೆಯ "ಸಿದ್ಧ ಸಾಧನವಿದು ಬಿಂಬ ಕಾಣುವದಕ್ಕೆ । ಪದ್ಮಿವಲ್ಲಭ ನಮ್ಮ ವಿಜಯವಿಠಲ ಒಲಿವ" ||೧|| ಎಂಬ ಮಾತಿನಿಂದ ನೋಡಿದರೆ ಅನುಭವಸಿದ್ಧವಾದ ಮಾತೆಂದು ಗೊತ್ತಾಗುತ್ತದೆ. ಉಪಾಸಕರಿಗೇ ಅವಶ್ಯಬೇಕಾಗಿರುವ ಸುಳಾದಿ ಇದಾಗಿರುವದರಿಂದ ಅದರ ಅವಶ್ಯಕತೆಯು ಎಲ್ಲರಿಗೂ ಇರುವದಿಲ್ಲ. ಹಾಗೂ ಯಾವ ವಿಷಯವನ್ನು ಬರಿಮಾತಿನಿಂದ ತಿಳಿಸಿದರೆ ಅರ್ಥವಾಗುವದಿಲ್ಲವೋ, ಯಾವ ವಿಷಯದ ಅನುಭವ ಉಪಾಸನೆಮಾಡುವದರಿಂದಲೇ ಸಾಧ್ಯವಾಗುವದೋ, ಅಂಥ ವಿಷಯವನ್ನು ನಮ್ಮವರು ರಹಸ್ಯವೆನ್ನುವರು, ಗೋಪ್ಯಮಾಡಿಡಬೇಕೆನ್ನುವರು, ಅಧಿಕಾರಿಗಳಿಗೆ ಮಾತ್ರ ತಿಳಿಸಿಕೊಡಬೇಕೆನ್ನುವರು. ಆದ್ದರಿಂದ ಆ ಸುಳಾದಿಯನ್ನು ಮುದ್ರಣಕ್ಕೆ ಕೊಡದೆ ರಕ್ಷಣೆಮಾಡಿಡಬೇಕಾಗಿರುವದು.

ದಾಸರು ತಮ್ಮ ಜನ್ಮಸ್ಥಳದಲ್ಲಿ ತಮ್ಮ ಜ್ಞಾಪಕಾರ್ಥವಾಗಿ ದೇವಾಲಯವೊಂದನ್ನು ಕಟ್ಟಿಸಬೇಕೆಂದು ಸಂಕಲ್ಪಿಸಿ ಪರಿವಾರ ಸಹಿತ ದರೂರಿಗೆ ಬಂದರು. ಇವರ ಯೋಗಕ್ಷೇಮ ಚಿಂತನೆಯು ಯಾವಾಗಲೂ ಪರಮಾತ್ಮನದೇ ಆಗಿದ್ದುದರಿಂದ ಕೆಲಸಮಾಡುವ ಜನರಿಗಾಗಲಿ, ಬೇಕಾದ ಹಣಕ್ಕಾಗಲಿ ಯಾವ ನ್ಯೂನತೆಯೂ ಆಗಲಿಲ್ಲ. ದಿವ್ಯ ದೇವಾಲಯವಾಯಿತು. ದಾಸರ ವಾಸಕ್ಕೆ ಯೋಗ್ಯ ಗೃಹನಿರ್ಮಾಣವಾಯಿತು. ಪ್ರತಿಷ್ಠಿಸಲು ಪಾರ್ಥಸಾರಥಿಯ ಭವ್ಯಮೂರ್ತಿಯೊಂದು ಸಿದ್ಧವಾಯಿತು. ಮಹೋತ್ಸವ ಸಮಾರಂಭಕ್ಕೆ ಆಹೂತರಾಗಿ ಆನೇಗೊಂದಿ, ದೋಮಕುಂಟೆ, ವನಪರ್ತಿ, ದ್ವಾಲ ಸಂಸ್ಥಾನಗಳ ಅರಸರು ಬಂದಿಳಿದರು. ಸಂಸ್ಥಾನಿಕರುಗಳು ಸೇರಿ

ನಡೆಸುವ ಮಹಾ ಸಮಾರಂಭವನ್ನು ನೋಡಲು ಬರುವ ಜನಸಂಖ್ಯೆಯು ಅನೇಕ ಸಹಸ್ರವಾಯಿತು. ಜನರ ವಾಸಕ್ಕಾಗಿ ಲೆಕ್ಕವಿಲ್ಲದಷ್ಟು ಪರ್ಣ ಕುಟೀರಗಳಾದವು. ಒಂದು ತಿಂಗಳಷ್ಟು ಕಾಲ ಬಂದ ಜನರಿಗೆಲ್ಲಾ ಮೃಷ್ಟಾನ್ನ ಸಮಾರಾಧನೆಯಾಯಿತು. ಇದೇ ಸಮಯದಲ್ಲಿ ದಾಸರ ಮೊಮ್ಮಗ ವಿಜಯರಾಯನ ಉಪನಯನವನ್ನು ದಾಸರು ನಿಶ್ಚಯಿಸಿದರು. ಇದನ್ನನುಸರಿಸಿ ಧರ್ಮೋಪನಯನಗಳೂ ಅನೇಕ ವಿವಾಹಗಳೂ ಏರ್ಪಟ್ಟವು ಮಾಣವಕರಿಗೂ ವಧೂವರರಿಗೂ ವಸ್ತ್ರಭೂಷಣಗಳನ್ನು ರಾಜರುಗಳು ನಾನು ಮೊದಲು ತಾನು ಮೊದಲೆಂದು ಹವಣಿಸಿದರು. ನಾಲ್ವರು ರಾಜರೂ ಭಂಗಾರದ ಹರಿವಾಣಗಳಲ್ಲಿ ಹಣವನ್ನು ತಂದಿಟ್ಟು ಮಹೋತ್ಸವಕ್ಕೆ ಬಂದ ವಿದ್ವಜ್ಜನರಿಗೆ ಭೂರಿದಕ್ಷಿಣೆ ಕೊಡಬೇಕೆಂದು ದಾಸರನ್ನು ಪ್ರಾರ್ಥಿಸಿದರು. ದಾಸರು ಗದ್ವಾಲ ಮಹಾರಾಜ ರಾಮಭೂಪಾಲನ ಹಸ್ತದಿಂದ ದಾನಮಾಡಿಸಿದರು. ಈ ಮಹೋತ್ಸವವು ಪಾರ್ಥಿವ ಸಂವತ್ಸರದ ಚೈತ್ರಮಾಸದಲ್ಲಿ ನಡೆಯಿತು. ಉತ್ಸವಾಂಗವಾದ ಅವಭೃತಾನಂತರ ರಾಜರುಗಳು ತಮ್ಮ ರಾಜಧಾನಿಗಳನ್ನು ಕುರಿತು ಪ್ರಯಾಣಮಾಡಿದರು. ದಾಸರು ಚೈತ್ರಬಹುಳದಲ್ಲಿ ಗದ್ವಾಲಿನಲ್ಲಿ ಮೂರು ದಿವಸಗಳಿದ್ದು ಬಾಲಮಹಾರಾಜನಿಗೆ ಹಿತಬೋಧನೆಮಾಡಿ ಮೊದಲಕಲ್ಲನ್ನು ಸೇರಿದರು.

ಪಾರ್ಥಿವ ಶರೀರ ಧಾರಣೆಮಾಡಿದಮೇಲೆ ಎಂತಹ ಬ್ರಹ್ಮಜ್ಞಾನಿಗಳಾದರೂ ಆದರ ಸಂಬಂಧವಾದ ಸುಖದುಃಖಗಳನ್ನನುಭವಿಸಲೇಬೇಕು. ವೈಶಾಖ ಶುದ್ಧ ಪಂಚಮಿಯಿಂದ ದಾಸರಿಗೆ ದೇಹಾಲಸ್ಯವಾಯಿತು. ತಮ್ಮ ಭೂಋಣಾನುಬಂಧವು ಇನ್ನು ಮೂರು ದಿವಸಗಳೆಂದು ದಾಸರರುಹಿದರು. ಭೀಮದಾಸರು ಗೋವಿಂದದಾಸರು ಎಂಬ ಹೆಸರಿನ ಮಕ್ಕಳಿಗೆ ದಾಸರಿಂದ ಅಂಕಿತೋಪದೇಶವಾಯಿತು. ಮಕ್ಕಳು ಮುಂದಿನ ಕಾರ್ಯ ಹೇಗೆ ನಡೆಯಬೇಕೆಂದು ಪ್ರಶ್ನೆಮಾಡಿದರು. ನಡೆಯಬೇಕಾದ್ದು ಭಗವದಿಚ್ಛೆಯಂತೆ ನಡೆವ ಕಾರಣ ಆದರ ತಾಪ ನಿಮಗೆ ಬೇಡವೆಂದು ದಾಸರ ಆಜ್ಞೆಯಾಯಿತು.

ಶಾಲೀವಾಹನ ಶಕ ೧೭೦೨ನೇ ಪಾರ್ಥಿವ ಸಂವತ್ಸರದ ವೈಶಾಖ ಶುದ್ಧ ಅಷ್ಟಮಿಯಿಂದ ಪ್ರತಿ ವರ್ಷವೂ ಆ ದಿನವು ಸಾವಿರಾರು ಜನರು

ಕಲೆತು ಆಚರಿಸುವ ದಾಸರ ಪುಣ್ಯತಿಥಿಯಾಗಿದೆ. ದಾಸರ ದೇಹಸಂಸ್ಕಾರ ಮಾಡಿದ ಸ್ಥಳದಲ್ಲಿ ಕಟ್ಟೆಯೊಂದಿದೆ. ಭಕ್ತಜನರು ಅದನ್ನು ಪಾವನ ಸ್ಥಳವೆಂದು ಭಾವಿಸುತ್ತಾರೆ. ಆರಾಧನೆಯ ಕಾಲದಲ್ಲಿ ದಾಸರಾಯರ ಪ್ರತೀಕಕ್ಕೆ ರಥೋತ್ಸವವಾಗುತ್ತಿದೆ; ಆ ಮಹಾನುಭಾವರ ಉಪಕಾರ ಸ್ಮರಣೆಯಾಗುತ್ತಿದೆ.



# ಮುಖ್ಯ ವಿಚಾರಗಳು

---

ಮೊದಲಕಲ್ಲು ಶೇಷದಾಸರ ವೈಭವದಿಂದ ಭಕ್ತವಿಜಯದ ಹರಿಶರಣರ ಭಾಗ ಪೂರ್ತಿಯಾಯಿತೆಂದೇ ಹೇಳಬೇಕು. ಹರಿದಾಸರ ಜೀವಿತೇತಿಹಾಸದಲ್ಲಿ ತಿಳಿಯಬೇಕಾದ ಏಕಾಂಶವೂ ತಿಳಿದಿಲ್ಲ. ತಿಳಿದ ವಿಷಯುಗಳ ಏಕಾಂಶವನ್ನೂ ಬರೆದಿಲ್ಲ. ಬರೆದಿಟ್ಟಿದ್ದರ ಏಕಾಂಶವನ್ನೂ ಮುದ್ರಿಸಿಲ್ಲ. ಜಗತ್ತಿಗೆ ಆದರ್ಶಜೀವನವನ್ನು ತೋರಿಸಿ ಲಕ್ಷಾಂತರ ಜನರನ್ನುದ್ಧರಿಸಿದ ನೂರಾರು ಪುಣ್ಯನಾಮರ ಮಧ್ಯದಲ್ಲಿ ಆರಿಸಿದ ಚರಿತ್ರೆಗಳೆಂದರೆ ಹತ್ತಾರು ಜನರದು ಮಾತ್ರ. ಮುದ್ರಿಸದೇ ಬಿಟ್ಟಿರುವುದರಲ್ಲಿ ಇತಿಹಾಸಕ್ಕೆ ಹೊಂದಿಕೆಯಾಗದವು ಕೆಲವು. ಪುರಂದರದಾಸರ ಮತ್ತು ವಿಜಯದಾಸರ ಜೀವಿತಗಳಂತಿರುವವು ಕೆಲವು.

ಕಳೆದ ಐವತ್ತು ವರ್ಷಗಳಲ್ಲಿ ದೇವರನ್ನು ಕಂಡ ಮಹಾಪುರುಷರೆಂಬ ಪೂಜ್ಯತೆಪಡೆದ ಹರಿದಾಸರ ಅವತಾರವಾಗಿಲ್ಲ. ಶಿಷ್ಟಾಚಾರ ಸಂಪನ್ನರು, ಧರ್ಮಪ್ರಚಾರಮಾಡಿದ ಪಂಡಿತೋತ್ತಮರು, ಎಂಬ ಸತ್ಕೀರ್ತಿಪಡೆದ ಹರಿದಾಸರು ಕೆಲವರಾಗಿದ್ದಾರೆ. ಅವರಲ್ಲಿ ಕ್ರಮವಾಗಿ ತೆಗೆದುಕೊಳ್ಳಬೇಕಾದ ಹೆಸರುಗಳೆಂದರೆ :—

## ೧. ಶ್ರೀನಿವಾಸದಾಸರು

ಶ್ರೀನಿವಾಸದಾಸರು ಮೈಸೂರಿನವರು. ಹೊನ್ನಾಳೀದಾಸರ ಪೀಳಿಗೆಯವರಿಂದ ಜಯವಿಠಲಾಂಕಿತವನ್ನು ಪಡೆದವರಿವರು. ಅನೇಕ ದೇವರನಾಮಗಳು, ರಗಳೆಗಳು, ಆಖ್ಯಾನಗಳು, ಶ್ರೀನಿವಾಸದಾಸರಿಂದ ಲಿಖಿತವಾಗಿವೆ ದ್ವಾರಕಾವರ್ಣನೆ, ವಿರಾಡ್ರೂಪ ವರ್ಣನೆ, ಮೋಹಿನೀರೂಪ ವರ್ಣನೆಗಳು ಮರಾಟೆಯ ಕಟಬಂದುಗಳಂತೆ ಲಾವಣಿಗಳೆಂಬ ಹೆಸರನ್ನು ತಾಳಿವೆ. ಪೂರ್ವೇತಿಹಾಸ ಸಹಿತನಾಗಿ ಮಾದರಿಗಾಗಿ ದ್ವಾರಕಾ ವರ್ಣನೆಯನ್ನು ಕೆಳಗೆ ಕೊಡಲಾಗಿದೆ.

## ಪೂರ್ವ ಸಂದರ್ಭ

ಮುಮ್ಮಡಿ ಕೃಷ್ಣರಾಜ ಒಡೆಯರು ಕ್ರಿ. ೧೮೧೧ರಲ್ಲಿ ಸರ್ವತಂತ್ರ ಸ್ವತಂತ್ರರಾಗಿ ರಾಜ್ಯವಾಳಲಾರಂಭಿಸಿದರು. ಟಿಪ್ಪೂಸುಲ್ತಾನನಿಂದ ನಾಶವಾಗಿದ್ದ ಕೋಟೆ ಕೊತ್ತಲಗಳೂ ಅರಮನೆಯೂ ಪುನಃ ನಿರ್ಮಾಣವಾಗಿ ಭಂಡಾರದಲ್ಲಿ ಧನಕನಕ ಸಮೃದ್ಧಿಯಾಯಿತು. ಕರ್ನಾಟಕ ಸಾಮ್ರಾಟ್ ಕೃಷ್ಣದೇವರಾಯನ ಅರಮನೆಯ ಧಾರ್ಮಿಕ ಪದ್ಧತಿಗಳು ಕೃಷ್ಣರಾಜ ಪ್ರಭುಗಳ ಅರಮನೆಯಲ್ಲಿ ನಡೆಯಬೇಕೆಂಬ ಕಟ್ಟಲೆಯಾಯಿತು. ಹಿಂದೂ ಸಂಸ್ಕೃತಿಗೆ ಒಂದು ಪ್ರಕಾರದ ನವಚೈತನ್ಯವುಂಟಾಯಿತು. ವಿವಿಧ ವಿದ್ಯಾ ವಿಶಾರದರಿಗೆ ರಾಜಾಶ್ರಯ ದೊರೆಯಿತು. ಸಂಸ್ಕೃತ ಕವಿಗಳಿಗೆ ದೊರೆತಂತೆ ಕನ್ನಡ ಕವಿಗಳಿಗೂ ಸ್ಥಾನಮಾನಗಳು ದೊರೆತವು. ಅನೇಕ ಕನ್ನಡ ಗ್ರಂಥಗಳ ರಚನೆಯಾಯಿತು. ಶಾಸ್ತ್ರಾಭ್ಯಾಸ ಹೆಚ್ಚಿತು.

ಇಂಥಾ ಸಮಯದಲ್ಲಿ ಒಂದು ಮಧ್ಯಾಹ್ನ! ತ್ರಿಮತಸ್ಥ ಪಂಡಿತರ ವಾಕ್ಯಾರ್ಥಗಳಾಗಿವೆ. ಒಂದೊಂದು ಮತದ ಪ್ರಕ್ರಿಯೆಯಿಂದೆಂದು ವರದಿಯಾಗಿದೆ. ಮೈಸೂರ ಅರಮನೆಯನ್ನು ವರ್ಣಿಸಿ ಕವಿಗಳು ಓದುತ್ತಿದ್ದಾರೆ. ಕನ್ನಡದ ವರ್ಣನೆಯನ್ನು ಕೇಳಿ ಮಹಾರಾಜರು—ಇದು ಕ್ಲಿಷ್ಟ; ಇದು ಹಳೆಗನ್ನಡ; ಅರ್ಥವಾಗುವದಿಲ್ಲ; ದೇವರ ನಾಮಗಳ ಭಾಷೆಯಲ್ಲಿ ವರ್ಣಿಸಬಾರದೇ ಎಂದು ಕೇಳಿದ್ದಾರೆ. ಕವಿಗಳು—ಆ ಶೈಲಿಯಲ್ಲಿ ಬರೆಯಲು ಹರಿದಾಸರೇ ಆಗಬೇಕೆಂದು ಉತ್ತರಕೊಟ್ಟಿದ್ದಾರೆ. ಈ ಮಾತಿನ ಕುಹಕವನ್ನು ಚಾಣಾಕ್ಷರಾದ ಮಹಾರಾಜರು ಗ್ರಹಿಸಿದ್ದಾರೆ. ಮಹಾರಾಜರು ನಗುತ್ತಾ ಅಂಥಾ ಹರಿದಾಸರು ಮೈಸೂರಲ್ಲಿ ಯಾರೂ ಇಲ್ಲವೇ ಎಂದು ಪ್ರಶ್ನೆಮಾಡಿದ್ದಾರೆ. ಶಾಸ್ತ್ರಜ್ಞರು ಶ್ರೀನಿವಾಸದಾಸರೊಬ್ಬರಿದ್ದಾರೆಂದು ಉತ್ತರಕೊಟ್ಟಿದ್ದಾರೆ. ರಾಜಾಜ್ಞೆಯಿಂದ ದಾಸರು ಪಂಡಿತರ ಸಭೆಗೆ ಬಂದಿದ್ದಾರೆ. ಪ್ರಭುಗಳು, ದಾಸರೆ, ಹರಿದಾಸರ ಶೈಲಿಯಿಂದ ಅರಮನೆಯನ್ನು ವರ್ಣಿಸಿ ಕವಿತೆ ಮಾಡುವಿರಾ ಎಂದು ಕೇಳಿದ್ದಾರೆ. ದಾಸರು—'ಪ್ರಭೋ! ನಾನು ನಿಯಮಬದ್ಧ ದಾಸ; ಲೌಕಿಕ ವರ್ಣನೆಗಳನ್ನು ಮಾಡಿ ಅಭ್ಯಾಸವಿಲ್ಲ; ಕೃಷ್ಣಪ್ರಭುಗಳ ಸನ್ನಿಧಿಯಲ್ಲಿ ಶ್ರೀಕೃಷ್ಣಪರಮಾತ್ಮನ ಒಡ್ಡೋಲಗವನ್ನು ವರ್ಣಿಸುವೆ' ನೆಂದು ಹೇಳಿದ್ದಾರೆ. ಮಹಾರಾಜರು ಆಗಬಹುದೆಂದು ಸಮ್ಮತಿಸಿದ್ದಾರೆ. ಶ್ರೀನಿವಾಸದಾಸರು ಪರಮಾತ್ಮನ ದ್ವಾರಕಿಯನ್ನು—

ಮಹರಾಜ ಯದುಕುಲಧಾಮ
ಸುರರಾಜ ಸುಂದರಶ್ಯಾಮ
ದ್ವಿಜರಾಜ ವಂಶಲಲಾಮ
ದನುಜಾಂತಕ ವರನಿಸ್ಸೀಮ ॥ ಪ ॥

ಮಹರಾಜ ! ಮಹರಾಜ ?
ಸುಂದರತರ ದ್ವಾರಾವತಿ ನಗರ
ಸುತ್ತಯೋಜನ ದ್ವಾದಶ ವಿಸ್ತಾರ
ಸಿಂಧೂರದಿ ತಿದ್ದಿದ ಗೋಪುರ
ಶಶಿಕೋಟಿ ಪ್ರಭೆಗಳ ಧಿಕ್ಕಾರ
ಒಂದಾರಿಂದಲಿಹದು ಪ್ರಾಕಾರ
ವಜ್ರಾನ್ವಿತ ಕವಾಟದ್ವಾರ ॥
ಬಂಧಿಸಿಹರು ಬಹು ರತ್ನಗಳಿಂದ
ಬುರುಜುಗಳವೆ ಬಹು ಲಕ್ಷಗಳಿಂದ ।
ಅಂದವಾದ ಅಳ್ವೇರಿಗಳು
ಕರಿವೃಂದಗಳಿಂದಲಂಕಾರಗಳು
ಮೇಲಿಂದ್ರನೀಲ ಪುತ್ಥಳಿಗಳ ತಿದ್ದಿ
ಇಟ್ಟಿಹರೈ ಪ್ರಾಕಾರದಿ ಹೊದ್ದಿ ।
ಮುಂದೆ ಮೃಗೇಂದ್ರನ ಮುಖಗಳ ರಚಿಸಿ
ಮಾಣಿಕ್ಯಗಳದರಲಿ ಮೇಳವಿಸಿ ।
ಒಂದೇ ರೀತಿಯೊಳಿರುವ ತೆನೆಗಳು
ವರುಣಾಲಯದಂತಿರುತಿಹೆ ಅಗಳು ।
ಮಂದರಗಿರಿಯಂದದಿ ಉನ್ನತ
ಮೂರು ಲೋಕದೊಳು ಬಲು ಪ್ರಖ್ಯಾತ ।
ಸಿಂಧುಮಧ್ಯದೋಳೆಸೆವುದು ನಗರ
ಸೀಮೆಯೊಳಾವನು ಬಲ್ಲನು ಚದುರ
ಚಂದ್ರನ ಸುಕರ
ಮುತ್ತಿನ ಮಕರ

ತೋರಣ ನಿಕರ
ರತ್ನದ ಶಿಖರಗಳವೆ ಸಾವಿರ
ಬಂಧನ ಮುರಗಿಗಳಿಂದ
ವಿಮಾನಗಳಿಂದ
ಪತಾಕೆಗಳಿಂದ
ಸುಕೌಶಲದಿಂದ
ದಿವೌಕಸ ವೃಂದ
ವಿಚಿತ್ರ ಸುಗಂಧ
ವಿಶೇಷಗಳಿಂದತಿ ನೋಡಲು
ಚೆಂದಳಿ ವೃಂದಾರವಿಂದಗಳ್ದೊಂದಿಸು
ಮಂದರಸ್ವರ ಪಿಕವೃಂದ ಧ್ವನಿಗಾನಂದವಿಸೆ
ಹರುಷಂಕುರಿಸೆ
ಸುಖವೋಹರಿಸೆ
ಜನ ಮೈಮರೆಸೆ
ಸುಮಂದಿರಗಳಮೇಲ್
ಚಂದ್ರಶಾಲೆಗ
ಳಿಂದಲೆಸೆಯೆ ಪೂ
ರ್ಣೇಂದು ವದನೆಯರು
ಪಂಕಜಾಕ್ಷಿಯರು
ಮಂದಹಾಸೆಯರು
ಮೃದುಗಾತ್ರೆಯರು
ಅಂದಣಗಳಲಿ ವಿಹರಿಸುತಲಿರೆ
ವರಸಾಂದ್ರವಾದ ಜಾಳಾಂದ್ರಗವಾಕ್ಷಗಳಿಂದ
ಲೆಸೆವ ಮೇಲುಪ್ಪರಿಗೆಗಳಿರೆ
ಗಂಧಪನ್ನೀರಿನ ತಳಿಯ ಹಾಕಿಹರು
ಘಮಘಮಿಸುವ ಪುಷ್ಪಗಳ ಕಟ್ಟಿಹರು
ಸ್ಯಂದನಗಳು ಶತಸಾವಿರ ಸಂಖ್ಯೆಯೊಳ್

ನಿಂದವೆ ಪುರದ್ವಾರದಲಿ
ವೃಷ್ಣ್ಯಂಧಕರಾಯುಧಗಳ ಪಿಡಿದು
ಆರರೇ ನಿಂದಿಹರು ಮುದದಲ್ಲಿ
ಕರಿವೃಂದ ತುರಗ ಕಾಲಾಳುಗಳು
ಪುರವೀಧಿ ವೀಧಿಗಳಲ್ಲಿ
ಸುನಂದನಂದ ಸನಕಾದ್ಯರು ಬಂದು
ನಿಂದಿಹರು ಸಮುಖದಲಿ
ವರಕುಂದಣದಂತೆ ವಿರಾಜಿಸುವಾಮಲ ಭಿತ್ತಿಗಳು
ನವರತ್ನಗಳು
ಸಾಲಿಂದಲೆಸೆವ ನವದ್ವಾರಗಳು
ಆಗಾರಗಳು
ಥರದಿಂದ ತೋರ್ಪ ಮೇಲ್ಕಟ್ಟುಗಳು
ನೆಲಗಟ್ಟುಗಳು
ಜಲಬಿಂದುಗಳಿಂದಾನಂದಕೊಡುವ ಕಾರಂಜಿಗಳು
ಸುಮಪುಂಜಗಳು
ಮಹೇಂದ್ರನಿರುವ ಅಮರಾವತಿಯೋ
ಇದಕಟ್ಟಿದವನ ಪ್ರವೀಣತೆಯೋ
ಬಲು ಸಂದಣಿ! ಬಲು ಸಂದಣಿ
ಬಲುಸಂದಣಿ ಸುರರೈತಂದು ದ್ವಾರದಲಿ
ನಿಂದು ಸ್ವಾಮಿ ಪರಾಕು
ನಮ್ಮಸುವಾಕು
ಲಾಲಿಸಬೇಕು
ಎಂತೆಂದಿಂದ್ರಾದ್ಯರು ನಿಂದೊದರೆ
ಆ ಗರ್ಜನೆಗೇ ನೆಲಬೆದರೆ ॥ ೧ ॥

ಝುಗಿಝುಗಿಸುವ ಶಿರಿಕರವ ಕನ್ನಡಿಯೊ
ಜಗದೊಳಗಿಲ್ಲವ ಸ್ಮರನ ಗರುಡಿಯೊ
ನಗವೈರಿಗೆ ಇದು ನಾಟ್ಯಚಾವಡಿಯೊ

ನಾಗನಗರಿಯು ಪ್ರಭೆಗಿಮ್ಮಡಿಯೋ
ನಗರದಮಲ ಸುಕಾಂತಿಚ್ಛವಿಯೋ
ನಗಜಾರಮಣನ ರಜತದ ಗಿರಿಯೊ
ನಾಗರತ್ನದಿಂ ರಚಿಸಿದ ಗುಡಿಯೊ
ವಿಗಡಮದನಕರ ಸುರಗಿಯ ಕಿಡಿಯೊ
ಮೃಗಶಾಬಾಕ್ಷಿಯರಿಗೆ ಎದೆಪುಡಿಯೊ
ಮೃಗಧರ ಮಾರ್ತಾಂಡರುಗಳ ಫಡಿಯೊ
ಮಜಭಾಪುರೆ ವೈರಾಜನ ಸಭೆಯೊ
ಜಗವನು ಬೆಳಗಿಪ ದೀಪದ ಕುಡಿಯೊ
ಜಗತೀಪತಿ ಶ್ರೀಹರಿಯದೇವಡಿಯೊ
ನಗುತಿವೆ ದೀಪಾವಳಿಗಳು ಸ್ತಂಭಾ
ದಿಗಳಲಿ ಸ್ವರ್ಗವನೋಡಿ ಮೇಲ್
ಗಗನವ ಚುಂಬಿಪ ಗಾಢತರದಿ
ಗಂಭೀರದಲೊಪ್ಪುವ ಮಹಡಿ
ಹೊಗಹೊರ್ಗುತಿಹ ಚಿತ್ತಾರಗಳಲಿ ಶೋಭಿಪ
ಸ್ವರ್ಣಮಯದವರ ಗ್ವಾಡಿ
ಗ್ವಾಡಿಗಳಲಿನೋಳ್ಪರ ಚಿತ್ತಭ್ರಾಮಕ
ಚೌಕಡೆಯಲಿ ನಿಲುಗನಡಿ
ಸಾಲುಗಳಲಿ ಮಣಿಮಯಸ್ತಂಭಗಳು
ರುಗ್ಮಗಳಲಿ ತಿದ್ದಿದ ಲೋವೆಗಳು
ರಜತದಲಿ ಮಾಡಿದ ಹಂಸೆಗಳು
ಕುಸುಮಗಳಿಂದಲೊಪ್ಪುವ ಬೇಲುಗಳು
ಜಾಗರದಲಿ ರಂಜಿಪ ನವಿಲುಗಳು
ಅರಗಿಳಿಯ ಸಾಲುಗಳು
ಅರಳಗುಚ್ಛಗಳು
ಅಗಣಿತ ರತ್ನಾನ್ವಿತ ಪೀಠಗಳು
ಅದ್ಭುತವಾದ ವಿಚಿತ್ರ ದ್ವಾರಗಳು

ಸೊಗಸಿನ ಚಿತ್ರದ ಮೇಲ್ಕಟ್ಟುಗಳು
ಸುಂದರಿಯರ ಸುಖಕರದ ಗಾನಗಳು
ತೆಗೆದ ಲಕ್ಷ ಗವಾಕ್ಷಗಳು
ತಾರೆಗಳಲಿ ತಿದ್ದಿದ ಕುಸುರಿಗಳು
ಕುಸುರಿಗಳಲಿ ಮುತ್ತಿನ ಚೆಂಡುಗಳು
ಚೆಂಡುಗಳಿಗೆ ರತ್ನದ ಗೊಣಸುಗಳು
ಗೊಣಸುಗಳಲಿ ಮೇಲೊಪ್ಪುವ ಕಮಲಗಳು
ಕಮಲಗಳಲಿ ಮೆರೆವಾ ಭ್ರಮರಗಳು
ಸುಮುದರಳುಗಳು
ಮಘಮಘಿಸುವ ಗಂಧಾದಿಗಳಿಂದೊಪ್ಪುವ ಮಂಚಗಳು
ಸ್ಮರ ಸಂಚುಗಳು
ತೆಗೆ ಮಿಗಿಲುಂಟೆ ಈ ಜಗದೊಳು ಶಿರಿಕರ
ಯುಗಳದಿ ಸೌಭಾಗ್ಯವ ತಾ ಧರಿಸಿ
ನಗರದಿ ನೆಲೆಸಿಹಳ್ಳಿ ಹರಿಯರಸಿ
ತಾ ಮನವೆರಸಿ
ಸುಖವನುಸುರಿಸಿ
ಹರಿಯನುಸರಿಸಿ
ದುಃಖವಮರೆಸಿ
ಪೊಗಳಲೊಶವೆ ಮಹಾರಾಜ ಸುರೋತ್ತಮ
ಸೆಜ್ಜೆಯಮೇಲಕೆ ಸ್ವಾರಿ
ಮೂರುಹೆಜ್ಜೆಯಿಡಲು ಜಂಬಾರಿ
ತಾಲಜ್ಜಿಸಿ ಬಿಟ್ಟನು ದಾರಿ
ಬಲುಃ ಜರ್ಝರಿಸಿತು ಸುರನಗರಿ ॥ ೨ ॥

ಶಿರಿಯರಸನ ಶ್ರೀಮುಖದ ಶೃಂಗಾರ
ಶಶಿಕೋಟಿಪ್ರಭೆಗಳ ಧಿಕ್ಕಾರ
ಅರಳಿದ ಕುಸುಮಮಂಜರಿಗಳ ಹಾರ
ಆಡುವ ಮತ್ತಾಳಿಗಳ ಝೇಂಕಾರ

ಮರಕತ ಸುಂದರಶ್ಯಾಮ ಶರೀರ
ಮಕರಧ್ವಜ ಸಾಶಿರನಾಕಾರ
ಶಿರಿಮುಡಿಯೊಳು ಶೃಂಗಾರಕಿರೀಟ
ಸುಮನೋಹರದಲಿ ತಿದ್ದಿದನೊಸಲು ನೋಟ
ಕರುಣಾರಸಪೂರಿತ ಅರೆನೋಟ
ಕಾಮಿತಕೊಡುವದು ಈಭ್ರೂವಿಲಾಸ
ವರಕಸ್ತೂರೀತಿಲಕಲಲಾಟ
ವಾಮಾಕ್ಷಿಯರಿಗೆ ಇದೆ ಎದೆಗೂಟ
ಸರಸಿಜದಳನೇತ್ರಗಳ ವಿಲಾಸ
ಸರಸೋಕ್ತಿಗೆ ಸೂಸುವದು ಪೀಯೂಷ
ಪರಮುದಯಾಳುಗಳಿಗೆ ಇವಆರಸ
ಪರಿಪರಿಯಲಿ ಸುಖಕರೆಸುವ ಪರುಷ
ಕೊರಳಲಿ ಮೆರೆಯುವ ಮುತ್ತಿನಕಂಠೀ
ಕಿವಿಯೊಳು ಶೋಭಿಪ ಮಕರದ ವಂಟೆ
ತರುಣಾದಿತ್ಯನ ಪೋಲುವ ಪದಕ
ತೋರುತಲದೆ ನೋಡು ಫಾಲದಿ ಅಳಕ
ಕರದೊಳು ಹಾಕಿದ ರತ್ನದ ಥೋಡೆ
ಕೌಂಸ್ತುಭರತ್ನಕೆ ನೋಡಿನ್ನೀಡೆ
ಅರುಣಾಧರ ದಾಳಿಂಬ ಸುದಂತ
ಅಂಬುಜಕಂಬುಗದಾರಿ ಕರಾಂತ
ಸರಸಿಜನಾಭಿತ್ರಿವಳಿಗಳಿಂದ
ಸುಂದರಬಾಪುರಿಗಳು ಬಲು ಅಂದ
ಸುರುಚಿರಾಂಬರಭೂಷ ವಿಲಾಸ
ಸುಮನಸರೀಕ್ಷಿಸೆ ಪರವೋಲ್ಲಾಸ
ಪುರಹರ ಸುರನರವಂದಿತ ಪಾದ
ಪುಣ್ಯಶ್ಲೋಕರಿಗಿದು ಸುಸ್ವಾದ
ಮಹಿಮೆ ಅಗಾಧ

ಮನಕತಿ ಮೋದ
ಬಿರಿದಿನ ಖಡೆಯು
ಭಳಿರೆನ್ನೊಡೆಯು
ಮುರಮಧು ನರಕಾಸುರ ಸಂಹಾರಿ
ಮುರಳೀಧರ ಗೋವರ್ಧನಧಾರಿ
ಕಂಸಕುಠಾರಿ
ಗರುಡನ ಏರಿ
ಬರುತದೆ ಸ್ವಾರಿ
ಬಿಡಿಬಿಡಿ ದಾರಿ
ಕರಲಾಘವದಿಂ
ಕರಿಯು ಗಮನದಿಂ
ಹರಿ ದಯವಾಡುವ ಛಂದ
ಮುಂ|ದಿರದೆ ಪೊಗಳ್ವ ಪಾಠಕರುಗಳು
ಬ್ಬರದಲಿ ರಂಜಿಪ ಶ್ವೇತಛತ್ರಿಯು
ಛಾಯದಿ ಬರೆನಲವಿಂದ
ಸುಂ|ದರಿಯರು ಸಮುಖದಿ ನಾಟ್ಯಗಳಂ ವಿ
ಸ್ತರಿಸುವರತಿ ನಯದಿಂದ
ವಿಟ | ಪುರುಷರ ಮನಸಪಹರಿಸುವರು
ಸುಭ್ರೂಗಳ ಸನ್ನೆಗಳಿಂದ
ವಿಹರಿಸುವ ಸುಂದರಿಯರ ವರ್ಣಿಸೆ
ತ್ರೈಲೋಕ್ಯದಿ ನಾನರಿಯೆಂದ
ಹಿಮಕರನ ಮಂಡಲವೊ
ಮುಖಮಂಡಲವೋ
ಸರಸಿಜಾಕ್ಷಿಯರ ಶುಭನೋಟಗಳೊ
ಸ್ಮರನ ಕರಚ್ಯುತವಾದ ವೇತ್ರಗಳೊ
ಪರಿವೃತ ದಳಕಾವಳಿ ಝುಮುರುಗಳೊ
ಪಂಕಜದೊಳ್ ಝೇಂಕರಿಪ ಭೃಂಗಗಳೊ

ಉರದೊಳು ವರ್ತುಳ ಸ್ತನಭಾರಗಳೊ
ಉನ್ನತ ಕಾಂಚನ ಗಿರಿಶಿಖರಗಳೊ
ಕಿರಿದುದರದ ಮೇಲ್ರೋಮರಾಜಿಗಳೊ
ಕಾಮನಗಿರಿಗೇರುವ ದಾರಿಗಳೊ
ಸ್ಮರನಂತಃಪುರ ಸೋಪಾನಗಳೊ
ಸೂಕ್ಷ್ಮೋದರದೊಳಿಹ ತ್ರಿವಳಿಗಳೊ
ಹರಡಿ ಕಂಕಣದ್ವಾರ್ರ್ಯಾ
ಹಿಂದೊಪ್ಪುವ ಹೆರಳ ಭಂಗಾರ
ಭರ್ಜರಿಯ ಶರಗಿನೊಯ್ಯಾರ
ಅರೆಬಿರಿದ ಮಲ್ಲಿಕಾಹಾರ
ಬಿಗಿದಿರುವ ಕುಪ್ಪುಸ ಸರಸರಿಗೆ ಮುತ್ತಿನ
ಮುಖರಮೇಲೆ ಹಣಿಬಟ್ಟು
ಕೇಸರಿಯ ಮಧ್ಯದಂತಿರುವ ನಡುವು
ಸ್ತನಭರಕೆ ಬಳುಕೆ ಕರವಿಟ್ಟು
ಅಪ್ಸರೆಯರೆಲ್ಲ ಸುಸ್ವರಗಳಿಂದ
ಶೃಂಗರರದ ನಾಟ್ಯದೊಳ್ ಮೆರೆಯೆ
ವಿಸ್ತರಿಸಲೀಕೆ ನಾಸರಿಯೆ
ಚಿತ್ರರಲಿ ಎನ್ನಕಡೆ ಥೊರೆಯೆ
ನವತರುಣಿಯರು
ಶಶಿಕಿರಣೆಯರು
ಮೃದುಃಚರಣೆಯರು
ಸು ವರಣೆಯರವಿತಾ
ಭ| ರಣೆಯರಾರತಿಗಳ ಪಿಡಿದಿರುವರು ಛಂದ
ತರತರದಿಂದೊಪ್ಪುವ ಕಲಶ ಕನ್ನಡಿಗಳ
ಧರಿಸಿರುವರು ಕರದಿಂದ
ವಿಪ್ರರುಗಳು ಆಶೀರ್ವಾದಗಳಿಂದಲಿ
ಸೂಸುವ ಸೇಶೆಗಳಿಂದ

ಸುರಪುರದ ಸುಂದರಿಯರು
ಕುಸುಮಗಳ ಸುರಿಸುವರು ಮೇಲಿಂದ
ಸುಧರ್ಮಾ ಸಭಾಸ್ಥಾನದಲಿ ಪೃಥ್ವಿಪತಿಗ
ಳದೇ ಬಹುವೃಂದ
ಬಹು ಹರುಷದಿಂದ ಸಿಂಹಾಸನಸಾರಿ
ಗರುಡಧ್ವಜ ಗಂಭೀರದಿ ಏರ
ಸುರಕಂಠೀರವ ಮೆರೆಯಲು ಭೇರಿ
ಹೊಡೆಯೆ ನಗಾರಿ
ಕಹಳೆ ತುತೂರಿ
ತಮ್ಮಟೆ ಪೌರಿ
ಮುರಜಢಕ್ಕ ಜರ್ಝರಿಪ ಭಟರ
ಅಬ್ಬರಕೆ ಜರಿಯೆ ಗಿರಿಕೂಟ
ಘೋರ್ಗರೆವ ಶರಧಿ ಆರ್ಭಾಟ
ದುರ್ಧರವು ಕರ್ಣಕಾಸ್ಫೋಟ
ನೀರ್ಗರೆವ ಮೇಘದಬ್ಬರವೊ
ಶಿಡಿಲಿನುಬ್ಬರವೊ
ಅರಿಯೆ ದರ್ಬಾರ
ವತ್ತರದಿ ನೆರೆದ ಪರಿವಾರ
ಭೂತರುಣಿಯುರಮುರ ಶೃಂಗಾರ
ರಸಭರಿತ ವದನ ಚಂದಿರ ॥ ೩ ॥

ಜಲಜನಾಭ ಶ್ರೀಕೃಷ್ಣನಮುಂದೆ
ಜಯವಿಜಯಾದ್ಯರು ನಿಂದಿಹರಂದೆ
ಕಳವಳಗೊಡುತಿಪೆ ವಾದ್ಯದ ಘೋಷ
ಕರಿಗಳ ಸಾಲದೆ ಗಿರಿಸಂಕಾಶ
ಹೆಳವಿಗಿಹಚ್ಚಿದ ಹೇಮರಥಗಳು
ಹರಿವೇಗದಿ ರಂಜಿಸುವಶ್ವಗಳು
ಬಲಿದುನಿಂತ ಬಲು ಬಿರಿದುಗಳನ್ನು

ಬೆಳ್ಳಿಬೆತ್ತಗಳಗಣನಿನ್ನೇನು
ಘುಳಿಘುಳಿಸುತಲದೆ ಶಂಖದನಾದ
ಗರುಡ ಧ್ವಜನಿಗೆ ಅದು ಬಲುವೋದ
ಬಲಶಾಲಿಗಳದೆ ಲಕ್ಷಸಂಖ್ಯಾತ
ಬರಿಮಾತಲ್ಲಿದು ಕೇಳನ್ನವಾತ
ಝುಳುಪಿಸುವರು ಖಡ್ಗಗಳನು ಪಿಡಿದು
ಜ್ಯಾಘೋಷಗಳನು ಮಾಳ್ಪರು ಜಡಿದು
ಬಳಸಿ ನಿಂತ ಯದು ವೀರರಗಡಣ
ಬಾಯಲಿ ಕೊಂಡಾಡುವನೇ ನಿಪುಣ
ಘಲಘಲಿರೆಂಬುವ ಗಗ್ಗರಿಭಲ್ಲೆ
ಘರ್ಜಿಸುವದು ನೋಡು ಬಿರುದಿನಕಹಳೆ
ಕಳಕಳಿಸುತಲದೆ ಮಹಸೌರಂಭ
ಕುಂಭಿಣಿಗಾಶ್ಚರಿಯದ ಸಿರಿ ತುಂಬಿ
ತುಳುಕುತದೇ ಸೌಭಾಗ್ಯದಿ ನಗರ
ತುದಿ ಮೊದಲಾವನು ಬಲ್ಲನು ಚದುರ
ಜಲಜಭವಾಂಡದೊಳಾರಿಸಿ ನೋಡಾ
ಜೋಡುಂಟೇ ನಮ್ಮ ಧೊರೆಗೆಲೊ ಮೂಢ
ಶಿಳಿನಡುವಿನ ಶೃಂಗಾರದ ಸತಿಯರು
ಸರಿಸದಲಿ ನಿಂದಿಹರು
ಕೆಂದಳಿರು ಪೋಲುವ ಹಸ್ತಗಳಿಂ
ಚಾಮರಗಳ ಹಾರಿಸುತಿಹರು
ಪುತ್ಥಳಿಗಳಂತೆ ನಿಲುಗನಡಿಗಳನು
ಕರದಲ್ಲೀ ಪಿಡಿದಿಹರು
ಚಿಗುರೆಲೆಯಿಂದೊಪ್ಪುವ ತಾಂಬೂಲಗಳನು
ಚಿನ್ಮಯಗೇ ಕೊಡುತಿಹರು
ಮದ್ದಳೆಯು ತಾಳ ತಂಬೂರಿ ಸುವೀಣಾ
ವಾದ್ಯವುಲಯುಸ್ವರ

ಬದ್ಧದಿಂದ ಸುಬುದ್ಧಿವಂತರೆ
ಲ್ಲೆದ್ದು ನಿಂತು ತಮ್ಮ
ವಿದ್ಯಗಳನು ತೋರುವರು
ಸುಪದ್ಧತಿಗಳ ಬಲ್ಲವರು
ಭಳಿರೆಭಳಿರೆ ಸದ್ಗುಣಗಣನಿಲಯ
ಭಕ್ತಜನಾವಳಿಗೆಲ್ಲನೀ ಸದಯ
ಬಲಿಗೊಲಿದತಿ ಸುಂದರತರಮೂರ್ತಿ
ಭೂವ್ಯೋಕಾಶದಿ ತುಂಬಿತು ಕೀರ್ತಿ
ಜಲಜನಾಭವರ ಜಾಹ್ನವಿಜನಕ
ಜಗತೀಪತಿ ಜಯ ಯದುಕುಲತಿಲಕ
ಖಳಕುಲ ಮೂಲೋತ್ಪಾಟನ ಕಾರಿ
ಕುಜನಕುಠಾರಿ
ಕೌಸ್ತುಭಧಾರಿ
ಫಲುಗುಣಸಖ ಜಯವಿಠಲ
ಎಂದು ಹೊಗಳುತಿರೆ ಬಂದಿಗಳು
ಮಂಜುಳದ ದಿವ್ಯತರನಾದಗಳು
ಎಲ್ಲೆಲ್ಲುತೋರ್ಪ ವಿನೋದಗಳು
ಭೂವಲಯದಲ್ಲಿ ಮಹರಾಜಸಭಾ
ಶೋಭಿಸುವದು ಶತಸೂರ್ಯನಿಭಾ
ಪ್ರಭೆತುಂಬಿ ಚುಂಬಿಸುತಿದೆ ನೋಡುನಭಾ
ಭೂವಲಯಕೆ ಇದು ವೈಕುಂಠಸಭಾ ॥ ೪ ॥

ಎಂಬ ಮಾತುಗಳಿಂದ ವರ್ಣಿಸಿದ್ದಾರೆ.

ದ್ವಾರಕಾವರ್ಣನೆಯನ್ನು ಕೇಳಿ ಕವಿಗಳು ತಲೆದೂಗಿದರು. ಪಂಡಿತರು ಕೊಂಡಾಡಿದರು. ಮಹಾರಾಜರು ಇಂಥವರೂ ಮೈಸೂರಿನಲ್ಲಿದ್ದಾರೆಯೇ ಎಂದರು!

ಮಾಡುವುದೇನು? ನಿಜವಾದ ಯೋಗ್ಯತೆಯುಳ್ಳವರಿಗೆ ರಾಜಾಸ್ಥಾನಗಳಲ್ಲಿ ಪ್ರವೇಶವಿರುವುದಿಲ್ಲ. ಸಮೀಪವರ್ತಿಗಳು ಯೋಗ್ಯರನ್ನು ಸೇರ

ಗೊಡುವುದಿಲ್ಲ. ಯೋಗ್ಯತಾಪುರುಷರು ತಾವಾಗಿ ಮುಂದೆಬಿದ್ದು ಪ್ರಶಂಸೆ ಮಾಡಿಕೊಳ್ಳುವುದಿಲ್ಲ. ರಾಜರುಗಳಾದರೋ ದೂತರ ಮುಖದಿಂದ ಲೋಕ ವಾರ್ತೆಯನ್ನು ತಿಳಿಯುವರಲ್ಲದೆ ಪ್ರಮಾಣಿಸಿ ನೋಡುವರಲ್ಲ. ಇದು ಒಂದುಕಾಲದ ಮಾತಲ್ಲ.

ಕೃಷ್ಣರಾಜ ಒಡೆಯರು ಸುಪ್ರೀತರಾಗಿ ಮಾಡಿದ ಬಹುಮಾನವೆಂದರೆ ದಾಸರಾದ್ದರಿಂದ ಒಂದು ಬೆಳ್ಳಿಯ ಬವನಾಸಿ; ಅದರ ತುಂಬ ಒಂದು ಸಹಸ್ರ ರೂಪಾಯಿ; ರಾಜಯೋಗ್ಯವಾದ ಶಹಲು ಜೋಡಿ.

---

# ಮೈಸೂರು ಕೃಷ್ಣದಾಸರು

ಇವರೂ ಹೊನ್ನಾಳೀದಾಸರ ಪೀಳಿಗೆಯವರಲ್ಲಿ 'ಗುರು ಶ್ರೀನಿವಾಸ ವಿಠಲ' ಎಂಬ ಅಂಕಿತವನ್ನು ಪಡೆದು ಕವಿತೆ ಮಾಡಿದ್ದಾರೆ. ಇವರ ಪದ ಸುಳಾದಿಗಳು ಪ್ರಮೇಯಪುಂಜಗಳಾಗಿವೆ. ಗಯ ಚರಿತ್ರೆಯೆಂಬ ಭಾಮಿ ನೀಷಟ್ಪದಿಯಲ್ಲಿ ಬರೆದಿರುವ ಕಾವ್ಯವು ಮುದ್ರಣವಾದರೆ ಶಾಲೋಪಯೋಗಿ ಯಾಗುವುದರಲ್ಲಿ ಸಂಶಯವಿಲ್ಲ. ಭಗವದ್ಗೀತೆಯನ್ನೂ ಕೃಷ್ಣದಾಸರು ಭಾಮಿನೀಷಟ್ಪದಿಯಲ್ಲಿ ಬರೆದಿದ್ದಾರೆ. ಉಪಲಬ್ಧವಾಗಿರುವ ಹಸ್ತಪ್ರತಿ ಯನ್ನು ನೋಡಿದರೆ ಅದು ಭಗವದ್ಗೀತೆಯ ಭಾಷಾಂತರ ದೃಷ್ಟಿಯಿಂದ ಮಾಡಿದ ಗ್ರಂಥವಾಗಿ ಕಾಣುವುದಿಲ್ಲ. ಇವರಲ್ಲಿ ಪ್ರಮೇಯ ಗ್ರಂಥಗ ಳನ್ನು ವ್ಯಾಸಂಗ ಮಾಡುವ ಶಿಷ್ಯರು ಹೇರಳವಾಗಿದ್ದರು.

---

# ರಾಮರಾಯರು

ಸರವಿರ್ಾ ಕಛೇರಿಯ ರಾಮರಾಯರ ಹೆಸರು ಮೈಸೂರಿನ ದಾಸ ಕೂಟಸ್ಥರಿಗೆ ಪರಮಪೂಜ್ಯವಾದ ಹೆಸರು. ರಾಯರು ಸರ್ಕಾರದ ಉದ್ಯೋ ಗಸ್ಥರಾಗಿದ್ದರೂ ಪರಮ ವೇದಾಂತಿಗಳಾಗಿದ್ದರು. ಇವರ ಶಿಷ್ಯರೇ ಅಟ್ಯಾಚೀ ವೆಂಕಟರಾಯರು. ಇವರು ಮೈಸೂರು ಸರ್ಕಾರದಲ್ಲಿ ಡೆಪ್ಯೂಟೀ ಕಮಿಷ ನರ ಪದವಿಗೇರಿ ನಿವೃತ್ತರಾಗಿ ಮೊನ್ನೆ ಮೊನ್ನಿನವರಿಗಿದ್ದರು. ಉಭಯ

ರಾಯರೂ ಮಾಡಿದ ವೇದಾಂತಪುಂಜ ದೇವರ ನಾಮುಗಳು ಗೋಪಾಲಕೃಷ್ಣ ದೇವಾಲಯದಲ್ಲಿ (ಕಟ್ಟೀಮನೆ) ದೊರೆಯುತ್ತವೆ.

---

## ದೂರ್ವಾಸರಾಯರು (ದೂರಪ್ಪ ದಾಸರು)

ಇವರು ಸವಣೂರು ದಿವಾನ ಖಂಡೇರಾಯರ ಮಕ್ಕಳು. ದೊಡ್ಡ ಪೂರ್ಣಯ್ಯನವರು ತಮ್ಮ ನಂತರ ಇವರನ್ನು ಮೈಸೂರು ದಿವಾನಗಿರಿಗೆ ತರ ಬೇಕೆಂದು ಪ್ರಯತ್ನಮಾಡಿದ್ದರಂತೆ! ಅರಮನೆಯಿಂದ ದೊಡ್ಡ ಅಧಿಕಾರ ಕೊಡುವ ಆಮಂತ್ರಣ ಬಂದಾಗ ರಾಯರು ಕರ್ಜಗಿದಾಸರ ಆಜ್ಞೆಯನ್ನು ಕೇಳಿದರಂತೆ! ದಾಸರು ಲೌಕಿಕ ಮಾಡುವದು ದೇವರ ಸಂಕಲ್ಪದಲ್ಲಿಲ್ಲವಾದ್ದ ರಿಂದ ನೀನು ಹರಿದಾಸನಾಗೆಂದು ಅಪ್ಪಣೆಮಾಡಿದರಂತೆ! ರಾಯರು ಭಾಗ್ಯ ನಿಧಿ ವಿಠಲಾಂಕಿತ ಪಡೆದು ಹರಿದಾಸರಾಗಿ ರಾಜದರ್ಶನಕ್ಕೆ ಬಂದರಂತೆ! ಲೌಕೀಕಮಾಡದೆ ಹರಿದಾಸರಾಗಿ ಬಂದ ರಾಯರನ್ನು ಕೃಷ್ಣರಾಜ ಒಡೆಯರು ಬಹು ಸನ್ಮಾನಿಸಿದರಂತೆ!

ದೂರ್ವಾಸದಾಸರ ದೇವರ ನಾಮುಗಳು ಬಲು ಬಂಧುರವಾಗಿವೆ. ದಿವಾನ ಗಿರಿ ಮಾಡಿದವರ ಮಕ್ಕಳಾಗಿದ್ದುದರಿಂದಲೂ ಕೃಷ್ಣರಾಜ ವಡೆಯರ ಮಹ ದಾಶ್ರಯ ದೊರೆತ ಕಾರಣದಿಂದಲೂ ರಾಯರು ಸವಣೂರಿಗೆ ಪುನಃ ಹೋಗಿ ವಾಸಮೂಡುವದನ್ನು ಗೌರವವಾಗಿ ಎಣಿಸಲಿಲ್ಲ. ಹೀಗಿರಲು ಮೈಸೂರಿನ ರಾಜಕೀಯವು ಕೆಟ್ಟು ರಾಜ್ಯಾಡಳಿತವು ಕಮಿಷನರದಾಯಿತು. ರಾಯರಿಗೆ ರಾಜದರ್ಶನವು ಅತ್ಯಂತ ದುರ್ಲಭವಾಯಿತು. ದೊಡ್ಡಸ್ತಿಕೆಯ ಜೀವನ ದಿಂದ ಋಣಭಾರ ಬಹಳವಾಯಿತು. ಮಹಾ ಪ್ರಭುಗಳನ್ನು ಪಶ್ಚಿಮವಾಹಿ ನಿಗೆ ಕಾವೇರೀ ಸ್ನಾನಕ್ಕೆ ಬರುವ ಮಾರ್ಗದಲ್ಲೇ ಕಾದಿದ್ದು ಕಾಣುವುದರ ವಿನಾ ಅನ್ಯೋಪಾಯವಿಲ್ಲದಂತಾಯಿತು. ಕಾದಿದ್ದರ ಫಲವಾಗಿ ರಾಯರಿಗೆ ಸುಬ್ಬರಾಯನ ದೇವಸ್ಥಾನದ ಬಳಿಯಲ್ಲಿ (3 miles from Mysore) ಪಂಚಕಲಶದ ರಥದಲ್ಲಿ ಬರುವ ಮಹಾರಾಜರ ದರ್ಶನವಾಯಿತು. ಮಹಾ ರಾಜರು—ಏನು ದಾಸರೆ, ಇಲ್ಲಿ ಬಂದಿರಿ, ಹೀಗೆ ಬಂದಿರಿ; ಎಂದರು. ದೂರಪ್ಪ ದಾಸರು— ಪ್ರಭುದರ್ಶನಕ್ಕಾಗಿ ಅನ್ಯೋಪಾಯವಿಲ್ಲದೆ ಹೀಗೇ ಬಂದೆ ನೆಂದರು. ಮಹಾರಾಜರು ಕನಿಕರದಿಂದ ದಾಸರ ಗೃಹಕೃತ್ಯಗಳನ್ನು ವಿಚಾ

ರಿಸಿ, ಅವರ ಋಣಭಾರವನ್ನು ಪರಿಹರಿಸಿ, ರಾಯರ ಮಕ್ಕಳಿಗೆ ಬೆಂಗಳೂರಲ್ಲಿ ಕಮಿಾಷನರ ಕಛೇರಿಯಲ್ಲಿ ನೂರು ರೂಪಾಯಿಗಳ ಉದ್ಯೋಗವನ್ನೂ ಕೊಡಿಸಿ, ಉಪಕಾರಮಾಡಿದರು. ಕೆಳಕಂಡ ಪದವು ತಮ್ಮ ತಾಪತ್ರಯ ಗಳನ್ನು ಹೇಳಿಕೊಳ್ಳುವ ಸಂದರ್ಭದಲ್ಲಿ ಪ್ರಭುಗಳ ಮುಂದೆ ಹಾಡಿದುದು.

"ಚಕ್ಷನಿರಾಜ ಎಂಬಂತೆ"

ಧನನಿಲ್ಲದಯ್ಯ | ಸಾ | ಧನ ನಿಲ್ಲುವದಯ್ಯ
ತನು ನಿಲ್ಲದಯ್ಯ | ದಾ | ತನು ಎನಿಸಯ್ಯಾ || ಪ ||

ಜನ ಬರುವರೋ | ಸ | ಜ್ಜನ ಬಾರರಯ್ಯ
ಅನುಸರಿಸಿ ಜೀ | ವನ ಪೊರೆಯಯ್ಯ || ೧ ||

ಹಣ ಪುಟ್ಟುವದೊ | ಸು | ಗುಣ ಪುಟ್ಟದಯ್ಯ
ಗುಣನಿಧಿ ಹರಿಗುಣ | ಗುಣಿಸಿ ಬಾಳಯ್ಯ || ೨ ||

ಭಾಗ್ಯನಿಧಿ ವಿಠಲನ | ಆಜ್ಞೆಯಿದಯ್ಯ
ಸುಜ್ಞರ ಸೇವಿಸಿ | ಪ್ರಾಜ್ಞನಾಗಯ್ಯ || ೩ ||

ರಾಜಾನುವರ್ತಿಗಳಿಂದ ರಾಜದರ್ಶನಕ್ಕೆ ಪ್ರತಿಬಂಧಕವಾದಾಗ ಮಾಡಿದ ಪದವು ಕೆಳಕಂಡಂತಿರುವದು.

ಕಲ್ಯಾಣಿ — ರೂಪಕ ತಾಳ

ಛೀ ಛೀ ಪಾಪಿ ಮನವೆ ಛೀಛೀ
ನಾಚಿಕಿಲ್ಲವೇ ನಿನಗೆ ಛೀಛೀ || ಪ ||

ನಾಚಿಕಿಲ್ಲ ಇನ್ನು ದುರಾ | ಲೋಚನೆಯೊಳ್ ಸೇರಿ ಇಂಥಾ
ನೀಚರನ್ನು ಯಾಚಿಸುವರೆ || ಅ ||

ಅಲ್ಪರಿಗಾಲ್ಪರಿದರೆ | ಸ್ವಲ್ಪವಾದರು ಕರುಣವುಂಟೆ?
ಕಲ್ಪಕಲ್ಪ ಕುದಾತರ ಅಹಿ | ತಲ್ಪ ಶಾಯಿ ಕಲ್ಪಿಸಿಹನು || ೧ ||

ಬರಡೆಮ್ಮೆಗೆ ಉಪಚರಿಸಲು | ಕರೆಬಲ್ಲುದೆ ಪಾಲು | ಜಾಲೀ
ಕೊರಡನು ತೆಯ್ದರೆ ಪರಿಮಳ | ಹೊರಡುವದೇ ಎಂದಿಗಾದರು || ೨ ||

ಎಷ್ಟುವಿಧದಿ ನೀಲಿಯು ತೊಳೆದರೆ ಬಿಟ್ಟುಕೊಡುವದೇ ವರ್ಣ
ದುಷ್ಟಗೆ ಶಿರಿಭಾಗ್ಯನಿಧಿ ವಿಠಲ ಒಲಿವನೇ ಎಂದಿಗು || ೩ ||

# ತುಳಸೀ ರಾಮದಾಸರು

ಸುಮಾರು ಮುವ್ವತ್ತು ವರ್ಷಗಳ ಹಿಂದೆ ತುಲಸೀ ರಾಮದಾಸರ ಹೆಸರು ಮೈಸೂರು ಸೀಮೆಯ ಭಕ್ತಜನರಿಗೆ ಮನೆಯ ಮಾತಾಗಿತ್ತು. ಸಾತ್ವಿಕ ಶ್ರೀವೈಷ್ಣವರ ಕುಲದಲ್ಲಿ ಜನಿಸಿ, ಲೌಕಿಕ ಲಾಲಸೆಯನ್ನು ತ್ಯಜಿಸಿ ಸ್ಫೂರ್ತಿಯಿಂದ ಕೀರ್ತನಮಾಡುತ್ತಾ ಸಾವಿರಾರು ಪಾಮರ ಜನರನ್ನು ಹರಿ ಭಕ್ತರನ್ನಾಗಿ ಮಾಡಿದ ಪುಣ್ಯ ತುಲಸೀರಾಮದಾಸರದು. ಮೈಸೂರು ಬೆಂಗಳೂರು ಕೋಲಾರ ಜಿಲ್ಲೆಗಳಲ್ಲಿ ಎಷ್ಟೋ ಭಜನ ಮಂದಿರಗಳನ್ನು ಸ್ಥಾಪಿಸಿ ಪ್ರತಿ ವರ್ಷ ರಾಮೋತ್ಸವ ಕೃಷ್ಣೋತ್ಸವಗಳನ್ನು ಮಾಡುವ ಆಸಕ್ತಿಯು ಜನರಲ್ಲುಂಟಾಗುವದಕ್ಕೆ ಕಾರಣರು ತುಲಸೀ ರಾಮದಾಸರು. ತುಲಸೀದಾಸರಿಂದ ಧರ್ಮಾಂತರವಾಗುತ್ತಿದ್ದ ಸಾವಿರಾರು ಹಿಂದುಗಳು ಹರಿಭಕ್ತರಾದರು. ಬೆಂಗಳೂರು ತುಲಸೀತೋಟದ ಕೀರ್ತಿಯು ತುಲಸೀ ರಾಮದಾಸರದು. ಇವರ ಕೀರ್ತನವೆಂದರೆ ಹಳ್ಳಿ ಹಳ್ಳಿಗಳಿಂದ ಸಾವಿರಗಟ್ಟಲೆ ಜನರು ಬಂದು ಸೇರುತ್ತಿದ್ದರು. ನಾಸ್ತಿಕರು ಆಸ್ತಿಕರಾಗುವದೂ ಲೋಭಿಗಳು ಉದಾರಿಗಳಾಗುವದೂ ಈ ದಾಸರ ಕೀರ್ತನದ ಮಹಿಮೆಯಾಗಿತ್ತು. ಇವರ ಜನ್ಮ ಕಡಪಾ ಜಿಲ್ಲೆಯಲ್ಲಾಗಿ, ಇವರ ಪಾಂಡಿತ್ಯ ಆಂಧ್ರ ಭಾಷೆಯಲ್ಲಿ ವಿಶೇಷವಾಗಿದ್ದರೂ, ಕನ್ನಡನಾಡಿನಲ್ಲಿ ನೆಲೆಸಿ ಕನ್ನಡದಲ್ಲೂ ಕೀರ್ತನಮಾಡಿ ಅನೇಕ ಕನ್ನಡ ದೇವರ ನಾಮುಗಳನ್ನು ರಚಿಸಿ ಕನ್ನಡಿಗರಾದ ದಾಸರು ಈ ಮಹಾ ಪುರುಷರು. ಇವರ ಪೂರ್ವಿಕರು ನೃಸಿಂಹೋಪಾಸಕರಾಗಿ ತುಲಸೀ ಪುಷ್ಪಮಾಲಿಕೆಗಳನ್ನು ರಚಿಸಿ ಭಗತ್ಕೈಂಕರ್ಯ ಮಾಡುತ್ತಿದ್ದರಿಂದ, ಇವರ ಹೆಸರಿಗೂ, ತುಲಸೀ ಶಬ್ದವು ಅಡ್ಡಹೆಸರಾಗಿ ಬಂದು, ಇವರನ್ನು ಉತ್ತರಹಿಂದೂಸ್ಥಾನದ ತುಲಸೀದಾಸರಿಗೆ ಸದೃಶರಾದ ತುಲಸೀರಾಮದಾಸರೆಂದು ಪೂಜ್ಯನಾಮದಿಂದ ಕರೆಯುವಂತೆ ಮಾಡಿತು. ಇವರನ್ನು ಅವತಾರ ಪುರುಷರೆಂದು ಭಾವಿಸಿ, ಇವರ ಜೀವನ ಚರಿತ್ರೆಯನ್ನು ಕೀರ್ತನ ಮಾಡುತ್ತಾ, ಮಹೋತ್ಸವ ನಾಡುವ ಜನರು ಬೆಂಗಳೂರು ಕೋಲಾರ ಜಿಲ್ಲೆಗಳಲ್ಲಿ ಹೇರಳವಾಗಿದ್ದಾರೆ. ಚಾಮರಾಜ ಒಡೆಯರಂಥಾ ಮಹಾರಾಜರು ತುಲಸೀ ರಾಮ

ದಾಸರ ಹನ್ನೊಂದು ಕೀರ್ತನೆಗಳನ್ನು ಕೇಳಿ ಪರವಶರಾಗಿ ದಾಸರ ಧರ್ಮ ಕಾರ್ಯಗಳಿಗೆ ಬಹಳ ದ್ರವ್ಯಸಹಾಯ ಮಾಡಿದರು. ರಾಜ ಗುರುಗಳಾದ ಪರಕಾಲ ಮಠಾಧಿಪರು ದಾಸರಿಗೆ ದಿವ್ಯ ಕಿರೀಟವನ್ನೇ ಒಪ್ಪಿಸಿದರು. ಯಾರು ಕೊಡಲಿ ಕೊಡದಿರಲಿ, ಪ್ರಚಾರ ದೃಷ್ಟಿಯಿಂದ ಕೀರ್ತನಮಾಡಿ, ಲೋಕದ ಮೆಚ್ಚಿಕೆಯನ್ನು ಪಡೆದವರು ತುಲಸೀ ರಾಮದಾಸರು. ಹರಿಪರತ್ವ ವನ್ನೂ ರಾಮಾನುಜ ಮತದ ಉತ್ಕರ್ಷವನ್ನೂ ನಿರ್ಭಯವಾಗಿ ಹೇಳುತ್ತಿ ದ್ದುದರಿಂದ ಇವರಿಗೆ ಪ್ರತ್ಯರ್ಥಿಗಳು ಬಹಳವಾಗಿದ್ದರು. ಇವರನ್ನು ಬ್ರಹ್ಮದ್ವೇಷಿಗಳೆಂದು ಕೆಲವರು ಭಾವಿಸಿದರು. ದ್ವೇಷಿಸಿದವರನ್ನು ಭೂಷಿ ಸುವುದೂ, ನಿಂದಿಸಿದವರನ್ನು ವಂದಿಸುವುದೂ, ಇವರ ಸ್ವಭಾವವಾಗಿದ್ದುದ ರಿಂದ ಇವರ ಮೇಲಣ ಅಪಪ್ರಚಾರವು ತಲೆಯೆತ್ತಲಿಲ್ಲ. ವಿಜಯನಗರದ ಕೃಷ್ಣದೇವರಾಯರ ಕಾಲದಲ್ಲಿ ಕನಕದಾಸರಿಗಿದ್ದ ಸ್ಥಾನಮಾನಗಳೇ ಕಾಲ ಪ್ರಮಾಣವನುಸರಿಸಿ ಹತ್ತೊಂಭತ್ತನೇ ಶತಮಾನದ ಕಡೆಯ ಭಾಗದಲ್ಲಿ ಈ ತುಲಸೀ ರಾಮದಾಸರಿಗಿದ್ದವು. ದಾಸರ ಜ್ಞಾನ ಭಕ್ತಿ ವೈರಾಗ್ಯಾದಿ ಸದ್ಗುಣಗಳಿಂದ ಮುಗ್ಧರಾದ ವೇದಾಂತ ಶಿವರಾಮ ಶಾಸ್ತ್ರಿಗಳವರು ದಾಸರ ಮೇಲೆ ಅನೇಕ ಪದ್ಯಗಳನ್ನು ರಚಿಸಿ ಸಮರ್ಪಿಸಿರುತ್ತಾರೆ. ಕೆಳಕಂಡ ಪದ್ಯಗಳು ದಾಸರ ದೊಡ್ಡಸ್ತಿಕೆಯನ್ನೂ ಶಾಸ್ತ್ರಿಗಳು ದಾಸರನ್ನು ಹೇಗೆ ತಿಳಿದರೆಂಬುದನ್ನೂ ತಿಳಿಸುತ್ತವೆ.

ಇಳೆಯೊಳಗೆ ಸುಕ್ಷೇತ್ರ ಪುಣ್ಯ
ಸ್ಥಳಗಳೊಳಗಿಹ ಸಕಲ ಶಕ್ತಿಯು
ನೆಲೆಸಿಹುದು ನಿಮ್ಮಮಲಚರಣಾಂಬುಜದ ಸ್ಮರಣೆಯಲಿ
ತಿಳಿಯದೀಮರ್ಮವನು ಬಾಹ್ಯದಿ
ಬಳಲಿದೊಡೆ ಫಲವೇನು ನೀಕೃಪೆ
ತಳೆದು ಪಾಲಿಪುದೆಮ್ಮ ತುಳಸೀರಾಮದಾಸಾರ್ಯ ॥ ೨ ॥

ಮಡದಿಮಕ್ಕಳು ಬಂಧುಬಳಗದ
ತೊಡಕಿನೊಳು ಸಿಲುಕದೆವಿರಾಗತೆ
ಪಡೆದು ನಾನಾ ತೀರ್ಥಯಾತ್ರೆಯಗೈದು ಮಾನವರು॥

ಹುಡುಕಿ ಕಾಣದ ಪರಮಪದನಿ
ಮ್ಮಡಿಯೊಳಗೆ ನಿಮಿಷಾರ್ಧಚಿತ್ತವ
ನಿಡಲುಕೈಗೂಡುವುದು ತುಲಸೀರಾಮದಾಸಾರ್ಯ ॥ ೬ ॥

ತತ್ವದೊಳು ವಾಚ್ಯಾರ್ಥಜನಿತಾ
ನಿತ್ಯಸರ್ವಾಲ್ಪಜ್ಞತಾ ಶ
ಕ್ತಿತ್ವಮುಖ್ಯ ವಿರೋಧಭಾಗ ನಿರೋಧದಿಂದುಳಿವ
ಸತ್ಯವಹ ಲಕ್ಷ್ಯಾರ್ಥ ಲಕ್ಷಿತ
ವಸ್ತುವನು ನಿಮ್ಮಡಿಗೆ ದೇಹವ
ನೊತ್ತಿಯಿಟ್ಟವಬಲ್ಲ ತುಲಸೀರಾಮದಾಸಾರ್ಯ ॥ ೯ ॥

ರಾಮ ಬೇರಿನ್ನಿಲ್ಲ ತುಲಸೀ
ರಾಮನೇ ಶ್ರೀರಾಮನೆಂದಭಿ
ರಾಮಮಾನಸರಾಗಿ ಬಳಿಕೀರಾಮಸೇವೆಯೊಳು
ಪ್ರೇಮವಿಡಿದವರೆಲ್ಲರಾತ್ಮಾ
ರಾಮರಾದುದ ತಿಳಿದು ಈ ಶಿವ
ರಾಮ ಬಂದನು ಪೊರೆಯೊ ತುಲಸೀರಾಮದಾಸಾರ್ಯ ॥ ೨೦ ॥

ಇದರಂತೆ ಕೆಲವು ಸಂಸ್ಕೃತ ಶ್ಲೋಕಗಳೂ ಶ್ರೀ. ಶಾಸ್ತ್ರಿಗಳಿಂದ ರಚಿತವಾಗಿವೆ.

ಶ್ರೀಪರಕಾಲ ಮಠದ ರಂಗನಾಥ ಸ್ವಾಮಿಗಳವರೂ ತುಲಸೀ ರಾಮದಾಸರನ್ನು—

"ಧೀರೋಸಿ ವೈದಿಕವರೋಸಿ ಕವೀಶ್ವರೋಸಿ
ಸ್ವಾರ್ಥಂವಿಹಾಯವಿದಿತೋಸಿ ಜಿತೇಂದ್ರಿಯೋಸಿ
ಭೋದಾಸವರ್ಯಮಹದಂಶ ಸಮುದ್ಭವೋಸಿ"

ಎಂಬ ಮಾತುಗಳಿಂದ ಭೂಷಣಗೊಳಿಸಿದ್ದಾರೆ.

ಆಗಮಶಾಸ್ತ್ರದಲ್ಲಿ ಮಹಾ ಪಂಡಿತರೆನಿಸಿ ಅನೇಕ ಗ್ರಂಥಗಳನ್ನು ರಚಿಸಿ ಕೀರ್ತಿವಂತರಾದ ತುಪ್ಪಿಲ್ ವೆಂಕಟಾಚಾರ್ಯರಂಥವರು ಈ ದಾಸರ ಮೇಲೆ

ಮಂಗಳಾಶಾಸನರೂಪವಾಗಿ ಇಪ್ಪತ್ತೇಳು ಶ್ಲೋಕಗಳನ್ನು ರಚಿಸಿದ್ದಾರೆ. ಆ ಶ್ಲೋಕಗಳು ಸಂಪ್ರದಾಯ ಸ್ತೋತ್ರವಾಗಿ ಹೊರಟು—

ಶ್ರೀನಿವಾಸಪದಾಂಭೋಜನ್ಯಸ್ತ ಚಿತ್ತಾಯಧೀಮತೇ
ತುಲಸೀವಂಶಭೂಷಾಯ ರಾಮದಾಸಾಯ ಮಂಗಳಂ ॥ ೯ ॥

ಪ್ಲವಂಗಾಷಾಢ ಬಹುಳ ದಶಮೀ ಗುರುವಾಸರೇ
ಇಂದುತಾರಾವತೀರ್ಣಾಯ ರಾಮದಾಸಾಯ ಮಂಗಳಂ ॥ ೧೦ ॥

ಧೀಶಮಾದಿವಿಭೂಷಾಯ ಭಗವದ್ಭಕ್ತಿಸಿಂಧವೇ
ಆಶ್ರಿತತ್ರಾಣದೀಕ್ಷಾಯ ರಾಮದಾಸಾಯ ಮಂಗಳಂ ॥ ೧೧ ॥

ಅಹೋಬಲ ಶ್ರೀಶಠಾರಿ ದೇಶಿಕೇಂದ್ರ ಕಟಾಕ್ಷತಃ
ಆತ್ತಚಕ್ರಾದಿ ದೀಕ್ಷಾಯ ರಾಮದಾಸಾಯ ಮಂಗಳಂ ॥ ೧೨ ॥

ಶ್ರೀನೃಸಿಂಹಸಪರ್ಯಾರ್ಥಂ ತುಲಸ್ಯಾಹರಣಾದಿನಾ
ಯದ್ವಂಶ್ಯಾಲೋಕ ವಿಖ್ಯಾತಾಸ್ತಸ್ಮೈಭೂಯಾತ್ಸುಮಂಗಳಂ ॥ ೧೩

ಯಸ್ಯಶ್ರೀರಂಗನಾಥಾರ್ಯಾ ಪರಕಾಲಗುರೂತ್ತಮಾಃ
ದತ್ತವಂತೋ ಹರಿಕಥಾ ಕಿರೀಟಂತಸ್ಯಮಂಗಳಂ ॥ ೧೪ ॥

ಸ್ವಾನುಷ್ಠಿತರಥೋತ್ತಂಸ ಯದುನಾಥ ಮಹೋಶ್ಸವೈಃ।
ನವಸಪ್ತಾಹನಿರ್ವರ್ತ್ಯೈರ್ನಿತ್ಯ ತೃಪ್ತಾಯ ಮಂಗಳಂ ॥ ೧೫ ॥

ಪ್ರಹ್ಲಾದೋವಾ ನಾರದೋವಾ ಪುಂಡರೀಕೋಥ ಕೌಶಿಕಃ
ಇತ್ಯೇವಂ ವಿಬುಧೈಸ್ಸರ್ವೈಃ ವಿತರ್ಕ್ಯಾಯಾಸ್ತುಮಂಗಳಂ ॥ ೧೬ ॥

ಎಂಬಂತೆ ದಾಸರ ಜೀವನಚರಿತ್ರೆಯು ಪ್ರಕಥನ ರೂಪವನ್ನು ತಾಳಿವೆ. ಈ ಶ್ಲೋಕ ಸರಣಿಯಲ್ಲೇ ದಾಸರ ನಿರ್ಯಾಣ ತಿಥಿಯ ನಿರೂಪಣೆಯೂ

ಶೋಭಕೃನ್ನಾಮ ಬಹುಳದ್ವಿತೀಯಾ ಬುಧವಾಸರೇ
ಶ್ರೀಶಾಂಘ್ರಿಪದ್ಮಮಾಸಾದ್ಯ ನಿತ್ಯತುಷ್ಟಾಯಮಂಗಳಂ ॥ ೨೪ ॥

ಎಂಬ ಶ್ಲೋಕದಿಂದ ಕಥಿತವಾಗಿದೆ.

ಸಾರಾಂಶವೆಂದರೆ— ಮೂವತ್ತೇ ವರ್ಷಗಳ ಹಿಂದೆ ಇಂಥಾ ವಿಭವಶಾಲಿ ಹರಿದಾಸರಿದ್ದು ಭಾಗವತಧರ್ಮವನ್ನು ಪ್ರಚಾರಗೊಳಿಸಿ ಕೀರ್ತಿವಂತ

ರಾದರು. ಇಂಥವರನ್ನು ಬ್ರಾಹ್ಮಣರಲ್ಲವೆಂದು ಯಾವ ಶಿಷ್ಟಬ್ರಾಹ್ಮಣರೂ ತಿರಸ್ಕರಿಸಲಿಲ್ಲ. ಬದಲಾಗಿ ಪಂಡಿತೋತ್ತಮರುಗಳೂ ಪೀಠಾಧಿಪತಿಗಳೂ ಇಂಥವರನ್ನು ಬಹುವಾಗಿ ಗೌರವಿಸಿದರು. ಮಾನವನ ದೊಡ್ಡಸ್ತಿಕೆಗೂ ಜ್ಞಾನ ವೈರಾಗ್ಯಾದಿ ಸದ್ಗುಣಗಳಿಗೂ ವರ್ಣಾಶ್ರಮಗಳು ಬಾಧಕವೆನಿಸುವದಿಲ್ಲ. ಈ ಕಾಲಕ್ಕೆ ಬೇಕು ಇಂಥಾ ಹರಿದಾಸರು. ಈಗಿನ ಜನರಿಗೆ ಬೇಕು ಇಂಥಾ ಉಪದೇಶಕರು.

ತುಲಸೀರಾಮದಾಸರು ಯಾವ ಹರಿದಾಸ ಪೀಳಿಗೆಗೂ ಸೇರಿದವರಲ್ಲ. ಅಂದ ಮಾತ್ರಕ್ಕೇ ಇವರ ಪ್ರತಿಭೆಯು ಕಡಿಮೆಯೆನಿಸಲಿಲ್ಲ. ಇಂಥವರು ತಾವಾಗಿ ಬರಲೆಂದು ಇರುವದುಚಿತವೋ ಅಥವ ಇರುವವರೇ ಇಂಥವರಾಗಲು ಪ್ರಯತ್ನಿಸುವದುಚಿತವೊ?



## ಆನಂದದಾಸರ ಶಿಷ್ಯರುಗಳು.

---

### ೧ ಮಡಶಿಕರದ ಭೀಮದಾಸರು

ಇವರು ಬಾಲ್ಯದಲ್ಲಿ ಮೈಸೂರಿನಲ್ಲಿ ಸಂಸ್ಕೃತಾಭ್ಯಾಸ ಮಾಡುತ್ತಿದ್ದ ರಂತೆ! ಕೃಷ್ಣರಾಜ ವಡೆಯರ ದರ್ಬಾರಿನಲ್ಲಿ ಪುಣೆಯ ತ್ರಿಯಂಬಕ ಶಾಸ್ತ್ರಿ ಗಳಿಗಾದ ಸನ್ಮಾನವನ್ನು ನೋಡಿ ತಾವೂ ಅಂಥಾ ಪಾಂಡಿತ್ಯವನ್ನು ಸಂಪಾ ದಿಸಬೇಕೆಂದು ಪಾದಚಾರಿಗಳಾಗಿ ನದೀಯ ನವದ್ವೀಪ)ಕ್ಕೆ ಹೋದರಂತೆ! ಯಾರೋ ಬಾಬು ಮಹೋಪಾಧ್ಯಾಯರಲ್ಲಿ ಬಾಧಾಂತ ತರ್ಕ ವ್ಯಾಸಂಗ ಮಾಡಿದರಂತೆ! ಬಂಗಾಲೀ ಹಿಂದೀಭಾಷೆಗಳ ಪರಿಚಯವೂ ಚೈತನ್ಯಪಂಥಿ ಗಳ ಸಂಕೀರ್ತನ ಪದ್ಧತಿಯೂ ಭೀಮಶರ್ಮರಿಗಾಯಿತಂತೆ! ಅಲ್ಲೀ ಯಾವದಾದರೊಂದು ವಿದ್ಯಾಸಂಸ್ಥೆಯ ಮಹೋಪಧ್ಯಾಯರಾಗಿರದೆ ತಮ್ಮ ಮೂವತ್ತಾರನೇ ವಯಸ್ಸಿನಲ್ಲಿ ಬಳ್ಳಾರಿಗೆ ಬಂದರಂತೆ! ಶರ್ಮರ ಪಾಂಡಿ ತ್ಯಕ್ಕೆ ಮೆಚ್ಚಿದ ಜನರು ಶರ್ಮರ ವೇಷಭೂಷಣಗಳನ್ನು ಬದಲಾಯಿಸಿ ಆಚಾರ್ಯಪಟ್ಟ ಕಟ್ಟಿ ಒಂದು ಥಡಯ ಭಂಗಾರ ಸಹಿತವಾಗಿ ಲಗ್ನಮಾಡಿ ಸಿದರಂತೆ! ಪಂಡಿತರಲ್ಲಿ ನ್ಯಾಯಶಾಸ್ತ್ರಾಭ್ಯಾಸಮಾಡಲು ತಕ್ಕ ಶಿಷ್ಯರು ದೊರೆಯಲಿಲ್ಲವಂತೆ! ಒಂದು ಥಡಯ ಭಂಗಾರವನ್ನೂ ಮಾರಿ ಜೀವಿಸಿ ವಕೀಲನೊಬ್ಬನ ಬಳಿ ದೇಶಾವಾರಕ್ಕೆ ಹೋದರಂತೆ! ಆಚಾರ್ಯರ ಉದ್ಧಾಮತನವನ್ನು ನೋಡಿ ವಕೀಲನು ಅರ್ಧಾಣೆ ದೇಶಾವಾರ ಕೊಟ್ಟ ನಂತೆ! ಶರ್ಮರು ಆ ದುಡ್ಡನ್ನು ವಕೀಲನ ಮುಖಕ್ಕೆ ಒಗೆದು ಆನಂದ ದಾಸರ ಶಿಷ್ಯರಾಗಿ "ಭೀಮೇಶ ವಿಠಲ" ಎಂಬ ಅಂಕಿತ ಪಡೆದು ಕೀರ್ತನ ಕಾರರಾದರಂತೆ!

ಭೀಮದಾಸರ ಕವಿತೆಗಳು ಆನಂದದಾಸರ ಶೈಲಿಯನ್ನನುಸರಿಸಿವೆ. ಅನೇಕ ಆಖ್ಯಾನಗಳನ್ನೂ, ಬಿಡಿ ದೇವರ ನಾಮಗಳನ್ನೂ ದಾಸರು ಬರೆ

ದಿದ್ದಾರೆ. ಆ ಕಾಲದಲ್ಲಿ ಆಂಧ್ರ ಕರ್ನಾಟಕ ದೇಶಗಳಲ್ಲಿ ಇವರ ಹೆಸರು ಬಹಳ ಪ್ರಖ್ಯಾತವಾಗಿದ್ದಂತೆ ಗೊತ್ತಾಗುತ್ತದೆ.

---

## ೨ ಕಮಲಾಪತಿ ದಾಸರು

ಕಮಲಾಪತಿದಾಸರು ಹರಿಕಥಾಮೃತಸಾರಕ್ಕೆ ವ್ಯಾಖ್ಯಾನ ಬರೆದಿದ್ದಾರೆ. ತಿರುಮಕೂಡ್ಲು ನರಸೀಪುರದಲ್ಲಿ ಇವರು ಬಹುಕಾಲ ವಾಸಮಾಡಿದರಂತೆ! "ಕಮಲಾಪತಿ ವಿಠಲ" ಮುದ್ರಿಕೆಯ ದೇವರ ನಾಮಗಳು ಅದೃಶ್ಯವಾಗಿವೆ.

---

## ೩ ಗುಂಡಾಚಾರ್ಯರು

ಇವರು ಒಳ್ಳೇ ಪುರಾಣಿಕರಾಗಿದ್ದು ಆನಂದದಾಸರಲ್ಲಿ ಕೀರ್ತನಾಭ್ಯಾಸಮಾಡಿದವರು. ಗುಂಡಾಚಾರ್ಯರ ಹೆಸರು ಹೇಳಿ ಕೀರ್ತನಮಾಡಬೇಕೆಂಬ ಮಾತು ಗಾದೆಯಾಗಿ ಇನ್ನೂ ಕರ್ಣಾಟಕದಲ್ಲಿ ಮರೆತಿಲ್ಲ. ಇವರಷ್ಟು ಗ್ರಂಥಕ್ಲಿಪ್ತಿ ಯಾರಿಗೂ ಇರಲಿಲ್ಲವೆಂದು ಹೇಳುತ್ತಾರೆ. ಇವರ ಕಂಠ, ಇವರ ಗಾನ, ಅನದ ದಾಸರನ್ನು ಜ್ಞಾಪಕಕ್ಕೆ ತರುತ್ತಿತ್ತಂತೆ! ಆನಂದದಾಸರನ್ನು ಬಿಟ್ಟರೆ ಇವರಷ್ಟು ದ್ರವ್ಯಾರ್ಜನೆಮಾಡಿದವರೂ ಆರ್ಜಿಸಿದಂತೆ ದಾನಮಾಡಿದವರೂ ಯಾರೂ ಇಲ್ಲವೆಂದು ಪ್ರಸಿದ್ಧಿಯಿದೆ. ಇವರು ಕವಿಗಳಲ್ಲ; ಅಂಕಿತಪಡೆದ ದಾಸರೂ ಅಲ್ಲ. ಕೀರ್ತನರಂಗದಲ್ಲಿ ಇವರಿಗೆ ಸಮರೂ ಇಲ್ಲ.

---

## ೪ ಬೇಲೂರು ವೆಂಕಟಸುಬ್ಬದಾಸರು

### ಮತ್ತು ಪೂರ್ವಚರಿತ್ರೆ

ಲೇಖಕನಿಗೆ ಜನ್ಮಕೊಟ್ಟ ಪೂಜ್ಯರಿವರು. ವೆಂಕಟದಾಸರಿಂದಾರಂಭವಾದ ವಿಜಯದಾಸರ ಶಿಷ್ಯಪೀಳಿಗೆಯಲ್ಲಿ ನಾಲ್ಕನೆಯವರು. ವೆಂಕಟದಾಸರು ಧಾರವಾಡ ಜಿಲ್ಲಾ ರೋಣ ಪ್ರಾಂತ್ಯದವರು. ವಿಜಯದಾಸರ ಶಿಷ್ಯ

ರಾದ ಮೇಲೆ ಸರ್ವಸ್ವವನ್ನೂ ದಾನಮಾಡಿ ತೀರ್ಥಾಟನೆ ಮಾಡುತ್ತಾ, ಕರೂರು ಬಳಿಯಿರುವ ಆಂಡಾಂಗೋಯಿಲು ಅಗ್ರಹಾರದಲ್ಲಿ ನೆಲೆಸಿದರು. ವೆಂಕಟದಾಸರೂ ಮಗ ವೆಂಕಟರಮಣದಾಸರೂ ಅಪರೋಕ್ಷ ಜ್ಞಾನಿಗಳು. ಮೂರನೇ ವೆಂಕಟೇಶದಾಸರು ದಿವಾನ ಪೂರ್ಣಯ್ಯನವರ ಕಾಲದಲ್ಲಿ ಮೈಸೂರು ಸೀಮೆಯ ದೊಡ್ಡಬಳ್ಳಾಪುರ ಪ್ರಾಂತ್ಯದಲ್ಲಿದ್ದು ವಿದ್ಯಾಭ್ಯಾಸ ಮಾಡಿದರು. ಗೀರ್ವಾಣ ಕರ್ನಾಟಕಾಂಧ್ರ ಭಾಷೆಗಳಲ್ಲಿ ಅಪ್ರತಿಮರೆಂಬ ಖ್ಯಾತಿ ಇವರದು. ಆಂಧ್ರ ಭಾಗವತವನ್ನು ಬಾಯಿಪಾಠ ಮಾಡಿದವರಲ್ಲಿ ಅಗ್ರ ಮರ್ಯಾದೆ ಇವರದು. ವೆಂಕಟೇಶ ದಾಸರು ಕಾವೇರಿ ತೀರವೆಂದು ೧೭೭೮ರ ಸುಮಾರಿನಲ್ಲಿ ಶ್ರೀರಂಗಪಟ್ಟಣದಲ್ಲಿ ವಾಸಮಾಡಿದರು. ಪೂರ್ಣಯ್ಯನವರ ಮತ್ತು ಮಹಾರಾಣೀ ಲಕ್ಷಮ್ಮಣ್ಣಿಯವರ ಸನ್ನಿಧಿಗಳಲ್ಲಿ ಕೀರ್ತನಮಾಡಬೇಕೆಂಬ ಕಟ್ಟಲೆಗಳಾದ ಕಾರಣ ದಾಸರು ಪಟ್ಟಣವಾಸಿಗಳೇ ಆದರು. ೧೭೯೯ ರ ಲಡಾಯಿನಲ್ಲಿ ಟಿಪ್ಪೂಸುಲ್ತಾನನು ತನಗೆ ಜಯವಾಗುವುದಿಲ್ಲವೆಂದು ನಿರಾಶನಾದಾಗ ರಾಜಸಂತತಿಯು ಕುರುಹಿರಬಾರದೆಂದು ಪಿತೂರಿ ನಡೆಸಿದಾಗ-ರಾಜಕುಮಾರನನ್ನು ಆಪತ್ತಿಗೊಳಗಾಗದಂತೆ ಶ್ರೀರಂಗನಾಥಸ್ವಾಮಿಯ ಗರ್ಭಾಂಕಣದಲ್ಲಿಟ್ಟು ರಕ್ಷಿಸಿದ ಕೀರ್ತಿವಂತರಲ್ಲಿ ವೆಂಕಟೇಶದಾಸರೂ ಒಬ್ಬರಾಗಿದ್ದರು. ಈ ಕೃತಜ್ಞತೆಯಿಂದ ಮಹಾರಾಣೀ ಲಕ್ಷಮ್ಮಣ್ಣಿಯವರು ದಾಸರಿಗೆ ಮೈಸೂರಿನಲ್ಲಿ ಗೃಹದಾನಮಾಡಿ ತಿಂಗಳಿಗೆ ಹತ್ತು ವರಹ (ಸುಮಾರು ಮೂವತ್ತು ರೂಪಾಯಿ)ದ ಜೀವನಾಧಾರಮಾಡಿ ಕೊಟ್ಟಿದ್ದರು.

ವೆಂಕಟೇಶದಾಸರಿಗೆ ಅರಮನೆ ಗುರುಮನೆಗಳಲ್ಲೂ, ಜನಸಮಾಜದಲ್ಲೂ ವಿಶೇಷ ಗೌರವವಿದ್ದರೂ, ಹುಟ್ಟಿದ ಮಕ್ಕಳೆಲ್ಲಾ ಸಾಯುತ್ತಿದ್ದರಿಂದ, ಮನಶ್ಶಾಂತಿಯಿರಲಿಲ್ಲ. ಮೈಸೂರನ್ನು ಬಿಟ್ಟು ವಿರಾಗಿಗಳಂತೆ ತೀರ್ಥಾಟನೆ ಮಾಡಿಕೊಂಡಿರಬೇಕೆಂದವರು ಉಡುಪಿಗೆ ಬಂದರು. ಉಡುಪಿಯಿಂದ ಶ್ರೀಮನ್ಮಧ್ವಾಚಾರ್ಯರ ಸ್ಥಳವಾದ ಪಾಜಕ ಕ್ಷೇತ್ರದಲ್ಲಿ ಬಂದಿರುವಾಗ ದಾಸರಿಗೆ ಮಾರಿಕಾ ಪ್ರಾಪ್ತವಾಯಿತು. ಹೆಂಡತಿ ತಿಮ್ಮಮ್ಮನ ವಿನಾ ಅನ್ಯ ಜನರ ದಿಕ್ಕಿರಲಿಲ್ಲ. ದಾಸರು ಹೆಂಡತಿಯನ್ನು ಕರೆದು ಸುಮಂಗಲಿಯಾಗಿರುವಾಗಲೇ ದುರ್ಗಾದೇವಿಯ ದರ್ಶನಮಾಡಿಬಾರೆಂದು ಹೇಳಿದರು.

ತಿಮ್ಮಮ್ಮನು ಗಂಡನನ್ನು ಬಿಟ್ಟಿರಲಾರದೆ ಮಾತು ಮೀರಲಾರದೆ ದೇವಿಯ ಬೆಟ್ಟಕ್ಕೆ ಹೋದಳು. ಕುಂಕುಮಾರ್ಚನೆಗೆ ಮಂಗಳ ದ್ರವ್ಯಗಳನ್ನು ಕೊಟ್ಟರೆ ತುಲಸೀ ಅಂಗಾರವಿಟ್ಟ ಕಾಯಿಬಟ್ಟಲನ್ನು ಪ್ರಸಾದವೆಂದು ಅರ್ಚಕನು ಕೊಟ್ಟನು. ಅದೇ ಕಾಲದಲ್ಲಿ ಅಪ್ಪಾವರು (ಇಭರಾಂಪುರದ ಕೃಷ್ಣಾಚಾರ್ಯರು) ದುರ್ಗಾದೇವಾಲಯದಲ್ಲಿದ್ದರು. ತಿಮ್ಮಮ್ಮನು ಪ್ರಸಾದವನ್ನು ನೋಡಿದಕೂಡಲೇ ಇದುವರೆಗೆ ಗಂಡನಗತಿ ಏನಾಗಿರುವುದೋ ಎಂದು ಗಟ್ಟಿಯಾಗಿ ರೋದನ ಮಾಡಿದಳು. ಪೂರ್ವ ಪರಿಚಯವಿದ್ದ ಕಾರಣ ಆಚಾರ್ಯರು ತಿಮ್ಮಮ್ಮನನ್ನು ಕರೆದು ಯೋಗಕ್ಷೇಮ ವಿಚಾರಿಸಿ, ಪ್ರಸಾದವನ್ನು ತೆಗೆದುಕೊಂಡು—"ಚಿಂತಿಸಬೇಡ! ಹಿಡಿ! ಅಂಗಾರವನ್ನು ಹಚ್ಚಿಕೊಳ್ಳುವ ವೈಷ್ಣವಾಗ್ರೇಸರ ಮಗನಾಗುತ್ತಾನೆ! ಶ್ರೀ ತುಲಸಿಯಂಥಾ ಮಗಳಾಗುತ್ತಾಳೆ"ಂದು ಹರಸಿ ಕಳುಹಿಸಿದರು. ಮನೆಗೆ ಬರುವಷ್ಟರಲ್ಲಿ ದಾಸರು ಎದ್ದು ಕುಳಿತು ಈಗ ಗುಣವಾಗಿದೆ, ದೇವಿಯ ಪ್ರಸಾದವನ್ನು ತಾರೆಂದು ಕೈಯೊಡ್ಡಿದರು. ತಿಮ್ಮಮ್ಮನು ನಡೆದ ಸಂಗತಿಯನ್ನೆಲ್ಲಾ ತಿಳಿಸಿದಳು. ಕೃಪಾಳುಗಳಾದ ಆಚಾರ್ಯರೂ ಬಂದು ಆಡಿದಮಾತನ್ನು ವರಪ್ರದಾನ ಮಾಡಿದಂತೆ ಆಡಿದರು.

ವಿರಾಗಿಗಳಂತಿರಬೇಕೆಂದಿದ್ದ ವೆಂಕಟೇಶದಾಸರು ತಿರುಗಿ ಮೈಸೂರಿಗೇ ಬಂದರು. ದಾಸರ ಎಪ್ಪತ್ತನೇ ವಯಸ್ಸಿನಲ್ಲಿ ಒಬ್ಬ ಮಗ, ಎಪ್ಪತ್ತೆರಡರಲ್ಲಿ ಒಬ್ಬ ಮಗಳೂ ಆದರು. ಮಗನ ಹೆಸರೇ ವೆಂಕಟಸುಬ್ಬದಾಸರು, ಮಗಳ ಹೆಸರು ಲಕ್ಷ್ಮೀಬಾಯಿ.

ವೆಂಕಟೇಶದಾಸರು ಮಗನ ಐದನೇ ವಯಸ್ಸಿನಲ್ಲಿ ನಿರ್ಯಾಣ ಮಾಡಿದರು. ಅರಮನೆಯ ಹತ್ತು ವರಹ ಸಂಬಳವು ಹತ್ತು ರೂಪಾಯಿಗಿಳಿಯಿತು. ಕಾಲಾಂತರದಲ್ಲಿ ಜಗನ್ಮೋಹನ ಬಂಗಲೆಯನ್ನು ಕಟ್ಟಿದಾಗ, ಮನೆಹೋಗಿ ಪ್ರಯಾಣದ ಖರ್ಚಿಗೆ ಹಣ ದೊರೆಯಿತು. ಲವಾಜಿಮಾ ಪುನರ್ವ್ಯವಸ್ಥೆ ಮಾಡುವ ಕಾಲದಲ್ಲಿ ಸಂಬಳವೂ ನಿಂತುಹೋಯಿತು.

ಬಾಲ್ಯದಲ್ಲೇ ಕಷ್ಟದೆಶೆಗೆ ಸಿಕ್ಕಿದ ವೆಂಕಟಸುಬ್ಬದಾಸರು ಎದೆಗುಂದದೆ ಮಂತ್ರಾಲಯದಲ್ಲಿ ಪ್ರೌಢ ವಿದ್ಯಾಭ್ಯಾಸಮಾಡಬೇಕೆಂದು ಹೊರಟರು.

ದೈವಾನುಗ್ರಹದಿಂದ ಸುಧರ್ಮೇಂದ್ರ ಸ್ವಾಮಿಗಳವರಲ್ಲಿ ಶಾಸ್ತ್ರಾಭ್ಯಾಸವೂ ಆನಂದ ದಾಸರಲ್ಲಿ ಕೀರ್ತನಾಭ್ಯಾಸವೂ ಏಕಕಾಲದಲ್ಲಿ ಲಭಿಸಿತು.

ವೆಂಕಟಸುಬ್ಬದಾಸರು ಪ್ರಖ್ಯಾತ ಕೀರ್ತನಕಾರರಾಗಿ ಬೇಲೂರಿನಲ್ಲಿ ವಾಸಮಾಡಿದ ಕಾರಣ ಬೇಲೂರು ದಾಸರೆಂದೇ ವಂಶದವರಿಗೆಲ್ಲಾ ಹೆಸರಾಯಿತು.

ಇವರು ವಿಶೇಷ ಕವಿತೆಗಳನ್ನು ಮಾಡಿಲ್ಲವಾದರೂ ಕವಿತೆಯ ಧಾಟಿ ಹೇಗಿತ್ತೆಂಬುದನ್ನು ತೋರಿಸಲು ಕೆಳಕಂಡ ನಾಮವು ಸಾಕಾಗಿದೆ.

ದೇವಗಾಂಧಾರ—ಆದಿ

ಎಷ್ಟುವರ್ಣಿಸಲಿ ಕೃಷ್ಣಾಪುರ ವರ
ಶ್ರೀಪ್ಯಯಮಿಪರನ್ನಾ! ವಂದಿಸಿ ॥ ಪ ॥

ಧಿಟ್ಟತನದಿ ಸಚ್ಛಾಸ್ತ್ರಪಾಠದಲಿ
ನಿಷ್ಠೆಯಿಂದ ಸಂತುಷ್ಟರಾದವರ ॥ ಅ ॥

ವಿದ್ಯಾಸಮುದ್ರ ತೀರ್ಥಕರವರ
ಪದ್ಮಸಮುದ್ಭೂತ!
ವಿದ್ಯಾಧೀಶ ಸುನಾಮದಿಮೇದಿನಿ
ಮಧ್ಯದಿಪ್ರಖ್ಯಾತ ।.

......................... ............

.........................

ಮಧ್ವಕರಾಂಬುಜ ಪೂಜಿತಕಾಳಿಯ
ಮರ್ದನ ಶ್ರೀಪದ ಪದ್ಮಮಧುವ್ರತ ॥ ೧ ॥

ಮೊದಲು ಕೃಷ್ಣಪರಿಯಾಯ ಬಿಡದೆಮಾ
ಡಿದ ನಂತರಯೋಗಿ
ಮುದದಿಂದವನೀ ಬುಧವೃಂದಸಹಿತ
ಪದಚಾರಿಗಳಾಗಿ
ತ್ರಿದಶನಭೋಧುನಿ ಸ್ನಾನವ ಮಾಡಿ
ಬದರಿಕ್ಷೇತ್ರಕೆ ಹೋಗಿ

ಪದುಮಾಕ್ಷನ ಪರಿಯಾಯ ದ್ವಿತೀಯಕೆ
ಒದಗಿಬಂದು ಮಾಡಿದರು ಪ್ರಮೋದದಿ ॥ ೨ ॥

ಭಕ್ತಿಪೂರ್ವಕ ಸುಧಾಪ್ರವಚನವಂ
ಭಕ್ತಾವರ್ತಿಯಲಿ
ಭಕ್ತವರ್ಗಕೆ ಮಠೋತ್ತಮದಲಿ ಪೇ
ಳುತ್ತ ನಿತ್ಯದಲ್ಲಿ
ಕಾರ್ತಸ್ವರಮಯ ಮಂಟಪದಲಿ ಭಗ
ವತ್ಪೂಜಾದಿಯಲಿ
ಚಿತ್ರವಿಚಿತ್ರ ಪದಾರ್ಥಗಳಿಂದ ದ್ವಿ
ಜೋತ್ತಮರಿಗೆ ಉಣಿಸುತ್ತ ಮೋದಿಪರ ॥ ೩ ॥

ಆರಿಗೆ ಸಂಪದವಿತ್ತನು ಹರಿಮು
ತ್ರಾರಾತಗೆಶಯ್ಯಾ
ಆರು ಮಯೂರಗನ್ವೈರೋಚನಿಗಿ
ನ್ನಾರೊಡ್ಡಿದ ಕಯ್ಯಾ
ಸೂರಿಗೆ ಅತಿಹಿತವಾವುದು ವೃಷ್ಟಿಗೆ
ಕಾರಣಾರು ಜೇಯಾ
ಸಾರುವೆ ಪ್ರಥಮಾಕ್ಷರವ ಕೂಡಿಸಿ
ಕಾರುಣ್ಯದಿಕೊಡು ಸೂರಿಕುಲೋದ್ಭವ ॥ ೪ ॥

ಕಾಮಕ್ರೋಧ ಮದಮತ್ಸರ ವಿಪಿನಕೆ
ಧೂಮಧ್ವಜನೆನಿಸಿ
ಶ್ರೀ ಮಧ್ವಾಭಿದ ಮುನಿಮತವನಧಿಗೆ
ಸೋಮನಂತೆ ಚರಿಸಿ
ಕಾಮಧೇನು ವರಕಲ್ಪವೃಕ್ಷ ಚಿಂ
ತಾಮಣಿ ಧಿಕ್ಕರಿಸಿ ॥
ಸಾಮಸನ್ನುತ ತ್ರಿಧಾಮಸ್ಥಿತ ಗುರು
ಭೀಮೇಶ ವಿಠಲನ ಪ್ರೇಮದಿ ಭಜಿಪರ ॥ ೫ ॥

ಈ ಪದವು ಉಡುಪಿಯ ಅಷ್ಟಮಠಗಳಲ್ಲೊಂದಾದ ಕೃಷ್ಣಾಪುರ ಮಠದ ಪೀಠವನ್ನಲಂಕರಿಸಿದ್ದ ವಿದ್ಯಾಧೀಶ ಸ್ವಾಮಿಗಳ ಮೇಲೆ ರಚಿಸಿ ಸಮರ್ಪಿಸಿದುದಾಗಿದೆ. ಮೊದಲ ಮೂರು ನುಡಿಗಳಲ್ಲಿ ಸ್ವಾಮಿಗಳ ಸಂಕ್ಷೇಪ ಚರಿತ್ರೆಯಿದೆ. ನಾಲ್ಕನೇ ನುಡಿಯಲ್ಲಿ "ಸಾರುವೆ ಪ್ರಥಮಾಕ್ಷರವ ಕೂಡಿಸಿ ಕಾರುಣ್ಯದಿ ಕೊಡು' ಎಂಬ ಪ್ರಾರ್ಥನೆಗೆ ಮೊದಲು ಐದು ಪ್ರಶ್ನೆಗಳಿವೆ.

ಉತ್ತರದ ಮೊದಲನೇ ಅಕ್ಷರಗಳನ್ನು ಕೂಡಿಸಿದರೆ--

| | | |
|---|---|---|
| ಆರಿಗೆ ಸಂಪದವಿತ್ತ ಸುಹರಿ ? | = | ಸುಧಾಮುನಿಗೆ |
| ಮತ್ತಾರಾತಗೆ ಶಯ್ಯಾ? | = | ಶೇಷ |
| ಆರುಮುಯೂರಗ ? | = | ಷಣ್ಮುಖ |
| ವೈರೋಚನಿಗಿನ್ನಾರೊಡ್ಡಿದಕಯ್ಯ? | = | ವಾಮನ |
| ಸೂರಗೆ ಅತಿಹಿತವಾವುದು ? | = | ಸರಸಿಜ |
| ವೃಷ್ಟಿಗೆ ಕಾರಣಾರು ? | = | ನಾಕ |

"ಸುಶೇಷವಸನ" ಎಂದಾಗುತ್ತದೆ.

ಹಿಂದೂ ಜನಸಾಮಾನ್ಯದಲ್ಲಿ ಯತಿಗಳು ಆಹ್ನಿಕಕಾಲದಲ್ಲಿ ಧರಿಸಿದ ಶೇಷವಸ್ತ್ರಗಳನ್ನು ಪ್ರಸಾದರೂಪವಾಗಿ ಪಡೆಯುವದು ಶ್ರೇಯಸ್ಕರವೆಂಬ ಭಾವನೆಯಿದೆ. ಮಠಗಳಲ್ಲಿ ಪ್ರಾಯಿಕವಾಗಿ ಸ್ವಾಮಿಗಳು ಆಹ್ನಿಕ ಕಾಲದಲ್ಲಿ ಧರಿಸಿದ ವಸ್ತ್ರಗಳೇ ಶಿಷ್ಯರಿಗೆ ಪ್ರಸಾದರೂಪವಾಗಿ ಬರುವದಿಲ್ಲ. ಆದಕ್ಕಾಗಿ ಕಾವಿಯದ್ದಿಟ್ಟ ವಸ್ತ್ರಗಳನ್ನು ಶೇಷವಸ್ತ್ರವೆಂದು ಕೊಡುವ ಪರಿಪಾಠ ಬಹಳ ವಾಗಿದೆ. ಕವಿಗಳ ಆಶಯವಾದರೋ ಅಂಥಾ ಸಾಮಾನ್ಯ ವಸ್ತ್ರವಲ್ಲ, ಸರಿಯಾದ ಶೇಷವನ್ನು ಕೊಡಿರೆಂಬ ಬೇಡಿಕೆಯಿಂವ ಕೂಡಿದೆ.

ಗೀತೆಯಲ್ಲಿ ಅರ್ಜುನನು ಅತಿ ಕುತೂಹಲದಿಂದ "ಸ್ಥಿತಧೀಃಕಿಂಪ್ರಭಾಷೇತ ಕಿಮಾಸೀತವ್ರಜೇತಕಿಂ" ಎಂದು ಪ್ರಶ್ನೆಮಾಡಿ ಉತ್ತರ ಪಡೆದಂತೆ, ಅಂಥಾ ಸ್ಥಿತಪ್ರಜ್ಞರಾದ ಆನಂದದಾಸರು, ಮೊದಲಕಲ್ಲು ಶೇಷದಾಸರು, ಇಭರಾಂಪುರದ ಆಚಾರ್ಯರು ಮೊದಲಾದ ದೇವರನ್ನು ಕಂಡ ಸತ್ಪುರುಷರೊಡನೆ ವಾಸಮಾಡಿ ಅವರ ಇರವು ಅವರ ಅರಿವುಗಳನ್ನು ಅನುಭವದಿಂದ ಆಚರಣೆಗಿಳಿಸಿಕೊಂಡ ಭಾಗ್ಯವು ಈ ದಾಸರದು. ಒಬ್ಬೊಬ್ಬ ಸತ್ಪುರುಷ

ರೊಡನಿದ್ದು ಆಡಿದ ಮಾತುಗಳನ್ನು ನೆನೆಸಿಕೊಂಡು ರೋಮಹರ್ಷಣವಾಗು ವಂತೆ ಹೇಳುತ್ತಿದ್ದ ಕಥೆಗಳು ಲೇಖಕನಿಗೆ ಮಂತ್ರೋಪದೇಶಗಳಂತಿವೆ.

ಈ ಪುಣ್ಯಾತ್ಮರು ಮರಣ ಸನ್ನಿಹಿತವಾದಾಗಲೂ ಲೇಖಕನ ತಲೆಯ ಮೇಲೆ ಕೈಯಿಟ್ಟು *"ಸ್ವಾಮಿ, ಮರಣವು ದುಃಖವಲ್ಲ! ಆನಂದ ಆನಂದ!" ಎಂದಾಡಿದ ಮಾತು ದೊಡ್ಡ ಕ್ರಾಂತಿಯಾಗಿದೆ. ಕಡೆಯ ತನಕ ಮಾತಾಡುತ್ತಿದ್ದು ಈ ಶ್ಲೋಕಗಳನ್ನು ಸ್ವಲ್ಪ ಹೊತ್ತಿನಮೇಲೆ ಕಿವಿ ಯಲ್ಲಿ ಹೇಳೆಂದು ಐದೇ ನಿಮಿಷಕಾಲ ಮೌನವಹಿಸಿ "ನಾರಾಯಣ ಸ್ಮರಣೆ"ಮಾಡಿದ ಪುಣ್ಯಾತ್ಮರನ್ನು ಏನೆಂದು ತಿಳಿಯಬೇಕೋ ಅದು ಇನ್ನೂ ತಿಳಿಯದ ಜೀವನ ಸಮಸ್ಯೆಯಾಗಿದೆ.

---

# ೫೫ ಜೋಶಿ ವೆಂಕಪ್ಪಾಚಾರ್ಯರು

ನೂರ ಹತ್ತು ವರ್ಷಕಾಲ ಜೀವಿಸಿ ಕ್ರಿ. ೧೯೩೯ರಲ್ಲಿ ಅದೃಶ್ಯರಾದ ದೀರ್ಘಜೀವಿ ಹರಿದಾಸರಿವರು. ವೃತ್ತಿಯಿಂದ ವೈಶ್ಯಪುರೋಹಿತರು. "ರಾಜಾ ರಾಷ್ಟ್ರಕೃತಂ ಪಾಪಂ ರಾಜಪಾಪಂ ಪುರೋಹಿತಃ" ಎಂಬ ಮಾತು ಮನಸ್ಸಿಗೆ ನಾಟಿ ಪೌರೋಹಿತ್ಯವೃತ್ತಿಯನ್ನು ತ್ಯಜಿಸಿ, ಜನ್ಮವೆಲ್ಲಾ ಹರಿ ನಾಮ ಸ್ಮರಣೆಯಿಂದ ಪಾವನಮಾಡಿಕೊಂಡವರಿವರು. ಗದ್ವಾಲಿಯಲ್ಲಿ ಸಾಹಿತ್ಯಶಾಸ್ತ್ರ ಮತ್ತು ನ್ಯಾಯಶಾಸ್ತ್ರಗಳ ಅಧ್ಯಯನಮಾಡಿ ಸುರಪುರದ ಆನಂದದಾಸರಿಗೆ ಶಿಷ್ಯರಾಗಿ "ವೆಂಕಟೇಶ ವಿಠಲ" ಎಂಬ ಅಂಕಿತಪಡೆದು ಪ್ರಸಿದ್ಧರಾದ ದಾಸರಿವರು. ಆ ಕಾಲದಲ್ಲಿ ಪ್ರಸಿದ್ಧರಾದ ನಾರಾಯಣ ಸ್ವಾಮಿಯವರಲ್ಲಿ ಇವರಿಗೆ ಸಂಗೀತಶಾಸ್ತ್ರಾಭ್ಯಾಸವಾಯಿತು. ಬಳ್ಳಾರಿಯ ಬ್ರೂಸ್‌ಪೇಟೆಯಲ್ಲಿ ಇವರ ಮನೆಯಿದೆ, ಗೋತ್ರಜರಿದ್ದಾರೆ. ತ್ಯಾಗರಾಜ ಕೀರ್ತನೆಗಳ ಧಾಟಿಯಲ್ಲಿ ಸ್ವರಜತಿಗಳ ಧಾಟಿಯಲ್ಲಿ ಬಹಳ ದೇವರ ನಾಮ ಗಳನ್ನಿವರು ರಚಿಸಿರುತ್ತಾರೆ. ಆನಂದದಾಸರಿಟ್ಟ ವರ್ಣಮಟ್ಟುಗಳಲ್ಲೇ ಅವರ ಪದಗರ್ಭದ ಮಾತುಗಳಿಂದಾರಂಭಿಸಿ ಪ್ರತ್ಯೇಕ ಪದಗಳನ್ನಿವರು ರಚಿಸಿರುತ್ತಾರೆ. ಇವರು ರಚಿಸಿದ ಇಪ್ಪತ್ತು ಆಖ್ಯಾನಗಳು ಕಲ್ಪವೃಕ್ಷ

---

*ಮಗನನ್ನು ಪ್ರೀತಿಯಿಂದ ಕರೆಯುತ್ತಿದ್ದ ಹೆಸರು.

ದಂತಿವೆ. ಲೇಖಕನು ಬಳ್ಳಾರಿಯಲ್ಲಿ ವಾಸಮಾಡುತ್ತಿದ್ದಾಗ ಆಚಾರ್ಯರ ಭಾವಚಿತ್ರದ ಅನಾವರಣ ಸಮಾರಂಭವು ಶ್ರೀಲಕ್ಷ್ಮೀನಾರಾಯಣ ದೇವಾಲಯದಲ್ಲಿ ನಗರಾಧ್ಯಕ್ಷರಾಗಿದ್ದ ಬಾಳಾಜೀರಾಯರಿಂದಾಗಿದೆ. ಒಂದೇ ಮಾತಿನಿಂದ ಹೇಳಬೇಕೆಂದರೆ ತೀರ್ಥಹಳ್ಳಿಯ ಗುಂಡಾಚಾರ್ಯರು, ಭೀಮದಾಸರು, ವೆಂಕಪ್ಪಾಚಾರ್ಯರು, ಮತ್ತು ಲೇಖಕನ ತಂದೆಯವರು, ಇವರದೆಲ್ಲಾ ಒಂದೇ ಶೈಲಿಯ ಒಂದೇ ಭಾವನೆಯ ಕೀರ್ತನವೆನ್ನಬೇಕಾಗಿದೆ.

ಬಳ್ಳಾರಿಯಲ್ಲಿ ಆಂಧ್ರನಾಟಕ ಪಿತಾಮಹರೆಂದು ಹೆಸರುಪಡೆದ ಕೃಷ್ಣಮಾಚಾರ್ಯರು ವೆಂಕಪ್ಪಾಚಾರ್ಯರ ಒಡನಾಡಿಗಳು. ಕೃಷ್ಣಮಾಚಾರ್ಯರು ಮೊದಲು ಕನ್ನಡದಲ್ಲೇ ನಾಟಕಗಳನ್ನು ಬರೆದು ಪ್ರಯೋಗ ಮಾಡಿದರು. ವೆಂಕಪ್ಪಾಚಾರ್ಯರ ಕವಿತಾಶೈಲಿಗೆ ಮುಗ್ಧರಾಗಿದ್ದ ಜನರು ಇವರಿಂದಲೂ ಒಂದೆರಡು ನಾಟಕಗಳನ್ನು ಬರೆಸಿ ರಂಗಭೂಮಿಯಮೇಲೆ ಪ್ರಯೋಗಮಾಡಿದರು. ಕೃಷ್ಣಮಾಚಾರ್ಯರು ಆಚಾರ್ಯರ ಪ್ರೌಢಿಮೆಯ ಮುಂದೆ ತಮ್ಮ ಕನ್ನಡವು ಶೋಭಿಸಲಾರದೆಂದು ಜನ್ಮಭಾಷೆಯಾದ ಆಂಧ್ರದಲ್ಲೇ ನಾಟಕಗಳನ್ನು ಬರೆದು ಆಂಧ್ರನಾಟಕ ಪಿತಾಮಹರಾದರು. ಆಂಧ್ರರ ಅಭಿಮಾನ ಕನ್ನಡಿಗರಿಗಿದ್ದರೆ ಕರ್ನಾಟಕದಲ್ಲಿ ಎಷ್ಟು ಜನ ಪ್ರಪಿತಾಮಹರಾಗುತ್ತಿದ್ದರು? ಗುರ್ಲಹೊಸೂರಿನ ಅಣ್ಣಾಕಿರ್ಲೋಸ್ಕರರು ಕನ್ನಡದಲ್ಲಿ ಬರೆದ ನಾಟಕಗಳನ್ನು ಕನ್ನಡಿಗರು ಪ್ರಶಂಸೆಗೆ ತಂದಿದ್ದರೆ ಮಹಾರಾಷ್ಟ್ರರ ರಂಗಭೂಮಿಯನ್ನು ಯಾರು ಉದ್ಧರಿಸುತ್ತಿದ್ದರು ?

ವೆಂಕಪ್ಪಾಚಾರ್ಯರ ಪದಗಳ ಒಂದೇ ಮಾದರಿ.

ಆನಂದದಾಸರ "ಬಂದಳಾ ದ್ರುಪದನಂದನೆ" ಎಂಬಂತೆ.

ಸಾವೇರಿ ಆದಿತಾಳ

ಬಂದಳಾ—ಜನಕನಂದನೆ ರಾಜರ<br>
ಸಂದಣಿಯೊಳು ಸಭೆಗೆ । ಸರಸದಿ ॥ ಪ ॥

ಸುಂದರ ಶ್ರೀರಾಮಚಂದಿರನ ಪದ<br>
ದ್ವಂದ್ವನೋಡಲಾನಂದದಲಿ ನಡೆದು ॥ ಅ ॥

ಎಡಬಲದಿ ಛಡಿಗಳ್ಹಿಡಿದಾರ್ಭಟದಿಂದ
ಬಿಡಿ ಬಿಡಿ ಪಥವೆನ್ನುತ | ಗಡಣೆವಾಳ್ಪ ಭೃತ್ಯರ ನಿವಹಗಳಿಂದ
ಕೂಡಿ ನಡೆದಾ—ಸಾಲ್ಹಿಡಿದಾ—ಕರಪಿಡಿದಾ
ಮಡದಿಯರು ಬರುತಿರುವ—ಸಡಗರ—
ನೋಡಿ ರಾ—ಜರು ಎದೆಯೊಡೆದರಾ—
ದೃಢತರಾ—ವಚನವ ||
ನುಡಿಯದೆ ಜನರೊಳ್ | ನಡುಗುತಲಿರಲಾ
ಪೊಡವಿಕುವರಿ ಜಡಿದಡಿಯಿಡುತ ನಗುತ ||೧||

ವರರತುನಗಳಾಭರಣಗಳ ಧರಿಸುತ ಘನ
ತುರುಬಿನೊಳಗೆ ಮುಡಿದಿರುವ ಕುಸುಮಗಳ ಪರಿಮಳ ವ್ಯಾಪಿಸುತ |
ಇರುತಿರಲಾ—ಸರಿ ಹೆರಳಾ—ಮುಂಗುರುಳಾ—
ಬೆರಳಿನ ಕಾಂತಿಯಲಿ—ಬರುವಳಾ
ಧರೆಯೊಳ್ವಾಸದೃಶಳಾ ನೋಡುತ
ಪುರುಷರು ಮೈಮರೆದಿರುತ ಸ್ಮರಶರಕೆ
ತರಹರಿಸುತ ಕುಳಿತಿರುವ ಸಭೆಯೊಳಗೆ ||೨||

ಕುಟಿಲಾಳಕಿಯರು ನಟನಟಿಸುತಲಿರಲಾ ಭಲ್
ಭಟರು ವಿನೋದದ ತೃಟವಿಸ್ತಾರದ ಗಾನಗಳ ವಿನೋದಗಳ
ಮಂಟಪದ—ವರಪಟದ—ಪೂರುಟದ
ದಿಂಕಟದ ಪ್ರತಿಮೆಗಳ ಪಟುತರ
ಸ್ಫುಟತರ | ರೂಪವ ವಿಟವರ
ಕಟಕರಾಗದಿ ನೋಡಿ
ಘಟನೆ ತುತಿಸುತಿರೆ ಚಟುಲ ವೆಂಕಟೇಶ
ವಿಠಲನ ಸ್ಮರಿಸುತ ಪಟುತರಾಂಗಿ ತಾ ||೩||

ಈ ಪದವು ಲಘುಮನಸ್ಕರಿಗೆ ಶಬ್ದಾಡಂಬರವಾಗಿ ಕಂಡರೂ, ರಾಗ ತಾಳಗಳ ಹೊಂದಿಕೆಯಲ್ಲಿ ಹಾಡಿದಾಗ ಹೇಗೆ ರಮಣೀಯವಾಗಿರುವದೋ ಅದನ್ನು ಕ್ರಮವರಿತು ಹಾಡಿ ಅನುಭವಿಸಬೇಕು. ಸಮಯ ಸನ್ನಿವೇಶಗಳಿಗೆ ಹೊಂದಿ

ಈ ಪದವು ಶಬ್ದಗಳ ಗಡಿಬಿಡಿಯಂತಿದ್ದರೂ, ಬಲು ಲಲಿತ ಮಾತುಗಳ ಕವಿತೆಗಳು ಆಚಾರ್ಯರ ಮುಖದಿಂದ ಸಾವಿರಗಟ್ಟಲೆ ಹೊರಟಿವೆ.

---

## ೭ ಹರಪನಹಳ್ಳಿ ರಾಮಾಚಾರ್ಯರು

ಯಾವದೋ ಕಾಲದಲ್ಲಿ ಹರಪನಹಳ್ಳಿಯಲ್ಲಿದ್ದು ಮಂತ್ರಾಲಯದಲ್ಲಿ ನೆಲೆಸಿದ ಈ ಕವಿಗಳು ಆನಂದದಾಸರ ಶಿಷ್ಯರಲ್ಲೊಬ್ಬರು. "ಇಂದಿರೇಶ" ಮುದ್ರಿಕೆಯಿಂದ ಅನೇಕ ಆಖ್ಯಾನಗಳನ್ನಿವರು ಬರೆದಿದ್ದಾರೆ. ಇವರ ಯಮಕ ಆರ್ಯಗಳಂಥಾ ಆರ್ಯಗಳು ಆಂಧ್ರ ಮಹಾರಾಷ್ಟ್ರ ಭಾಷೆಗಳಲ್ಲೂ ದೊರೆಯುವದಿಲ್ಲ.

ಹಾಡಿನ ಮಾದರಿಯನ್ನು ನೋಡಿದರೆ—

ಉತ್ತರ ಗೋಗ್ರಹಣದಲ್ಲಿ ಸುಧೇಷ್ಣೆಗೆ ಬೃಹನ್ನಡೆಯು ಯುದ್ಧಕ್ಕೆ ಹೋಗಿ ಬರುವೆನೆಂದು ಹೇಳಿದ ಸಂದರ್ಭದಲ್ಲಿ—

ಬೇಗಡೆ — ಛಾಪು

ಪೋಗಿ ಬರುವೆನೆ ಭೂವರನ ರಾಣಿ। ಗಂಭೀರವಾಣಿ
ಬಾಗಿ ಬೇಡುವೆ ಪರಮ ಕಲ್ಯಾಣಿ। ಕಾಳಾಹಿವೇಣಿ ॥ ಪ ॥

ನಿನ್ನ ಮಗನಿಗೆ ಬಂದದೇನು ಭಯ
ನಾನಿರಲು ವಿಜಯ
ಘನವಾಗಿರಲಮ್ಮ ನಿಮ್ಮ ದಯ
ಸನ್ನಹಿಸುವೆನು ರಥವ ಹೇಮಮಯ
ಕಾಳಗಕೆ ಸಮಯ
ಮುನ್ನ ನಡೆಸುವೆ ಮರುತವೇಗ ಹಯ
ಮಾಡುವೆ ಸಹಾಯ ॥ ೧ ॥

ಬಾಲಭಾವದೊಳಿರುವಗಿಂಥ ಗುಣ
ಧೈರ್ಯದಿ ಧುರೀಣ

ಶೀಲರಾಜರ ಕುಲಕಲಂಕರಣ
ತಾಳಿದನು ವಿವಿಧಾಯುಧಾಸ್ತ್ರಗಣ
ಶರಚಾಪ ಬಾಣ
ಕೀಳೆನಿಪ ವೈರಿಗಳಮೇಲೆ ಪಣ
ಪೌರುಷದ ಪಯಣ ॥ ೨ ॥

ಇಂದು ನಿಮ್ಮರಮನೆಯ ಗೋಧನವ
ವೈದಿರುವ ಭಾವ
ಬಂದರೆ ವಿರಾಟೇಂದ್ರ ಏನನವ
ನಿಂದಿಸನೆ ನಿಜನಂದನನ ಘನವ
ಮಹಾನುಭಾವ
ಇಂದಿರೇಶನೆ ಊರ್ವರನು ಕಾವ
ಜಯವೀವ ದೇವ

ಈ ರೀತಿ ಇದೆ.

ಆರ್ಯರುಗಳ ಮಾದರಿಯನ್ನು ನೋಡಿದರೆ—

ತಾಯಿತವಾನುಗ್ರಹ ಒಳಿ
ತಾಯತವಾಗಿರಲಿ ತಾಳ್ವೆ ತಾಯಿತವ
ತಾಯಿ ತವರಮನೆಯೊಳು ಗುರು
ತಾಯಿತವರ ಗೆಲುವೆನಾತ ತಾಯಿತವ ॥ ೧ ॥

ತಾ॥ ತಾಯಿ! ನಿನ್ನ ಅನುಗ್ರಹ ಒಳ್ಳೇದಾಗಿ ವಿಸ್ತಾರವಾಗಿರಲಿ. ಶತ್ರುಗಳನ್ನು ಗೆಲ್ಲುವ ವಿಷಯದಲ್ಲಿ ಕಂಕಣ ಕಟ್ಟುತ್ತೇನೆ. ತಾಯಿ! ಅವರ ಗುರುತು ತವರಮನೆಯಲ್ಲೇ ಆಯಿತು. ನಿನಗೆ ಈಗ ಆತತಾಯಿಗಳಾಗಿ ಬಂದಿದ್ದಾರೆ. ಗೆದ್ದುಬಿಡುತ್ತೇನೆ.
ಈ ರೀತಿಯಿದೆ.

ಹರಪನಹಳ್ಳಿ ರಾಮಾಚಾರ್ಯರ ಜಾವಡಿಗಳೂ ಬಹಳ ರಮಣೀಯ ವಾಗಿವೆ.

---

## ೭ ತುಂಗಮ್ಮನವರು

ಇವರು ಆನಂದದಾಸರ ಮಗಳು. ಆನಂದದಾಸರಿಗೆ ಸ್ತ್ರೀಸಂತಾನ ವಿದ್ದಂತೆ ಈಕೆಗಾದರೂ ಸ್ತ್ರೀಸಂತಾನವೇ ಉಳಿದಿದ್ದು ಅವರು ರಾಯಚೂರು ಜಿಲ್ಲೆಯಲ್ಲಿರುತ್ತಾರೆ. ಈಕೆಯ ಗಾಯನ ಕೇಳಿ ಪಶುಗಳು ಮೇವು ನೀರು ಬಿಡುತ್ತಿದ್ದವು; ಸರ್ಪಗಳು ಹೆಡೆಮಾಡುತ್ತಾ ಲಾಲಿಸುತ್ತಿದ್ದವು; ಎಂಬ ಬಲ್ಲವರ ಹೇಳಿಕೆಯುಂಟು. ''ಶಿಶುರ್ವೇತ್ತಿ ಪಶುರ್ವೇತ್ತಿ ವೇತ್ತಿ ಗಾನರಸಂ ಫಣಿಃ'' ಎಂಬಂತೆ ಗಾಯನವು ಯಾವ ಪ್ರಾಣಿಗಳಿಗೆ ಸಂತೋಷವಾಗಲಿಕ್ಕಿಲ್ಲ? ಪಂಡಿತರಿಗೆ ದುರವಗಾಹವಾದ ವೇದಾಂತ ಪ್ರಮೇಯಗಳನ್ನು ಸುಲಭವಾಗಿ ತುಂಗಮ್ಮನವರು ಹೇಳುತ್ತಿದ್ದರು. ತಂದೆಯ ಶೈಲಿಯಲ್ಲೇ ಕವಿತೆಮಾಡಿ ಕೆಲವು ದೇವರ ನಾಮಗಳನ್ನಿವರು ಬಿಟ್ಟಿರುತ್ತಾರೆ. ಈಕೆಯನ್ನು ಪುಣ್ಯ ಸಾಮಳೆಂದು ಇಂದಿಗೂ ಪೊಗಲಾಯಿ ಕನ್ನಡಿಗರು ಕೊಂಡಾಡುತ್ತಾರೆ.

---

# ಧರ್ಮದೀಕ್ಷೆ

ಬ್ರಹ್ಮಚರ್ಯಾದಿ ಆಶ್ರಮಗಳಿಗಿರುವಂತೆ ಹರಿದಾಸತ್ವಕ್ಕಾದರೂ ಧರ್ಮದೀಕ್ಷೆಯಿದೆ. ವಿಜಯದಾಸರ ಹರಿದಾಸಲಕ್ಷಣ ಸುಳಾದಿ (ಪು ೩೮ ರಿಂದ ೪೧)ಯಲ್ಲಿ ಹೇಳಿರುವಂತೆ ಬಾಳಿದರೆ ಅದೇ ದೀಕ್ಷೆಯಾಗುತ್ತದೆ. ದೀಕ್ಷೆಗಿಂತ ಅರ್ಹತೆಯನ್ನು ನೋಡಿದರೆ ದಾಸನಾಗುವನಿಗೆ ಕನಿಷ್ಠಪಕ್ಷ "ಪ್ರಸ್ಥಾನ ತ್ರಯ"ಗಳ (ಗೀತಾ, ಉಪನಿಷತ್ತುಗಳು, ಬ್ರಹ್ಮಸೂತ್ರಗಳ.) ಪಾಠವಾದರೂ ಆಗಿರಬೇಕು. ಪ್ರಸ್ಥಾನತ್ರಯಗಳ ಹೆಸರೆತ್ತಿದಮೇಲೆ ಸಂಸ್ಕೃತ ಪಾಂಡಿತ್ಯವಿರಬೇಕೆಂದು ಪ್ರತ್ಯೇಕ ಹೇಳಬೇಕಾಗಿಲ್ಲ ದೀಕ್ಷೆ ವಹಿಸುವಾಗ:—

೧. ಶೃತಿಸ್ಮೃತಿ ಪುರಾಣೇತಿಹಾಸಗಳಲ್ಲಿ ಸಂಪೂರ್ಣ ನಂಬಿಕೆಯಿಡುವೆನೆಂದು ಪ್ರಮಾಣಮಾಡಬೇಕು.

೨. "ಸಾಲಮಾಡುವದಿಲ್ಲ, ಸಾಲದೆನುವದಿಲ್ಲ, ನಾಳೆಗಿಡುವದಿಲ್ಲ;" ಎಂಬ ಮೂರು ಮಾತುಗಳನ್ನೊಪ್ಪಿಕೊಳ್ಳಬೇಕು.

೩. ಬಲವತ್ತರ ಕಾರಣಗಳಿದ್ದವಿನಾ ಹರಿದಿನ ವ್ರತಾಚರಣೆಗಳನ್ನು ಬಿಡುವದಿಲ್ಲವೆಂದು ಪ್ರತಿಜ್ಞೆಮಾಡಬೇಕು.

೪. ಹರಿನಿಂದೆ ಹರಿಭಕ್ತರ ನಿಂದೆಗಳನ್ನು ಕೇಳಿದರೆ ಪರಿತಪಿಸಿ ಆತ್ಮಶುದ್ಧಿಗಾಗಿ ಉಪವಾಸಮಾಡಬೇಕು.

೫. ಹರಿನಾಮ ಸ್ಮರಣೆಯಿಂದ ಪ್ರಾಪ್ತವಾದ ಪವಿತ್ರಾನ್ನವನ್ನೇ ಉಣಬೇಕು. ಹರಿಸೇವೆಗಾಗಿ ತನ್ನ ಜೀವನವನ್ನು ಮೀಸಲಿಡಬೇಕು.

ಇಷ್ಟು ನಿಯಮಗಳಿಗೂ ಒಳಪಟ್ಟ ಶಿಷ್ಯನ ಯೋಗ್ಯತೆಯನ್ನು ಗುರುವು ಪರೀಕ್ಷಿಸಿ ಅಂಕಿತೋಪದೇಶ ಕೊಡುವನು. ಅಂಕಿತ ಪದವು ಯಾವ ಅಂಕಿತವನ್ನು ಗುರುವು ಕೊಡುವನೋ ಆ ಅಂಕಿತದಿಂದಲೇ ಆರಂಭವಾಗಿ ಕಡೆಯ ನುಡಿಯಲ್ಲಿ ಗುರುವಿನಂಕಿತದಿಂದ ಪೂರ್ಣವಾಗುವದು. ಅದರ ಮಾದರಿಯಾದರೋ:—

ಕಾಂಬೋಧಿ — ಜಂಪೆ

ಶ್ರೀಶವಿಠಲ ನೀನೆ ಸಂತೈಪುದು
ಕ್ಲೇಶನಾಶನ ನಿನ್ನದಾಸರವನೆಂದರಿತು ‖ ಪ ‖

ಭೂದೇವ ಜನ್ಮವಿತ್ತವಗೆ ನೀ ದಯದಿಂದ
ಸಾಧುಜನ ಸಂಗ ಸುಜ್ಞಾನಭಕುತಿ
ಸಾದರದಿ ನಿನ್ನತುತಿಸುವ ಭಾಗ್ಯಕರುಣಿಸಿದೆ ಕೃ
ಪೋದಧಿಯೆ ನಿನಗೆ ನಾನಮಿಪೆ ಬಹು ಬಗೆಯಿಂದ ‖ ೧ ‖

ಯೋಗ್ಯತೆಗಳನು ಬಲ್ಲೆ ಬಹು ಜೀವರೊಳಗಿದ್ದು
ಅಜ್ಞಾನಿ ನೀನಲ್ಲ ಸರ್ವಜ್ಞನೆಂದು
ವಿಜ್ಞಾಪಿಸುವೆನಿರುತ ವಿನಯದಿಂದಲಿ ಪರಮ
ಭಾಗ್ಯವಂತನೆ ನಿನ್ನ ಪಾದಕಮಲಕೆ ಬಿಡದೆ ‖ ೨ ‖

ಸಕಲ ಲೋಕಗಳ ನಾಯಕ ಇವಗೆ ಹೇಯ ಲೌ
ಕಿಕ ಮಾರ್ಗವನೆ ಬಿಡಿಸಿ ನಿತ್ಯದಲ್ಲಿ
ಪ್ರಕಟವನೆಗೈಸು ಸದ್ಧರ್ಮಕರ್ಮಗಳ ದೇ
ವಕಿ ತನಯ ಶ್ರೀಜಗನ್ನಾಥ ವಿಠಲ ಒಲಿದು ‖ ೩ ‖

ಎಂಬಂತಿದೆ ಪದದ ಮಾತುಗಳು ಹರಿದಾಸನ ಕರ್ತವ್ಯವನ್ನು ತಿಳಿಸುತ್ತವೆ.

# ಹಿನ್ನುಡಿ

ಕರ್ಣಾಟಕ ಭಕ್ತವಿಜಯದ ಪ್ರಥಮ ಭಾಗಕ್ಕೆ ಬರೆದಂತೆ ದ್ವಿತೀಯ ಭಾಗಕ್ಕೂ ಹಿನ್ನುಡಿಯನ್ನು ಬರೆಯಬೇಕಾಯಿತು. ಸಂಗೃಹೀತ ವಿಷಯಗಳನ್ನು ಜ್ಞಾಪಿಸಬೇಕಾಯಿತು. ಕಾಲಾನುಸಾರ ಮುಂದೇನು ಮಾಡಬೇಕೆಂಬುದನ್ನು ಸೂಚಿಸಬೇಕಾಯಿತು.

ಗ್ರಂಥದ ಪ್ರಥಮ ಭಾಗದ ಪ್ರಸ್ತಾವನೆಯಿಂದ--ಭಾಗವತ ಧರ್ಮವು ಭರತಖಂಡದಲ್ಲಿ ಐದುಸಾವಿರ ವರ್ಷಗಳಿಗಿಂತ ಪೂರ್ವದಿಂದ ವ್ಯಾಪಿಸಿತ್ತೆಂದು ಗೊತ್ತಾಗುತ್ತದೆ. ಗ್ರಂಥದ ಆದ್ಯಂತ ನೋಡಿದರೆ—ಶ್ರೀಕೃಷ್ಣನು ಅರ್ಜುನನಿಗೆ ಉಪದೇಶಿಸಿದ ಗೀತಾಧರ್ಮವು ಭಾಗವತಧರ್ಮವೆಂದೇ ಗೊತ್ತಾಗುತ್ತದೆ. ಇತಿಹಾಸ ಕಾಲಕ್ಕಿಂತ ಹಿಂದೆ ಅವತರಿಸಿದ ಪುರಾತನರೂ, ಆಳ್ವಾರರೂ, ತಮಿಳಿನಲ್ಲಿ ಪ್ರಚಾರಮಾಡಿದ್ದು ಭಾಗವತ ಧರ್ಮವೆಂದು ಗೊತ್ತಾಗುತ್ತದೆ. ಉತ್ತರಭಾರತದ ತುಲಸೀದಾಸ, ರಾಮದಾಸ, ಕಬೀರದಾಸ, ಪ್ರಭೃತಿಗಳು ಆಯಾ ಪ್ರಾಂತಿಕ ಭಾಷೆಗಳಲ್ಲಿ ಭಾಗವತ ಧರ್ಮ ಪ್ರಚಾರ ಮಾಡಿ ಪ್ರಾಕೃತ ಭಾಷೆಗಳಿಗೆ ದೊಡ್ಡಸ್ತಿಕೆಯನ್ನುಂಟು ಮಾಡಿದರೆಂದು ಗೊತ್ತಾಗುತ್ತದೆ. ಕರ್ನಾಟಕದಲ್ಲಿ—ಒಂಭತ್ತನೇ ಶತಮಾನದಷ್ಟು ಹಿಂದಿನ ಕಾಲದಲ್ಲಿ ಭಾಗವತ ಧರ್ಮಾವಲಂಬಿಗಳು ಆದರ್ಶ ಜೀವನವನ್ನು ತೋರಿಸಿದರೆಂದು ಗೊತ್ತಾಗುತ್ತದೆ. ಆದರೇನು? ಎಲ್ಲವೂ ಸರಿ; ಎಲ್ಲರೂ ಸರಿ; ಮುಂದೇನು ಎಂಬ ಪ್ರಶ್ನೆ ಹುಟ್ಟುತ್ತದೆ.

ಪ್ರಕೃತ ಕಾಲದಲ್ಲಾದರೋ—ಎಂದೂ ಇರದಿದ್ದ ಹೊಸ ಪರಿಸ್ಥಿತಿಗಳು ಬಂದೊದಗಿವೆ. ಧರ್ಮದಲ್ಲಿ ಪುರಸ್ಕಾರ ದೊರೆಯುವದರ ಬದಲು ತಿರಸ್ಕಾರ ಬಹಿಷ್ಕಾರಗಳು ತಾನೇತಾನಾಗಿವೆ. ಈ ಕಾರಣದಿಂದ, ಎರಡೂವರೆ ಸಾವಿರ ವರ್ಷಗಳಿಂದ ಬೌದ್ಧ ಇಸಾಯಿ ಇಸ್ಲಾಂ ಧರ್ಮಗಳು ಉದಯವಾಗಿ ಪ್ರಪಂಚದ-ಮುಕ್ಕಾಲು ಮೂರುವೀಸ ಜನರನ್ನು ತಮ್ಮ ಅಂಕೆಯಲ್ಲಿಟ್ಟು ಕೊಂಡಿವೆ. ಸಕಲ ಮಾನವ ಪ್ರಪಂಚವನ್ನೂ ವ್ಯಾಪಿಸಿದ್ದ ಸನಾತನ

ಧರ್ಮವು ಮಾತೃಭೂಮಿಯಲ್ಲೇ ಜೀವಂತವಾಗಿ ಉಳಿವಬಗೆ ಹೇಗೆಂಬ ಭಯ ವುಂಟಾಗಿದೆ. ಹೊಸ ಹೊಸ ಭಾವನೆಗಳ ಹೊಡೆತದಿಂದಲೂ, ತಿಳಿದವರ ಉದಾಸೀನದಿಂದಲೂ, ಹಳೆಯದು ಹಾಳಾಗುವಕಾಲ ಬಂದಿದೆ. 'ಉದಾರ ಚರಿತಾನಾಂತು ವಸುಧೈವ ಕುಟುಂಬಕಂ' ಎಂಬ ಭಾವನೆಯು ಭಾರತೀಯರ ತಲೆಯಿಂದ ದೂರಾಗುತ್ತಲಿದೆ. ಒಂದೊಂದು ಸಣ್ಣ ಸಮಸ್ಯೆಯನ್ನು ಬಿಡಿ ಸುವದಕ್ಕೆ ಹೋದಂತೆ ಕಗ್ಗಂಟಾಗಿ ಅದೇ 'ಮುಂದೇನು' ಎಂಬುವುದು ಮುಂದೆ ನಿಲ್ಲುತ್ತದೆ.

'ಆಚಾರಃ ಪ್ರಥಮೋಧರ್ಮಃ ಧರ್ಮಸ್ಯ ಪ್ರಭುರಚ್ಯುತಃ'' ಎಂಬ ಆರ್ಯೋಕ್ತಿಯಂತೆ ಧರ್ಮದ ಪ್ರಭುವಿನೊಡನೆ ಧರ್ಮವೂ, ಅಚ್ಯುತವಾಗಿರ ಬೇಕು. ಅನ್ಯಧರ್ಮಗಳು ಭರತಭೂಮಿಗೆ ಬರುವುದಕ್ಕೆ ಮೊದಲು ನಮ್ಮ ವಿಚಾರಗಳು ಹೇಗಿದ್ದರೂ ಬಾಧಕವಾಗಿರಲಿಲ್ಲ. ಅನ್ಯ ಧರ್ಮಗಳು ನಮ್ಮ ಜನರನ್ನು ಆಕರ್ಷಣೆ ಮಾಡಿದಾಗಲೇ ಧರ್ಮಪೀಠಗಳವರು ಎಚ್ಚೆತ್ತಿದ್ದರೆ ಸನಾತನಧರ್ಮಕ್ಕೆ ಹತ್ತುಕೋಟಿ ವಿರೋಧಿಗಳಾಗುತ್ತಿರಲಿಲ್ಲ. ಆರುಕೋಟಿ ನಿಮ್ನ ಜನರು ಧರ್ಮಾಂತರವಾಗುವೆವೆಂದು ಬೆದರಿಸುತ್ತಿರಲಿಲ್ಲ. ಧರ್ಮಾಂತ ರವಾದವರೆಲ್ಲಾ ನಿರ್ಬಂಧದಿಂದಲೇ ಆದರೆಂದೂ ಹೇಳುವದಕ್ಕಾಗುವುದಿಲ್ಲ. ಇಷ್ಟಾದರೂ ಪೀಠಾಧಿಪತಿಗಳಿಗೆ ಸ್ವಧರ್ಮರಕ್ಷಣೆ ಮಾಡಿಕೊಳ್ಳಬೇಕೆಂಬ ಯೋಚನೆ ಹುಟ್ಟಿಲ್ಲ. ಅದೇ ತಿರಸ್ಕಾರ ಅದೇ ಬಹಿಷ್ಕಾರ ಅದೇ ಕಲಿಗಾಲ ಮಾಡುವದೇನೆಂಬ ಮಾತುಗಳನ್ನವರು ಬಿಟ್ಟಿಲ್ಲ. ಭರತಖಂಡದ ದೇವಾಲ ಯಗಳ ಮತ್ತು ಮಠಗಳ ಉತ್ಪತ್ತಿ ಒಂದುಕೋಟಿಗಿಂತ ಕಡಮೆಯಾಗಿಲ್ಲ. ಸಣ್ಣವರಿಂದ ದೊಡ್ಡವರ ತನಕ ಎಣಿಸಿದರೆ ಹಿಂದೂರಾಜರ ಸಂಖ್ಯೆ ಐನೂ ರಕ್ಕೆ ಕಡಿಮೆಯಾಗಿಲ್ಲ. ಹೈದರಾಬಾದು, ಭೋಪಾಲ್ ಮೊದಲಾದ ದೇಶ ಗಳ ಮುಸಲ್ಮಾನರಾಜರು ಇಸ್ಲಾಂ ಪ್ರಚಾರಕ್ಕೆ ಎಷ್ಟು ಹಣಖರ್ಚು ಮಾಡು ತ್ತಿರುವರೆಂಬುವದು ಯಾರಿಗೂ ತಿಳಿಯದ ಸಂಗತಿಯಾಗಿಲ್ಲ. ಹಿಂದೂಧರ್ಮ ರಕ್ಷಣೆ ಪ್ರಚಾರಕಾರ್ಯಗಳಿಗೆ ಹತ್ತುಕೋಟಿ ರೂಪಾಯಿಗಳನ್ನು ಶೇಖರಿಸ ಬೇಕೆಂದರೂ, ಆ ಧನ ಸಹಾಯದಿಂದ ದೇಶದಲ್ಲೆಲ್ಲಾ ಶಾಖೆಗಳನ್ನೇರ್ಪ ಡಿಸಿ ಮತ ಪ್ರಚಾರ ಮಾಡಬೇಕೆಂದರೂ, ಕಠಿಣವಾಗಿಲ್ಲ. ಭರತಖಂಡದಲ್ಲಿ

ಧರ್ಮಪ್ರಚಾರಕ್ಕೆ ಧನ ದೊರೆಯುವುದಿಲ್ಲವೆಂದು ಹೇಳುವುದಕ್ಕಾಗುವುದಿಲ್ಲ. ಮಂತ್ರದೀಕ್ಷೆಯಿಂದ ಪಾತಕಿಗಳನ್ನು ಪುನೀತಗೊಳಿಸುವ ಶಾಸ್ತ್ರ ಪತ್ರಗಳಿಗೆ ಬಡತನವಿಲ್ಲ. ಶ್ರೀ ಕೃಷ್ಣನ ಗೀತೆಯು—

ಸಮೋಽಹಂ ಸರ್ವಭೂತೇಷು ನಮೇದ್ವೇಷ್ಯೋಽಸ್ತಿ ನಪ್ರಿಯಃ
ಯೇ ಭಜಂತಿ ತು ಮಾಂ ಭಕ್ತ್ಯಾ ಮಯಿ ತೇ ತೇಷು ಚಾಪ್ಯಹಂ ॥ ೨೯ ॥

ಅಪಿ ಚೇತ್ಸುದುರಾಚಾರೋ ಭಜತೇ ಮಾಮನನ್ಯಭಾಕ್
ಸಾಧುರೇವ ಸ ಮಂತವ್ಯಃ ಸಮ್ಯಗ್ವ್ಯವಹಿತೋಹಿ ಸಃ ॥ ೩೦ ॥

ಕ್ಷಿಪ್ರಂಭವತಿ ಧರ್ಮಾತ್ಮಾ ಶಶ್ವಚ್ಛಾಂತಿಂ ನಿಗಚ್ಛತಿ
ಕೌಂತೇಯ ಪ್ರತಿಜಾನೀಹಿ ನ ಮೇ ಭಕ್ತಃ ಪ್ರಣಶ್ಯತಿ ॥ ೩೧ ॥

ಮಾಂ ಹಿ ಪಾರ್ಥ ವ್ಯಪಾಶ್ರಿತ್ಯಯೇಽಪಿಸ್ಯುಃ ಪಾಪಯೋನಯಃ
ಸ್ತ್ರಿಯೋವೈಶ್ಯಾಸ್ತಥಾಶೂದ್ರಾಃ ತೇಪಿಯಾಂತಿಪರಾಂಗತಿಂ ॥ ೩೨ ॥

ಎಂಬ ಮಾತುಗಳಿಗಿಂತ ಅನುಗ್ರಹ ವಾಕ್ಯಗಳು ಬೇಕಾಗಿಲ್ಲ. ಶ್ರೀಮನ್ಮಧ್ವಾಚಾರ್ಯರ—

ನಾಮ್ನೋಽಸ್ತಿ ಯಾವತೀಶಕ್ತಿಃ ಪಾಪನಿರ್ಹರಣೇಹರೇಃ
ತಾವತ್ಕರ್ತುಂ ನಶಕ್ನೋತಿ ಪಾತಕಂ ಪಾತಕೀಜನಃ ॥ ೧ ॥

ಎಂಬ ಮಾತಿಗಿಂತ ಮತ್ತೊಂದು ಭರವಸೆಬೇಕಾಗಿಲ್ಲ. ಈಗ ಬೇಕಾಗಿರುವುದು ಪ್ರಚಾರ. ಪ್ರಚಾರವು ವ್ಯವಹಾರಕ್ಕೆ ಬಾಧಕವಾಗದಿರಬೇಕು. ಹರಿಜನರಿಂದಾರಂಭಿಸಿ ಗಿರಿಯ ತುದಿಯುಲ್ಲಿರುವವರ ತನಕ ಒಂದೇ ಸಂಸ್ಕೃತಿಗೆ ಒಳಪಟ್ಟವರೆಂಬ ಅಭಿಮಾನ ಬರುವಂತಾಗಬೇಕು. ಬ್ರಾಹ್ಮಣ, ಕ್ಷತ್ರಿಯ, ವೈಶ್ಯ ಶೂದ್ರ ವರ್ಣಗಳೊಂದೊಂದರಲ್ಲೂ ಅರ್ಥವಿಲ್ಲದ ಉಪಪಂಗಡಗಳಡಗಿ, ನಾಲ್ಕೂಬಲಿಷ್ಠ ಪಂಗಡಗಳಾಗಬೇಕು. ವೃತ್ತಿಯಿಂದ ವರ್ಣಗಳ ದೊಡ್ಡಸ್ತಿಕೆ ಬೆಳೆಯಬೇಕು. ಬ್ರಹ್ಮಚಾರಿ, ಗೃಹಸ್ಥ, ವಾನಪ್ರಸ್ಥ, ಸಂನ್ಯಾಸ ಆಶ್ರಮಗಳು ಪ್ರತಿಮಾನವನ ಜೀವನದ ಅಂತಸ್ತುಗಳಾಗಬೇಕು. ಸಾರ್ವಜನಿಕ ಸಂಸ್ಥೆಗಳಲ್ಲಿ ಸರ್ವರ ಸ್ಥಾನಮಾನಗಳ ರಕ್ಷಣೆಯಾಗಬೇಕು. ಪುರುಷರಿಗಿಂತ ಸ್ತ್ರೀಯರಿಗೆ ಹೆಚ್ಚಾಗಿ ಧಾರ್ಮಿಕ ವಿದ್ಯಾಭ್ಯಾಸವಾಗಬೇಕು. ಪುರು

ಷರು ಸ್ತ್ರೀಯರ ಮಾನರಕ್ಷಣೆ ಮಾಡಬೇಕೆಂಬ ಹೀನಕಲ್ಪನೆಯನ್ನು ಬಿಟ್ಟು ಸ್ತ್ರೀಯರಿಗೇ ತಮ್ಮ ಮಾನವನ್ನು ತಾವು ಕಾಪಾಡಿಕೊಳ್ಳಬೇಕೆಂಬ ವಿದ್ಯೆಯನ್ನೂ ಶಕ್ತಿಯನ್ನೂ ಅಭ್ಯಾಸ ಮಾಡಿಸಬೇಕು. ಇಷ್ಟೇ ಕಾರ್ಯನಡೆದರೆ ಜನರು ಸನಾತನ ಧರ್ಮವನ್ನು ತ್ಯಜಿಸುವರೆ? ತ್ಯಜಿಸಿ ಶತ್ರುಗಳಾಗುವರೆ?''

ಧರ್ಮಪ್ರಚಾರ ಹೇಗೆ ನಡೆಯಬೇಕು, ಯಾವ ರೂಪದಲ್ಲಿ ನಡೆಯಬೇಕು, ಎಂಬುವದೇ ಇನ್ನೂ ಸಮಾಜದ ಮುಂದಿರುವ ದೊಡ್ಡಪ್ರಶ್ನೆಯಾದರೆ—ಅದಕ್ಕೆ ಉತ್ತರವು—

ಭರತಖಂಡದ ಎಲ್ಲಾ ಮಠಾಧಿಪತಿಗಳೂ ತಮ್ಮ ಒಳ ಜಗಳಗಳನ್ನು ಬಿಟ್ಟು ಆರ್ಯ ಸಂಸ್ಕೃತಿಯನ್ನು ಬೆಳೆಸಲು ಏನುಮಾಡಬೇಕೆಂದು ಚರ್ಚಿಸಿದರಾಯಿತು! ಯೋಗ್ಯ ತೀರ್ಮಾನ ಮಾಡಿಕೊಂಡು ಹಿಂದೂರಾಜರ ಸಹಾಯದಿಂದ ಜಿಲ್ಲೆ ಜಿಲ್ಲೆಗಳಲ್ಲಿ ಹಿಂದೂಮಿಷನ್ನುಗಳನ್ನು ಸ್ಥಾಪಿಸಿದರಾಯಿತು! ಉಪದೇಶಕ್ಕೆ ಗೊತ್ತಾದ ಕ್ರಮವನ್ನು ನಿಶ್ಚಯಿಸಿ ಉಪನ್ಯಾಸಗಳು, ಕೀರ್ತನಗಳು, ಮಾಯಾಲಾಂದ್ರಗಳು ಮೊದಲಾದ ರೂಪದಿಂದ ಧರ್ಮೋಪದೇಶ ಮಾಡಿಸಿದರಾಯಿತು! ಚಲಚ್ಚಿತ್ರಗಳಾಗಲಿ, ನಾಟಕಗಳಾಗಲಿ ಧರ್ಮವಿರೋಧಿಗಳಾಗಿರದಂತೆ ನಡೆವ ವ್ಯವಸ್ಥೆ ಮಾಡಿದರಾಯಿತು! ಪ್ರಚಾರಕರ ಭರಣವು ಸಂಸ್ಥೆಯಿಂದಲೇ ನಡೆಯುವಂತೆ ಮಾಡಿ ಅಗಣಿತ ನಿರುದ್ಯೋಗಿ ವಿದ್ಯಾವಂತರಿಗೆ ಜೀವನವನ್ನು ಕಲ್ಪಿಸಿದರಾಯಿತು. ಹೀಗೆಲ್ಲಾ ಮಾಡಿದರೆ ಹಿಂದುಧರ್ಮಕ್ಕೆ ಚ್ಯುತಿಬಂದೀತೆ ? ಅನ್ಯರ ಆಕ್ರಮಣ ಹಿಂದುಗಳ ಮೇಲಾದೀತೆ? ಹಿಂದುಗಳು ಧರ್ಮಾಂತರವಾದಾರೆ?

ಭರತಖಂಡದಲ್ಲಿ ವರ್ತಮಾನ ಕಾಲದಲ್ಲಿ ಬೇಕಾದಷ್ಟು ಮಂದಿ ಧರ್ಮದ ಮೇಲೆ ಉಪನ್ಯಾಸ ಮಾಡುವರಿಲ್ಲವೇ? ಬೆಳಗಾದರೆ ಕೀರ್ತನ ಮಾಡಿಸಿರೆಂದು ಮನೆಮನೆ ತಿರುಗುವ ಕೀರ್ತನಕಾರರಿಲ್ಲವೇ, ಇವರಿಂದೆಲ್ಲಾ ಏನು ಉದ್ಧಾರವಾಗಿದೆಯೆಂದು ಯಾರಾದರೂ ಕೇಳಬಹುದು. ಖಂಡಿತೋಕ್ತಿಯಿಂದ ಹೇಳುವುದಾದರೆ-ಅವು ಉಪನ್ಯಾಸಗಳಲ್ಲ; ಅವು ಕೀರ್ತನಗಳಲ್ಲ ; ಆಗಿದ್ದರೂ ಗೊತ್ತಾದ ಗುರಿಯಿಟ್ಟುಕೊಂಡು ರಂಗಸ್ಥಳಕ್ಕೆ ಬಂದವಲ್ಲ; ಎಂದು ಹೇಳಿಬಿಡಬಹುದು. ಆರ್ಜನೆಯ ದೃಷ್ಟಿಯಿಂದ ಚಿಕ್ಕ ಬಾಲಕ ಬಾಲಿಕೆಯರಿಗೆ

ಗಳಿಪಾಠ ಮಾಡಿಸಿ, ಅಬ್ಬಬ್ಬಾ ಎನ್ನುವಂತೆ ಹಾಡಿಸಿ ಆಡಿಸಿದರೆ ಅವು ಕೀರ್ತ್ತನಗಳೆನಿಸುವುದಿಲ್ಲ. ಕೀರ್ತ್ತನವು ಉಪದೇಶವಲ್ಲವೆ? ಉಪದೇಶಕ್ಕೆ ಅನುಭವ ಬೇಡವೆ? ಪವಿತ್ರಜೀವನ ತ್ಯಾಗಬುದ್ಧಿಗಳಿರಬೇಡವೆ? ಆದ್ದರಿಂದಲೇ ಕೀರ್ತ್ತನಕಾರರಾಗಿ ಬರುವವರಿಗೆ ಗೊತ್ತಾದ ಗುರಿ ಗಮ್ಯಗಳಿರಬೇಕೆಂಬುವುದು.

ರಾಜ್ಯಾಂಗದ ವೈದ್ಯನ ಮತ್ತು ಶಿಲ್ಪಿಯ ಮಾತುಗಳಂತೆ ಅನುಭವದ ಮಾತನ್ನು (Expert openion) ಹೇಳಬೇಕೆಂದರೆ ಲೇಖಕನು ತಿಳಿಸಿ ಮುಗಿಸುವದಿಷ್ಟು:-

ಇತರ ಭಾಷಾ ಪ್ರಾಂತ್ಯಗಳ ಮಾತನ್ನು ಅವರವರಿಗೇ ಬಿಟ್ಟು ಕರ್ನಾಟಕದ ದೃಷ್ಟಿಯಿಂದ ವಿಚಾರಿಸಿದರೆ ಮೊದಲನೆಯದು, ಕರ್ನಾಟಕಕ್ಕೆ ಕೀರ್ತನ ಶಾಲೆಯೊಂದಾಗಬೇಕು. ನಿರುದ್ಯೋಗಿ ಎಂ. ಎ., ಬಿ. ಎ. ಗಳ ಮಧ್ಯದಲ್ಲಿ ಅರ್ಹರನ್ನು ಆರಿಸಿ ಐದುವರ್ಷಗಳ ಕಾಲವಾದರೂ ಅವರಿಗೆ ಕೀರ್ತನಶಿಕ್ಷಣ ಕೊಡಬೇಕು. ಸಮಾಜವನ್ನು ಕಟ್ಟುವ ವಿಧಾನಗಳಲ್ಲಿ ಸಾಧ್ಯವಾದುದನ್ನೆಲ್ಲಾ ಪ್ರಯೋಗಿಸಿ ತೋರಿಸಬೇಕು. ತನ್ಮೂಲಕ ಭಾಷೋಜ್ಜೀವನ ಧರ್ಮೋಜ್ಜೀವನ ದೇಶೋದ್ಧಾರಗಳಾಗಬೇಕು. ಇದು ಭಾಗವತ ಧರ್ಮ. ಇದೇ ಭಾಗವತ ಧರ್ಮ. ಇದುವೇ ಕೀರ್ತನದ ಧ್ಯೇಯ. ಇದೇ ಮೊದಲನೆಯದು. ಇದೇ ಕಡೆಯದು.

ಓಂ ತತ್ಸತ್

---

# ಉಪಕಾರಸ್ಮರಣೆ

ಕರ್ನಾಟಕ ಭಕ್ತವಿಜಯ ಪ್ರಥಮಭಾಗದ ಮುದ್ರಣವಾದ ಕೂಡಲೇ ಮದ್ರಾಸಿನ ಸ್ಕೂಲ್ ಬುಕ್ ಎಂಡ್ ಲಿಟರೇಚರ್ ಸೊಸೈಟಿಗೂ, ಧಾರವಾಡದ ವಿದ್ಯಾವರ್ಧಕ ಸಂಘಕ್ಕೂ, ಆ ಸಂಸ್ಥೆಗಳ ನಿಯಮಾನುಸಾರ ಪ್ರತಿಗಳನ್ನು ಕಳುಹಿಸಿದೆನು. ಉಭಯ ಸಂಸ್ಥೆಗಳವರೂ ವಾಙ್ಮಯ ದೃಷ್ಟಿಯಿಂದ

ಉತ್ತಮಗ್ರಂಥವೆಂದು ತಮ್ಮ ಮೆಚ್ಚಿಕೆಯನ್ನು ತೋರಿಸಿ ಪ್ರಥಮ ತರಗತಿಯ ಬಹುಮಾನಗಳನ್ನು ಕರುಣಿಸಿದರು. ಆ ಸಹಾಯವು ಈ ದ್ವಿತೀಯ ಭಾಗ ಮುದ್ರಣಕ್ಕೆ ಅನುಕೂಲವಾಯಿತು. ಅಂತೆಯೇ ಪ್ರಥಮ ಭಾಗದ ಮುದ್ರಣಾರಂಭದಲ್ಲಿ ಸಹಾಯಮಾಡಿದ ಆಸಿಫಾಬಾದಿನ ಎಗ್ಜಿಕ್ಯೂಟಿವ್ ಇಂಜನಿಯರು ಮ|| ರಾ|| ಶ್ರೀನಿವಾಸರಾಯರೂ, ರಾಯಚೂರು ವಕೀಲ ಮಧ್ವರಾಯರೂ, ತಮ್ಮ ಸಹಾಯ ದ್ರವ್ಯವನ್ನು ಕಳುಹಿಸಿ ಉಪಕಾರ ಮಾಡಿದರು. ಈ ಈರ್ವಮಹನೀಯರಂತೆ ಪೋಸ್ಟು ಮತ್ತು ಟೆಲಿಗ್ರಾಫ್ ಇಲಾಖೆಗಳ ಡೈರೆಕ್ಟರ್ ಜನರಲ್‌ರಾದ ಜಿ. ವಿ. ಬೇವೂರ್ ಸಾಹೇಬ್ ಐ. ಸಿ. ಎಸ್. ರವರೂ, ದಿವಂಗತ ಕೆಪೂರ್ರ ಶ್ರೀನಿವಾಸರಾಯರ ಮಕ್ಕಳು ಶ್ರೀ. ಗೋವಿಂದರಾವ್ ಇಂಜನಿಯರವರೂ, ಸಾತಾರಾಜಿಲ್ಲಾ ಇರ್ಕಂಟ್ಯಾಕ್ಸ ಆಫೀಸರು ಶ್ರೀ. ರುಕ್ಮಾಂಗದರಾವ್ ದೇಶಪಾಂಡೆಯವರೂ ಮತ್ತು ಕ್ಲೋಸ್ ಪೇಟೆಯ ವಕೀಲರು ಗೋಪಾಲರಾಯರವರೂ ಈ ದ್ವಿತೀಯಭಾಗದ ಮುದ್ರಣಕ್ಕೆ ಸಹಾಯಮಾಡಿದರು.

ಮತ್ತೊಂದು ವಿಶೇಷ ಸಂಗತಿಯನ್ನು ತಿಳಿಸಬೇಕೆಂದರೆ:—

ಕಳೆದ ವೈಶಾಖ ಮಾಸದಲ್ಲಿ ನನ್ನ ಕಾಶೀಯಾತ್ರೆಯನ್ನು ಮುಗಿಸಿ, ಮತ್ತೆ ಮುಂಬೈ ಮಹಾ ಪಟ್ಟಣದಲ್ಲಿ ನಾಲ್ಕಾರು ದಿವಸಗಳು ವಾಸಮಾಡಿದೆನು. ಈ ಅಲ್ಪಾವಧಿಯಲ್ಲೇ ನಮ್ಮ ಕೊಡಗು ಕನ್ನಡ ಬಂಧುಗಳ ಪರವಾಗಿ ಶ್ರೀ ಎಂ. ಎಸ್. ಮುತ್ತಣ್ಣನವರೂ, ಇಂಜಿನಿಯರು ವಿ. ಆರ್. ಸೇಟ್ಲೂರರವರೂ ಆಯನೂರ ರಾಘವೇಂದ್ರರಾಯರವರೂ ಒಂದು ನಿಧಿಯನ್ನು ಸಂಗ್ರಹಿಸಿ, ಬೊಂಬಾಯಿ ನಿಖಿಲ ಕನ್ನಡಿಗರ ಹೆಸರಿನಿಂದ ಹೈಕೋರ್ಟು ಪ್ಲೀಡರು ಆರ್. ಎ. ಜಹಗೀರ್ದಾರ್ ಎಂ. ಎ., ಎಲ್. ಎಲ್. ಬಿ. ಅವರ ಅಧ್ಯಕ್ಷತೆಯಲ್ಲಿ ನನಗೆ ಒಪ್ಪಿಸಿ ನನ್ನ ಗ್ರಂಥ ಕಾರ್ಯಗಳಿಗೆ ಸಹಾಯಮಾಡಿದರು. ಈ ಎಲ್ಲ ಮಹನೀಯರ ಸಹಾಯವಾಗಿರದಿದ್ದರೆ ಈ ಕಾಲಪರಿಸ್ಥಿತಿಯಲ್ಲಿ ಈ ಗ್ರಂಥವು ಬೆಳಕಿಗೆ ಬರುತ್ತಿರಲಿಲ್ಲ. ಆದುದರಿಂದ ಮೇಲ್ಕಂಡ ಸಂಸ್ಥೆಗಳಿಗೂ, ಮಹನೀಯರಿಗೂ ಅತ್ಯಂತ ಋಣಿಯಾಗಿರುವೆನು.

—ಗ್ರಂಥಕರ್ತ.

